ತ್ರೈವಾರ್ಷಿಕ ಯೋಜನೆಯ ಪುಸ್ತಕ ಮಾಲೆ – ೫೧

# ಕುಸುಮಾವಳೀ ಕಾವ್ಯಂ

ದೇವಕವಿಯಿಂದ ವಿರಚಿತವಾದುದು



ತ್ರೈವಾರ್ಷಿಕ ಯೋಜನೆಯ ಪುಸ್ತಕ ಮಾಲೆ – ೫೧

# ಕುಸುಮಾವಳೀ ಕಾವ್ಯಂ

ದೇವಕವಿಯಿಂದ ವಿರಚಿತವಾದುದು




ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿ ರಸ್ತೆ
ಚಾಮರಾಜಪೇಟೆ, ಬೆಂಗಳೂರು–(೫೬೦೦)–೧೮

A Champu Kavya written by Deva Kavi

ಮೊದಲ ಮುದ್ರಣ : ೧೯೭೨







ಬೆಲೆ : ರೂ. ೧೦–೦೦

ಮುದ್ರಣ :
ಲೋಟಸ್ ಪ್ರಿಂಟರ್ಸ್
ರಾಜಾಜಿನಗರ, ಬೆಂಗಳೂರು–೧೦



# ಪ್ರಸ್ತಾವನೆ

ಕನ್ನಡ ನಾಡು ನುಡಿ ಸಂಸ್ಕೃತಿಯ ಪುರೋಭಿವೃದ್ಧಿಗಾಗಿ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಾಭಿಮಾನಿಗಳ ಸಲಹೆ ಸಹಕಾರ ಪಡೆದು ತ್ರೈವಾರ್ಷಿಕ ಯೋಜನೆಯನ್ನು ರೂಪಿಸಿದೆ. ಈ ಯೋಜನೆಯಲ್ಲಿ ಅಡಕವಾಗಿರುವ ಅಂಶಗಳನ್ನು ೧೯೭೦ ನೆಯ ಜನವರಿಯಿಂದ ಮೂರು ವರ್ಷಗಳ ಕಾಲಾವಧಿಯಲ್ಲಿ ಕಾರ್ಯಗತ ಮಾಡಬೇಕಾಗಿದ್ದು ಈ ಯೋಜನೆಗೆ ತಗಲುವ ವೆಚ್ಚವು ಇಪ್ಪತ್ತು ಲಕ್ಷ ರೂಪಾಯಿಗಳೆಂದು ಅಂದಾಜಾಗಿದೆ. ಈ ಮೊತ್ತದ ಮೂರನೆಯ ಒಂದು ಭಾಗದಷ್ಟು ಹಣವನ್ನು ಪುಸ್ತಕಗಳ ಪ್ರಕಟಣೆಗಾಗಿ ಯೋಜನೆಯಲ್ಲಿ ಮೀಸಲಾಗಿರಿಸಿದೆ.

ಪರಿಷತ್ತು ಪ್ರಾರಂಭವಾದ ತರುವಾಯ ಕನ್ನಡದಲ್ಲಿ ಅನೇಕ ವಿದ್ವತ್ಪೂರ್ಣ ಗ್ರಂಥಗಳನ್ನು ಪ್ರಕಟಿಸಿ ಅವು ಓದುಗರ ಮನ್ನಣೆಗೆ ಪಾತ್ರವಾಗಿವೆಯಷ್ಟೆ. ಇದರ ಜೊತೆಗೆ ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಅವಧಿಯಲ್ಲಿ ಒಂದು ನೂರು ಪುಸ್ತಕಗಳನ್ನಾದರೂ ಹೊರತರಬೇಕೆಂದು ನಿಯೋಜಿಸಲಾಗಿದೆ. ಪುನರ್ಮುದ್ರಣವಾಗಬೇಕಾದ ಕೆಲವು ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವುದಲ್ಲದೆ ಶಾಸ್ತ್ರ, ಸಾಹಿತ್ಯ, ಕಲೆ, ವಿಜ್ಞಾನ ಮೊದಲಾದ ನಾನಾ ವಿಷಯಗಳನ್ನು ಕುರಿತ ಗ್ರಂಥಗಳನ್ನೂ ಭಾಷಾಂತರ ಕೃತಿಗಳನ್ನೂ ಜೊತೆಗೆ ವಿದ್ಯಾರ್ಥಿಗಳಿಗೂ ಜನಸಾಮಾನ್ಯರಿಗೂ ಹೆಚ್ಚು ಪ್ರಯೋಜನವಾಗುವಂತೆ ಒಂದು ಸಂಕ್ಷಿಪ್ತ ಶಬ್ದಕೋಶವನ್ನೂ ಆದಷ್ಟು ಜಾಗ್ರತೆ ಪ್ರಕಟಿಸಬೇಕೆಂದು ತೀರ್ಮಾನಿಸಿದೆ.

ಓದುಗರ ದೃಷ್ಟಿಯಿಂದ ಪುಸ್ತಕದ ಬೆಲೆ ದುಬಾರಿಯಾಗದಂತೆ ನೋಡಿಕೊಳ್ಳುವುದು, ಕೆಲವು ಪುಸ್ತಕಗಳನ್ನು ಸಹಾಯಧನ ಪಡೆದು ಕಡಮೆ ಬೆಲೆಗೆ ಮಾರಾಟ ಮಾಡುವುದು ಇವು ಪರಿಷತ್ತಿನ ಆಶಯಗಳಾಗಿವೆ.

ಪ್ರಕಟಣೆಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಗಮನದಲ್ಲಿಟ್ಟುಕೊಂಡು ಪ್ರಕಟಣೆಯ ಕಾರ್ಯವನ್ನು ಕಾರ್ಯಗತ ಮಾಡಲು ಗ್ರಂಥಪ್ರಕಟಣ ಸಲಹಾ ಸಮಿತಿಯೊಂದನ್ನು ರಚಿಸಿದ್ದು ಆ ಸಮಿತಿಯಲ್ಲಿ ಡಾ|| ಹಾ. ಮಾ. ನಾಯಕ, ಡಾ|| ಜಿ. ಎಸ್. ಶಿವರುದ್ರಪ್ಪ, ಡಾ|| ಆರ್. ಸಿ. ಹಿರೇಮಠ, ಪ್ರೊ|| ಎಂ. ಮರಿಯಪ್ಪ ಭಟ್, ಶ್ರೀ ಎಚ್.ಎಲ್. ನಾಗೇಗೌಡ ಮತ್ತು ಶ್ರೀ ಸಿದ್ಧಯ್ಯ ಪುರಾಣಿಕ ಇವರುಗಳು ಸದಸ್ಯರಾಗಿದ್ದಾರೆ. ಡಾ|| ರಂ. ಶ್ರೀ. ಮುಗಳಿಯವರು ಪ್ರಧಾನ ಸಂಪಾದಕತ್ವದ ಹೊಣೆ ಹೊತ್ತಿದ್ದಾರೆ. ಮತ್ತು ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ

ಶ್ರೀ ವೆಂಕಟೇಶ ಸಾಂಗ್ಲಿ, ಶ್ರೀ ಹಂಪ ನಾಗರಾಜಯ್ಯ ಅವರುಗಳು ಈ ಸಮಿತಿಯ ಕಾರ್ಯದರ್ಶಿಗಳಾಗಿದ್ದಾರೆ. ಇವರೆಲ್ಲರಿಗೂ ಪರಿಷತ್ತು ಆಭಾರಿಯಾಗಿದೆ.

ಈ ಸಮಿತಿಯ ಸಹಕಾರದಿಂದ ಪ್ರಕಟವಾಗುವ ಪರಿಷತ್ತಿನ ಪ್ರಕಟಣೆಗಳನ್ನು ಕನ್ನಡಾಭಿಮಾನಿಗಳು ಆದರದಿಂದ ಬರಮಾಡಿಕೊಂಡು ಆಸ್ಥೆಯಿಂದ ಓದಬೇಕಾಗಿ ಪ್ರಾರ್ಥನೆ.

ದೇಶಹಳ್ಳಿ ಜಿ. ನಾರಾಯಣ
ಅಧ್ಯಕ್ಷ,
ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು
೨೦-೧೨-೧೯೭೨

# ಉಪೋದ್ಘಾತ

ಕರ್ಣಾಟಕ ಭಾಷೆಯಲ್ಲಿ ಶ್ರೇಷ್ಠತರವಾದ ಕಾವ್ಯಗಳನ್ನು ಬರೆದಿರುವ ಮಹಾಕವಿಗಳನೇಕರಿರುವ ವಿಷಯವು ತಮ್ಮೆಲ್ಲರಿಗೂ ವಿದಿತವಾಗಿಯೇ ಇದೆ. ಅವರಲ್ಲೊಬ್ಬನಾದ ದೇವಕವಿಯು ರಚಿಸಿರುವ 'ಕುಸುಮಾವಳಿ' ಎಂಬ ಕಾವ್ಯದ ವಿಷಯವನ್ನು ತಮ್ಮಲ್ಲಿ ಅರಿಕೆಮಾಡಿಕೊಳ್ಳಲು ಯತ್ನಿಸಿದ್ದೇನೆ. ಈ ಗ್ರಂಥಕರ್ತನಾದ ದೇವಕವಿಯು ಪ್ರಾಚೀನ ಮಹಾಕವಿಗಳಾದ ಪಂಪಾದಿಗಳ ಪಙ್ಕ್ತಿಯಲ್ಲಿ ಪರಿಗಣನೆ ಮಾಡುವುದಕ್ಕೆ ತಕ್ಕವನಾಗಿರುವನು. ಆ ಮಹಾಕವಿಯ ಪಾಂಡಿತ್ಯವನ್ನೂ ಕವಿತಾ ಶೈಲಿಯನ್ನೂ ಆತನ ಕಾವ್ಯದ ಗುಣದೋಷಗಳನ್ನೂ ನಿರ್ಣಯಿಸಿ ಹೇಳುವಷ್ಟು ಶಕ್ತಿಯು ನನಗಿಲ್ಲ. ಗ್ರಂಥವನ್ನು ಆಮೂಲಾಗ್ರವಾಗಿ ಓದಿನೋಡಿರುವುದರಿಂದಲೂ, ಮೈಸೂರು ಸೀಮೆಯ ಶಾಸನದ ಇಲಾಖೆಯ ಡೈರೆಕ್ಟರಾದ ಮ|| ರಾ|| ಆರ್. ನರಸಿಂಹಾಚಾರ್ಯರವರು ಬರೆದಿರುವ ಕವಿಚರಿತ್ರೆಯ ಆಧಾರದಿಂದಲೂ ನಾನು ತಿಳಿದುಕೊಂಡಿರುವ ಕೆಲವು ಸಂಗತಿಗಳನ್ನು ಅರಿಕೆಮಾಡುತ್ತೇನೆ.

**ಗ್ರಂಥಸ್ವರೂಪ.**—ಈ ಗ್ರಂಥವು ಗದ್ಯಪದ್ಯ ಮಿಶ್ರವಾಗಿರುವುದರಿಂದ ಚಂಪೂರೂಪ ಕಾವ್ಯವಾಗಿದೆ. ಈ ಕಾವ್ಯವು ಈವರೆಗೂ ಮುದ್ರಿತವಾಗಿರುವುದಿಲ್ಲ. ಇದನ್ನು ಮುದ್ರಿಸಬೇಕೆಂಬ ಅಭಿಪ್ರಾಯದಿಂದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳು ಮೈಸೂರು ಸರಕಾರದ ಓರಿಯಂಟಲ್ ಲೈಬ್ರೆರಿಯಲ್ಲಿದ್ದ ಕೈಬರೆಹದ ಪ್ರತಿಯೊಂದನ್ನು ತರಿಸಿದರು. ಪರಿಷತ್ತಿನಲ್ಲಿ ಬೇರೆ ಪ್ರತಿಯನ್ನು ಬರೆದು ಶೋಧನೆ ಮಾಡಿ ಮುದ್ರಣಕ್ಕೆ ಸಿದ್ಧಪಡಿಸಿದೆ. ಲೈಬ್ರೆರಿಯ ಪುಸ್ತಕದಲ್ಲಿ ಬರೆವಣಿಗೆಯ ತಪ್ಪುಗಳು ಹೆಚ್ಚಾಗಿ ಬಿದ್ದಿವೆ. ಅನೇಕ ಪದ್ಯಗಳಲ್ಲಿ ಅಲ್ಲಲ್ಲಿ ಗ್ರಂಥಪಾತಗಳು ಬಹಳವಾಗಿವೆ, ಬೇರೆ ಪ್ರತಿಗಳು ಎಲ್ಲಿಯೂ ದೊರೆಯದೆ ಹೋದುದರಿಂದ ಶೋಧನಕಾರ್ಯವು ಕಷ್ಟಸಾಧ್ಯವಾಯ್ತು. ಈ ಕಾವ್ಯದಲ್ಲಿ ಹದಿನೈದು ಆಶ್ವಾಸಗಳೂ ಒಟ್ಟು ೨೦೬೮ ಪದ್ಯಗಳೂ ಇವೆ. ಗ್ರಂಥದ ಕೊನೆಯ ಭಾಗವನ್ನು ನೋಡಿದರೆ ಕಥೆಯು ಪೂರಯಿಸಿದಂತೆ ಕಾಣಬರುವುದಿಲ್ಲ. ಇನ್ನೂ ಎರಡು ಮೂರು ಆಶ್ವಾಸಗಳು ಇದ್ದಿರಬಹುದೆಂದು ತೋರುವುದು. ಈ ವಿಷಯವು ಕಥಾಸಾರಾಂಶದಿಂದ ವ್ಯಕ್ತವಾಗುತ್ತದೆ.

**ಗ್ರಂಥದ ಕಥಾಸಾರಾಂಶ.**—ಮದನಾವತೀ ಪಟ್ಟಣದ ದೊರೆಯಾದ ಮಣಿಕುಂಡಲ ರಾಜನಿಗೆ ಚಿತ್ರಕೂಟಪರ್ವತದ ಬಳಿಯ ಒಂದು ವನದಲ್ಲಿದ್ದ ಕಪಿಲಮುನಿಯ

ಪಾರ್ಶ್ವದಲ್ಲಿ ರೂಪವತಿಯಾದ ಸ್ತ್ರೀಯೊಬ್ಬಳನ್ನು ಕಂಡಂತೆ ಸ್ವಪ್ನವಾಗಲು, ಆತನು ಈ ವೃತ್ತಾಂತವನ್ನು ತನ್ನ ಮಂತ್ರಿಗೆ ತಿಳಿಸಿದನು. ಅದಕ್ಕೆ ಮಂತ್ರಿಯು, ಚಿತ್ರ ಕೂಟದ ಬಳಿಯಲ್ಲಿ ಕಪಿಲನೆಂಬ ಮುನಿಯಿರುವುದು ನಿಶ್ಚಯವೆಂತಲೂ, ಅಲ್ಲಿಗೆ ಹೋದರೆ ಆತನನ್ನು ನೋಡಬಹುದೆಂತಲೂ ಹೇಳಿದನು. ಆಗ ಇಬ್ಬರೂ ಹೊರಟು ಅಲ್ಲಿಗೆ ಹೋಗಿ ಋಷಿಯನ್ನು ಕಂಡು ನಮಸ್ಕರಿಸಿ ಆತನ ಬಳಿಯಲ್ಲಿ ಕಾಣಬರುತ್ತಿದ್ದ ಶಿಲಾಪ್ರತಿಮೆಯೊಂದನ್ನು ಕಂಡು ಅದರ ವೃತ್ತಾಂತವೇನೆಂದು ಕೇಳಲು, ಆ ಮುನಿ ಇಂತೆಂದನು:—"ವಿಮಲಾಪುರಿಯ ವಿಶ್ವಂಭರ ರಾಜನು ಪುತ್ರಕಾಮೇಷ್ಟಿಯನ್ನು ಮಾಡಿ ಕಂದರ್ಪದೇವನೆಂಬ ಮಗನನ್ನು ಪಡೆದನು. ಆ ರಾಜಕುಮಾರನು ತನ್ನ ವಿವಾಹಕ್ಕೆಂದು ಕರೆಯಿಸಿ ತೋರಿಸಿದ ಯಾವ ರಾಜಪುತ್ರಿಯನ್ನೂ ವರಿಸದೆ ಕೊನೆಗೆ ತಮ್ಮ ಉದ್ಯಾನವನದಲ್ಲಿದ್ದ ಒಂದು ಮಾವಿನಮರಕ್ಕೆ ಕಟ್ಟಿದ್ದ ಕುಸಮಾವಳಿಯೆಂಬ ಕನ್ಯೆಯ ಭಾವಚಿತ್ರವನ್ನು ನೋಡಿ ಮೋಹಿಸಿ, ಆಕೆಯನ್ನು ಹುಡುಕುವುದಕ್ಕಾಗಿ ಮಂತ್ರಿಪುತ್ರನಾದ ಮೇಧಾವಿಳನೊಡನೆ ಪವನಂಜಯವೆಂಬ ಕುದುರೆಯನ್ನೇರಿ ಹೊರಟು, ಮಾರ್ಗದಲ್ಲಿ ಸಿಕ್ಕಿದ ಕೌಶಿಕಮುನಿಯಿಂದ ಅನೇಕ ದಿವ್ಯಾಸ್ತ್ರಗಳನ್ನು ಪಡೆದು, ಪದ್ಮಪುರದ ದೊರೆಯಾದ ವಜ್ರಜಂಘನ ಶತ್ರುವಾಗಿದ್ದ ಸಿಂಹಬಲನನ್ನು ಜಯಿಸಿ, ವಜ್ರಜಂಘನಿಂದ ಕುಸುಮಾವಳಿಯಿರುವ ದೇಶವನ್ನು ತಿಳಿದುಕೊಂಡು, ಚಂದ್ರಕಾವತೀ ದೇಶದ ಚಕ್ರವಾಳಪುರದ ಉದ್ಯಾನವನವನ್ನು ಸೇರಿದನು. ಆ ದೇಶದ ರಾಜನಾದ ಚಂದ್ರಧ್ವಜನ ಮಗಳೇ ಕುಸುಮಾವಳಿ. ಇವಳೂ ಕಂದರ್ಪ ದೇವನ ಚಿತ್ರಪಟವನ್ನು ನೋಡಿ ಮೋಹಿಸಿ ವಿರಹಾವಸ್ಥೆಯಲ್ಲಿರಲು, ಅವಳ ಸಖಿ ಯಾದ ಕಳಭಾಷಿಣಿಯು ಉದ್ಯಾನವನದಲ್ಲಿದ್ದ ದುರ್ಗಾದೇವಿಯ ಗುಡಿಗೆ ಕುಸುಮಾ ವಳಿಯ ಮನೋರಥಸಿದ್ಧಿಗಾಗಿ ಪ್ರಾರ್ಥಿಸುವುದಕ್ಕೆ ಹೋಗಿ ಅಲ್ಲಿದ್ದ ಈ ರಾಜಪುತ್ರ ನನ್ನು ನೋಡಿ ಚಿತ್ರಪಟದಲ್ಲಿರುವವನು ಈತನೇ ಸರಿ ಎಂದು ತಿಳಿದು ಆತನಿಗೆ ಕುಸುಮಾವಳಿಯ ವಿಷಯವನ್ನು ತಿಳಿಸಿ ಅವನನ್ನು ಕುಸುಮಾವಳಿಯ ಬಳಿಗೆ ಕರೆದು ಕೊಂಡು ಹೋದಳು. ಕಂದರ್ಪದೇವನು ಮೇಧಾವಿಳನನ್ನು ಅಲ್ಲಿಯೇ ಬಿಟ್ಟು ಕುಸುಮಾವಳಿಯ ಬಳಿಗೆ ಬಂದು ಅವಳನ್ನು ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ತನ್ನೂರಿಗೆ ಹೊರಟು ದಾರಿಯಲ್ಲಿ ವಿಶ್ರಮಿಸಿಕೊಳ್ಳುತ್ತ ಕಾಡಿನಲ್ಲಿರಲು, ಅಲ್ಲಿಗೆ ಒಂದು ಸಿಂಹವು ಆರ್ಭಟಿಸಿಕೊಂಡು ಬಂದಿತು. ಕುದುರೆಯು ಹೆದರಿ ಓಡಿಹೋಯಿತು. ಕುಸುಮಾವಳಿ ಕುದುರೆಯನ್ನು ಹಿಡಿದು ತರುವುದಕ್ಕಾಗಿ ಬೆನ್ನಟ್ಟಿಹೋದಳು. ಅಲ್ಲಿ ಬೇಡರ ಗುಂಪಿನಲ್ಲಿ ಸಿಕ್ಕುಬಿದ್ದು, ತಪ್ಪಿಸಿಕೊಂಡು ಓಡಿ ಬಂದು ನನ್ನ ಮರೆಹೊಗಲು, ನಾನು ಸಂಗತಿಯನ್ನು ವಿಚಾರಿಸಿ ಅವಳನ್ನು ರಕ್ಷಿಸುವುದಕ್ಕೋಸ್ಕರ ಶಿಲಾಪ್ರತಿಮೆ ಯನ್ನಾಗಿ ಮಾಡಿದೆನು." ಹೀಗೆ ಹೇಳುತ್ತಿರುವಲ್ಲಿ ಕಂದರ್ಪದೇವನು ಸಿಂಹವನ್ನು

ಕೊಂದು ಪ್ರಿಯೆಯನ್ನು ಕಾಣದೆ ಹಂಬಲಿಸುತ್ತ ಕಪಿಲಋಷಿಯ ಬಳಿಗೆ ಬಂದು ಆತನ ಅನುಗ್ರಹದಿಂದ ಪುನಃ ಸ್ತ್ರೀರೂಪವನ್ನು ಪಡೆದ ಆ ಕುಸುಮಾವಳಿಯನ್ನು ಸೇರಿದನು. ಕುಸುಮಾವಳಿಯ ತಂದೆಯೂ, ಕಂದರ್ಪನ ತಂದೆಯೂ ತಂತಮ್ಮ ಮಕ್ಕಳನ್ನು ಹುಡುಕಿಕೊಂಡು ಬಂದು ಅದೇ ವನವನ್ನು ಅದೇ ಸಮಯದಲ್ಲಿ ಹೊಕ್ಕರು. ಮಣಿ ಕುಂಡಲನು ಇದನ್ನೆಲ್ಲ ನೋಡಿ ಆಶ್ಚರ್ಯಪಟ್ಟನು—ಎಂದು ಈಗ ಸಿಕ್ಕಿರುವ ಹದಿನೈದು ಆಶ್ವಾಸಗಳಲ್ಲಿದೆ. ಇನ್ನೂ ಸ್ವಲ್ಪ ಕಥಾಭಾಗವಿರಬೇಕೆಂಬುದು ಇದರಿಂದ ವ್ಯಕ್ತವಾ ಗುವುದು. ಬೇರೆ ಪ್ರತಿ ಸಿಕ್ಕಿದಹೊರತು ಈ ಸಂಶಯವು ಪರಿಹಾರವಾಗುವಂತಿಲ್ಲ.

**ಗ್ರಂಥಕರ್ತನ ಹೆಸರು ಮತ್ತು ಬಿರುದುಗಳು.**—ಈ ಗ್ರಂಥಕರ್ತನು ತನ್ನ ಹೆಸರನ್ನಾಗಲಿ, ವಂಶವನ್ನಾಗಲಿ, ತಾನಿದ್ದ ದೇಶವನ್ನಾಗಲಿ, ಗ್ರಂಥದಲ್ಲಿ ವ್ಯಕ್ತ ವಾಗಿ ಹೇಳಿಕೊಂಡಿಲ್ಲ ; ಈ ಕಾವ್ಯದ ಹದಿನೈದನೆಯ ಆಶ್ವಾಸದ ೯೧ ನೆಯ ಪದ್ಯ ದಲ್ಲಿ ಚಂದ್ರಧ್ವಜನ ಸೈನ್ಯದ ಭೇರೀಧ್ವನಿಯನ್ನು ವರ್ಣಿಸುವಾಗ—

ಕಂ॥ ಕವಿ ಕಮಲಜ ಸೂಕ್ತಿ ಸುಧಾ ।
ರ್ಣವ ಸೋಮಂ ದೇವಕವಿ ದಲೆಂದಿನಿತಂ ಸಾ ॥
ರುವವೋಲ್ ಭೇರೀ ಭಾಂಕೃತಿ ।
ರವಮೊಗೆದತ್ತುತ್ತರಾಸೆಯೊಳ್ ಮತ್ತಾಗಳ್ ॥

ಎಂದು ಹೇಳಿದ್ದಾನೆ. ಇಲ್ಲಿ 'ದೇವಕವಿ' ಎಂದು ತನ್ನ ಹೆಸರನ್ನೇ ಹೇಳಿ ಕೊಂಡಿರುವಂತೆ ತೋರುತ್ತದೆ. ಇದರಿಂದಲೇ ಈತನ ಹೆಸರು ದೇವಕವಿ ಎಂದು ನಿರ್ಧರಿಸಬೇಕಾಗಿದೆ.

ಈ ಗ್ರಂಥದ ಮೊದಲನೆಯ ಆಶ್ವಾಸದ ಏಳನೆಯ ಪದ್ಯದಲ್ಲಿ—

ಮ॥ ವರ ಶಬ್ದಜ್ಞರನರ್ಥದೇಶಿಗಳನುಕ್ತಿ ಪ್ರೌಢರಂ ಭಾವ ತ ।
ತ್ಪರರಂ ನೀತಿ ವಿದರ್ಕಳಂ ರಸಿಕರಂ ಸಾಹಿತ್ಯದೊಳ್ ಸಂದ ಜಾ ॥
ಣರನಾಂದೋಳ ಶಿರಸ್ಸರೋಜ ಮುಖರಂ ಮಾಱ್ಪುಕ್ತಿಚಾತುರ್ಯ ಬಂ ।
ಧುರಮಾಪಂಗೆಡೆಗೊಟ್ಟುದಾತನೆ ಕವೀಂದ್ರೋತ್ತಂಸನೀ ಧಾತ್ರಿಯೊಳ್ ॥

ಎಂತಲೂ, ಆಶ್ವಾಸದ ಕೊನೆಯ ೧೩೭ ನೆಯ ಪದ್ಯದಲ್ಲಿ—

ಮ॥ಸ್ರ॥ ಸುಕೃತಿ ಶ್ರೀಭಾವಿಸೀ ಮಂಗಳ ಮಣಿಮಯ ದಾಮಂ ಬುಧಸ್ತುತ್ಯ ಸಾಹಿ ॥
ತ್ಯ ಕಳಾ ಸಂದೋಹ ಸೀಮಂ ಸುಕವಿ ಸುಕರ ಕೀರಾಸ್ಯ ಪುಷ್ಪಾವಳೀ ಕ ॥
ಲ್ಪ ಕುಜಾರಾಮಂ ಸ್ವಕೀಯಾಸ್ಯಯ ಕುವಲಯ ಸಂಸ್ತೋಮ ಸೋಮಂ ಸದಾ ।
ಚಾರ ಕನಲ್ಲಕ್ಷ್ಮೀಲಲಾಮಂ ಕೃತಿರತಿ ರಮಣಂ ಸಾಹಸೋದ್ದಾಮ ಭೀಮಂ ॥

ಎಂತಲೂ ಹೇಳಿಕೊಂಡಿರುವುದಲ್ಲದೆ ಎಲ್ಲ ಆಶ್ವಾಸಗಳ ಕೊನೆಯ ಪದ್ಯದಲ್ಲಿಯೂ 'ಕೃತಿರತಿ ರಮಣಂ' 'ಸಾಹಸೋದ್ದಾಮ ಭೀಮಂ' ಎಂಬ ಮಾತುಗಳನ್ನು ಸೇರಿಸಿರುವುದರಿಂದ ಈತನಿಗೆ 'ಕವೀಂದ್ರೋತ್ತಂಸ' 'ಕೃತಿರತಿ ರಮಣ,' 'ಭಾರತೀ ಭೂಷಣ,' ಎಂಬ ಬಿರುದುಗಳಿದ್ದಂತೆ ಕಾಣಬರುತ್ತದೆ.

**ಈ ಕವಿಯ ಕಾಲ.**—ಈತನು ತನ್ನ ಪೂರ್ವಕವಿಗಳನ್ನು ಈ ಪದ್ಯಗಳಲ್ಲಿ ಸ್ತುತಿಸಿದ್ದಾನೆ—

(ಆಶ್ವಾಸ ೧, ಪದ್ಯ ೪)

ಮ॥ಸ್ರ॥ ಕವಿ ಸಿರ್ವಾಣಂಗೆ ಬಾಣಂಗವನಿಗೆಸೆವ ಹರ್ಷಂಗೆ ಹರ್ಷಂಗೆ ವಿಖ್ಯಾ ।
ತ ವಿಜನ್ಮಾಘಂಗೆ ಮಾಘಂಗಖಿಳ ಸುಕವಿರತ್ನಂಗೆ ರತ್ನಂಗೆ ಸಂದೊ ॥
ಪ್ಪುವಿಳಾರುದ್ರಂಗೆ ರುದ್ರಂಗೊದವಿದ ಪದಪಿಂದಗ್ಗಳಂಗಗ್ಗಳಂಗು ।
ತ್ಸವದಿಂದಾವಂ ದಿಟಂ ವಂದಿಸುವದಟನವಂ ಸತ್ಕವೀಂದ್ರಾವತಂಸಂ ॥

(ಅಶ್ವಾಸ ೧, ಪದ್ಯ ೮)

ಚಂ॥ ವಿದಿತ ಕಥಾವಿಚಿತ್ರಮೆಸೆವೀ ಕುಸುಮಾವಳಿಯೆಂಬ ನವ್ಯಕಾ ।
ವ್ಯದೆ ಕವಿರನ್ನನೋಜೆ ವರಬಾಣನ ಸೂಕ್ತಿ ಕಳಾ ಕಳಾಪಮು ॥
ಗ್ಗದ ಕವಿ ಮಾಘ ಹರ್ಷರ ವಚಶ್ಚಿಕುರೋನ್ನತಿ ರುದ್ರಭಟ್ಟನೊಳ್ ।
ಪುದಿದ ಪದಪ್ರಗಲ್ಭಗುಣಮುಗ್ಗಳದೇವನ ಭಾವ ಗೌರವಂ ॥

ಇಲ್ಲಿ ಬಾಣ, ಹರ್ಷ, ಮಾಘ—ಈ ಮೂರುಮಂದಿ ಸಂಸ್ಕೃತ ಕವಿಗಳನ್ನೂ, ರನ್ನ, ರುದ್ರಭಟ್ಟ, ಅಗ್ಗಳ—ಈ ಮೂರು ಮಂದಿ ಕರ್ಣಾಟಕ ಕವಿಗಳನ್ನೂ ಹೊಗಳಿರುವನು. ಈತನು ಹೊಗಳಿರುವ ಕವಿಗಳಲ್ಲಿ ರುದ್ರಭಟ್ಟನು ಸುಮಾರು ಕ್ರಿ. ಶ. ೧೧೮೦ ರಲ್ಲಿಯೂ, ಅಗ್ಗಳನು ಸುಮಾರು ೧೧೮೯ ರಲ್ಲಿಯೂ ಇದ್ದವರಾದ ಕಾರಣ ಅವರ ಕಾಲಕ್ಕೀಚಿನವನೆಂದು ವ್ಯಕ್ತವಾಗುತ್ತದೆ. ಸು ಮಾ ರು ೧೨೪೫ರಲ್ಲಿದ್ದ ಮಲ್ಲಿಕಾರ್ಜುನನು ಸೂಕ್ತಿಸುಧಾರ್ಣವವೆಂಬ ತನ್ನ ಗ್ರಂಥದಲ್ಲಿ ಪೂರ್ವ ಕವಿಗಳ ಗ್ರಂಥಗಳಿಂದುದ್ಧರಿಸಿ ಬರೆದಿರುವ ಪದ್ಯಗಳಲ್ಲಿ ಈ ದೇವಕವಿಯ ಕುಸುಮಾವಳಿಯಿಂದಲೂ ಕೆಲವು ಪದ್ಯಗಳನ್ನು ತೆಗೆದುಕೊಂಡಿದ್ದಾನೆ. ಆದಕಾರಣ ಈತನು ಕ್ರಿ. ಶ. ೧೧೮೦—೮೯ರಿಂದೀಚೆಗೆ ೧೨೪೫ ಕ್ಕಿಂತ ಪೂರ್ವದಲ್ಲಿ—ಎಂದರೆ, ಸುಮಾರು ೧೨೦೦ ರಲ್ಲಿದ್ದನೆಂದು ಊಹಿಸಬಹುದು.

**ಕವಿಯ ದೇಶ :**—ಈತನು ಈ ಗ್ರಂಥವನ್ನು ರಚಿಸಿ ಅದನ್ನು ಚಿಕ್ಕರಾಜ ಚಮೂಪನಿಗೆ ಸಮರ್ಪಿಸಿದಂತೆ ಹೇಳಿರುತ್ತಾನೆ. ಚಿಕ್ಕರಾಜನು ಕಾಶ್ಮೀರ ಕುಲದಲ್ಲಿ ಹುಟ್ಟಿದ ಕೇಶವ ದಂಡನಾಯಕನ ಪೌತ್ರನೆಂದೂ ಲಕ್ಷ್ಮೀಧವನ ಜ್ಯೇಷ್ಠಪುತ್ರನೆಂದೂ ಇವನಿಗೆ ವಿಟ್ಠಲ, ಲಾಹಿದೇವ ಎಂಬಿಬ್ಬರು ತಮ್ಮಂದಿರಿದ್ದರೆಂತಲೂ, ಈ ಚಿಕ್ಕ ರಾಜನು ಚಮೂಪತಿಯಾಗಿಯೂ ಮಂತ್ರಿಯಾಗಿಯೂ ಇದ್ದನೆಂತಲೂ ಈ ಗ್ರಂಥ ದಿಂದ ತಿಳಿಯಬರುತ್ತದೆ. ಈತನು ಯಾವ ರಾಜನಲ್ಲಿ ಮಂತ್ರಿಯಾಗಿದ್ದನೋ ತಿಳಿಯದು. ಈ ಕವಿ ಇದ್ದ ದೇಶವನ್ನು ತಿಳಿಸುವುದಕ್ಕೆ ಇಷ್ಟೇ ಆಧಾರವು. ಈ ಗ್ರಂಥದಲ್ಲಿ ವರ್ಣಿಸಿರುವ ದೇಶ, ಜನ, ಪುರ—ಇವೆಲ್ಲವೂ ಕಲ್ಪಿತಕಥೆಗೆ ಸೇರಿದುವು ಗಳಾದುದರಿಂದ ಬೇರೆ ಆಧಾರವಿಲ್ಲವಾಗಿ ನಿಷ್ಕರ್ಷೆಗೆ ಅವಕಾಶವನ್ನು ಕೊಡುವುದಿಲ್ಲ.

**ಈತನ ಮತ :**—ಗ್ರಂಥಾರಂಭದಲ್ಲಿ—

ಸ್ರ॥ ಶ್ರೀಮನ್ಮಾಂಗಲ್ಯ ಪಾತ್ರಾವಯವ ನಿವಹದೊಳ್ ತಳ್ತ ಹರ್ಷೋದ ಬಿಂದು ।
ಸ್ತೋಮಂ ತಾನೆಂಬಿನಂ ತೀವಿದ ವಿಬುಧ ನದೀವಾಃಕಣಾನೀಕದೊಳ್ ಸಂ ॥
ದಾಮಾಕಾರಂ ಕರಂ ಮಾರ್ಪೊಳೆಯೆ ಸಕಲ ಶಕ್ತ್ಯಂಗನಾಸಂತಿರೊಪ್ಪಿ ।
ರ್ಪಾ ವ್ಯೆಮಂ ವಿಶ್ವನಾಥಂ ಕುಡುಗೆಮಗಖಿಳಾನಂದಮಂ ನಲ್ಮೆಯಿಂದಂ ॥

ಎಂಬ ಪದ್ಯವನ್ನೂ, ಆಶ್ವಾಸಗಳ ಕೊನೆಯಲ್ಲಿ—"ಇದು ಕಮನ ಕುಧರೇಂದ್ರ ನಂದನಾಲೋಲ ಲೋಚನ ಚಕೋರೀ ಸುಖ ಪ್ರಸಾದ ಪರಮಾಂಗಕಾಂತಿ ಸಂತಾನ ಸಾಂದ್ರ ಚಂದ್ರಿಕಾವಿಭವ ಶೋಭಾಯಮಾನ ಶ್ರೀ ವಿಶ್ವನಾಥ ಚರಣ ನಖ ಮಯೂ ಖೋತ್ಫುಲ್ಲ ಮಲ್ಲಿಕಾಶೇಖರ ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾ ವಳೀ ಮಹಾಪ್ರಬಂಧದೊಳ್" ಎಂಬ ಗದ್ಯವನ್ನೂ ಹೇಳಿದ್ದಾನೆ. ಆದಕಾರಣ ಈತನು ಶೈವನೆಂದು ಹೇಳಬೇಕಾಗಿದೆ. ಶೈವರಲ್ಲಿ ಬ್ರಾಹ್ಮಣನೇ, ಲಿಂಗವಂತನೇ—ಶಿವನನ್ನು ನುತಿಸುವ ಪದ್ಧತಿಯು ಜೈನರಲ್ಲಿಯೂ ಇರುವುದರಿಂದ—ಜೈನನೇ ಎಂಬು ದನ್ನು ವಿಚಾರಮಾಡಬೇಕಾಗಿರುತ್ತದೆ.

ಜೈನ ಕವಿಗಳು ತ್ರಿಮೂರ್ತಿಗಳನ್ನೂ ಹೊಗಳುವರಲ್ಲದೆ ಈಶ್ವರನೊಬ್ಬನನ್ನೇ ಹೊಗಳುವಂತೆ ಕಂಡುಬಂದಿಲ್ಲ. ಮತ್ತು, ತಮ್ಮ ಮತಪ್ರಕ್ರಿಯೆಗಳನ್ನು ಅಲ್ಲಲ್ಲಿ ಹೇಳದೆಯೂ, ತೀರ್ಥಂಕರರು, ಪಂಚಪರಮೇಷ್ಠಿಗಳು ಮೊದಲಾದವರನ್ನು ಸ್ತುತಿಸ ದೆಯೂ ಇರುವ ಜೈನಗ್ರಂಥಗಳು ಪ್ರಾಯಶಃ ಇಲ್ಲವೆಂದು ಕಾಣುತ್ತದೆ; ಆದುದರಿಂದ ಜೈನನಲ್ಲವೆಂದು ಊಹಿಸಬಹುದಾಗಿದೆ.

ಲಿಂಗವಂತ ಕವಿಗಳೂ ತಮ್ಮ ಕಾವ್ಯಗಳಲ್ಲಿ ಜೈನರಂತೆ ಅಲ್ಲಲ್ಲಿ ಮತ ಪ್ರಕ್ರಿಯೆ ಗಳನ್ನು ಹೇಳದೆ ಇರುವುದಿಲ್ಲ. ಆ ಸಂಬಂಧವಾದ ವಿಚಾರವು ಈ ಗ್ರಂಥದಲ್ಲೆಲ್ಲಿಯೂ ಬಂದಿಲ್ಲ. ವೇದಶಾಸ್ತ್ರ ವಿಚಾರವೂ, ತದುಕ್ತ ಕರ್ಮವಿಚಾರವೂ ಅಲ್ಲಲ್ಲಿ ಬಂದಿರುತ್ತವೆ. ಯಜ್ಞವಿಷಯವನ್ನು ವಿವರಿಸಿರುತ್ತಾನೆ. ೪ ನೆಯ ಆಶ್ವಾಸದಲ್ಲಿ ಯಜ್ಞ ವಿಷಯ ವನ್ನು ಸುಮಾರು ೨೦ ಪದ್ಯಗಳಿಂದ ವರ್ಣಿಸಿ ಕೊನೆಯಲ್ಲಿ ಹೀಗೆ ಹೇಳಿದ್ದಾನೆ—

ಮ॥ ಅನಿಮೇಷೋತ್ತಮರೆಯ್ದೆ ತನ್ನ ಮುಖದಿಂ ಸಂತುಷ್ಟರಾಗಲ್ಕೆ ತಾ ।
ನೆನಸುಂ ತುಷ್ಟಿಯನಪ್ಪುಕೆಯ್ದು ಶಿಖಿ ಸಾಕ್ಷಾನ್ಮೂರ್ತಿಯಿಂದೀ ಮುಖಂ ॥
ಮನದಿಷ್ಟಾರ್ಥಮನೀಗೆನುತ್ತಿರೆ ತದೀಯೋದ್ಗಾರಮುಂ ಕೇಳ್ದು ಪಾ ।
ವನ ಪೂರ್ಣಾಹುತಿಗೊಟ್ಟು ಶೇಷಮನದೊಂದಂ ಕೊಂಡನಾ ಪಿಂಡಮುಂ ॥

ಲಿಂಗವಂತರು ವೇದವನ್ನು ಪ್ರಮಾಣವಾಗಿ ತೆಗೆದುಕೊಂಡು ತದ್ಧರ್ಮಗಳನ್ನು ಆಚರಿಸುವ ವಿಷಯವನ್ನು ಸಂದೇಹವಿಲ್ಲದೆ ಅಂಗೀಕರಿಸುತ್ತಾರೆ. ವೇದೋಕ್ತ ಕರ್ಮ ಗಳಲ್ಲಿ ನಿತ್ಯನೈಮಿತ್ತಿಕಗಳನ್ನು ಗ್ರಾಹ್ಯಮಾಡಿ ಕಾಮ್ಯವಾದ ಯಜ್ಞವನ್ನು ಮಾತ್ರ ಅಂಗೀಕರಿಸುವುದಿಲ್ಲ. ಪ್ರಕೃತದಲ್ಲಿ ಅದಕ್ಕೆ ಕಾರಣವನ್ನು ಇಲ್ಲಿ ಸೂಚಿಸುವುದು ಅವಶ್ಯಕವು.

"ಜ್ಯೋತಿಷ್ಟೋಮೇನ ಸ್ವರ್ಗಕಾಮೋಯಜೇತ" ಇತ್ಯಾದಿ ಶ್ರುತಿವಾಕ್ಯಗಳು ಯಜ್ಞಕರ್ಮವನ್ನು ವಿಧಾನ ಮಾಡಿದರೂ, ಇಂದ್ರಾದಿ ದೇವತೆಗಳನ್ನು ಕುರಿತು ಯಾವು ದಾದರೊಂದು ಕಾಮ್ಯ ಫಲಾಭಿಸಂಧಿಯಿಂದ ಈ ಯಜ್ಞವನ್ನು ಮಾಡಬೇಕಾಗಿರುವುದು. "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಮೊದಲಾದ ವಾಕ್ಯಗಳಲ್ಲಿ ಹೇಳಿರುವಂತೆ ಆ ಸ್ವರ್ಗಾದಿಲೋಕ ಭೋಗವು ನಶ್ವರವಾದುದು ; ಪರಿಮಿತ ಕಾಲವು ಕಳೆದಮೇಲೆ ಆ ಸುಖವು ತಪ್ಪಿಹೋಗಿ ಪುನಃ ಭೂಲೋಕದಲ್ಲಿ ಹುಟ್ಟಬೇಕಾಗಿ ಬರುವುದು. ಆದ ಕಾರಣ ಇದು ಪುನರಾವೃತ್ತಿ ರಹಿತವಾದ ಮುಕ್ತಿಸುಖವಲ್ಲ ; ಅಲ್ಪಕಾಲದ ಸುಖ ವಾಗಿದೆ. ಪರಮಾತ್ಮನ ಅಂಶಭೂತಗಳಾದ ಈ ಸಾಮಾನ್ಯ ದೇವತೆಗಳನ್ನು ಮೆಚ್ಚಿಸಿ ಅವರ ಸೇವೆಯಲ್ಲಿದ್ದು ಪುನಃ ಪುಣ್ಯಭ್ರಷ್ಟರಾಗಿ ಮರ್ತ್ಯಲೋಕ ಪ್ರವೇಶಮಾಡುವುದು ಪ್ರಯೋಜನಕರವಾದುದಲ್ಲ. ದಹರಾದ್ಯುಪಾಸನೆಗಳಿಂದ ಬ್ರಹ್ಮಸ್ವರೂಪವನ್ನರಿತು "ಬ್ರಹ್ಮವೇದ ಬ್ರಹ್ಮೈವ ಭವತಿ" ಎಂಬ ಶ್ರುತಿವಚನದಂತೆ ಈಶ್ವರಸಾಕ್ಷಾತ್ಕಾರವನ್ನು ಪಡೆದು ಸಾಯುಜ್ಯಾದಿ ಶಾಶ್ವತಮೋಕ್ಷವನ್ನು ಪಡೆಯುವುದೇ ಉತ್ತಮವಾದುದು ; ಅಲ್ಪಸುಖಾಧಾಯಕಗಳಾದ ಯಜ್ಞಾದಿಗಳನ್ನು ಮಾಡಬೇಕಾದುದಿಲ್ಲ—ಎಂದು ಬ್ರಹ್ಮಸೂತ್ರ ಭಾಷ್ಯವನ್ನು ಬರೆದಿರುವ ಶ್ರೀಪತಿ ಪಂಡಿತಸ್ವಾಮಿಗಳು ತಮ್ಮ ಶ್ರೀಕರ ಭಾಷ್ಯದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ.

ಮತ್ತು, "ದ್ವಾದ್ವಾವಜಾವೀಶಾನೀಶೌ", "ದ್ವಾಸುಪರ್ಣಾ ಸಯುಜಾ ಸಖಾಯಾ," ಮೊದಲಾದ ಶ್ರುತಿವಾಕ್ಯಗಳಲ್ಲಿ ದ್ವೈತವೂ, "ನೇಹ ನಾನಾಸ್ತಿ ಕಿಂಚನ", "ಏಕಮೇವಾದ್ವಿತೀಯಂ ಬ್ರಹ್ಮ", "ತತ್ವಮಸಿ"—ಮೊದಲಾದ ಶ್ರುತಿ ವಾಕ್ಯಗಳಲ್ಲಿ ಅದ್ವೈತವೂ ಉಕ್ತವಾಗಿರುವುವು. ವೇದೈಕದೇಶವೂ ಪ್ರಮಾಣಾರ್ಹ ವಾದುದರಿಂದ ಯಾವುದೊಂದನ್ನೂ ಬಿಡತಕ್ಕುದು ಯುಕ್ತವಲ್ಲವಾದುದರಿಂದಲೂ, ಹಾಗೆ ಬಿಡುವುದರಿಂದ ವೇದಬಾಹ್ಯ ಮತ ಪ್ರಸಕ್ತಿಯುಂಟಾಗುವುದರಿಂದಲೂ ದ್ವೈತ ವೊಂದೇ ಆಗಲಿ, ಅದ್ವೈತವೊಂದೇ ಆಗಲಿ ಸಿದ್ಧಾಂತವಲ್ಲ; ಎರಡೂ ಗ್ರಾಹ್ಯಗಳು. ಆದಕಾರಣ, ಭೇದಾಭೇದರೂಪವಾದ—ಎಂದರೆ, ದ್ವೈತಾದ್ವೈತರೂಪವಾದ ಶಿವ ಸರ್ವೋತ್ಕರ್ಷವೇ ಸಿದ್ಧಾಂತವೆಂದು ಬರೆದಿರುವುದಲ್ಲದೆ ಲಿಂಗವಂತರ ಮತದ ಷಟ್ ಸ್ಥಳವಿಚಾರ, ಲಿಂಗಾಂಗ ಸಾಮರಸ್ಯ, ಲಿಂಗಧಾರಣ – ಮೊದಲಾದುವುಗಳನ್ನೂ ಸಿದ್ಧಾಂತಮಾಡಿರುವರು; ಈ ಸಿದ್ಧಾಂತಗಳನ್ನನುಸರಿಸಿಯೇ ಆ ಮತದ ಕವಿಗಳೂ ತಮ್ಮ ಗ್ರಂಥಗಳಲ್ಲಿ ಯಜ್ಞಪ್ರಸಕ್ತಿಯನ್ನೆತ್ತಲಿಲ್ಲವೆಂದು ಕಾಣುತ್ತದೆ. ಈ ಕಾರಣ ಗಳಿಂದ ಈತನು ಲಿಂಗವಂತನಲ್ಲ; ಮತ್ತು, ಈ ಗ್ರಂಥದ ಮೂರನೆಯ ಆಶ್ವಾಸದ ೬೧ ನೆಯ ಪದ್ಯದಲ್ಲಿ ವಿಶ್ವಂಭರ ರಾಜನ ಪತ್ನಿಯಾದ ವಿಜಯಾವತೀ ದೇವಿಯು ಪುರಾಣ ಶ್ರವಣವನ್ನು ಮಾಡಿದ ಸಂದರ್ಭದಲ್ಲಿ—

ಉ॥ ಇಂತುಚಿತೋಕ್ತಿಯಂ ನುಡಿದ ದೇವಲಭಟ್ಟನ ನೀತಿವಾಕ್ಯಮೋ।
ರಂತೆ ನಿಜಶ್ರವಾಂತಮನೆ ಸೋಂಕಿ ಮನಂ ನೆಱೆ ನೊಂದು ನೋಯದಿ॥
ರ್ಪಂತೆ ತದೀಯ ಬಾಲಕನ ಮಾತೃ ಪಿತೃ ದ್ವಿತಯಕ್ಕೆ ದೇವಿ ಬೇ।
ಳ್ಪಂತೊಸೆದಿತ್ತು ಮನ್ನಿಸಿ ವಿಸರ್ಜಿಸಿದಳ್ ನಯದಿಂ ನರೇಶ್ವರಾ॥

ಎಂದು ಹೇಳಿದ್ದಾನೆ; ದೇವಲಭಟ್ಟನೆಂಬ ಹೆಸರನ್ನಿಡುವುದು ಲಿಂಗವಂತರಲ್ಲಿ ಕಾಣಬರುವುದಿಲ್ಲ; ಭಟ್ಟನೆಂಬುದು ಬ್ರಾಹ್ಮಣರಲ್ಲಿಯೇ ರೂಢವಾಗಿರುವುದು; ಆದ ಕಾರಣ ಈತನು ಸ್ಮಾರ್ತಬ್ರಾಹ್ಮಣನಾಗಿರಬೇಕೆಂದು ಊಹಿಸಬಹುದಾಗಿದೆ.

**ಕವಿತಾ ಶೈಲಿ ಮೊದಲಾದುವು**:—ಈತನ ಶೈಲಿಯು ಲಲಿತವಾಗಿಯೂ ರಸ ಭರಿತವಾಯೂ ಗಂಭೀರವಾಗಿಯೂ ಮನೋಹರವಾಗಿಯೂ ಇದೆ. ಈತನಿಗೆ ಸಂಸ್ಕೃತ ಭಾಷೆಯಲ್ಲಿ ಪರಿಚಯವು ಚೆನ್ನಾಗಿರುವುದು.

ನಾಲ್ಕನೆಯ ಆಶ್ವಾಸದ ೨೬ ನೆಯ ಪದ್ಯದಲ್ಲಿ ಸಂಧ್ಯಾರಾಗವನ್ನು ವರ್ಣಿಸು ವಾಗ—

ಮ॥ ವರುಣಂಗಿಕ್ಕುವ ಚಾಮರೀ ಚಮರ ಜಾತಾಲೋಲ ವಾತಾಹತೋ ।
ತ್ಕರದಿಂದಂಜನ ಕುಂಜರೇಂದ್ರದ ಕನತ್ಕುಂಭಾಗ್ರ ಸಿಂದೂರ ಬಂ ॥
ಧುರ ರೇಣು ಪ್ರಸರಂ ಕರಂ ಪಱಿದು ತೋಱುತ್ತೆಂಬವೋಲಂಬರಾಂ ।
ತರಮಂ ತಳ್ತು ವಿರಾಜಿಸಿತ್ತು ನವ ಸಂಧ್ಯಾರಾಗ ರುಗ್ಮಂಡಲಂ ॥

ಎಂತಲೂ, ೩೬ ನೆಯ ಪದ್ಯದಲ್ಲಿ ವಿಟರನ್ನು ವರ್ಣಿಸುವಾಗ---

ಮ॥ಸ್ರ॥ ಜನಿತಾಹ್ಲಾದಾಕುಲಾಲೋಕನಮುಪಚಿತ ಸಂಪಕ್ವ ತಾಂಬೂಲ ದಾನಂ ।
ಮುನಿಸಂ ಕೈಕೊಳ್ವ ಕಿಂಚಿತ್ಪ್ರಣಯಕಲಹಮುತ್ತ್ಯುತ್ಸುಕ ವ್ಯಾವೃತಾಲಿಂ ॥
ಗನಮುಸ್ಪೃಷ್ಟೋಲ್ಲಸಚ್ಚುಂಬನಮುಸದೃಶ ವಾಗ್ಜಲ್ಪಮುವ್ಯಕ್ತ ಕಂಠ ।
ಸ್ವನಮೀಷತ್ತಾಡನಂ ಬಿತ್ತರಿಸಿ ನೆರೆವುದೋರಂದದಿಂ ಜಾರವೃಂದಂ ॥

ಎಂತಲೂ, ೫೯ ನೆಯ ಪದ್ಯದಲ್ಲಿ ಶಯ್ಯಾಗೃಹವನ್ನು ವರ್ಣಿಸುವಾಗ—

ಮ॥ ರತಿರಾಗೋದ್ಭವಮಂದಿರಂ ಮದನಕೇಳೀಶಾಲೆ ಸಮ್ಮೋಹನಾ ।
ಕೃತಿಗೇಹಂ ಬಹು ಚಿತ್ರ ಪತ್ರ ರಸಚಿತ್ರಾನೀಕ ಸದ್ಮಂ ಸಮು ॥
ನ್ನತ ಸೌರಭ್ಯ ಸುಧಾಮುಮೆಂದೆನಿಪ ಶಯ್ಯಾವಾಸಮಂ ಪೊಕ್ಕನ ।
ಕ್ಷತಸೌಖ್ಯಂ ವಿಜಯಾವತೀ ಸತಿಯುತಂ ವಿಶ್ವಂಭರಾವಲ್ಲಭಂ ॥

ಎಂತಲೂ ಹೇಳಿದ್ದಾನೆ. ಅನೇಕ ಸ್ಥಳಗಳಲ್ಲಿ ಹೀಗೆಯೇ ಸಂಸ್ಕೃತ ಪ್ರಚುರ ಪ್ರಯೋಗಗಳು ಹೆಚ್ಚಾಗಿವೆ. ಅಪೂರ್ವವಾದ ಹಳಗನ್ನಡ ಪದಗಳು ವಿಶೇಷವಾಗಿಲ್ಲ; ತಕ್ಕಮಟ್ಟಿಗೆ ಇವೆ. ಪ್ರೌಢವಾದ ಅಚ್ಚಗನ್ನಡ ಶಬ್ದಗಳನ್ನೇ ಪ್ರಯೋಗಿಸಿದ್ದಾನೆ; ಹೊಸಗನ್ನಡವನ್ನು ಎಲ್ಲಿಯೂ ಉಪಯೋಗಿಸಿಲ್ಲ. ಬತ್ತದ ಗದ್ದೆಯನ್ನು ವರ್ಣಿಸುವಾಗ,—

(ಆ. ೨ ಪದ್ಯ ೪೦)

ಕಂ॥ ಎಱಗಿದ ಮುಱುಗಿಳಿಗಳನು ।
ಣ್ಗಱಿದುಱುಗಲ ಪೊಳೆಪಿನಿಂ ಮೃಗಾವಳಿಗೆನಸುಂ ॥
ಮಿಱುಗುವ ಪೊಸ ಪಸುರ್ವುಲ್ಲಿಂ ।
ಬೆಱಕಮನೊದವಿಸುವುವಲ್ಲಿ ಕಳವೆಯ ಕೆಯ್ಗಳ್ ॥

ಎಂತಲೂ, ೬೫ ನೆಯ ಪದ್ಯದಲ್ಲಿ ಉಪವನ ವರ್ಣನೆ ಮಾಡುವಾಗ—

ಉ॥ ನಾಡೆ ಕಱಂಗಿ ಪಣ್ತೆಸೆಯುತಿರ್ಪರನೇಱಿಲ ಮಾಲೆ ಬೀಡೆ ಪ ।
ಣ್ಕ್ಕಡೆ ಪೊಡಟ್ಟಿ ದಾಡಿಮುದ ತಿಂತಿಣಿ ಪಣ್ಗೊನೆಗುರ್ಪಿನಿಂದು ತೂ ॥
ಗಾಡುವ ಕಾಂಗಿನುರ್ಬು ತನಿವಣ್ಗಳನಾಂತೆಸೆವೀಳೆಯೋಳಿಯ ।
ಚ್ಚಾಡಿಪುದಾ ಪುರೋಪವನದೊಳ್ ನಡೆ ನೋೞ್ಪರ ಕಣ್ಗಳಂ ನೃಪಾ ॥

ಎಂತಲೂ, ಆ. ೫ ಪದ್ಯ ೧೫೦ರಲ್ಲಿ ಜಲಕೇಳೀವರ್ಣನೆ ಮಾಡುವಾಗ—

ಕಂ॥ ಬಱಿವಿಡದೆ ಮುಸುಱುವಳಿಗಳ ।
ಬಳಗಕ್ಕೇವೈಸಿ ಮುಗುದೆ ಕೆಳೆಯಳ್ ಸರದೊಳ್ ॥
ಮುಱುಗಿರ್ದು ನೆಗೆದುವಂ ಕಂ ।
ಡೆಳೆಯಳ್ ಮುಗುಱ್ದಲ್ಲಿ ಮುಳುಗುತಿರ್ದಳದೊರ್ಬಳ್ ॥

ಎಂತಲೂ ಹೇಳಿದ್ದಾನೆ. ಈತನು ಉಪಯೋಗಿಸಿರುವ ಶಬ್ದಾಲಂಕಾರಗಳು:—

೧ ನೆಯಾಶ್ವಾಸದ ಕೆಲವು ಪದ್ಯಗಳಲ್ಲಿ ಯಮಕವನ್ನು ಹೀಗೆ ಹೇಳಿದ್ದಾನೆ:—

(ಪದ್ಯ ೧೫) ಚಂ॥ ಅತುಳ ಭುಜಾ ಬಲಾನಿಲಸುತಂ ಕುಶಲಾಗ್ರಣಿ ಚಿಕ್ಕರಾಜನು ।
ದ್ಧತ ರಿಪು ಕಂಜ ಪುಂಜಕೆ ಸುಧಾಂಶು ಸುಧಾಂಶು ಸಕೀರ್ತಿ ಕೀರ್ತಿಯಾ ॥
ಯತನುಹಿಮತ್ಸ ವಾಗ್ವಿಭವ ಗೋಪತಿ ಗೋಪತಿ ಗೋಪತಿ ಸ್ಫುರ ।
ದ್ವಿತರಣ ಭೋಗವಾಹಳಿಯೊಳರ್ಕಜನರ್ಕಜನರ್ಕ ಸಂಭವಂ ॥

(ಪದ್ಯ ೧೬) ಕಂ॥ ಸುರುಚಿರ ಕಾಶ್ಮೀರಾನ್ವಯ ।
ಶರಧಿಗೆ ವಿಪದಮನೆ ಪಡೆದರಾರ್ತಿಗೆ ಪದಪಂ ॥
ಕರುಹ ನತ ಜನ ಜನತತಿಗೆ ಚಿ ।
ಕ್ಕರಾಜನಮೃತ ಕ ರನಮೃತ ಕರನಮೃತ ಕರಂ ॥

(ಪದ್ಯ ೧೮) ಕಂ॥ ಎಸಕದ ಲಕ್ಷ್ಮೀಧರ ದೇ ।
ವಸುತಂ ಸನ್ಮಂತ್ರಿ ಚಿಕ್ಕರಾಜನೆ ವರ ಜಿ ॥
ಷ್ಣುಸುತಂ ಜಿಷ್ಣುಸುತಂ ಜಿ ।
ಷ್ಣುಸುತಂ ಸೌಂದರ್ಯದಿಂ ಪೊಡರ್ಪಿಂದಾರ್ಪಿಂ ॥

ಈ ಸ್ಥಳವಲ್ಲದೆ ಮತ್ತೆಲ್ಲಿಯೂ ಈ ಗ್ರಂಥದಲ್ಲಿ ಯಮಕವನ್ನು ಹೇಳಿಲ್ಲ; ಅನುಪ್ರಾಸವನ್ನು ಅಲ್ಲಲ್ಲಿ ಪ್ರಯೋಗಿಸಿರುವನು.

ಅರ್ಥಾಲಂಕಾರಗಳಲ್ಲಿ—ಉಪಮೆ, ಉತ್ಪ್ರೇಕ್ಷೆ, ರೂಪಕ, ಶ್ಲೇಷೆ, ವಿರೋಧಾಭಾಸ, ಪರಿಸಂಖ್ಯೆ, ವ್ಯತಿರೇಕ, ಅತಿಶಯೋಕ್ತಿ, ಸ್ವಭಾವೋಕ್ತಿ—ಇವುಗಳನ್ನೇ ಹೆಚ್ಚಾಗಿ ಪ್ರಯೋಗಿಸಿದ್ದಾನೆ, ಬೇರೆ ಅಲಂಕಾರಗಳನ್ನು ಹೇಳಿಲ್ಲ. ಅವುಗಳಲ್ಲಿ ಕೆಲವನ್ನು ಇಲ್ಲಿ ಬರೆದಿದೆ:—

(ಆ. ೧ ಪದ್ಯ ೪೨) ಸೂರ್ಯಾಸ್ತಮಯ ವರ್ಣನೆ (ಉತ್ಪ್ರೇಕ್ಷೆ)—

ಚಂ॥ ಪಿರಿದನುರಾಗದಿಂ ನೆರೆದ ನಾನಿರೆ ಪಶ್ಚಿಮ ದಿಗ್ವಧೂಟಿಯಂ ।
ಖರಕರನೆಂದೆನುತ್ತುಮೆನಸುಂ ಕಲುಷಾತ್ಮಿಕೆಯಾದ ಪೂರ್ವದಿ ॥
ಕ್ತರುಣಿಯ ವಕ್ತ್ರಮಾಗಳೆ ಕಱಂಗಿರೆ ಕಂಡಿರಲಂಜಿದಂತೆ ಭಾ ।
ಸ್ಕರನಿರದೊಯ್ಯನೆತ್ತಿೞಿದನಸ್ತ ಮಹೀಧರ ಮಸ್ತಕಾಗ್ರದೊಳ್ ॥

(ಆ. ೧ ಪದ್ಯ ೩೪) ಸುಕಂಠೆ ವೀಣೆಯನ್ನು ಬಾಜಿಸಿದುದು (ಕ್ರಿಯಾಸ್ವಭಾವೋಕ್ತಿ)

ಮ॥ ಕಳೆಯಂ ಪತ್ತಿಸಿ ಕೋಮಲಾಂಗುಲಿಗಳಿಂದಾ ತಂತಿಯಂ ನೀವಿ ನಿ ।
ರ್ಮಳಮಂ ಮಾಡಿ ನಿಜೋದ್ಧ ವಾಮ ಕುಚದೊಳ್ ಸೈತಿಟ್ಟು ಸುಸ್ಥಾನಕಂ ॥
ಗಳ ನೋರಂತಿರೆ ಪೊಯ್ದು ಪೊಯ್ದು ಪದದೊಳ್ ರಾಗಂ ಮನೋರಾಗಮಾ ।
ಗಳೆ ಪೊಣ್ಮಲ್ಕೆ ಸುಕಂಠೆ ಬಾಜಿಸಿದಳಾ ಜಾಣಿಂ ಲಸದ್ವೀಣೆಯಂ ॥

(ಆ. ೨ ಪದ್ಯ ೧೩೧) ವಿಶ್ವಂಭರ ರಾಜನ ವರ್ಣನೆ (ವ್ಯತಿರೇಕಾಲಂಕಾರ)

ಮ॥ಸ್ರ॥ ಪರಿಕಲ್ಪಂಗೆಯ್ಯದನ್ನಂ ಕುಡದಮರ ಕುಜಂ ಪೆರ್ಚು ಕುಂದುಳ್ಳುದಾ ಸಾ ।
ಗರಮೆಂದುಂ ದುಷ್ಟ ದೋಷಾಚರನ ಕರತಳಕ್ಕೆತ್ತುಗುಂಡಾಯ್ತು ತಾರಾ ॥
ಗಿರಿಯೆಂದೇಳಿಪ್ಪ ದಾನೋನ್ನತಿಯಿನತುಳಗಾಂಭೀರ್ಯದಿಂ ಸ್ಥೈರ್ಯದಿಂ ಬಿ ।
ತ್ತರಿಪಂ ತಾನಿಂತಜಸ್ರಂ ಕೃತಿರತಿರಮಣಂ ಸಾಹಸೋದ್ದಾಮ ಭೀಮಂ ॥

(ಆ. ೫ ಪದ್ಯ ೧೨೫) ಸ್ತ್ರೀಸಮೂಹ ವರ್ಣನೆ (ರೂಪಕಾಲಂಕಾರ)—

ಚಂ॥ ನಿಮಿರ್ದಲರ್ಗಣ್ಣ ನುಣ್ಬೆಳಗಡರ್ಪಿಪ ಕೂರಲಗಾ ಸುಕೋಮಲಾಂ ।
ಗಮೆ ಶರಯಷ್ಟಿ ತೊಟ್ಟಲರ ಪಚ್ಚಮೆ ಬೆಳ್ಗಱಿಯಾಗೆ ಕಾಮಿನೀ ॥
ಸಮಿತಿ ವಿರಾಜಿಸಿರ್ದುದು ಮನೋಭವ ಭೂಪತಿಗೀವೆನೆಂದು ತಾಂ ।
ಕಮಲಜನೊಲ್ದು ನಿರ್ಮಿಸಿದ ಮೋಹನ ಬಾಣದ ಮೊತ್ತಮೆಂಬಿನಂ ॥

ಱೞ ಕುಳಗಳ ಭೇದವನ್ನು ಇಟ್ಟುಕೊಂಡಿರುವಂತೆ ಕಾಣಬರುವುದಿಲ್ಲ. ಹಳಗನ್ನಡದ ಕಾವ್ಯಗಳಲ್ಲಿ ಇದು ಆವಶ್ಯಕವಾದುದು.

(ಆ. ೫ ಪದ್ಯ ೧೪೬) ಕಂ॥ ಬಱಿಯೊಳೆ ತಾನುಂ ಕುಂಕುಮ ।
ಜಳಮಂ ಬಿಡದರಸಿ ಪೊಯ್ಯೆ ನೃಪನಂಗಂ ಕ ॥
ಣ್ಗೊಳಿಸಿದುದರುಣತೆಯಿಂ ತ ।
ಜ್ಜಳ ಕೇಳಿಯೊಳೊಗೆದ ರಾಗಮುಣ್ಮಿದ ತೆಱದಿಂ ॥

ಇಲ್ಲಿರುವ ನಾಲ್ಕು ಪ್ರಾಸಸ್ಥಾನಗಳಲ್ಲಿ ೨ ಕ್ಷಳ, ೧ ಱಱ, ೧ ಕುಳ ಇವೆ.

(ಅ. ೫ ಪದ್ಯ ೧೫೦) ಕಂ॥ ಬಱವಿಡವೆ ಮುಸುಱುವಳಿಗಳ ।
ಬಳಗಕ್ಕೇವೈಸಿ ಮುಗುದೆ ಕೆಳೆಯುಳ್ ಸರದೊಳ್ ॥
ಮುಱುಗಿರ್ದುವ ನೆಗೆದುವಂ ಕಂ ।
ಡೆಳೆಯುಳ್ ಮುಗುಳ್ದಲ್ಲಿ ಮುಱುಗುತಿರ್ದಳದೊರ್ಬಳ್ ॥

ಇಲ್ಲಿಯ ಪ್ರಾಸಸ್ಥಾನಗಳಲ್ಲಿ ೨ ಱ, ೨ ಕುಳಗಳಿವೆ.

(ಅ. ೬ ಪದ್ಯ ೩೨) ಕಂ॥ ಇಳೆಯುಂ ಕೊಂಡಸುರಂ ಬಱ ।
ನಿಳಯಕ್ಕಱುದಂದಿನಂದಮಂ ನೆನೆಯಿಸಿದ ॥
ತ್ರೈಳಗಾರ ಮುಗಿಲ್ ಕಱಿದಾ ।
ಮಱಿವೊನಲುಬ್ಬಿದ ವಿಗುರ್ವಿನಿಂ ಭೂ ಭುವನಂ ॥

ಇಲ್ಲಿ ಪ್ರಾಸಸ್ಥಾನದಲ್ಲಿ ೧ ಳ, ೧ ಱ, ೨ ಕ್ಷಳಗಳಿವೆ—ಹೀಗೆಯೇ ಅನೇಕ ಸ್ಥಳಗಳಲ್ಲಿ ಬಂದಿದೆ.

ಪ್ರಾಸ ವಿಷಯದಲ್ಲಿ ಮಕಾರ ವಕಾರಗಳಿಗೆ ಅಭೇದವನ್ನಿಟ್ಟುಕೊಂಡಿರುವಂತೆ ಕಾಣುತ್ತದೆ; ಇದು ಅಪೂರ್ವವಾದುದು.

(ಅ. ೪. ಪದ್ಯ ೧೩೪) ಕಂ॥ ಅವಿರಳದಿಂದಿಭಶುಂಡಾ ।
ಯಮಾನಮಾಗಿಂತು ಸುರಿವ ನವಘೃತ ಧಾರಾ ॥
ನಿವಹನುನನಾಕುಳಂ ಕೊಳು ।
ತುಮಿರ್ದನಧ್ವರದೊಳನಲನಾಂತಾಕೃತಿಯುಂ ॥

ಇಲ್ಲಿ ಪ್ರಾಸಸ್ಥಾನದಲ್ಲಿ ೨ ವಕಾರಗಳು ೨ ಮಕಾರಗಳು ಬಂದಿವೆ. ಇನ್ನೂ ಕೆಲವು ಪದ್ಯಗಳಲ್ಲಿ ಹೀಗೆಯೇ ಪ್ರಯೋಗಿಸಿರುತ್ತಾನೆ.

**ಉಪಸಂಹಾರ:**—ಈ ಕಾವ್ಯದಲ್ಲಿ ವ್ಯಂಗ್ಯವು ವಿರಳವಾಗಿದೆ; ಗುಣೀಭೂತ ವ್ಯಂಗ್ಯವು ತಕ್ಕಮಟ್ಟಿಗೆ ಇವೆ; ಅಲಂಕಾರಗಳೇ ಹೆಚ್ಚಾಗಿವೆ. ಪ್ರಾಯಶಃ ವೈದರ್ಭೀ ರೀತಿಯೂ, ಕೈಶಿಕೀವೃತ್ತಿಯೂ ಈ ಕಾವ್ಯದಲ್ಲಿ ಕಾಣಬರುತ್ತವೆ. ದ್ರಾಕ್ಷಾಪಾಕವು ಹೆಚ್ಚಾಗಿದೆ; ನಾಳಿಕೇರಪಾಕವು ಅತಿವಿರಳವಾಗಿದೆ. ಅಷ್ಟಾದಶ ವರ್ಣನೆಗಳೂ ಬಂದಿರುತ್ತವೆ; ವರ್ಣನೆಗಳು ಚಮತ್ಕಾರವಾಗಿಯೇ ಇವೆ. ಶಬ್ದಗಳಿಗೆ ಮಾತ್ರ ಬೇರೆ ಕಡೆಗಳಲ್ಲಿ ಪುನರುಕ್ತಿ ಬಂದಿದೆಯಲ್ಲದೆ ಭಾವಗಳಿಗೆ ಪುನರುಕ್ತಿಯಿಲ್ಲ. ವರ್ಣನೆ

ಗಳು ಸ್ವತಂತ್ರಗಳಾಗಿಯೇ ಇವೆ; ಪದಮೈತ್ರಿಯು ಚೆನ್ನಾಗಿದೆ. ಈ ಕವಿ ಮೊದಲಿನಲ್ಲಿ ಹೇಳಿಕೊಂಡಿರುವಂತೆ ಭಾವವು ಅಗ್ಗಳನ ಕವಿತ್ವವನ್ನು ಹೋಲುವುದಾದರೂ, ಅಗ್ಗಳನಂತೆ ಕವಿತ್ವದ ಬಿಗುಪು ಕಾಣಬರುವುದಿಲ್ಲ. ರುದ್ರಭಟ್ಟನ ಶೈಲಿಗೆ ಈ ದೇವಕವಿಯ ಶೈಲಿಯು ಸಮಾನವಾಗಿರುವುದು. ಬರಿ ಕನ್ನಡ ಶಬ್ದಗಳನ್ನೇ ಪ್ರಯೋಗಿಸಿರುವ ಪದ್ಯಗಳು ಕೇವಲ ವಿರಳವಾಗಿವೆ; ಹೆಚ್ಚು ಸಂಸ್ಕೃತ ಪದಗಳು ಮಿಶ್ರವಾಗಿರುವುವು. ಒಟ್ಟಿನಲ್ಲಿ, ಈತನು ಮಹಾಕವಿಯೆಂದೂ, ಈತನ ಕಾವ್ಯವು ಶ್ರೇಷ್ಠತರವಾದುದೆಂದೂ ಹೇಳುವುದಕ್ಕೆ ಯಾವ ಸಂದೇಹವೂ ಇಲ್ಲ.

—ಕಡಬದ ನಂಜುಂಡಶಾಸ್ತ್ರಿ

# ಮುನ್ನುಡಿ

ದೇವಕವಿಯ 'ಕುಸುಮಾವಳೀ ಕಾವ್ಯ' ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿ ಬಹಳ ವರ್ಷಗಳಾಗಬೇಕಿತ್ತು. ಕಾರಣಾಂತರಗಳಿಂದ ಆ ಕೆಲಸ ತಡೆದು ಇದೀಗ ಪ್ರಕಟವಾಗುತ್ತಿದೆ. 1918 ರ ಸುಮಾರಿನಲ್ಲಿ ಗ್ರಂಥ ಪರಿಶೋಧಿತ ವಾಗಿ ಪ್ರಕಟನೆಗೆ ಸಿದ್ಧವಾಗಿತ್ತು. ದಿವಂಗತ ಕಡಬದ ನಂಜುಂಡಶಾಸ್ತ್ರಿಗಳು ಹಸ್ತ ಪ್ರತಿಯನ್ನು ಪರಿಶೋಧಿಸಿ ಅಚ್ಚಿಗೆ ಸಿದ್ಧಮಾಡಿದ್ದರು. 'ಕುಸುಮಾವಳೀ ಕಾವ್ಯ' ದ ಬಗ್ಗೆ ಒಂದು ವಿಮರ್ಶೆಯನ್ನೂ ಬರೆದು 1919 ರ ಜುಲೈ ಪರಿಷತ್ಪತ್ರಿಕೆ ಯಲ್ಲಿ ಪ್ರಕಟಿಸಿಯೂ ಇದ್ದರು. ಅದನ್ನು ಈ ಪುಸ್ತಕಕ್ಕೆ ಉಪೋದ್ಘಾತವನ್ನಾಗಿ ಮುಂದೆ ಅಚ್ಚುಮಾಡಿದೆ. ಪರಿಷತ್ತು ಅವರಿಗೆ ತುಂಬ ಆಭಾರಿಯಾಗಿದೆ.

ಕುಸುಮಾವಳೀ ಕಾವ್ಯ ಕರ್ತೃ ದೇವಕವಿ 1200 ರ ಸುಮಾರಿನಲ್ಲಿ ಇದ್ದನೆಂದು ಊಹಿಸಬಹುದು. ಕುಸುಮಾವಳಿಯ ಕಥೆ ಒಂದು ಕಲ್ಪಿತ ಕಥೆ. ಆದ್ದರಿಂದ ಅದರಲ್ಲಿ ಬರುವ ಕವಿ ಸಂಬಂಧ ವಿಷಯಗಳೇನಾದರೂ ಇದ್ದರೆ ಅದನ್ನು ಖಚಿತವಾಗಿ 'ಕವಿಯ ವಿಚಾರ' ಎಂದು ಹೇಳುವುದು ಕಷ್ಟ. ಇವನು ಯಾವ ದೇಶದವನು ಯಾವ ಮತ ಸಂಪ್ರದಾಯಕ್ಕೆ ಸೇರಿದವನು ಎಂದು ಗ್ರಂಥದ ಆಧಾರದಿಂದ ಹೇಳು ವುದು ಸಾಧ್ಯವಾಗಲಾರದು. ಪುರಾಣ ವಿಷಯಗಳನ್ನು ಆಯ್ದು ಲೌಕಿಕ ಕಾವ್ಯ ಗಳನ್ನೂ ಧಾರ್ಮಿಕ ವಿಷಯಗಳನ್ನು ಎತ್ತಿಕೊಂಡು ಧಾರ್ಮಿಕ ಕಾವ್ಯಗಳನ್ನೂ ಬರೆಯುತ್ತಿದ್ದ ಕಾಲದಲ್ಲಿ ಕಾಲ್ಪನಿಕ ವಸ್ತುವನ್ನು ಆರಿಸಿಕೊಂಡು ಕಾವ್ಯ ರಚಿಸಿದ ಕೀರ್ತಿ ದೇವಕವಿಗೆ ಸಲ್ಲುತ್ತದೆ.

ಇವನ ಸಮಕಾಲೀನನೋ ಅಥವಾ ಇವನ ಕಾಲದ ಹತ್ತಿರ ಹತ್ತಿರ ಇದ್ದ ನೇಮಿಚಂದ್ರ 'ಲೀಲಾವತಿ ಪ್ರಬಂಧಂ' ಎಂಬ ಕಾವ್ಯವನ್ನು ಬರೆದಿದ್ದಾನೆ. ಅಲ್ಲಿನ ಕಥೆಯೂ ಕುಸುಮಾವಳೀ ಕಥೆಯ ಜಾಡಿನಲ್ಲೇ ಹರಿಯುತ್ತದೆ. ಲೀಲಾವತಿ ಕಥೆ, ಸುಬಂಧು ಎಂಬ ಕವಿ ಸಂಸ್ಕೃತದಲ್ಲಿ ಬರೆದ ವಾಸವದತ್ತೆ ಕಥೆಗೆ ಹೆಚ್ಚು ಹೋಲುತ್ತದೆ ಎಂದು ಹೇಳುತ್ತಾರೆ. ದೇವಕವಿಗೂ 'ವಾಸವದತ್ತೆ' ಯೇ ಆಧಾರವೋ ಹೇಗೆ ಎಂಬುದನ್ನು ವಿಮರ್ಶಕರು ಪರಿಶೀಲಿಸಬೇಕು. ಇಲ್ಲವೇ ಇವೆಲ್ಲಕ್ಕೂ ಮೂಲಾಧಾರ ಬೇರೆಯುಂಟೋ ಅನ್ನುವುದೂ ವಿಚಾರಮಾಡತಕ್ಕ ಅಂಶ.

ಹನ್ನೆರಡನೆಯ ಶತಮಾನದ ಈ ಕಾವ್ಯ ಆಗಿನ ಪರಂಪರೆಯಲ್ಲಿ ಮೂಡಿ ಬಂದಿದೆ. ಪಂಡಿತರ ವಿಮರ್ಶೆ ಇದನ್ನು ಸ್ಪಷ್ಟಗೊಳಿಸುತ್ತದೆ. ಕಾವ್ಯಾಭ್ಯಾಸಿಗಳಿಗೆ ಈ ಪ್ರಕಟಣೆ ಉಪಯೋಗವಾಗುವುದೆಂದು ನಂಬುತ್ತೇವೆ.

ಬೆಂಗಳೂರು
18-12-72

ರಂ. ಶ್ರೀ. ಮುಗಳಿ
ಪ್ರಧಾನ ಸಂಪಾದಕರು

# ವಿಷಯ ಸೂಚಿ


ಪುಟ

ಪ್ರಥಮಾಶ್ವಾಸ :

ಮಣಿಕುಂಡಲ ಮಹೀಪಾಲಕ ಸ್ವಪ್ನದರ್ಶನ ವನವರ್ಣನೆ .... ೧

ದ್ವಿತೀಯಾಶ್ವಾಸ :

ವಸಂತಕ ವಿಷಯವರ್ಣನೆ, ವಿಮಳಾಪುರೀ ವರ್ಣನೆ .... ೨೮

ತೃತೀಯಾಶ್ವಾಸ :

ವಿಶ್ವಂಭರ ನರೇಶ್ವರ ವಿಭವ ವರ್ಣನೆ, ವಿಜಯಾವತೀ ಪುತ್ರ
ವಾಂಛಾದಿ ಚಿಂತಾವರ್ಣನೆ, ಸುಪ್ರಭ ಮುನೀಶ್ವರ ದರ್ಶನ ವರ್ಣನೆ ೫೩

ಚತುರ್ಥಾಶ್ವಾಸ :

ಯಜ್ಞವರ್ಣನೆ .... .... .... ೭೫

ಪಂಚಮಾಶ್ವಾಸ :

ವಿಜಯಾವತೀ ಗರ್ಭವಿಭ್ರಮ ವರ್ಣನೆ, ವಾರಿಕೇಳೀ ವರ್ಣನೆ ೧೦೨

ಷಷ್ಠಾಶ್ವಾಸ :

ವರ್ಷಕಾಲ ವರ್ಣನೆ, ಕುಮಾರೋದಯ ವರ್ಣನೆ .... ೧೩೩

ಸಪ್ತಮಾಶ್ವಾಸ :

ಶಾಸ್ತ್ರ ಶಸ್ತ್ರಾಭ್ಯಾಸ ವರ್ಣನೆ .... .... ೧೬೨

ಅಷ್ಟಮಾಶ್ವಾಸ :

ಪವನಂಜಯಾಶ್ವ ವರ್ಣನೆ, ಯುವರಾಜ ಪದವೀ ವರ್ಣನೆ
ನಿದಾಘ ವರ್ಣನೆ .... .... .... ೧೯೦

ನವಮಾಶ್ವಾಸ :

ವಿಪುಳವನವಿಹಾರ ವರ್ಣನೆ, ಪುರಪ್ರವೇಶ ವರ್ಣನೆ .... ೨೧೮

ದಶಮಾಶ್ವಾಸ :

ಸಾಹಸ ಮರುತ್ಸುತ ವಿರಹವರ್ಣನೆ, ಕುಸುಮಾವಳೀ ದರ್ಶನೋತ್ಸುಕ ಪ್ರಯಾಣ ವರ್ಣನೆ .... .... .... ೨೪೨

ಏಕಾದಶಾಶ್ವಾಸ :

ಸಮರ ವರ್ಣನೆ ರಮ್ಯಕ ವನಪ್ರವೇಶ ವರ್ಣನೆ .... ೨೭೨

ದ್ವಾದಶಾಶ್ವಾಸ :

ಕುಸುಮಾವಳೀ ಲಲಿತೋದಯ ವರ್ಣನೆ, ಕಮನೀಯ ರೂಪ ವರ್ಣನೆ, ಚಿತ್ರಪಟದರ್ಶನ ವರ್ಣನೆ, ಕುಸುಮಾವಳೀ ವಿರಹ ವರ್ಣನೆ .... ೩೦೭

ತ್ರಯೋದಶಾಶ್ವಾಸ :

ಕುಸುಮಾವಳೀ ದೇವೀ ಶಿಶಿರೋಪಚಾರ ವರ್ಣನೆ, ಕಂದರ್ಪದೇವ ದರ್ಶನ ವರ್ಣನೆ .... .... .... ೩೪೧

ಚತುರ್ದಶಾಶ್ವಾಸ :

ಚಿತ್ರಕೋದ್ಯಾನ ನಿರ್ಗಮನ ವರ್ಣನೆ, ಮೃಗವ್ಯಾ ವರ್ಣನೆ, ಕುಸುಮಾವಳೀ ನೃಪ ಕುಸುಮಾಸ್ತ್ರ ನಿಯೋಗ ವರ್ಣನೆ .... ೩೬೬

ಪಂಚದಶಾಶ್ವಾಸ :

ಚಂದ್ರಧ್ವಜ ಸಮಾಗಮ ವರ್ಣನೆ, ವಿಶ್ವಂಭರ ನರೇಂದ್ರ ಕಂದರ್ಪದೇವ ದರ್ಶನ ವರ್ಣನೆ, ಕಪಿಲ ಮಹಾಚಾರ್ಯ ದರ್ಶನ ವರ್ಣನೆ. .... .... .... ೩೯೪

ಶ್ರೀರಸ್ತು

# ಕುಸುಮಾವಳೀ ಕಾವ್ಯಂ

---

## ಪ್ರಥಮಾಶ್ವಾಸಂ

ಸ್ರ॥ ಶ್ರೀಮನ್ಮಾಂಗಲ್ಯ ಪಾತ್ರಾವಯವ ನಿವಹದೊಳ್ ತಳ್ತ ಹರ್ಷೋದ ಬಿಂದು ।
ಸ್ತೋಮಂ ತಾನೆಂಬಿನಂ ತೀವಿದ ವಿಬುಧನದೀ ವಾಃಕಣಾನೀಕದೊಳ್ ಸಂ ॥
ದೌಮಾಕಾರಂ ಕರಂ ಮಾರ್ಪೊಳೆಯೆ ಸಕಲ ಶಕ್ತ್ಯಂಗನಾದಂತಿರೊಪ್ಪಿ ।
ರ್ಪಾ ವೈಮಂ ವಿಶ್ವನಾಥಂ ಕುಡುಗಖಿಳಜನಾನಂದಮಂ ನಲ್ಮೆಯಿಂದಂ ॥೧॥

ಮ॥ ಅನವದ್ಯಂ ವರಲಕ್ಷಣೋಪಚಿತ ರೂಪಂ ವಿಶ್ವನಾಥಾಂಘ್ರಿಭ ।
ಕ್ತಿ ನವಾಳಂಕರಣಂ ವಚಃಪ್ರಸವ ಬಾಣಂ ಸನ್ಮನೀಷೀಕ್ಷುಚಾ ॥
ಪನುದಂಚತ್ಕುಸುಮಾವಳೀರತಿವರಂ ಲಕ್ಷ್ಮೀವರ ಪ್ರೇಮನಂ ।
ದನ ಕಂದರ್ಪನುಪೇಂದ್ರನೀಗೆ ಜನಚೇತೋರಾಗಮಂ ರಾಗದಿಂ ॥೨॥

ಎಸೆವೀರಯ್ದು ಗುಣಾಳಿ ತಾಳವಿವರಂ ರೀತಿತ್ರಯಂ ಗೇಯದೊ ।
ಳ್ಪ ಸುಶಬ್ದಾವಳಿ ಹೃದ್ಯವಾದ್ಯ ನಿವಹಂ ಶಬ್ದಾರ್ಥಜಾಲಂಕೃತಿ ॥
ಪ್ರಸರಂ ಸತ್ಕರಣೋತ್ಕರಂ ಮೃದುಪದನ್ಯಾಸಂ ಪದನ್ಯಾಸಮಾ ।
ಗೆ ಸದಾ ನರ್ತಿಸುತಿರ್ಕ್ಕೆ ವಾಗ್ವಧು ಮದಾಸ್ಯಾಂಭೋಜ ರಂಗಾಗ್ರದೊಳ್ ॥೩॥

ಮ॥ಸ್ರ॥ ಕವಿ ನಿರ್ವಾಣಂಗೆ ಬಾಣಂಗವನಿಗೆಸೆವ ಹರ್ಷಂಗೆ ಹರ್ಷಂಗೆ ವಿಖ್ಯಾ ।
ತ ವಿಜನ್ಮಾಘಂಗೆ ಮಾಘಂಗಖಿಳ ಸುಕವಿರತ್ನಂಗೆ ರತ್ನಂಗೆ ಸಂದೊ ॥
ಪ್ಪವಿಳಾರುದ್ರಂಗೆ ರುದ್ರಂಗೊದವಿದ ಪದಪಿಂದಗ್ಗಳಂಗಗ್ಗಳಂಗು ।
ತ್ಸವದಿಂದಾವಂ ದಿಟಂ ವಂದಿಸುವದಟನವಂ ಸತ್ಕವೀಂದ್ರಾವತಂಸಂ ॥೪॥

ಚಂ॥ ಮೃದುಮಯಮಪ್ಪ ಶಬ್ದತತಿ ಶಬ್ದಸಮಾಜದೊಳೊಂದಿದರ್ಥಮ ।
ರ್ಥದೊಳವ[1] ಗಾಢಮಾಗಿ ಬಿಡದುಣ್ಮುವ ಭಾವಮುದಗ್ರ ಭಾವದೊಳ್ ॥

---

1. ಗಾಹ.

ಪುದಿದ ರಸಂ ರಸಪ್ರಸರದೊಳ್ ಸವಿ ಸಂಗಳಿಪಂತೆ ಪೂಣ್ದು ಪೇ ।
ಳ್ವುದು ಕೃತಿಯಂ ಚಮತ್ಕೃತಿಯೆನಲ್ ವಿಬುಧಾಳಿಗೆ ಸತ್ಕವೀಶ್ವರಂ ॥೫॥

ಮ॥ ಕವಿತಾಖ್ಯಾತಿಯನಳ್ತಿವಟ್ಟು ಮನನೊಲ್ದೋರಂದದಿಂದೆಕ್ಕಸ ।
ಕ್ಕವನುತ್ಪಾದಿಸಿ ಬಲ್ಮೆಯಿಂ ಬೆರೆದಿರಲ್ ಬಾ[1] ಯ್ಬಿಟ್ಟುಗ್ಗಮೆಂಬಂತೆ[2] ಪೂ ॥
ಣ್ದವಿಚಾರಂ ನೆಲೆವೆರ್ಚೆ ಪೇಳ್ದ ಕವಿಯುಂ ತಾಂ ದುರ್ಯಶೋಭಾಗಿಯ ।
ಕ್ಕುಮಣಂ ತತ್ಕೃತಿಬಂಧಮುಂ ಭುವನದೊಳ್ ಹಾಸಕ್ಕೆ ಪಕ್ಕಾಗದೇ ॥೬॥

ವರ ಶಬ್ದಜ್ಞರನರ್ಥ[3] ದರ್ಶಿಗಳನುಕ್ತಿ ಪ್ರೌಢರಂ ಭಾವ ತ ।
ತ್ಪರರಂ ನೀತಿ ವಿದರ್ಕ್ಕಳಂ ರಸಿಕರಂ ಸಾಹಿತ್ಯದೊಳ್ ಸಂದ ಜಾ ॥
ಣರನಾಂದೋಳ ಶಿರಸ್ಸರೋಜ ಮುಖರಂ ಮಾಳ್ಪು[4]ಕ್ತಿ ಚಾತುರ್ಯ ಬಂ ।
ಧುರಮಾವಂಗೆಡೆ ಗೊಂಡುದಾತನೆ ಕವೀಂದ್ರೋತ್ತಂಸನೀ ಧಾತ್ರಿಯೊಳ್ ॥೭॥

ಚಂ॥ ವಿದಿತ ಕಥಾವಿಚಿತ್ರಮೆ[5]ಸೆಗೀ ಕುಸುಮಾವಳಿಯೆಂಬ ನವ್ಯ ಕಾ ।
ವ್ಯದೆ[6]ಕವಿರನ್ನನೋಜೆ[7] ವರಬಾಣನ ಸೂಕ್ತಿಕಳಾ ಕಳಾಪವ ॥
ಗ್ಗದ ಕವಿಮಾಘ ಹರ್ಷರ ವಚಶ್ಶಿ[ಕುರೋ]ನ್ನತಿ ರುದ್ರಭಟ್ಟನೊಳ್ ।
ಪುದಿದ ಪದ ಪ್ರಗಲ್ಭಗುಣಮಗ್ಗಳದೇವನ ಭಾವಗೌರವಂ ॥೮॥

ಕಂ॥ ಪೆಱತೇನೀ ಕುಸುಮಾವಳಿ ।
ಗೆಱೆಯನೆನಿಪ್ಪಾತನನ್ವಯ ಖ್ಯಾತಿಯನೆ ॥
ನ್ನಱಿವಂದದೆ ವರ್ಣಿಸುವೆಂ ।
ಕಿಱುಗೂಸೆಣಿಪಂತೆ ತೊಳಪ ತಾರಾಗಣಮಂ ॥೯॥

ಅದೆಂತೆಂದೊಡೆ—

ಉ॥ ಚಾರು ಚರಿತ್ರ[8]ವೇಲಮಮಳೋನ್ನತ ಕೀರ್ತಿಸುಧಾಂಬು ಸತ್ಯ ಗಂ ।
ಭೀರ ವಿವರ್ಧನಂ ವರಗುಣೋತ್ಕರ ರತ್ನಸಮೇತಮಪ್ಪ ಕಾ ॥
ಶ್ಮೀರ ಕುಲಾಮೃತಾಂಬುಧಿಯೊಳುದ್ಭವಿಸಿರ್ದನುದಾರ ಸಾರಮಂ ।
ದಾರ ಮಹೀಜಮೆಂದೆನೆ ವಿಭಾಸುರ ಕೇಶವ ದಂಡನಾಯಕಂ ॥೧೦॥

1. ಯ್ವಿಟ್ಟು. 2. ಮಾ. 3. ದೇಶಿ 4. ಸೆವೀ
5. 6. 7. ಕವಿಚರಿತ್ರೆ ಪು. ೨೪೯ 8. ಶೀಲ.

ಮ॥ ಧರೆಯೊಳ್ ಕೇಶವ ದಂಡನಾಥ ವಸುದೇವಂಗಗ್ಗದಾ ಕೃಷ್ಣನಂ ।
ತಿರೆ ಲಕ್ಷ್ಮೀಧರ ದೇವನುದ್ಭವಿಸಿದಂ ಕಾಶ್ಮೀರ ವಂಶಪ್ರಭಾ ॥
ಸುರ ಲಕ್ಷ್ಮೀಧರನುದ್ಧ ಮಂತ್ರ ವಿಲಸಲ್ಲಕ್ಷ್ಮೀಧರಂ ಲೋಕ ಬಂ ।
ಧುರ ಲಕ್ಷ್ಮೀಧರನುಸ್ಮದಾಹಿತ ಜಯಾಜ್ಞಾ ಚಕ್ರ ಲಕ್ಷ್ಮೀಧರಂ ॥೧೧॥

ಮ॥ಸ್ರ॥ ವಿದಿತಾಜ್ಞಾ ಶಕ್ತಿ ಮೆಯ್ವೆಚ್ಚಿದ ವರವಿಭು ಲಕ್ಷ್ಮೀಧರಂಗಾತ್ಮಜರ್ಪು ।
ಟ್ಟಿದರೀಶಂಗಾ ತ್ರಿಣೇತ್ರಂಗಳೆ ಜನಿಯಿಸಿದಂತಪ್ರತರ್ಕ್ಯ ಪ್ರಭಾವಾ ॥
ಸ್ಪದ ತೇಜಂ ಚಿಕ್ಕರಾಜಂ ವಿಬುಧಜನ ನುತಂ ವಿಟ್ಠಲಂ ಸೂರಿ ನೀರೇ ।
ಜ ದಿನೇಶಂ ಲಾಹಿದೇವಂ ಧರೆಯೊಳೆಸೆವರೀ ದೋರ್ಬಳೋದ್ದಾಮ ಭೀಮರ್ ॥

ಕಂ ॥ ದೇವತ್ರಯದೊಳ್ ಪಿರಿಯನ ।
ದಾವಂ ಶಶಿಮೌಳಿಯೆಂಬ ತೆಱದಿಂದತುಳಾ ॥
ಜ್ಞಾವಿಭವದಿಂದೆ ಪಿರಿಯಂ ।
ಭೂವಿನುತಂ ಚಿಕ್ಕರಾಜನೂರ್ಜಿತ ತೇಜಂ ॥೧೩॥

ಶ್ರೀ ಕಾಶ್ಮೀರ ಕುಲಾರ್ಣವ ।
ರಾಕಾ ಶಶಿಯೆನಿಪ ಚಿಕ್ಕರಾಜನಭೀಷ್ಟಾ ॥
ನೀಕಮನೆ ಮಾಡುಗೆಂದುಂ ।
[1]ಸಾಕಾರದೊಳೆಸೆವ ಪೆಸರ ದೇವರ್ದಯೆಯಿಂ ॥೧೪॥

ಚಂ॥ ಅತುಲ ಭುಜಾಬಲಾನಿಲಸುತಂ ಕುಶಲಾಗ್ರಣಿ ಚಿಕ್ಕರಾಜನು ।
ದ್ಧತ ರಿಪುಕಂಜ ಪುಂಜಕೆ ಸುಧಾಂಶು ಸುಧಾಂಶು ಸಕೀರ್ತಿ ಕೀರ್ತಿಯಾ ॥
ಯತ ಮಹಿಮತ್ವ ವಾಗ್ವಿಭವ ಗೋಪತಿ ಗೋಪತಿ ಗೋಪತಿ ಸ್ಫುರ ।
ದ್ವಿತರಣ ಭೋಗ ವಾಹಳಿಯೊಳರ್ಕಜನರ್ಕಜನರ್ಕ ಸಂಭವಂ ॥೧೫॥

ಕಂ ॥ ಸುಜನವ್ರಜ ಪಾಲನದಿಂ ।
ನಿಜ ಮಹಿಮೆಯೊಳೇಕ ವಾಕ್ಯದಿಂದಾ ಕೃತಿಯಿಂ ॥
ದಜನಜನಜನಜನೆನಿಪಂ ।
ಭುಜಬಲ ಪವಮಾನಸೂನು ಚಿಕ್ಕ ಚಮೂಪಂ ॥೧೬॥

1. ವಾ

ಸುರುಚಿರ ಕಾಶ್ಮೀರಾನ್ವಯ ।
ಶರಧಿಗೆ ವಿಪದವು[ನೆ ಪಡೆದರಾರ್ತಿ]ಗೆ ಪದ ಪಂ ॥
ಕರುಹ ನತಜನ ತತಿಗೆ ಚಿ ।
ಕ್ಕರಾಜನಮೃತಕರನಮೃತಕರನಮೃತಕರಂ ॥೧೭॥

ಎಸಕದ ಲಕ್ಷ್ಮೀಧರ ದೇ ।
ವಸುತಂ ಸನ್ಮಂತ್ರಿ ಚಿಕ್ಕರಾಜನೆ ವರ ಜಿ ॥
ಷ್ಣುಸುತಂ ಜಿಷ್ಣುಸುತಂ ಜಿ ।
ಷ್ಣುಸುತಂ ಸೌಂದರ್ಯದಿಂ ಪೊಡರ್ಪಿಂದಾರ್ಪಿಂ ॥೧೮॥

ಮ॥ಸ್ರ॥ ಮನಮಂ ಸತ್ತ್ವಕುಳ ಶ್ರೀಗುರಮನಚಳಿತ ಶ್ರೀಗೆ ಹಸ್ತಾಬ್ಜಮಂ ಪಾ ।
ವನ ದಾನಶ್ರೀಗೆ ದೋ[1]ರ್ದಂಡಮ ನನಘ ಜಯಶ್ರೀಗೆ ತಾನಿಂಬುಗೊಟ್ಟೊ ॥
ಬ್ಬನ ವಾ[2] ದೋದ್ಯದ್ಯಶಃಶ್ರೀಗೆಡೆಗುಡದೆ ದಿಶಾರೂಢಿಯಂ ಮಾಡಿಯುಂ ವೆಂ ।
. . . . . . . . . . . . . . . . . . . . . . . . . ॥೧೯॥

ಚಂ॥ . . . . . . . . . . . . . . . . . . . . . . . . ।
. . . . . . . . . . . . . . . . . . . . . . . . ॥
. . . . . . . . . . . . . . . . . . . . . . . . ।
ಪೆನೆಯುಸಿರ್ದಂ ಸಮಂತು ಕುಸುಮಾವಳಿಯೆಂಬ ಮಹಾಪ್ರಬಂಧಮಂ ॥೨೦॥

ಅದೆಂತೆಂದೊಡೆ—

ಮ॥ಸ್ರ॥ ವಿನುತಾನಂತಾಂಗ ತಲ್ಪ ಸ್ಥಿತನನಿಮಿಷ ಸಂತಾನ ಸೇವ್ಯಂ ಮಹಾಸ ।
ತ್ತ್ವನನಿಷ್ಟಾಂತ ಪ್ರಭಾವಂ ವಿಲುಳಿತ ವನಮಾಲಾ ವಿಳಾ ಸಾಂಚಿತಂ ಚಾ ॥
ರು ನವಶ್ರೀ ಶಂಖ ಚಕ್ರೋಪಚಿತ ರುಚಿರಮಪ್ಪೊಂದು ಪೆಂಪಿಂದಮಾ ಕೃ ।
ಷ್ಣನವೋಲೊಪ್ಪಿರ್ಪುದುಚ್ಛೃಂಖಳ ಘುಳುಘುಳಿತಾರಾವ ರೌದ್ರಂ ಸಮುದ್ರಂ ॥೨೧॥

ತರಳಂ ತಾರಾಳಿ ತದ್ಭೂಷಣಮುದಚಿರಮಿಕ್ಕಿರ್ದು ಸುವ್ಯಕ್ತ ಮುಕ್ತೋ ।
ತ್ಕರಮಂ ಮಿತ್ರಾಂಬರಂಗಾದರದೊಳೆ ತೆರೆಗೈಯಿಂದೆ ತಾಂ ಭೂಷಿಸುತ್ತಿ ॥

1. ರ್ಮಂಡಲಮನುಸುರು 2. ದಾವ

ರ್ಪಿರವಿಂದಂತುಚ್ಚಳಚ್ಛೀಕರ ತತಿ ನಭವಂ ತೀಂಟುವನ್ನಂ ಮಹೋರ್ವಿರ್ಪಿ।
ಸ್ಫುರಿತ ಪ್ರಕ್ಷೋಭದಿಂ ಶೋಭಿಸುವುದು ಮಣಿಮಾಲಾಂಶುಭದ್ರಂ ಸಮುದ್ರಂ ॥೨೨॥

ಮತ್ತಮಾ ಸಮುದ್ರಂ ವಾಣೀ ಕರಾಂಚಿತ ವಿಪಂಚಿಯಂತೆ ಪ್ರವಾಳೋಪ ಶೋಭಿತಮುಂ, ವಸಂತ ಸಮಯ ವನರಾಜಿಯಂತೆ ಸಮುತ್ಕಳಿಕಾ ಸಮಾವೃತಮುಂ, ಮಹಾಗ್ರಹಾರದಂತೆ ವಾಡವೋಪೇತ ಪ್ರಖ್ಯಾತಮುಂ. ಸರಸಿರುಹ ಸಂಭವನಂತೆ ಸರಸ್ವತೀಸಮೇತಮುಂ. ಕಾಲವಿಶೇಷದಂತೆ ವೇಳಾವಿರಾಜಿತಮುಂ, ಲಕ್ಷ್ಮೀಕಾಂತೆಯಂತೆ ಕುಭೃತ್ಸಮೇತ ಲಾವಣ್ಯ ಲಾಲಿತಮುಂ, ಗಣನಾವಿಶೇಷದಂತೆ ಶಂಖ ವಿಭ್ರಾಜಿತಮುಂ, ದಶಮುಖ ಧ್ವಂಸನ ಸೇವಾಸಮಾಜದಂತೆ ಪ್ಲವಗ ಪ್ರಕೀರ್ಣಮುಂ ಪಣ್ಯಾವಾಟಿಯಂತೆ ಪಲ್ಲವಕ ಪ್ರಭಾಸುರಮುಂ, ವ್ಯೋಮ ಮಂಡಲದಂತೆ ಬಹುಗ್ರಾಹ ಮಂಡಿತಮುಂ, ಸುರಪತಿ ಸಭೆಯಂತನಿಮಿಷಾಕೀರ್ಣಮುಂ, ಪಯೋಜಾತ ನೇತ್ರನಂತೆ ಪೀತಾಂಬರಮುಮಾಗಿಪ್ಪುದಂತುಮಲ್ಲದೆಯುಂ—

ಕಂ॥ ಇದು ಶಕ್ರಚಾಪ ಲತೆ ಪು।
ಟ್ಟಿದ ತಾಯ್ವನೆಯೆನೆ ವಿಚಿತ್ರ ಮಣಿಗಣ ರುಚಿಗಳ್॥
ಪುದಿದ ಲಹರೀಸಮಾಜದ।
ಪದಪಿಂ ರಾಜಿಪುದು ಲವಣ ಸಾರಾವಾರಂ ॥೨೩॥

ಆ ಜಲನಿಧಿ ವೇಳಾವೃತ।
ದೀ ಜಂಬೂದ್ವೀಪಮೆಂಬ ಶುಂಭತ್ಕನಕಾಂ॥
ಭೋಜದ ಕರ್ಣಿಕೆಯೆನೆ ವಿ।
ಭ್ರಾಜಿಪುದುತ್ತುಂಗ ಸಾಂದ್ರಮಮರ ನಗೇಂದ್ರಂ ॥೨೪॥

ಅಂತುಮಲ್ಲದೆಯುಂ—

ಮ॥ಸ್ರ॥ ಭುವನವ್ರಾತಂ ನಿರಾಧಾರದೊಳಡಕಿರಲುಂ ಬೀಳ್ಗುಮೆಂದಂದು ಕಂಜೋ।
ದ್ಭವನಾಮೂಲಾಗ್ರ ಭಾಗಂಬರಮತಿ ನಿಬಿಡಂಬೆತ್ತಿರಲ್ಮಾಡಿ ಸೈತಿ॥
ಟ್ಟ ವಿಭಾಸ್ವತ್ಕಾಂಚನ ಸ್ತಂಭಮಿದೆನೆ ವಿನುತಾಶ್ಚರ್ಯಮಂ ತಾಳ್ದಿ ನೀಳ್ದೊ।
ಪ್ಪುವುದೋರಂತಪ್ರತರ್ಕ್ಯೋನ್ನತ ವಿಭವವಿಳಾಶಾಳ ಮಾಹೇಂದ್ರ ಶೈಲಂ॥

ಅಂತುಪಮೋನ್ನತಿಯನಪ್ಪುಕೆಯ್ದೊಪ್ಪುವ ಕನಕಾಚಲೇಂದ್ರದ ದಕ್ಷಿಣ ದೆಸೆಯ ಭರತ ಕ್ಷೇತ್ರದೊಳ್—

ಚಂ॥ ರಸಭರ ನಮ್ರ ಕಮ್ರ ಕಣಿಶಾಳಿಯ ಶಾಳಿಯ ಕೆಯ್ವೊಲಂಗಳಿಂ।
ಕಿಸಲಯ ಸುಪ್ರಸೂನ ವಿಳಸತ್ಫಲ ವೃಕ್ಷ ವನ ಪ್ರತಾನದಿಂ॥
ದೆಸೆವಮಳಾಂಬು ಪೂರಮಯ ವಾರಿಜ ಗಂಧದ ಷಂಡದಿಂ ವಿರಾ।
ಜಿಸಿ ಮದನಾವತೀ ವಿಷಯಮಿರ್ಪುದು ಮನ್ಮಥ [ರಾಜ್ಯಮೆಂಬಿನಂ] ॥೨೬॥

ಉ॥ ಆ ಮದನಾವತೀ ವಿಷಯ ಲಕ್ಷ್ಮಿಯ ವಕ್ತ್ರ ಸರೋಜದಂತೆ ಶೋ।
ಭಾಮಯಮಿರ್ಪುದಲ್ಲಿ ಮಣಿನೂಪುರಮೆಂಬ ಪುರಂ ಪುರಾಧಿಪಂ॥
[ಕಾಮ]ಸಮ ಸ್ವರೂಪ ವಿಭವಂ ಸಕಳೇಂದು ಮರೀಚಿ ಸನ್ನಿಭೋ।
ದ್ದಾಮ ಯಶಃಪ್ರಕಾಶನೆಸೆವಂ ಮಣಿಕುಂಡಲ ಭೂಮಿಪಾಲಕಂ ॥೨೭॥

ಕಂ॥ ರತಿಯ ಗಿರಿಸುತೆಯ ರಮೆಯಾ
ಕೃತಿಯಂ ಸೊಬಗಂ ಸ್ವಭಾವಮಂ ಸಲೆ ಪಟೀಕೆ॥
ಯ್ವುತಿ ಮಹಿಮೆವಡೆದು ಮದಿರಾ।
ವತಿಯೆಸೆದಳ್ ಪಟ್ಟಮಹಿಷಿ ಮಣಿಕುಂಡಲನಾ ॥೨೮॥

ಚಂ॥ ಅತುಳ ಮಧು ಪ್ರಕೀರ್ಣಮಯ ಪಂಕರುಹೋದ್ಭವನುಂ ರಜಸ್ಸಮಾ।
ವೃತ ಧೃತಿಯುಂ ಜಡಪ್ರಕೃತಿಯುಂ ಚತುರಾಸ್ಯನೆನುತ್ತುಮೇಳಿಪಂ॥
ಕ್ಷಿತಿನುತ ಪಾವನೀಯ ಕುಲಜತ್ವದಿನುಜ್ಜ್ವಲ ಚಿತ್ತದಿಂ ಸಮು।
ನ್ನತ ಚತುರತ್ವದಿಂದೆಸೆದು ತತ್ಸುತನಾ ಮತಿವರ್ಧನಾಹ್ವಯಂ ॥೨೯॥

ತ್ರಿದಶ ಜನೇಶನಲ್ಲದ ಸೆಗಟ್ಟಿಯ ಪುಣ್ಯಜನಾಹಿತಾತ್ಮನ।
ಲ್ಲದ ಬಲವೈರಿಯಲ್ಲದಮರ ಪ್ರಮದಾ ರತಿರಾಗದಿಂದೆ ಸ॥
ಲ್ಲದ ಶತಮನ್ಯು ತಾನೆನೆ ಸಮುನ್ನತ ರಾಜ್ಯವಿಶಾಲ ಲೀಲೆಯೊಳ್।
ಪುದಿದೆಸೆದಿರ್ಪನಿಂತು ನಿರುತಂ ಮಣಿಕುಂಡಲ ಭೂಮಿಪಾಲಕಂ ॥೩೦॥

ಕಂ॥ ಆರೋಪಿತ ಗುಣ [ಮೆಸೆ] ದು।
ತ್ಸಾರಿತ ಮಾರ್ಗಣಮೆ ಧರ್ಮಮೇಂ[1] [ಧನುವೆನುತಂ॥
ಆರಯುತಂ] ಮಣಿಕುಂಡಲ।
ಭೂರಮಣಂ ನಗುವನಾತ್ಮಗುಣ ವಿತರಣದಿಂ ॥೩೧॥

1. ಧರ್ಮಮೆನು । ತ್ಸಾರಯುತುಂ.

ವಿಳಸದ್ದ್ವಿಜ ರಾಜ ಬುಧಾ।
ಮಳ ಮಂಗಳ ಗುರು ಜನೋಪಯುಕ್ತಂ ಮಣಿಕುಂ॥
ಡಳ ಭೂವರಂ ನಭೋಮಂ।
ಡಳಮಂ ನೇರ್ಪೋಲ್ತು ನೃಪರೊಳಭಿರಾಜಿಸುವಂ ॥೩೭॥

ಸತತಂ ಮಣಿಕುಂಡಲ ಭೂ।
[ಪತಿಯಹಿಪತಿಯಂ]ತೆ ಪೃಥುಳ ಪೃಥ್ವೀಭರ ಸಂ॥
ಗತನಾಗಿ ಮಹಾಭೋಗಾ।
ನ್ವಿತದಿಂ ಸಾಮ್ರಾಜ್ಯಲಕ್ಷ್ಮಿಯೊಳ್ ಪದೆದಿರ್ಪಂ ॥೩೩॥

ಇಂತರಸುಗೆಯ್ಯುತಮಿರ್ದೊಂದು ದಿವಸದೊಳ್—

ಮ॥ ಕ್ಷಿತಿಭೃದ್ವ್ರಾತ ಪರೀತಮಪ್ಪ ಸುಮನಸ್ಸಂತಾನ ಸಂಯುಕ್ತ ಶೋ।
ಭಿತಮಪ್ಪಾ ದ್ವಿಜರಾಜರಾಜ ವೃತಮುಪ್ಪುತ್ಪನ್ನ ಕಲ್ಯಾಣ ಸಂ॥
ಗತಮಪ್ಪೊಂದು ವಿಳಾಸದಿಂದಮೆನಸುಂ ಹೇಮಾದ್ರಿಯಂ ಪೋಲ್ತು ವಿ।
ಶ್ರುತ ತೇಜಂ ಮಣಿಕುಂಡಲ ಕ್ಷಿತಿಪಸಿಂತೊಡ್ಡೋಲಗಂ ಗೊಟ್ಟಿರಲ್ ॥೩೪॥

ಆ ಪ್ರಸ್ತಾವದೊಳ್—

ಕಂ॥ ಅರಸರ ಚಿತ್ತಮನಲೆದಾ।
ದರ [ದಿಂದೆ ಸು] ಕಂಠೆಯೆಂಬ ನಾಯಿಕೆ ಕೆಲದೊಳ್ ॥
ಪರಿಚಾರಿಕೆ ಪಿಡಿದಿರ್ದಾ।
ಸ್ವರವರ್ಧನವೆಸರ ವೀಣೆಯಂ ತಾಂ ಕೊಂಡಳ್ ॥೩೫॥

ಮ॥ ಕಳೆಯಂ ಪತ್ತಿಸಿ ಕೋಮಲಾಂಗುಲಿಗಳಿಂದಾ ತಂತಿಯಂ ನೀವಿ ನಿ।
ರ್ಮಳಮಂ ಮಾಡಿ ನಿಜೋದ್ಧ ವಾಮ ಕುಚದೊಳ್ ಸೈತಿಟ್ಟು ಸುಸ್ಥಾನಕಂ ॥
ಗಳನೋರಂತಿರೆ ಪೊಯ್ದು ಪೊಯ್ದು ಪದದೊಳ್ ರಾಗಂ ಮನೋರಾಗಮಾ।
ಗಳೆ ಪೊಣ್ಮಲ್ಕೆ ಸುಕಂಠೆ ಬಾಜಿಸಿದಳಾ ಜಾಣಿಂ ಲಸದ್ವೀಣೆಯಂ ॥೩೬॥

ಚಂ॥ ಕಳ ಪಿಕ ಪಂಚಮಾಂಚಿತ ಮೃದುಧ್ವನಿಯಂ ಗೆಲೆವಂದು ಸುಸ್ವರಂ।
ಲಳಿ ಲುಳಿ ಧಾತು ರೀತಿ ಗತಿಯೋಜೆ ಬಜಾವಣಿ ಠಾಯ ಸುಟ್ಟಿ ಕೋ॥
ಮಳ ವಳಿ ಲಾಗು ನೋಗು ಪಸರಂ ಪರಿ ಪಾಂಗು ಬೆಡಂಗು ಭಂಗಿ ಸಂ।
ಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥ ಚಿತ್ತದೊಳ್ ॥೩೭॥

ಕಂ॥ ಕಿವಿಗಮೃತದ ಸರಿ ಸವೆಯದ।
ತವರಾಜಂ ಜೇನಸೋನೆ ತಾನೆಂಬಿನಮಂ॥
ತವನೀಶ್ವರಂಗೆ ರಾಗದ।
ಸವಿ ಸಮನಿಸುತಿರೆ ಸುಕಂಠೆ ಕೇಳಿಸುತಿರ್ದಳ್ ॥೩೮॥

ಚಂ॥ ಕಮಲಿನಿ ಕುಟ್ಮಳಾಕೃತಿಯನೆಯ್ದೆ ರಥಾಂಗ ಚಯಂ ವಿಯೋಗ ಭೇ।
ದಮನಣಮೆಯ್ದೆ ಪಶ್ಚಿಮ ದಿಗಂಗನೆ ರಾಗಮನೆಯ್ದೆ ಕೈರವಂ॥
ಪ್ರಮುದಮನೆಯ್ದೆ ವಿಪ್ರತತಿ ಕೂಡೆ ಕುಲಾಯಮನೆಯ್ದೆ ಪುಂಶ್ಚಲೀ।
ಸಮಿತಿ ಪೊಡರ್ಪನೆಯ್ದೆ ರವಿಯೆಯ್ದಿದನಾ ಕ್ಷಣಮಸ್ತಶೈಲಮಂ ॥೩೯॥

ಕಂ॥ ತಮಗಧಿಪನಪ್ಪ ತಪನೀ।
ಯ ಮಹೀಧ್ರನ ತೇಜಮಂ ಶಿರೋಮಂಡಲದೊಳ್॥
ಸಮಸಂದು ತಳೆದುವೆನೆ ಗಿರಿ।
ಸಮುದಯ ಶಿಖರಂಗಳಲ್ಲಿ ಪೊಂಬಿಸಿಲೆಸೆಗುಂ ॥೪೦॥

ಮ॥ಸ್ರ॥ ಘನತೇಜೋಗರ್ಭದುರ್ಬ್ಬಿಂದಱಿಯದೆ ಪಿರಿದುಂ ತನ್ನ ಪಾದಂಗಳಿಂ ಸ।
ನ್ಮುನಿವೃಂದಾಗಣ್ಯ ಪುಣ್ಯಾಮಳತನು ತತಿಯಂ ಮುಟ್ಟಿಯುಂ ಪುಟ್ಟಿದಾದೋ॥
ಷ ನಿವಾರಕ್ಕಾಗಳಂತಂಬರಮನುೞಿದು ಶೈಲಾಗ್ರದೊಳ್ ತತ್ತ್ರಪೋ ರೂ।
ಪನೆ ತಾಂ ಕೈಕೊಂಡವೊಲ್ ಸಾರ್ದಪರ ಗಿರಿಶಿರೋಭೂಷನಾದಂ ದಿನೇಶಂ॥

ಚಂ॥ ಮಿಗೆ ನಗುವಂತುಟಾಯ್ತುಜದೆ ಕೈರವಲಕ್ಷ್ಮಿ ವಿರೋಧಿರಾಜ ಬಾ।
ಧೆಗೆ ಗುಱಿಯಪ್ಪುದಾಯ್ತ್ತಮಗೆ ನೀಂ ದಯೆಯಿಂದುದಯಾದ್ರಿಗೆಯ್ದುವಂ॥
ದೊಗೆದನುರಾಗದಿಂದೆಲೆ ದಿನೇಶ್ವರ ರಕ್ಷಿಪುದೆಮ್ಮನೆಂದು ಕೈ।
ಮುಗಿವವೊಲಾ ಕ್ಷಣಂ ಮುಗಿದುವಬ್ಜಿನಿಗಳ್ ಸರಸೀಸಮಾಜದೊಳ್ ॥೪೧॥

ಮ॥ ಇನನಸ್ತಾದ್ರಿಯನೆಯ್ದಿದಾಗಳೆ ವಿಯೋಗಾವಸ್ಥೆ ಬಂದೆಯ್ದೆ ಕ।
ಣ್ಬನಿ ಮುಂಭಾಗಮನೆಯ್ದೆ ಸುಯ್ಯನೆನಸುಂ ಕಾಯ್ಪೆಯ್ದೆ ಚಿತ್ತಾಗ್ರಮಂ॥
ಘನ ಸಂಕ್ಲೇಶ ಕಲಾಪಮೆಯ್ದೆ ಸೆರೆವೀಗಲ್ಕಂಠದಿಂ ವಿಹ್ವಲ।
ಸ್ವನಮೆಯ್ದಿರ್ದುದು ಕೋಕಕೋಟಿ ಮುಗಿವಂಭೋಜಾಕರಾನೀಕದೊಳ್॥

ಚಂ॥ ಪಿರಿದನುರಾಗದಿಂ ನೆರೆದ ನಾನಿರೆ ಪಶ್ಚಿಮ ದಿಗ್ವಧೂಟಿಯಂ।
ಖರಕರನೆಂದೆನುತ್ತುಮೆನಸುಂ ಕಲುಷಾತ್ಮಿಕೆಯಾದ ಪೂರ್ವದಿ॥

ಕ್ತ್ರರುಣಿಯ ವಕ್ತ್ರಮಾಗಳೆ ಕಜಿಂಗಿರೆ ಕಂಡಿರಲಂಜಿದಂತೆ ಭಾ।
ಸ್ಕರನಿರದೊಯ್ಯನತ್ತಿಱಿದನಸ್ತ ಮಹೀಧರ ಮಸ್ತಕಾಗ್ರದೊಳ್ ॥೪೪॥

ಕಂ॥ ತರಣಿಯ ತುರಂಗ ಸಂಕುಳ।
ಖುರಹತಿಯಿಂದೊಗೆದು ನೆಗೆದು ಪಶ್ಚಿಮ ಧಾತ್ರೀ॥
ಧರ ಧಾತುರಾಗ ರೇಣೂ।
ತ್ಕರಮೆನಿಸಿದುದೆಸೆವ ಸಾಂದ್ರ ಸಂಧ್ಯಾರಾಗಂ ॥೪೫॥

ಚಂ॥ ಕ್ಷಮೆಯೆನಿಪೆನ್ನೊಳೀ ದಿನ[1] ಕ [ರ ಪ್ರಪದೋ] ತ್ಕರ ತಾಪದಿಂದೆ ಸಂ।
ಕ್ರಮಿಸಿದ ದುರ್ವಿಷಾದಮಿದು ತಾನಿರಲಾಗದೆನುತ್ತೆ ಮೇದಿನೀ॥
ರಮಣಿ ಮುಗುಳ್ಚುತಿರ್ದಪಳೆನಲ್ ನಿಖಿಳಾಚಲ ಕಂಜ ಕುಂಜದಿಂ।
ದಮೆ ನಿಮಿರ್ದಾಗಳಾಗಳೆ ಪೊದಱ್ದುದು ಪರ್ಬಿ ತಮಂ ದಿಗಂತಮಂ ॥೪೬॥

ಕಂ॥ ಇನನ ವಧೂಟಿ[ಯ ಮನೆಯಂ]।
ಮುನಿಸಿಂದಿರದೆಯ್ದೆ ಮುತ್ತಿ ಗಳ ಗರ್ಜನೆಗೆ॥
ಯ್ದನುಪಮ ತಮೋಭಟರ್ಕಳೊ।
ಎನೆ ಜಿನುಗುತ್ತಿರ್ದುವಳಿಗಳಬ್ಜಾಕರದೊಳ್ ॥೪೭॥

ಪದಪಿಂದೊಂದಿದ ರಜನೀ।
ಸುದತಿಯ ನವ ಸಂಗದಿಂ ನಭೋವಿಟನ ಶರೀ॥
ರದೊಳೊಗೆದ ಪುಳಕ ತತಿಯೆನೆ।
ಪುದಿದತ್ತುಜ್ಜ್ವಲಿಸಿ ಗಗನ ತಳದೊಳ್ ಭಗಣಂ ॥೪೮॥

ಮ॥ಸ್ರ॥ ಇದು ಕಂದರ್ಪಾನುರಾಗೋತ್ಕರ ಲಲಿತ ಲತಾ ಕಂದಮೋ [ತಾಂತ್ರಿಯಾಮಾ।
ಸುದತಿ ಸ್ವೈರಂ ಶಿರೋಸ್ಥಾನದೆ ತಳೆದಮಲ] ಸ್ಥೂಲ ಮಾಣಿಕ್ಯಮೋ ಕಂ॥
ತು [ದಳ] ದ್ದಾವಾನಳಂ ಸಂಭವಿಸುವ ವಿಳಸದ್ಬೀಜಮೋ ಪೇಟಿನಲ್ ಪೂ।
ರ್ವ ದಿಶಾ ಶೈಲಾಗ್ರದೊಳ್ ಸಂಗಳಿಸಿತು ಶಶಿಬಿಂಬಂ [ಸು]ಶೋಣಾವಲಂಬಂ॥

ಮ॥ ಸಿನಗೀ ಪದ್ಮಿನಿ ತಾಂ ಸಹೋದರಿ ದಿಟಂ ನೀಂ ಪುಟ್ಟಿದಲ್ಲಿಂ ಬೞಿ।
ಕ್ಕೆನಸುಂ ಪುಟ್ಟಿದಳೆನ್ನ ಗರ್ಭದೊಳಿವಳ್ಗಾಸಕ್ತಿಯಂ ತಾಳ್ದಿ ನಂ॥
ದನ ಕೈಸೋಂಕದಿರೆಂದು ಪೇೞಲಮೃತಾಂಭೋರಾಶಿಯೆಟ್ಟಿಂದುಡೆಂ।
ಬಿನವಿಾ ಲೋಕಮನುರ್ಬಿ ಪರ್ಬಿದುದಗುರ್ಬಿಂ ಸಾಂದ್ರ ಚಂದ್ರಾತಪಂ ॥೫೦॥

1. ಶನಾತ್ಮಪದೋ.

ಆಗಳ್—

ಮ॥ [ಪದೆಯುತ್ತಾ] ಪದದೊಳ್ ಸುಕಂಠೆಗೆ ಪಸಾಯಂಗೊಟ್ಟು ಹರ್ಯಕ್ಷ ಪೀ।
ಠದಿನೆೞ್ದೋಲಗಮಂ ವಿವರ್ಜಿಸಿ ನಿಜಸ್ತ್ರೀ ಸತ್ಯ ಸಂಗಾನುರಾ॥
ಗದಿನಿರ್ದಂ ಬೞಿಕಂ ತದೀಯ ನಿಶೆಯೊಳ್ ನಿದ್ರಾಂಗನಾಸಂಗ ಸೌ।
ಖ್ಯದೊಳಿರ್ದಂ ಮಣಿಕುಂಡಲಕ್ಷಿತಿಪನಿಂತಾತ್ಮೀಯ ಶಯ್ಯಾಗ್ರದೊಳ್ ॥೫೧॥

ಇಂತು ಸುಖಶಯ್ಯೆಯೊಳಿರ್ಪುದುಂ ಉಷದ ಸಮಯಂ ಸಮನಿಸಿತಾಗಳ್—

ಮ॥ ಪನಿಪುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ।
ನನೆವೊಯ್ಯುದ್ದಣ್ಮಿಸುತುಂ ಪತತ್ರಿಗಳೊಳಿರ್ಪಾ ತೂಂಕಡಂ ನೂಂಕುತುಂ॥
ವನಜಕ್ಕೊಯ್ಯನಲರ್ಕೆಯಂ ಸಮನಿಸುತ್ತೋರಂತೆ ಮೆಯ್ವೆರ್ಚಿ ತ।
ಣ್ಣನೆ ತೀಡಿತ್ತಿನಸುಂ ಪ್ರಭಾತ ಸಮಯ ಪ್ರೋದ್ಭೂತ ಶೀತಾನಿಲಂ ॥೫೨॥

ಪರಿತಂದಾಗಳೆ ಚಂಚುವಿಂ ತೊಡೆದು ಮೆಯ್ಯಂ ಪಕ್ಕದೊಳ್ ಪಕ್ಕವೊಂ।
ದಿರೆ ತಳ್ತಪ್ಪೆ ಮುದಶ್ರುಗಳ್ ನಯನದಿಂ ಪೂರಂಗೊಳಲ್ ಕೂಡೆ ಗೋ॥
ಣ್ಮರಿದೋರೊಂದಱ ನೆತ್ತಿಯಂ ಕರ್ದುಕುತಂ ಕಂಠಂಗಳೊಳ್ ಕೂಜಿತ।
ಸ್ವರಮುಣ್ಮಲ್ಕೆ ರಥಾಂಗರಾಜಿ ನೆರೆದತ್ತಂಭೋಜಿನೀ ಷಂಡದೊಳ್ ॥೫೩॥

ಕಂ॥ ಕುಮುದಂ ಕುಮುದಮನೆಯ್ದಲ್।
ಕಮಳಂ ಕಮಳಾಯಮಾನಮಾಗಲ್ ಕೂಡಲ್॥
ಸಮನಿಸಿದುದರ್ಕ ಬಿಂಬಂ।
ಸಮನಿಸೆ ಪೊಣರ್ವಕ್ಕಿಗಳ್ಗೆ ಸುರತ ವಿನೋದಂ ॥೫೪॥

ಮ॥ಸ್ರ॥ ತಿಮಿರಂ ಭೂಭೃದ್ಗುಹಾ ಸಂಕುಲದಿಡುಕುಱನೊಳ್ ಪೊಕ್ಕು ಮೆಯ್ಯಿಕ್ಕೆ ತಾರಾ।
ಸಮಿತಿ ವ್ಯೋಮಾಲಯಾಭ್ಯಂತರದೊಳಡಗೆ ನೀಲೋತ್ಪಲಾನೀಕ ಸಂಕಾ॥
ಶಮನಂತಂ ಕರ್ಗೆ ನೀರೇಜದ ನಗೆ ಮಿಗೆ ಚಕ್ರೌಘ ಚಿತ್ತಾಗ್ರದೊಳ್ ರಾ।
ಗಮದೆತ್ತಂ ಮೂಡೆ ಮೂಡಿತ್ತರುಣರುಚಿ ಕಳಾಲಂಬಮುಷ್ಣಾಂಶು ಬಿಂಬಂ ॥೫೫॥

ಆ ಸಮಯದೊಳ್—

ಮ॥ ದಿವಸೇಂದ್ರೋದಯಮಾದುದುಪ್ಪವಡಿಸರ್ ತಾವಿಂದಿದೇಂ ದೇವರಂ।
ದವೆಸುತಿರ್ತ್ತಿಯ್ಯನೆ ತವ್ಮೊಳಿಂತುಸುರುತುಂ ಪ್ರಾತಃಕ್ರಿಯಾವಸ್ತು ಸಂ॥
ಘವನಾಗಳ್ ಪರಿಚಾರಕರ್ ಪಿಡಿದು ಸಾರ್ತ್ತಂದೆಯ್ದಿ ಪಾರ್ದಿರ್ದರ।
ಲ್ತೆ ವಿಭಾಸ್ವನ್ಮಣಿಕುಂಡಲೋರ್ವಿಪನ ಶಯ್ಯಾಮಂದಿರ ದ್ವಾರದೊಳ್ ॥೫೬॥

ಮಣಿ ಸಿಂಹಾಸನ ಮಸ್ತಕಾಭರಣಮಿಂದೇಕಾಗದೆಂದಾವ ಕಾ।
ರಣದಿಂ ಪೇೞಿಸಿತೊಂದುಪೊೞ್ತು ತಡೆದಿರ್ದಂ ಭೂಪನೆಂದಾದವಾ॥
ಕ್ಷಣದಿಂ ಶ್ರೀಮಣಿಕುಂಡಲ ಕ್ಷಿತಿಪನಿರ್ದಾ ಸೌಖ್ಯಶಯ್ಯಾಗೃಹಾಂ।
ಗಣಮಂ ತಾಂ ಮತಿವರ್ಧನಾಖ್ಯ ಸಚಿವಂ ಸಾರ್ತ್ತಂದನೌತ್ಸುಕ್ಯದಿಂ ॥೫೭॥

ಅಂತು ಬಂದು ಪರಿಚಾರಕರ ಮೊಗಮಂ ನೋೞ್ಪುದುಂ—

ಕಂ॥ ಆವ ತೆಜದಿಂದಮಿಾಗಳ್।
ದೇವರ್ ತಾಮೇಕೆ ತಡೆಯದುಪ್ಪವಡಿಸರೆಂ॥
ದಾವಱಿಯೆವೆಂದು ಪರಿಚರ।
ರಾವಳಿ ಮತಿವರ್ಧನಂಗೆ ತಮತಮಗುಸಿರ್ದರ್ ॥೫೮॥

ಶ್ರೀ ಮತಿವರ್ಧನ ಮಂತ್ರಿಗೆ।
ತಾಮನಿತುಂ ಪೇೞುತಿರ್ಪ ಪರಿಚಾರಕ ಸಂ॥
ಸ್ತೋಮದ ಕಳಕಳ ನಿನದ।
ಕ್ಕಾ ಮಣಿಕುಂಡಲ ನೃಪಾಲನುಪ್ಪವಡಿಸಿದಂ ॥೫೯॥

ಜನಪತಿಯುಪ್ಪವಡಿಸಿ ಭೋಂ।
ಕನೆ ಕಂಡೆನ್ನಾಣೆಯಿತ್ತ ಬಾರೈ ಮತಿವ॥
ರ್ಧನ ಎನೆ ಬಂದಾ ಪರ್ಯಂ।
ಕ ನಿಕಟದುಚಿತಾಸನಾಗ್ರದೊಳ್ ಕುಳ್ಳಿರ್ದಂ ॥೬೦॥

ಉ॥ ಇಂದಿನಿತೊಂದು ಪೊೞ್ತುವರಮೇಕೆ ಸಮಂತೆಲೆ ದೇವ ನಿದ್ರೆಯೊಳ್।
ಸಂದಿರುತಿರ್ದಿರಕ್ರಮಮಿದೀಗಳೆ ಬೇಗದೊಳೆೞ್ದುಷಃಕ್ರಿಯಾ॥

ವೃಂದಮನಪ್ಪುಗೆಯ್ದು ಹರಿಪೀಠಶಿರೋಮಣಿಯಾಗವೇೞ್ಕುಮಿ।
ನ್ನೆಂದುಚಿತೋಕ್ತಿಯಿಂದೆ ನುಡಿದಂ ಸಚಿವಂ ಮತಿವರ್ಧನಾಹ್ವಯಂ ॥೬೧॥

ಎನೆ ಕೇಳ್ದು—

ಕಂ॥ ಏವೇೞ್ವೆಂ ಸಚಿವ ವಿಚಿ।
ತ್ರಾವಹಮಪ್ಪೊಂದು ಪೊಸತು ಸುಸ್ವಪ್ನಮನಾಂ॥
ಭಾವಿಸುತಿರ್ದೆಂ ನೆಱೆ ನಿ।
ದ್ರಾವನಿತೆಯೊಳಿರ್ದೆನಲ್ಲ ಕೇಳ್ ಪೇೞ್ವೆನದಂ ॥೬೨॥

ಇನಿತಂ ಕೇಳೆಲೆ ಮತಿವ।
ರ್ಧನ ಪೇೞ್ವೆಂ ವಾಹಳಿಯ ವಿನೋದದೆ ನಾನಿ॥
ರ್ಪಿನಮೆನ್ನ ಹಯಂ ಕೊಂಡು।
ಯ್ದನುಪಮ ಗಿರಿವರವನೊಂದನಡರ್ದುದು ಕಡುಪಿಂ ॥೬೩॥

ಉ॥ ಆ ನಗದೊಂದು ತುಂಗತೆಯುಮಂ ಬಹುಭಂಗಿಯ ರತ್ನಶೃಂಗ ಸಂ।
ತಾನ ಮರೀಚಿ ಮಾಲಿಕೆಯುಮಂ ನೆಱೆ ವಿಸ್ಮಯಮುತ್ತು ನೋಡುತಿ॥
ರ್ದಾನದರಗ್ರಭಾಗದೊಳೆ ಕಂಡೆನಗಣ್ಯ ವರೇಣ್ಯ ಪುಣ್ಯ ತೇ।
ಜೋನಿಧಿಯಪ್ಪ ತಾಪಸ ಕುಮಾರಕನೊರ್ಬನನಸ್ತ್ರ ಗರ್ಭನಂ ॥೬೪॥

ಆ ತಾಪಸ ಕುಮಾರಂಗೆ ಪೊಡೆಮಟ್ಟಿಂತೆಂದೆಂ—

ಕಂ॥ ಎಸೆವೀ ಮಣಿಮಯ ಶೈಲದ।
ಪೆಸಱೇನೀ ಕ್ಷೇತ್ರಮಾವುದೆಂದಾನೆನಸುಂ॥
ಬೆಸಗೊಂಡೊಡೆ ದಶನ ಪ್ರಭೆ।
ಪಸರಿಸೆ ತಾಪಸ ಕುಮಾರನೆನಗಿಂತೆಂದಂ ॥೬೫॥

ಮ॥ಸ್ರ॥ ಇದು ದಲ್ತಾಂ ಚಿತ್ರಕೂಟಾ ಚಲಮದು ವಿಪುಲಾ ಸಿಂಧು ತತ್ತೀರದೊಳ್ತೋ।
ರ್ಪುದೆ ಪೆಂಪಂ ಪೆತ್ತ ಸಾರ್ವರ್ತ್ತುಕ ವನಮದರೊಳ್ ಕಾಂಚನೋದಂಚಿತಂಬೆ॥
ತ್ತಿದು ಭಾಸ್ವದ್ವಿಶ್ವನಾಥಾಯತನಮದರಮುಂದೊಪ್ಪುವಾವಾಶ್ರಾವನೀಜಾ।
ತದೊಳಿರ್ಪಂ ತಾಪಸವ್ಯಾವೃತ ಕಪಿಲಮಹಾಚಾರ್ಯನೆಂದಿಂತು ಪೇೞ್ದಂ ॥೬೬॥

ಆನವೆಲ್ಲಮಂ ಕೇಳ್ದು ವಿಸ್ಮಿತಚಿತ್ತನಾಗಿ ಆ ಚಿತ್ರಕೂಟಾದ್ರಿಯಂ ನೋಡುತ್ತಮಿರ್ದನದೆಂತೆಂದೊಡೆ—

ಮ॥ಸ್ರ॥ ಭರತ ಕ್ಷ್ಮಾ ಗೋಮಿನೀ ದೇವಿಯ ಮಣಿಮಯ ಕೋಟೀರವೋ ರೋಹ ಣೋರ್ವೀ।
ಧರಮಂ ಸಂಪ್ರೀತಿಯಿಂ ಮುಂ ಪಡೆದ ಜನಕನೋ ತಾನಿದೆಂಬಂದದಿಂದ॥
ಚ್ಚರಿಯಾಗಲ್ ಕೂಡೆ ದಿಗ್ಭಿತ್ತಿಯನನವರತಂ ಚಿತ್ರಿಸುತ್ತಿರ್ಪುದುದ್ಬಾ।
ಸುರ ನಾನಾರತ್ನಶೃಂಗ ಪ್ರಕಟ ಘಟಿತಮಾ ಚಿತ್ರಕೂಟಾಚಲೇಂದ್ರಂ ॥೬೭॥

ಮ॥ ಸುರವಿದ್ವೇಷಿ ದಶಾಸ್ಯನಿಂ ಚಲಿಸಿತಾ ಕೈಲಾಸಮೆಂದೊಲ್ಲದೀ।
ಶ್ವರನೆಟ್ಟಂದಿದರಗ್ರದೊಳ್ ನೆಲಸಿ ಚೆಲ್ವಂ ಕಂಡು ತತ್ಕೌತುಕೋ॥
ದ್ಧುರನಾಂದೋಳಿಸೆ ಮೌಳಿಯಿಂದುಗುವ ಗಂಗಾವಾರಿಯೊಳ್ ಪೋರ್ದ್ವ ನೀ।
ರ್ಝರ ಧಾರಾತತಿ ಪಾಂಡುವಿಂ ಸೊಗಯಿಸಿತ್ತಾ ಚಿತ್ರಕೂಟಾಚಲಂ ॥೬೮॥

ಶರಭೋಗ್ರಾರಾವಮಾಶಾರಭ ವಿರುತಿ ಚಲತ್ಕೇಸರಿ ಧ್ವಾನಮಾ ಕೇ।
ಸರಿ ಘೋಷೋದ್ಭೀತ ದಂತಿಪ್ರಕರ ನಿನದಮಾ ದಂತಿನಾದ ಭ್ರಮದ್ವೀ॥
ಪಿ ರವ ವ್ಯಾಕೀರ್ಣಮಾ ದ್ವೀಪಿರವದುರುಭಯೋದ್ಯನ್ಮೃಗಾಳಿ ಪ್ರಣಾದೋ।
ತ್ತರಮೆತ್ತಂ ತಳ್ತು ಶಬ್ದಾತ್ಮಕವೆನಿಸಿದುದಾ ಚಿತ್ರಕೂಟಾಚಲೇಂದ್ರಂ ॥೬೯॥

ಕಂ॥ ವ್ಯಾವೃತ ಖಡ್ಗಿಗಳಿಂ ಲೀ।
ಲಾವಹ ಮಹಿಷೀ ವಿತಾನದಿಂ ಕಂಚುಕಿ ವೇ॥
ತ್ರಾವಳಿಯಿಂ ನೃಪಕುಟಿಯವೊ॥
ಲಾವಗಮೆಸೆದತ್ತು ಚಿತ್ರಕೂಟ ನಗೇಂದ್ರಂ ॥೭೦॥

ಮ॥ ಜಗತೀಮಂಡನದಿಂ ವೃಗಾವಳಿಗಳಿಂ ನಾನಾ ಲಸತ್ಕೂಟ ಕೋ।
ಟಿಗಳಿಂ ಸಾಂದ್ರತೆವೆತ್ತ ಪತ್ರಮಯ ವಲ್ಲೀವ್ರಾತದಿಂ ಬದ್ಧಜಾ॥
ತಿಗಳಿಂ ಚಿತ್ರಕಳಾಪದಿಂದದು ಮಹಾಪ್ರಸ್ತಾರದಿಂದಿರ್ಪುದಾ।
ವಗಮಾಶ್ಚರ್ಯಮೆನಿಪ್ಪ ಚೆಲ್ವನೊಳಕೊಂಡಾ ಚಿತ್ರಕೂಟಾಚಲಂ ॥೭೧॥

ಉ॥ ಖೇಚರ ಕಾಮಿನೀಜನ ವಿಲೋಚನ ದೀಧಿತಿ ಚಂದ್ರಿಕಾ ಸುಧಾ।
ಸೇಚನ ಶೋಭೆಯಿಂದೆ ಪರಿಪಾಂಡುರ ವೃತ್ತಿಯನಪ್ಪುಕೆಯ್ದು ತ॥

ದ್ರೋಜಿಗಳಿಂದೆ ಸೋರ್ವ ಶಶಿಕಾಂತ ಜಲ ಪ್ಲವದಿಂದೆ ಚಿತ್ರಕೂ।
ಟಾಚಲಮಿರ್ಪುದೊಪ್ಪೆ ಹಿಮವದ್ಗಿರಿಯಂ ಗೆಲೆವಂದು ನಾಡೆಯುಂ ॥೭೨॥

ಮ॥ಸ್ರ॥ ಹರಿನೀಲೋತ್ತುಂಗ ಶೃಂಗ ಪ್ರಚಯ ರುಚಿಗಳಿಂಚಂದ್ರಕಾಂತೋಚ್ಚಕೂಟೋ।
ತ್ಕರ ಕಾಂತಿ ವ್ರಾತದಿಂ ಭಾಸುರ ಮಣಿಶಿಖರಸ್ತೋಮ ದಾಮಂಗಳಿಂ ತಾಂ॥
ಪಿರಿದುಂಕಾಳಿಂದಿಯುಂಗಂಗೆಯುಮರುಣೆಯುಮೆಟ್ಟಿಂದುಸಂಪ್ರೀತಿಯಿಂ ಸು।
ಸ್ಥಿರಮಾಗೊಂದಿರ್ಪ ಚೆಲ್ವಂ ನೆನೆಯಿಸಿತೆನಸುಂ ಚಿತ್ರಕೂಟಾಚಲೇಂದ್ರಂ॥

ಕಂ॥ ಜಲಜಭವನಖಿಳ ಕಾಂತಿಯ।
ಬಳಗಮನಗೆವೊಯ್ದು ನೊಂದು ತಾಣದೊಳೆನಲು॥
ಜ್ವಳಿಪ ನವರತ್ನ ಶಿಖರಾ।
ವಳಿಯಿಂ ರಂಜಿಪುದು ಚಿತ್ರಕೂಟ ಗಿರೀಂದ್ರಂ ॥೭೪॥

ಮತ್ತಮಾ ಚಿತ್ರಕೂಟಾಚಲೇಂದ್ರಂ ಸನ್ನದ್ಧ ಧನ್ವಿಯಂತೆ ಕಂಚುಕೋದಂಚಿತಮುಂ, ಶರ ಬಾಣಾಸನ ಸಮನ್ವಿತಮುಂ; ವಿದಳಿತ ರಣಾಂಗಣದಂತೆ ನಿಸ್ತ್ರಿಂಶ ಬಹುಲುಬ್ಧ ವ್ಯಾಕೀರ್ಣಮುಂ; ಪ್ರಪತಿತಾನೇಕ ಪತ್ರಮಯಮುಂ; ವರೇಣ್ಯ ಪಣ್ಯಾವಾಟಿಯಂತೆ ವಿಚಿತ್ರ ಮತ್ತವಾರಣ ವಿರಾಜಿತಮುಂ, ರಾಜ ಭುಜಂಗಾಭಿ ಶೋಭಿತಮುಂ; ಸಾಮ್ರಾಜ್ಯ ವಿಭವದಂತೆ ವಿಜೃಂಭಿತ ಪುಂಡರೀಕ ಪ್ರಚಯಮುಂ, ಪ್ರಚಲತ್ಪ್ರಚೂಡ ಹರಿಮಯಮುಂ; ವಿಯತ್ತಳದಂತೆ ವಿವಿಧ ಖಗಾವಳೀ ಕಮನೀಯಮುಂ, ವಿಶಾಖಾ ಚಿತ್ರ ಕುಜ ರಾಜ ರಮಣೀಯಮುಂ; ನಂದಗೋಪವ್ರಜದಂತೆ ಅನಂತ ಬಭ್ರು ವಿಭ್ರಾಜಿತಮುಂ, ಸಮುತ್ತುಂಗ ಶೃಂಗೋಲ್ಲಾಸಿತ ಗೋಮಂಡಲಾರ್ಜಿತಮುಂ; ಅಂಧಾಸುರ ಧ್ವಂಸ ಧುರಧರಣಿಯಂತೆ ನೀಲಕಂಠ ನೃತ್ಯಾಡಂಬರಮುಂ, ಸರಭಸಾಶ್ಚರ್ಯ ಭೂತಮುಂ; ಮಾತಂಗುಕಲ ಪ್ರಯುಕ್ತಮಾಗಿಯುಂ ವಂಶಾಭಿಶೋಭಿತಮುಂ, ಮಹೋರ್ಜಿತ ವಜ್ರಿಯಾಗಿಯುಂ ನಗಜೋಪೇತಮುಂ; ಕಂಠೀರವ ಕಟು ರವೋದ್ದಾಮ ಭೀಮಮಾಗಿಯುಂ ಫಣಿಕೇತು ಪರೀತಮುಂ, ತಮಸ್ತೋಮಾಕೀರ್ಣಮಾಗಿಯುಂ ರಾಜಾರ್ಕ ಬಿಂಬಾವಲಂಬಿತಮುಂ, ನವರತ್ನ ಶೋಭಿತಮದನಮಯಮಾಗಿಯುಂ ಶಂಬರಾಕರಮುಂ. ಶಂಬರಾಕರಮಾಗಿಯುಂ ಭಂಗವರ್ಜಿತ ವಿದ್ರುಮಾನೀಕಮುಮಾಗಿರ್ಪುದಂತುಮಲ್ಲದೆಯುಂ–

ಮ॥ ಇದು ವಿದ್ಯಾಧರ ದಂಪತಿವ್ರಜ ಮನೋರಾಗ ಪ್ರದಾಗಾರಮಿಂ।
ತಿದು ನಾನಾವಿಧ ರತ್ನಕಾಂತಿ ಕುಲಸಸ್ಯೋದ್ಭೂತ ಕೇದಾರಮಿಂ॥

ತಿದು ವಿಭ್ರಾಜಿತ ದಿಗ್ವಧೂ ನಿವಹ ರೂಪಾಲೋಕನಾದರ್ಶವಿಂ।
ತಿದು ಶೋಭಾ ವಿಭವೈಕ ಪುಂಜಮೆನಿಸಿತ್ತಾ ಚಿತ್ರಕೂಟಾಚಲಂ ॥೭೫॥

ಇಂತೆಸೆವ ಚಿತ್ರಕೂಟಾಚಲೇಂದ್ರದ್ದೈಂದ್ರೀದಿಙ್ನಿತಂಬಿನೀ ನಿಕಟೋರ್ವ ರೆಯೊಳ್—

ಚಂ॥ ಒದವಿದ ರಾಹುಬಾಧೆಗೆ ಬಿಗುರ್ತ ಸುಧಾಕರ ಬಿಂಬವುಂಬು ರೊ।
ಪದಿನವನೀತಳಕ್ಕಿಳಿದು ಬಂದಿರುತಿರ್ದುದೊ ಮೇಣಿದುರ್ವರಾ॥
ಸುದತಿಯ ಸುಪ್ರಹಾಸ ಧವಳದ್ಯುತಿ ಮಾಲೆಯೊ ಪೇಟೆನಲ್ ಕರಂ।
ಪುದಿದೊದವಿಂದೆ ಸಂದೆಸೆವುದಾ ವಿಪುಳಾನದಿ ನೋಡೆ ನಾಡೆಯುಂ ॥೭೬॥

ಮ॥ ಗಗನಂ ತಾನಕುಲೀನಮಾಗಿಯುಮಣಂ ದೋಷಾಕರ ಸ್ಥಾನಮಾ।
ವಗವಾಧಾರ ವಿಹೀನಮಿಂತದಸದಂಗಂ ಸಾಲದಿನ್ನೆಂದು ನೆ॥
ಟ್ಟಗೆ ಬಂದುರ್ವರೆಯಂ ವಿಯನ್ನದಿಯೆ ಸಾರ್ದಿರ್ಪಂದವಾಯ್ತೆಂದೊಡೇ।
ವೊಗಟ್ಸಿಂ ಶ್ರೀ ವಿಪುಲಾನದೀ ನಿರುಪಮಾಂಭಃಸ್ವಚ್ಛ ಸಂಪತ್ತಿಯಂ ॥೭೭॥

ಮ॥ಸ್ರ॥ ದನುಜಾದಿತ್ಯ ವ್ರಜೋದ್ಯತ್ಕೃತ ಮಥನ ಮಹಾಬಾಧ್ಯಗರ್ಭಂ ಜಗದ್ದ।
ಗ್ಧನಿಕೃಷ್ಟ ಕ್ಷ್ವೇಡಜನ್ಮಾವನಿ ಬಡಬಶಿಖಿ ಜ್ವಾಲಕಾ ಜಾಲ ಸಂತ॥
ಪ್ತ ನಿಜಾಂತರ್ದೇಹಮೇಕಸ್ಥಿತಿ ವಿರಹಿತ ಸಂಪತ್ತಿ ತಾನೆಂದು ದುಗ್ಧಾಂ।
ಬುಸಿಧಾನ ಶ್ರೀಯನೆಂದುಂ ನಗುವುದು ವಿಪುಳಾಸಿಂಧು ಶುಭ್ರಾಂಶುವಿಂದಂ॥

ಉ॥ ಅಂಬುಜ ಗರ್ಭನಂಚೆಯಗಜೇಶನ ಪುಂಗವಮಿಂದ್ರನಾನೆ ನೀ।
ರುಂಬ ವಿನೋದದೊಂದು ನೆವದಿಂದವೆ ಬಂದಘಮರ್ಷಣ ಕ್ರಿಯಾ॥
ಡಂಬರಮಂ ನಿಮಿರ್ಚಿ [1][ತನುಗೇಱದ] ಕಾಂತಿಯನಾಂತುವೆಂದೊಡೇ।
ನೆಂಬ ವಿನೂತನಂಬಡೆದ ನಿರ್ಮಳಮೋ ವಿಪುಳಾನದೀ ಜಲಂ ॥೭೯॥

ಚಂ॥ ತೊಳಗುವ ತನ್ನ ನಿರ್ಮಳಿಕೆಯಿಂ ನೆಱೆ ಕಣ್ಬೊಲನಾದುದಾ ರಸಾ।
ತಳದ ಫಣೀಂದ್ರ ಮೌಳಿಮಣಿ ಮಂಜರಿಯೆಂದೆನೆ ತೀರಭೂರುಹಂ॥
ಗಳ ನವಪಲ್ಲವ ಪ್ರತತಿ ಮಾರ್ಪೊಳೆಯುತ್ತಿರೆ ಪೋಲ್ತುದಾವಗಂ।
ಪಳುಕಿನ ಪುತ್ರಿಕಾಕೃತಿಯ ವರ್ತನಮಂ ವಿಪುಳಾನದೀ ಜಲಂ ॥೮೦॥

1. ಮನಕೇಱದ.

ಚಂ॥ ಎಳಸಿ ಪಿಪಾಸೆಯಿಂ ಮೃಗಚಯಂ ಪಱಿತಂದೊಳಸಾರ್ದು ಸಂಭ್ರಮಾ।
ಕುಳತೆಯಿನೋಡಿ ಪಿಂಗುವುದು ತಾಂ ಜಲಶೂನ್ಯವಿದೆಂದು ತಚ್ಚರ॥
ಜ್ಜಲ ವಿಹಗಂಗಳೊಳ್ಳುಲಿಪುಗೇಳ್ದಿರದೊಯ್ಯನೆ ಪೊರ್ದಿ ಪೀರ್ವುವಾ।
ಸಲಿಲಮನೆಂದೊಡೇವೊಗಟ್ಟೆನಾ ವಿಪುಳಾತಟನೀ ಜಲಾಚ್ಛಮಂ ॥೪೧॥

ಮೊರೆವ ಮದಾಳಿಮಾಲೆಗಳ ಝುಂಕೃತಿಯಿಂ ಕಳಹಂಸ ಕೋಮಲ।
ಸ್ವರತತಿಯಿಂ ಕಳಾಪಿಗಳ ಚಾಪಳ ನಿಸ್ಸ್ವನದಿಂ ರಥಾಂಗ ಬಂ॥
ಧುರತತಿ ಕೂಜನ ಧ್ವನಿಯ ತಿಂತಿಣಿಯಿಂ ಬಹುಸಾರಸ ಪ್ರಭಾ।
ಸುರ ರುತಿ ರಾಜಿಯಿಂದೆ ವಿಪುಳಾನದಿ ನಾದಮಯಂ ನಿರಂತರಂ ॥೪೨॥

ಕಂ॥ ದಳಿತ ಶತಪತ್ರದಿಂ ಸಂ।
ಚಳಿತ ಶಿಳೀಮುಖ ಸಮಾಜದಿಂ ಧೃತ ಚಕ್ರಾ॥
ವಳಿಯಿಂ ವಿಪುಲಾ ನದಿಕ
ಣ್ಗೊಳಿಪುದು ಸಂಗ್ರಾಮ ಭೂಮಿಯಂದದಿನೆಂದುಂ ॥೪೩॥

ಮತ್ತಮಾ ವಿಪುಳಾತರಂಗಿಣೀ ವಿಳಾಸಂ ಹರಿಯಂತೆ ಚಕ್ರಾಲಂಕೃತಮುಂ, ಚಕ್ರಾಲಂಕೃತನಂತೆ ಪದ್ಮೋಪೇತಮುಂ, ಪದ್ಮೋಪೇತನಂತೆ ಅನಂತ ಮಹಿಮಾಸ್ಪದಮುಂ, ಅನಂತ ಮಹಿಮಾಸ್ಪದನಂತೆ ಮಹಾಸತ್ತ್ವಾತ್ಮಕಮುಂ, ಮಹಾಸತ್ತ್ವಾತ್ಮಕನಂತೆ ನಿಖಿಲ ಭುವನ ಗರ್ಭಮುಂ, ನಿಖಿಲ ಭುವನ ಗರ್ಭನಂತೆ ಪರಿಯುಕ್ತ ಶ್ರೀಕಂಠನುಮಾಗಿರ್ಪುದಂತುಮಲ್ಲದೆಯುಂ—

ಮ॥ ಹರಿಯಂತಾ ಹಿಮರೋಚಿಯಂತೆ ಕಮಲೋಪೇತ ಪ್ರಭಾವಂ ಮಹೇ।
ಶ್ವರನಂತಾ ದನುಜಾರಿಯಂತೆ ಕುಮುದ ಪ್ರೋದ್ಭಾಸುರಂ ಪದ್ಮಮಂ॥
ದಿರೆಯಂತಾ ಗಿರಿಚಾರಿಯಂತೆ ವರ ಹಂಸೋದ್ಯುಕ್ತ ಸೌಂದರ್ಯ ಬಂ।
ಧುರಮಪ್ಪಾ ವಿಪುಳಾತರಂಗಿಣಿ ಸಮಂತೊಪ್ಪಿರ್ಪುದಿಂತಾವಗಂ ॥೪೪॥

ಅಂತು ವಿಪುಳಾಶ್ಚರ್ಯಶೋಭೆವೆತ್ತ ವಿಪುಳಾನದೀ ತೀರದೊಳ್—

ಕಂ॥ ವಿರಹಿಗಳಂತುತ್ಕಳಿಕಾ।
ಪರಿಕಲಿತಂ ಶರಧಿವೋಲ್ ಪ್ರವಾಳ ಪರೀತಂ॥
ಸುರ ನಗರಿಯಂತೆ ಸುಮನೋ।
ಭರಿತಂ ಸಾರ್ವರ್ತುಕಾಖ್ಯ ವನಮೆಸೆದಿರ್ಕುಂ ॥೪೫॥

ಮ॥ಸ್ರ॥ ತಿಲಕಂ ತಾಳಂ ತಮಾಳಂ ಬದರಿ ಕದಳಿ ಕಂಕೆಲ್ಲಿ ಮಾಲೂರಮಾ ಪಾ।
ಟಲಿ ಚೂತಂ ಸ್ವರ್ಣಪುಷ್ಪಂ ಪನಸ ವಕುಳ ಜಂಬೂ ಕಪಿತ್ಥಂ ವಟಂ ಪಿ॥
ಪ್ಪಲಕಂ ವಾಸಂತಿ ಸಾಲಂ ಕುರವಕಮಸನಂ ಕೇಸರಂ ಚಂದನಂ ಸೆ।
ಳ್ಕು ಲವಂಗಂ ಮಾತುಳುಂಗಂ ವರು[ಣಶಮಿ]ಪಲಾಶಂ ಮಹಾವೃಕ್ಷಮಿರ್ಕುಂ॥

ಮ॥ಸ್ರ॥ ಬನಮಂ ನೀರೂಡಿ ನಿಚ್ಚಂ ಬಳೆಯಿಸುವ ಬೆಸಂಬೆತ್ತುವೋ ಧಾರೆಯಿಂ ತಾ।
ಮೆನಲಾ ನೀರ್ಗಾಯ್ಗಳಿಂ ಭೋರ್ಗಱೆದುಗುವೆಳನೀರಂ ನವಾಮ್ರಾಳಿ ನಾನಾ॥
ವನಿಜಾತ ಶ್ರೇಣಿಗೋರಂತೆಡೆವಿಡದತುಳಾವಾಳಖಾತಂಗಳಿಂ ತೀ।
ವಿ ನಿತಾಂತಂ ಸುತ್ತಿ ಪೂರಂಬರಿಪುದವಱೊಳೇ ನಾರಿಕೇಳಾಂಘ್ರಿಪಂಗಳ್॥

ವನಿತಾ ಪಾದ ಪ್ರಸಾರಂಬಡೆದು ತಳಿರ್ವಶೋಕಂ ವಧೂಟೀ ಕುಚಾಲಿಂ।
ಗನ ಲೀಲಾಸಾರದಿಂದುಳ್ಳಲರ್ದ ಕುರವಕಂ ಕಾಮಿನೀ ಕೇಕರಾಳೋ॥
ಕನದಿಂ ಮೆಯ್ವೆರ್ಚುತಿರ್ಪುತ್ಕಳಿಕೆಯ ತಿಳಕಂ ಸ್ತ್ರೀಮುಖಾಬ್ಜಾಸವಾ ಸೇ।
ಚನದೆತ್ತಂ ಬಲ್ಮುಗುಳ್ದೆತ್ತೆಸೆವ ಬಕುಳವೊಪ್ಪಿರ್ಪುದಲ್ಲಲ್ಲಿಗೆಲ್ಲಂ ॥೮೮॥

ಫಲಭಾರ ಶ್ರೀಯ ಸೊಂಪಿಂದೊಲೆವ ಪಲಸುಗಳ್ ಪಣ್ಗಳೊತ್ತಂಬದಿಂ ಕ।
ಣ್ಗೊಳಿಪಾ ರಂಭಾಕದಂಬಂ ತುಱುಗಿ ಮಿಱುಪ ಪಣ್ಗೊಂಚಲಂ ಪೊತ್ತಗುರ್ವಿಂ॥
ಪೊಳೆಯುತ್ತಿರ್ಪಚ್ಚ ಪೂಗ ಪ್ರತತಿ ರಸವೊಸರ್ತಿರ್ಪ ಪಣ್ಗಳ್ ಸಮಂತಿ।
ಟ್ಟೆಳಮಪ್ಪಾಮ್ರ ಪ್ರತಾನಂ ಬನದೊಳವಿರಳಂ ಶೋಭಿಸುತ್ತಿರ್ಪುದೆತ್ತಂ ॥೮೯॥

ಚಂ॥ ಫಳಿತ ಕುಜಂಗಳಿಂದಧಿಕನೆಂತಿರೆ ತಾಂ ತವೆ ಮಿಕ್ಕು ತೋರಗಾ।
ಯ್ಗಳ ಬಹುಭಾರನುಂ ತಳೆದು ಸಾರ್ವ ವಿಹಂಗಚಯಕ್ಕೆ ಬೇಸಱಿಂ॥
ಬಳೆಯಿಪುದೆಂದು ತಾಳ ತರುವಂ ನಗುವಂತೆವೊಲಾದ ಬೀಡೆವ।
ಣ್ಗಳಿನೆಸೆದಿರ್ಪ ದಾಡಿಮ ತರುವ್ರಜಮಾ ಬನದೊಳ್ ವಿರಾಜಿಕುಂ ॥೯೦॥

ಉ॥ ಅಂಗಭವಂಗೆ ಪಚ್ಚ ದಳದಿಂ ಕರುಮಾಡಮನೊಲ್ದು ಮಾಡಿ ಚೆಂ।
ಬೊಂಗಳಸಂಗಳಂ ತರದಿನೆತ್ತಿಸಿದಂ ಚತುರಾಸ್ಯನೆಂಬ ಚೆ॥
ಲ್ವಿಂಗೆಡೆಯಾಗಿ ಕಣ್ಗೊಳಿಪ ಪಣ್ಗಳ ತಿಂತಿಣಿಯಿಂದೆ ತಳ್ತ ನಾ।
ರಂಗ ಮಹೀಜರಾಜಿ ಮಿಗೆ ರಾಜಿಪುದಾವಗಮಾ ವನಾಂತದೊಳ್ ॥೯೧॥

ಮ॥ಸ್ರ॥ ಪಡೆಪಿಂದಾಂ ಪೆತ್ತ ನಾನಾಕುಜ ಸಮುದಯದೊಳ್ ಸತ್ಫಲಂಬೆತ್ತುದೋರಂ।
ಕಿಡೆಸುತ್ತುಂ ರಾಗದಿಂ ಭೂಸತಿ ಹೃದಯದೊಳಿಟ್ಟಟ್ಟುಯಿಂದೊತ್ತಿ ತಟ್ಕೈ॥

ಸಿದಳೆಂಬಂತುರ್ಬಿಯೊಳ್ ಭಾರದಿನೊಱಗಿ ಕರಂ ಪೀವರೋದ್ಯತ್ಫಲವ್ರಾ।
ತದ ಬಿಣ್ಪಿಂ ಮಾತುಳುಂಗ ಪ್ರಕರಮೆ ನಿರುತಂ ಶೋಭೆವೆತ್ತಿರ್ಪುದೆತ್ತಂ ॥೯೨॥

ಪ್ರಕಟಂಬೆತ್ತಾಭಿಘಾತಂ ಬಿಡಿಪು ಬಿಡದೆ ತಮ್ಮಂ[ಕ್ಷ]ನಾವೃತ್ತಿಯಿಂ ತಾ।
ಳ್ದಿ ಕರಂ ಮುಂ ಪೆತ್ತ [ಭೂಗೋಲ್ದೊಱವು] ಗಱೆಯಲಾ ಗೋಸ್ತನೀ ನಾ
ಮಮಂ ಸಾ॥
ರ್ಥಕಮಂ ಮಾಳ್ಪಂದದಿಂ ಸದ್ರಸಮನೆ ಸುರಿಯುತ್ತಿರ್ಪ ಪಣ್ಗೊಂಚಲಂ ಪೊ।
ತ್ತ ಕನದ್ದ್ರಾಕ್ಷಾಲತಾ ಮಂಟಪ ಸಮುದಯದಿಂ ರಮ್ಯಮಂತಾ ವನಾಂತಂ
॥೯೩॥

ಚಂ॥ ಶುಕ ಪಿಕ ದುಂದುಭಿ ಧ್ವನಿಗಳುಣ್ಮೆ ಮನೋಭವ ರಾಜನಾ ವಸಂ।
ತಕ ಸಖ ಯುಕ್ತನಾಗಿ ಬರಲೀಕ್ಷಿಸಿ ತತ್ಸಮಯೋಚಿತೋತ್ಸವೋ॥
ತ್ಸುಕೆ ವನಲಕ್ಷ್ಮಿಯಾಗಳೆ ನಿವಾಳಿಗೆ ತೀವಿದ ರತ್ನದೀಪ ಮಾ।
ಲಿಕೆಯೆನಿಸಿತ್ತು ಕುಟ್ಮಳಿತ ಚಂಪಕ ಸಂಚಯಮಾ ವನಾಂತದೊಳ್ ॥೯೪॥

ಮ॥ ಜಳಪಾನಂ ಬಿಡದಿರ್ಪುದರ್ಕರುಚಿವೆತ್ತೋರಂತೆ ತಂತಮ್ಮ ಬೇ।
ರ್ಗಳ ಮೊತ್ತಕ್ಕಮೃತಾಂಬು ಪೂರಮನೊಡರ್ಚುತ್ತಿರ್ಪುವೆಂಬಂತೆ ಪ॥
ಣ್ಗಳ ಸಾಲಿಂದೆನಸುಂ ಮೊದಲ್ ಗುಟಾಗಳೆಲ್ಲಂ ತೀವಿ ತುಂಬುರ್ಚಿ ಪೋ।
ಯ್ತಿಳೆಯೊಳ್ ತಾನೆನೆ ತದ್ವನಾಂತರದೊಳಿಂತೊಪ್ಪಿರ್ಪುವಿಮ್ಮಾವುಗಳ್ ॥೯೫॥

ಕಂ॥ ಸುರ ಸದನದಂತೆ ಬಹುಳಾ।
ಪ್ಸರೋಮಯಂ ವಿಭೃತ ವಿನುತ ಮಂದಾರಮಯಂ॥
ಸುರುಚಿರ ಶಕ್ರಮಯಂ ಬಿ।
ತ್ತರಿಪಿಂದ್ರಾಣೀಮಯಂ ದಲಾ ಬನಮೆಂದುಂ ॥೯೬॥

ಮ॥ ಜಿತ ಯುದ್ಧಾಂಗಣದಂತೆ ಬಲ್ಲಮಯಮರ್ಕಾದಿ ಗ್ರಹ ಶ್ರೇಣಿಯಂ।
ತತುಳ ಕ್ರೋಡಮಯಂ ಸರೂಪ ವಿಭವೋಪೇತ ಸ್ಫುರದ್ಧ್ಯಾವನೋ॥
ನ್ನತಿಯಂತಂಚಿತ ಚಿತ್ರಕಾಯಮಯಮಾ ವೈರೋಚನಾವಾಸದಂ।
ತತಿ ಭೀಷ್ಮಾಯತಗಾತ್ರ ನಾಗಮಯಮಾಗಿರ್ದತ್ತದೆತ್ತಂ ಬನಂ ॥೯೭॥

ಚಂ॥ ಸ್ಮಿತ ಕುಸುಮಾವಲಂಬನದೆ ರಾಜಿಸುತಿರ್ಪ ವಿಲೋಲ ಮಾಲತೀ।
ಲತೆ ಕಮನೀಯ ಕುಂದಲತೆ ತಳ್ತ ಮಹಾಲತೆ ನೀಳ್ದ ಮಲ್ಲಿಕಾ॥
ಲತೆ ವನಚಂಪಕೋಚ್ಚ ಲತೆ ಚೂತ ಚಳಲ್ಲತೆ ಶಸ್ತ ಗೋಸ್ತನೀ।
ಲತೆ ಬಹುಬಿಂಬ ಕಂಬುಲತೆ ತಳ್ತಿಸೆದಿರ್ಪುದು ತದ್ವನಾಂತದೊಳ್ ॥೯೮॥

ಮ॥ ಬಹು ಪದ್ಮಾ ವೃತರೋಚಿಯಿಂ ಬಹು ವಿಹಂಗೋಪೇತ ವಿಖ್ಯಾತಿಯಿಂ।
ಬಹು ಚಕ್ರಾವಳಿ ರಮ್ಯದಿಂ ಬಹು ಭುಜಂಗವ್ರಾತದಿಂದಾ ಪಯೋ॥
ರುಹಪತ್ರಾನನೆ ವೆಗ್ಗುಗೆಯ್ವಳಿ [ಪರಿಳ್ಪೀಳಿರ್ಪುದುದ್ಯತ್ಸಭಾ]?।
ವಹಮಪ್ಪಂಬುರುಹಾಕರ ಪ್ರಕರಮೊಪ್ಪಿರ್ಕುಂ ವನೋಪಾಂತದೊಳ್ ॥೯೯॥

ಕಂ॥ ಮಿಡಿಯಲೊಡಂ ಸುರಿವುದು ರಸ।
ವೆಡೆಯುಡುಗದೆನಿಪ್ಪ ನುಡಿಗೆ ಕಡುಗೆನಿಸಿದವೋಲ್ ॥
ಗುಡುಗುಡಿಸೆ ಗಂಟು ಗಂಟುಗ।
ಳೆಡೆಯಿಂ ರಸಮುಣ್ಮುವಿಕ್ಷು ವಾಟಿಗಳೆಸೆಗುಂ ॥೧೦೦॥

ಮ॥ಸ್ರ॥ ಇದು ಕಾಮುಂಗಾ ವಸಂತಂ ಬಳೆಯಿಸಿದ ಲಸಚ್ಚಾಪದಂಡೌಘಮಲ್ತಿಂ।
ತಿದು ಚಂಚತ್ಸಾಂದ್ರ ಚಂದ್ರಾತಪ ತರುವಿನ ಬೀಟಲ್ಗಳೊತ್ತಂಬಮಲ್ತಿಂ॥
ತಿದು ಸಾರೋದ್ಯತ್ಸುಧಾ ವೃಷ್ಟಿಯನೆಸಪ ಮಹಾಯಂತ್ರಯಷ್ಟಿ ವ್ರಜಂ ತಾ।
ನಿದೆನಲ್ಕೊಪ್ಪಿರ್ಪುದಂತಾ ವನದನುಪಮ ಪುಂಡ್ರೇಕ್ಷು ವಾಟೀ ವಿತಾನಂ ॥೧೦೧॥

ಚಂ॥ ಮನಮುನಿಸುಳ್ಳ ಸಂಪಗೆಗೆ ನೀಂ ಪಗೆಯಪ್ಪುದೆನುತ್ತಳಿ ವ್ರಜ।
ಕ್ಕನುನಯದಿಂದೆ ತನ್ನೆಸೆವ ಕಂಪನದಿಂ ಬಟ್ಟಯಟ್ಟಿದಂದದಿಂ॥
ವನಮನಿತುಂ ಕರಂ ಪುದಿಯೆ ಬೀಜುವ ಸೌರಭದಿಂಪಿನಿಂದೆ ಕಂ।
ಪಿನ ಕರುವಾದ ಕೇದಗೆಯ ಮಂಟಪವೊಪ್ಪುವುದೆತ್ತ ನೋಟ್ಪೊಡಂ ॥೧೦೨॥

ಮ॥ಸ್ರ॥ ವಿಳಸತ್ಕಾಂತಂ ವಸಂತಂ ತಳರದಿರೆ ವನಶ್ರೀ ಮುದಂಬೆತ್ತು ಮುಕ್ತಾ।
ಕುಳದಿಂ ನೀಳೌಘದಿಂದಿಕ್ಕಿದ ನಡೆಗಳೊ ಪೇಟಿಂತಿವೆಂಬಂದದಿಂ ಕ॥
ಣ್ಗೊಳಿಸುತ್ತಿರ್ದಪ್ಪುವಂತಾ ವನದೊಳಗೆಲರ್ವೋಯ್ಲಿಂದಮಲ್ಲೊಕ್ಕ ನವ್ಯಾ।
ಮಳ ಪುಷ್ಪಂಗಳ್ ಜಿನುಂಗುತ್ತೆಱಗಿದ [ಮುದ] ಭೃಂಗಾವಳೀ ಸಂಗದಿಂದಂ॥

ಅಗೆಯಿತ್ತುತ್ತಬ್ಜಿನೀ ಸಾರಿಗೆ ಮಣಿಗಣಮಂ ಸೂಸುತಂ ತತ್ಪ್ರದೇಶೋ।
ರ್ವಿಗೆ ಪುಷ್ಪೋದ್ಯತ್ಪರಾಗಂಗಳನೊಡರಿಸುತಂ ನೀಳ್ದ ಶಾಖಾ ಶಕುಂತಾ॥
ಳಿಗೆ ಲೀಲಾಂದೋಳ ಕೇಳೀ ಮುದಮನುರು ಮದಾಳಿ ವ್ರಜಕ್ಕಾದವೊಳ್ಗಂ।
ಪುಗಳಂ ಕೈವತ್ತಿಸುತ್ತಂ ಸುಟುವುದು ವನಸಂಚಾರ ಸಾರಂ ಸಮೀರಂ ॥೧೦೪॥

ಮತ್ತಮಾವನಂ ದಕ್ಷಾಧ್ವರದಂತೆ ಸ್ಥಾಣು ವಿರಹಿತಮುಂ, ಮುರವೈರಿಯಂತೆ ಸುಪರ್ಣ ಶೋಭಿತಮುಂ, ಧೂರ್ಜಟಿಯಂತಿರಂಬಾ ಸಮುನ್ವಿತಮುಂ, ಪಾಂಡವ

ವರೂಥಿನಿಯಂತೆ ಅರ್ಜುನೋರ್ಜಿತಮುಂ, ವಾಣೀಪಾಣಿ ಪಲ್ಲವದಂತೆ ಅಕ್ಷಮಾಲಾವೃತಮುಂ, ದಕ್ಷಿಣ ದಿಶೆಯಂತೆ ಅಗಸ್ತ್ಯ ವಿಭ್ರಾಜಿತಮುಂ, ಪಿಶಾಚ ಪ್ರಚಯದಂತೆ ಪಲಾಶ ಭಾಸುರಮುಂ, ಪ್ರಬಂಧಾದಿ[ಗಾನ]ಕ್ರಮದಂತೆ ಬಹುತಾಳ ನಿಹಿತಮುಂ, ರತಿ ರಮಣಿಯಂತೆ ಮದನೋಪಯುಕ್ತಮುಂ, ಪ್ರಮಥ ಸಭೆಯಂತೆ ಮಹಾಲ[ಯ]ಯುಕ್ತಮುಂ, ಭಾರತ ವ್ಯೂಹದಂತೆ ದ್ರೋಣ ಶಕುನಿ ಶಿಖಂಡಿ ಮಂಡಿತಮುಂ, ಹಸ್ತಾವಳಿಯಂತೆ ವಿಸ್ತೃತ [ವಿಚಿತ್ರಕಮುಂ], ಪವಮಾನ ಮಿತ್ರಾಶಿಯಂತೆ ಪುಂಡರೀಕಾನ್ವಿತಮುಂ, ನಭೋಂಗಣದಂತೆ ಋಕ್ಷರಾಜಿತಮುಂ, ಪಯೋನಿಧಿಯಂತೆ ಅಪಾರ ಶಕುನಿ ಪ್ರಕೀರ್ಣಮುಂ, ವರ್ಷಾಕಾಲಾಂಬರದಂತೆ ಸಾರಂಗ ಸಂಘಾತಮುಂ, ಸಂವತ್ಸರ ಸಮಾಜದಂತೆ ರಕ್ತಾಕ್ಷಿಯುಕ್ತಮುಂ, ದ್ವೀಪ ವಿಶೇಷದಂತೆ ಕ್ರೌಂಚಾಭಿರಮ್ಯಮುಂ, ಪಾರ್ವತಿಯಂತೆ ಪಂಚಾನನಾಶ್ರಿತಮುಂ, ವಿಪ್ರೋತ್ಕೀರ್ಣಮಾಗಿಯುಂ, ಮಹಾಗ್ರಹಾರಮಲ್ತು ; ಖಟ್ಗಿ ಸಮೇತಮಾಗಿಯುಂ, ನೃಪನಿಲಯಮಲ್ತು ; ಬಹುಳಾಪ್ಸರೋಮಯಮಾಗಿಯುಂ, ಅಮರ್ತ್ಯಾವಾಸಮಲ್ತು ; ಅಷ್ಟಾಪದ ಪ್ರಕೀರ್ಣಮಾಗಿಯುಂ, ದ್ಯೂತಾಸ್ಪದಮಲ್ತು ; ಚಕ್ರಧರಮಾಗಿಯುಂ, ಮಧು ಮಥನಮಲ್ತು ; ರಾಜಹಂಸಾವಳಂಬಿಯಾಗಿಯುಂ, ಪವನ ಪಥಮಲ್ತು ; ಶಿಖಿ ಸಮೇತಮಾಗಿಯುಂ, ಕುಮಾರ ಪ್ರವರ್ತನಮಲ್ತು ; ಕಾಳಕಂಠಾಕುಳಿತಮಾಗಿಯುಂ, ಪಿತೃ ವನಮಲ್ತು ; ಶುಕ ಪ್ರಕೀರ್ಣಮಾಗಿಯುಂ, ನಕ್ತಂಚರ ಪ್ರಚಾರಮುಮಲ್ತು ; ಅಂತುಮಲ್ಲದೆಯುಂ–

ಮ॥ ತ್ರಿದಿವ ಪ್ರಾಪ್ತ ಮನೋಹರಂ ವಿರಥ ಹಸ್ತೋನ್ಮೂಲಿತೋರ್ವೀಜಮು।
ನ್ಮದ ಸಂಪತ್ತಿ ಸುರಾಲಯಂ ತ್ರಿದಶ ಲೋಕಾಧಾರ ಪಂಚ ದ್ರುಮಾ ॥
ಸ್ಪದಮುಂ ಪುಣ್ಯಜನ ವ್ಯಪೇತಮಕುಲೀನಂ ತಾನೆನುತ್ತುಂ ಸಮಂ।
ತದನಿಂತೇಳಿಪುದಿಂದ್ರ ನಂದನಮನಾ ಸಾರ್ವರ್ತುಕಾಖ್ಯಂ ವನಂ ॥೧೦೫॥

ಆ ವನದೊಳ್—

ಮ॥ಸ್ರ॥ ದಳಿತೋದಂಚದ್ವಸಂತೋದಯದ ವನ ತರುಶ್ರೇಣಿಯೊಳ್ ಚಿತ್ರ ಪತ್ರಾ।
ವಳಿಯಾಗಲ್ ಮೇರುವಂ ಕಂಡರಿಸಿ ಕಡೆದು ತಂದಿಟ್ಟನಂಭೋಜ ಗರ್ಭಂ ॥
ಗಳ ತಾನೆಂಬಂತೆ ಶುಂಭತ್ಕನಕ ಮಯ ಮಹಾದೇವತಾ ಮಂದಿರಂ ಕ।
ಣ್ಗೊಳಿಸುತ್ತಂ ಪೆಂಪುವೆತ್ತಿರ್ಪುದು ಮಣಿಕಲಶೋದ್ಧಾಮಮುಬ್ಬಾದ್ಧ್ವ ಸೀಮಂ ॥

ಕಂ॥ ಅಂಬುರುಹ ನಾಭನಂದದೊ।
ಳಂಬರಮದು ನೋಡೆ ನಾಡೆ ಪೀತಾಂಬರಮಾ ॥

ಯ್ತೆಂಬಿನಮದು ಪಜ್ಜಳಿಪುದು ।
ಜಾಂಬೂನದ ರಚಿತ ರುಚಿರಮಾಶನ ವಾಸಂ ॥೧೦೭॥

ಮಯನ ಮನಕ್ಕೆನಸುಂ ವಿ ।
ಸ್ಮಯಮಂ ಪುಟ್ಟಿಪ ವಿಚಿತ್ರ ಕೂಟಂಗಳ ಕೋ ॥
ಟಿಯೊಳೆಸೆವುದಭವ ಗೃಹಮತಿ ।
ಶಯದ ಮಹಾಮೇರುವೆಂಬ ಸತ್ಪ್ರಾಸಾದಂ ॥೧೦೮॥

ಮ॥ ಸರಸೀಜಾತ ಭವಾದ್ಯಮರ್ತ್ಯ ಮುನಿಪ ಧ್ಯಾನ ಪ್ರಭಾವಕ್ಕಗೋ ।
ಚರಮಪ್ಪಪ್ರತಿಮ ಪ್ರಭಾಸಿಧಿ ಪರಂಜ್ಯೋತಿಸ್ವರೂಪಂ ಶಿವಂ ॥
ಪರಮ ಸ್ಥಾವರ ಮೂರ್ತಿಯಾದನೆನೆ [ಭಾಸ್ವ]ಚ್ಚಂದ್ರಕಾಂತ ಪ್ರಭಾ ।
ಸುರ ಲಿಂಗಂ ವಿಭು ವಿಶ್ವನಾಥನೆಸೆವಂ ತದ್ದೇವತಾವಾಸದೊಳ್ ॥೧೦೯॥

ಆ ವಿಶ್ವನಾಥಂಗೆ ಕೃತನಮಸ್ಕಾರನಾಗಿ ಪೊಡೆವಟ್ಟು ನೋಡುವಾಗಳ್—

ಮ॥ಸ್ರ॥ ಭರದಿಂ ಭೂದೇವಿ ಭೂಷಾಳಿಗೆ ಬಯಸಿ ಕೊಳಲ್ ನೀಡಿದಳ್ ಕೈಗಳಂ ನೀ ।
ಟ್ದುರು ತಾರಾಮಾಲೆಗೆಂಬಂತಿರೆ ತುಱುಗಿದ ಶಾಖಾಳಿಯಿಂ ಚುಂಬಿಸುತ್ತಂ ॥
ಬರವಂ ತಾನಿರ್ದುದಾಶಾಶಾಖೆಗಳತೆಱಪುಗಳ್ ಚಂದ್ರ ಸೂರ್ಯರ್ಗೆ ಮಾರ್ಪೊ ।
ತ್ಕರಮಾಯ್ತೆಂಬೀ ಮಹಾವಿಸ್ಮಯಮನೋದವಿಸಿತ್ತೊಂದು ಚೂತಾವನೀಜಂ ॥

ಕಂ॥ ಪಾತಾಳಂ ನಿಜಮೂಲ ।
ವ್ರಾತದ ಸೀಮಂ ವಿಯತ್ತಳಂ ಶಾಖಾ ಸಂ ॥
ಘಾತದ ಸೀಮಮೆನಲ್ಕಾ ।
ಚೂತ ಮಹೀಜಾತದುನ್ನತಿಯನೇವೊಗಳ್ವೆಂ ॥೧೧೧॥

ತಾರಾವಳಿಯಂತೆ ವಿಶಾ ।
ಖಾ ರಮಣೀಯಂ ಮುರಾರಿಯಂತೆನಸುಂ ವಿ ॥
ಸ್ತಾರಿತ ವನಮಾಲಾಲಂ ।
ಕಾರಂ ತಾನೆನಿಪುದೆಸೆವ ಚೂತ ಕುಜಾತಂ ॥೧೧೨॥

ಮ॥ ಶರದಭ್ರ ಪ್ರಸರಂ ಚರತ್ಪ್ರಕೃತಿಯಂ ಬಿಟ್ಟಾವಗಂ ಬಂದು ಸು ।
ಸ್ಥಿರಮಾಗಿಂತೆಸೆದಿರ್ದುದೋ ಬಡಬವಹ್ನಿ ಜ್ವಾಲೆಯುಳ್ಳಳ್ಕಿ ಮೆ ॥

ಯ್ಗರೆದೆಯ್ದಿರ್ದುಪುದೋ ಸುಧಾರ್ಣವಮೆನಲ್ಕಭ್ರ ಪ್ರಭಾ ಭಾಸುರ।
ಸ್ಫುರಿತ ಸ್ಫಾಟಿಕ ಬದ್ಧ ಭೂಮಿಯೆಸೆಗುಂ ಚೂತಾಧರ ಸ್ಥಾನದೊಳ್ ॥

ಕಂ॥ ತನಿವೆಳಗಿಂ ತೊಳಗುವ ಪಳು।
ಕಿನ ಕುಟ್ಟಿಮ ತಳದೊಳೆಸೆವ ಚೂತ ಕುಜಾತಂ ॥
ನೆನೆಯಿಸಿದುದು ಪಾಲ್ಗಡಲೊಳ್ ।
ಜನಿಯಿಸಿದಾ ಪಾರಿಜಾತದಂದಮನೆಂದುಂ ॥೧೧೪॥

ಇಂತು ಪೊಳೆವ ಪಳುಕಿನ ಕುಟ್ಟಿಮ ತಳಂ ತನ್ಮಹಾಚೂತ ಭೂಜಾತ ಪ್ರತಿಚ್ಛಾಯೆಯಿಂ ಮರಕತಮಣಿ ಶಿಲಾಮಯಮುಂ. ಅಂಬರ ಪ್ರತಿಬಿಂಬಾವಲಂಬದಿಂ ನೀಲಮಣಿ ಶಿಲಾಮಯಮುಂ, ಶ್ರೀ ವಿಶ್ವನಾಥ ಸುವರ್ಣ ಶಿವಾಯತನ ಪ್ರತಿಬಿಂಬಾಯಮಾನದಿಂ ಪುಷ್ಯರಾಗಮಣಿ ಶಿಲಾಮಯಮುಂ, ವನತರು ಪ್ರವಾಳ ಪ್ರತಿರೂಪದಿಂದರುಣ ಮಣಿ ಶಿಲಾಮಯಮುಮೆಂಬೀ ವಿತರ್ಕಮನೊದವಿಸಿ ತೊಳಗುತಿರ್ಪುದು; ಅಂತುಮಲ್ಲದೆಯುಂ—

ಕಂ॥ ತಳಗು ಕಲೆ ಕಚರಿ ಜರ್ಝರೆ।
ಪುಳಕಂ ತಿಳಿಗಾರೆ ತಿರವಿ ವರ್ಣಮಣಂ ಸಂ ॥
ಗಳಿಸದೆ ಪಳುಕಿನ ಕುಟ್ಟಿಮ
ತಳಮದು ತಳತಳಿಸಿ ತೊಳಗುವುದು ತನಿವೆಳಗಿಂ ॥೧೧೫॥

ಆ ಕುಟ್ಟಿಮ ತಳದೊಳ್—

ಮ॥ಸ್ರ॥ ಪಿರಿದುಂ ಮುನ್ನಾವ ದೋಷಾತ್ಮಕನೆನಿಪಪವಾದಾಖ್ಯೆಯಂ ತೂಳ್ದು ವೊಂದಾ।
ತುರದಿಂ ಶೀತಾಂಶು ತಾರಾವಳಿ ವೆರಸಿಟೀತಂದುರ್ವರಾ ಭಾಗದೊಳ್ ನಿ ॥
ಬ್ಬರದಿಂ ಭಾಸ್ವತ್ತಪೋಮೂರ್ತಿಯನೆ ತಳೆದವೋಲ್ ತಾಪಸಾವೃತ್ತದಿಂ ಭಾ।
ಸುರಮಾಗಿರ್ಪಂ ದಯಾಂಭೋನಿಧಿ ಕಪಿಲ ಮಹಾಚಾರ್ಯನಾಚಾರ್ಯ ವರ್ಯಂ ॥೧೧೬॥

ಕಂ॥ ಕರತಳ ರೇಖಾ[ಸದೃಶ]।
ಸ್ವರೂಪಮೀ ಭುವನಸಮಿತಿ ತನಗೆನಿಸಿರ್ಪಂ ॥

ಪಿರಿದೆನಿಪ ಕೇವಲ ಜ್ಞಾ ।
ನ ರಹಸ್ಯಂ[1][ಸೂ] ನೃತಾಸ್ಯ ಕಪಿಲ ಮುನೀಶಂ ॥೧೧೭॥

ಮ॥ ಶ್ರುತಿಯೂಥಂ ಮುನಿಮೂರ್ತಿಯಂ ತಳೆದುದೋ ಸಮ್ಯಕ್ತ್ವಧರ್ಮ ವ್ರಜಂ ।
ವ್ರತಿಯಾಕಾರಮನಾಂತುದೋ ಪರಮ ತತ್ವಸ್ತೋಮಮಿಾ ತಾಪಸಾ ॥
ಕೃತಿಯಂ ತಾಳ್ದಿರುತಿರ್ದುದೋ ದಿಟಮೆನಲ್ಕಜ್ಞಾನ ದೂರೀಕೃತಂ ।
ಶ್ರುತಿ ದೀಪಂ ಕಪಿಲ ವ್ರತೀಶನೆಸೆವಂ ಕಾರುಣ್ಯ ನಿರಾಕರಂ ॥೧೧೮॥

ಮ॥ಸ್ರ॥ ಶ್ರುತದಿಂ ಧರ್ಮಾಮೃತಾಸಾರಮನೆ ಸುರಿಯುತುಂ ಚಾರುನೇತ್ರಂಗಳಿಂದಂ ।
ಸತತಂ ಕಾರುಣ್ಯ ಪೀಯೂಷಮನೆ ಕಱೆಯುತುಂ ನಿರ್ಮಲಾಂಗ ಪ್ರಭಾ ಸಂ ॥
ತತಿಯಿಂ [2] ದಿಕ್ಚಕ್ರಮಂ ಕಣ್ಗೊಳಿಸಿ ಬೆಳಗುತುಂ ಪರ್ಬಿದಾನಂದ ರೂಪೋ ।
ನ್ನತನಿರ್ದಂ ಪ್ರಾಜ್ಞನಾಜ್ಞಾನಿಧಿ ಕಪಿಲಮುನೀಂದ್ರಂ ಸುಬೋಧಾಬ್ಧಿ
ಚಂದ್ರಂ ॥

ಮ॥ ಪೊಳೆವರ್ಕೋಪಳ ಭಾಂಡದೊಳ್ ತೊಳಪ ದೀಪಂ ತದ್ಬಹಿರ್ಭಾಗದೊಳ್ ।
ತೊಳಗುತಿರ್ದವೊಲಾ ಮುನೀಶನ ಹೃದಾತ್ಮಜ್ಯೋತಿ ಮೆಯ್ವೆರ್ಚಿ ಪ ॥
ಜ್ಜಳಿಸುತ್ತಂ ಪೊಱಪೊಣ್ಮಿತೆಂಬ ತೆಱದಿಂ ವಿಭ್ರಾಜಿಸುತ್ತಿರ್ದುದ ।
ಸ್ಫಳಿತೋದ್ಧೂಳಿತಮಪ್ಪ ಭಸ್ಮವಿಳಸತ್ಪಾಂಡು ಪ್ರಭಾಮಂಡಲಂ ॥೧೨೦॥

ಕಂ॥ ಸುರನದಿಯ ಫೇನಪುಂಜದ ।
ಸಿರಿಯಂ ಸಲೆ ತಳೆದು ತೊಳಪ ತುಹಿನಾಚಲದೊಳ್ ॥
ದೊರೆಯಾದಂ ಕಪಿಲ ಮುನೀ ।
ಶ್ವರನೊದವಿದ ಪಲಿತಮಯ ಜಟಾಮಂಡಲದಿಂ ॥೧೨೧॥

ಉ॥ ನೀನೆ ಜಗತ್ತ್ರಯೈಕ ಗುರುವೆಂದು ಷಡಕ್ಷರ ಮಂತ್ರ ಘೋಷ ಮಾ ।
ಳಾನಕ ಮಂಗಳ ಧ್ವನಿಗಳುಣ್ಮಿ ಕರಂ ಸ್ಥಿರಮಪ್ಪಿನಂ ತಪ ॥
ಶ್ರೀ ನಲವಿಂದೆ ತಾನೆ ಪರೆಕಟ್ಟಿದ ಪಟ್ಟವಿದೆಂಬಿನಂ ತ್ರಿರೇ ।
ಖಾ ನಿಚಿತಂ ವಿಭೂತಿಯೆಸೆದತ್ತು ಮುನೀಂದ್ರ ವಿಶಾಲ ಫಾಲದೊಳ್ ॥೧೨೨॥

ಕಂ॥ ನಯನಾಮಳ ಪುತ್ರಿಕೆಗಳ್ ।
ನಿಯಮದೆ ನೆಲಸಿರ್ಪ ಸಿತಕರಾಸನ ಯಷ್ಟಿ ॥

1. ಸಾ. 2. ದಿಗ್ಚಕ್ರಮಂ

ದ್ವಯಮೆನಿಸಿ ಪಳತಮಯ ಲೋ।
ಮಯುತ ಭ್ರೂಯುಗಳವೆಸೆದುವಾ ಮುನಿಪತಿಯಾ ॥೧೨೩॥

ಪ್ರಕಟ ತರ ಶಾಂತ ರಸ ಶು।
ಕ್ತಿಕೆಗಳಿವೆನೆ ಚಿತ್ಸುಖಾಶ್ರುಜಲ ವಿಲುಳಿತಮಾ॥
ಗಿ ಕರಂ ಸೊಗಯಿಪುದಾ ಮುನಿ।
ಮುಕುರನ ಕಮನೀಯ ನಯನ ಸರಸಿರುಹಂಗಳ್ ॥೧೨೪॥

ಧ್ಯಾನದಿ ನೆನೆಸುಂ ನೆಲಸಿದ।
ನೂನ ಭ್ರೂಮಧ್ಯದುಜ್ವಳ ಜ್ಯೋತಿ ಶ್ರೀ॥
ಸ್ಥಾನದ ಮೂಲಸ್ತಂಭಂ।
ತಾನೆನೆ ನಾಸಿಕೆ ವಿರಾಜಿಕುಂ ಮುನಿಪತಿಯಾ ॥೧೨೫॥

ಸೊಗಯಿಸಿ [ತತ್ತ್ವವಚೋ] ಮಾ।
ಳೆಗಳನಿತುಂ ತೊಳಗಿ ಬೆಳಗಿ ಜಿಹ್ವಾಗ್ರದೊಳಾ॥
ಳಿಗಳಾಗಿ ತೊಳಪುವೆನೆ ನಗೆ।
ಮೊಗದೊಳ್ ದಶನಂಗಳೆಸೆದುವಾ ಮುನಿಪತಿಯಾ ॥೧೨೬॥

ವಿಳಸದಮುಲಾಸ್ಯ ವಿಧು ಮಂ।
ಡಳದ ಕಳಾವಳಿಯ ಬೀಳಲೋಳಿಗಳೆನೆ ಪ॥
ಜ್ಜಳಿಪುವೆನಸುಂ ಮುನೀಂದ್ರನ।
ವಿಳುಳಿತ ದಶನೋಸ್ರ ಕೂರ್ಚಸಿತ ಲೋಮಂಗಳ್ ॥೧೨೭॥

ಚಾರು ತಪೋರಾಶಿಯ ರ।
ಕ್ಷಾರೇಖಾ ಸಿಕರಮಿಂತಿದೆನೆ ತನ್ಮುನಿ ವೃಂ॥
ದಾರಕನ ಕೊರಲೊಳೆಸೆದುದು।
ನೀರೇರುಹದಮುಳ ಸೂತ್ರಮಯದುಪವೀತಂ ॥೧೨೮॥

ಭವಕೂಪದ ಘನಮಾಯಾಂ।
ಬುದನಾಗಳೆ ತವಿಸಿದಮುಳ ಮೌಕ್ತಿಕ ಘಟ ಚ॥
ಕ್ರಮದೆನಲೆಸೆದುದು ಕರ ಪ।
ಲ್ಲವದೊಳ್ ಮೆರೆವಕ್ಷಮಾಲೆ ಮುನಿಪೋತ್ತಮನಾ ॥೧೨೯॥

ನತ ನಾಭಿಯಧೋಸ್ಥಾನದ।
ಶತದಳ ಕಂಜಾವೃತಾಚ್ಛ ಕುಂಡಳಿಯೆ ನಿಜ॥
ಪ್ರತಿಮಾನದೆನೆ ಮುನಿಪನ।
ಸಿತ ಸರಸಿಜ ತಂತು ರಚಿತ ಮೇಖಲೆಯೆಸೆಗುಂ ॥೧೩೦॥

ಅರಿಷಡ್ವರ್ಗಮನುಪಸಂ।
ಹರಿಸಿದನೆಂದಳ್ಕಿ ಮನಮನುಳಿದಾ ರಾಗಂ॥
ಚರಣಮನೆ ಶರಣ್ಬೊಕ್ಕಂ।
ತಿರೆ ತನ್ಮುನಿಪಾಂಘ್ರಿಪಲ್ಲವಂ ಕರಮೆಸೆಗುಂ ॥೧೩೧॥

ಥಳಥಳಿಪ ತನ್ಮುನೀಶನ।
ವಿಳಸದ್ದಶನಾಂಶು ಮಾಲೆಯಂ ದುಗ್ಧಮೆಗೆ॥
ತ್ತೆಳಸಿದ ಮರಾಳಮೆನೆ ಪ।
ಜ್ಜಳಿಪುದು ಪಳುಕಿನ ಕಮಂಡಲಾ ಬಲಗೆಲದೊಳ್ ॥೧೩೨॥

ಮತ್ತಮಾ ಮುನೀಂದ್ರಂ ಮೇರುಗಿರಿಯಂತೆ ಮೇಕಲಾಲಂಕೃತನುಂ, ವಿಬುಧ ಕುಜದಂತೆ ದೂರೀಕೃತ ತಮನುಂ, ವರ್ಷಾಕಾಲದಂತೆ ರಜೋರಹಿತನುಂ, ಶೈಲೇಂದ್ರನಂತೆ ಸತ್ವಮಯ ಸ್ವಾಂತನುಂ, ಪಾರಾವಾರದಂತೆ ನೀರಾಗನುಂ, ದಕ್ಷಿಣ ದಿಕ್ತಟದಂತೆ ಯಮಸಮೇತನುಂ, ಆರೋಪಿತ ಚಾಪದಂತೆ ಧರ್ಮಶ್ರೇಷ್ಠೋರುಗುಣನುಂ, ಸುಧಾಸೂತಿಬಿಂಬದಂತೆ ಪರಮಹಿಮಾಸ್ಪದನುಂ, ಪ್ರೌಢಾಮಾತ್ಯನಂತೆ ಗೂಢ ಮಂತ್ರನುಂ, ದುರ್ಮುಖ ಧನುರ್ಧರನಂತೆ ಮಾಟ್ಪ ಅನುಸಂಧಾನ ಮನಸ್ಕನುಂ, ಪರಿಜ್ಞಾತ ಷಡಕ್ಷರನಾಗಿಯುಂ ಪಠಿತ ಸಕಲಶಾಸ್ತ್ರನುಂ, ಕ್ಷಮಾಧರನಾಗಿಯುಂ ಶತಕ್ರತುಮಿತ್ರನುಂ, ವಿಭೂತಿ ಭೂಷಿತನಾಗಿಯುಂ ವ್ಯಪಗತರಾಗನುಂ, ಜಟಾನ್ವಿತನಾಗಿಯುಂ ಮಕುಟ ಜಾತನುಂ, ಗುರುವಾಗಿಯುಂ, ಪುರಸ್ಥಿತ ಮಂಗಳ ಬುಧ ಪ್ರಜನುಮಾಗಿರ್ಪನಂತುಮಲ್ಲದೆಯುಂ—

ಚಂ॥ ಪಿರಿದನಿವಾರ್ಯಮಪ್ಪ ನಿಜಜಾತಿ ವಿರೋಧಮನೆಯ್ದೆ ಬಿಟ್ಟು ಕೇ।
ಸರಿಕರಿ ಕೇಕಿಕಂಚುಕಿ ಚಮೂರು ಮೃಗಂಗಳ ಮೊತ್ತಮಟ್ತಿಯಿಂ॥
ಪರಿಮರಿಯಾಡುತಿರ್ಪುವಸಿತುಂ ನೆರೆದಾವನದೊಳ್ ನಿರಂತರಂ।
ಕರಮನೆ ತನ್ಮುನೀಂದ್ರನ ತಪೋಮಹಿಮೋನ್ನತಿಯಿನ್ನದೆಂತುಟೋ ॥೧೩೩॥

ಮ॥ಸ್ರ॥ ಕಪಿಗಳ್ ಪೂಗೊಯ್ದು ದೇವಾರ್ಚನೆಗನವರತಂ ತಂದು ತಂದೀವುವೆಂದುಂ।
ದ್ವಿಪಯೂಥಂ ಪುಷ್ಪವಾಟೀ ತತಿಗೆಱೆವುದು ಕೈಕೈಗಳಿಂದೂಡಿ ತಂದ॥
ಜ್ಜಪಯಃಪೂರಂಗಳಂ ತದ್ವನ ವಿಹಗಕುಲಂ ಹೋಮ ಸಪ್ತಾರ್ಚಿಯಂ ಪೆ।
ರ್ಚಿಪುವುದ್ಯತ್ಕಂದ ಮೂಲಂಗಳನಗುಳ್ದು ಕುಡುತ್ತಿರ್ಪುವಾ ಕ್ರೋಡಜಾತಂ॥

ಚಂ॥ ಪರಿವಿಡಿಗೆಯ್ದಿ ತಾಪಸ ಕುಮಾರಕರೊಳ್ ಸ್ಮೃತಿಯೂಥಮಂ ನಿರಂ।
ತರವೊಡಗೂಡಿ ವಾದಮನೆ ತಪ್ಪದೆ ಮಾಳ್ಪುದು ತತ್ಸಮೀಪದೊಳ್॥
ಚರಿಯಿಸುತಿರ್ಪ ರಾಜಶುಕ [ಬಾಲಕ] ಜಾಲಕಮೆಂದೊಡಾ ಮುನೀ।
ಶ್ವರನ ಮಹತ್ವಮಂ ಗಣಿಯಿಸಲ್ ಫಣಿಪಂಗಮಳುಂಬಮಲ್ಲವೇ ॥೧೩೫॥

ಕಂ॥ ತಾರೆಗಳ ಬಳಗವೊಳಕೆ
ಯ್ದೋರಂತಿರೆ ಬಳಸಿ ಮುನಿಗಳಿರೆ ತಾನಿರ್ದಂ॥
ಚಾರುತರ ಕಳೆಗಳಿಂ ವಿ।
ಸ್ತಾರಿಪ ವರಚಂದ್ರನಂತೆ ಕಪಿಲಮುನೀಂದ್ರಂ ॥೧೩೬॥

ಇಂತೆಸೆಯುತಿರ್ದ ತನ್ಮುನೀಂದ್ರಂಗೆ ಕೃತ ನಮಸ್ಕಾರನಾಗಿ ಬರುತಿರ್ಪಾಗಳ್—

ಮ॥ ಇದಿರೊಳ್ ತಾನೆಸೆದಿರ್ದುದಾವನ ಸಮೀಪ ಕ್ಷೋಣಿಯೊಳ್ ಕಾಂತಿ ಸಂ।
ಪದದಿಂ ಕೌತುಕ ರೂಪದಿಂ ಪುದಿದ ಕಾಂತಾಕಾರವೊಂದಂತದಂ॥
ಪದೆದಾಸೀಕ್ಷಿಸುವಲ್ಲಿ ಸಿನ್ನ ದನಿಯಂ ಕೇಳ್ದಿರ್ದನೆಂದಾ ನೃಪಂ।
ಮುದದಿಂ ಪೇೞ್ದೊಡೆ ಕೇಳ್ದು ಮಂತ್ರಿತಲೆದೂಗುತ್ತಿರ್ದನಾಶ್ಚರ್ಯದಿಂ ॥೧೩೭॥

ಮ॥ ಕನಸೆಂದಿಂತುಟು ದೇವ ಪೇೞ್ವರಿದು ಸತ್ಯಂ ಬಲ್ಲೆನಾಂ ಚಿತ್ರಕೂ।
ಟ ನಗೇಂದ್ರಂ ವಿಪುಳಾತರಂಗಿಣಿ ಮಹಾಪ್ರಖ್ಯಾತ ಸಾರ್ವರ್ತುಕಂ॥
ಬನಮುಂಟಲ್ಲಿಯೆ ವಿಶ್ವನಾಥನಧಿದೈವಂ ಕೇವಲ ಜ್ಞಾನಮಂ।
ಡನನಪ್ಪಾ ಕಪಿಲ ವ್ರತೀಶನಿರುತಿರ್ಪಂ ತಾಪಸ ವ್ಯಾವೃತಂ ॥೧೩೮॥

ಎಂದು ಮತಿವರ್ಧನಂ ಪೇೞೆ ಕೇಳ್ದು ಕೌತುಕಮನಪ್ಪುಕೆಯ್ದು ಮಣಿ ಕುಂಡಲ ಮಹೀಪಾಲಂ ನಿರ್ವರ್ತಿತ ಪ್ರಭಾತ ಕ್ರಿಯಾಕಳಾಪನಾಗಿ—

ಮ॥ ಇದುತಾಂ ವಿಸ್ಮಯಮುಲ್ತೆ ಕಂಡ ಕನಸುಂ ತಾಂ ಸತ್ಯಮಾಮೆಲ್ಲ ಪೋ।
ಗಿ ದಿಟಂ ನೋಡುವಮೆಂದು ಮಂತ್ರಿವೆರಸಾಗಳ್ಪಟ್ಟ ದಂತೀಂದ್ರ ಕುಂ॥
ಭದೆಪ್ರೀರ್ವಾಸನ ಭೂಷನಾಗಿ ಪೊಜಮಟ್ಟಂ ಬೇಗದಿಂ ಕೌತುಕಾ।
ಸ್ಪದಚಿತ್ತಂ ಮಣಿಕುಂಡಲ ಕ್ಷಿತಿಧರಂ ಚಾತುರ್ಬಲ ವ್ಯಾವೃತಂ ॥೧೩೯॥

ಮ॥ಸ್ರ॥ ಸುಕೃತ ಶ್ರೀ ಭಾಮಿನೀ ಮಂಗಳ ಮಣಿಮಯ ದಾಮಂ ಬುಧಸ್ತುತ್ಯ ಸಾಹಿ
ತ್ಯ ಕಳಾಸಂದೋಹ ಸೀಮಂ ಸುಕವಿ [1][ಸುರನಟೀ ಲಾಸ್ಯ] ಪುಷ್ಪಾವಳೀ ಕ॥
ಲ್ಪ ಕುಜಾರಾಮಂ ಸ್ವಕೀಯಾನ್ವಯ ಕುವಲಯ ಸಂಸ್ತೋಮ ಸೋಮಂ ಸದಾಚಾ।
ರ ಕನಲ್ಲಕ್ಷ್ಮೀಲಲಾಮಂ ಕೃತಿರತಿರಮಣಂ ಸಾಹಸೋದ್ದಾಮ ಭೀಮಂ ॥೧೪೦॥

ಇದು ಕಮನ ಕುಧರೇಂದ್ರ ನಂದನಾಲೋಲ ಲೋಚನ ಚಕೋರೀಸುಖಪ್ರದ
ಪರಮಾಂಗ ಕಾಂತಿಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ವಿಶ್ವನಾಥ ಚರಣನಖ ಮಯೂಖೋತ್ಫುಲ್ಲ ಮಲ್ಲಿಕಾಶೇಖರ
ಕಂದರ್ಪರೇಖಾ ಪ್ರಭಾವ ಪ್ರಸಂಗೋಲ್ಲಸಿತ
ಕುಸುಮಾವಳಿ ಮಹಾ ಪ್ರಬಂಧದೊಳ್
ಮಣಿಕುಂಡಲ ಮಹೀಪಾಲಕ
ಸ್ವಪ್ನದರ್ಶನ ವನವರ್ಣನಂ
ಪ್ರಥಮಾಶ್ವಾಸಂ

---

1. ಶರಕೀರಾಕ್ಷ

# ದ್ವಿತೀಯಾಶ್ವಾಸಂ

ಕಂ॥ ಶ್ರೀ ಸಕಲ ಕಲಾವಾಸಂ।
ವಾಸವ ವಿಭವಂ ಭವಾಂಘ್ರಿ ಭಕ್ತಿ ಲಸಲ್ಲೀ॥
ಲಾಸಾರಂ ಸಾರಸ್ವತ।
ಭಾಸುರ ಮಣಿ ದಾಮನತುಳ ಭುಜಬಲ ಭೀಮಂ ॥೧॥

ಮತಿವರ್ಧನೋಪದಿಷ್ಟದಿ।
ನತಿ ಮುದದಿಂ ಕತಿಪಯ ಪ್ರಯಾಣಮನಾ ಭೂ॥
ಪತಿ ಪೋಗುತ್ತಿರೆಯಿರೆ ಮುಂ।
ದೆ ತೋಱಿದುದು ಮಿಸುಪ ಚಿತ್ರಕೂಟ ನಗೇಂದ್ರಂ ॥೨॥

ಮ॥ ವಿದಿತಂ ಕಣ್ಬೊಲನಾಗೆ ಕಂಡಿದುವೆ ದಲ್ ತಾಂ ಚಿತ್ರಕೂಟಾದ್ರಿಯಂ।
ತದು ತಾನಾ ವಿಪುಳಾಸ್ರವಂತಿ ವನಮಾ ಸಾರ್ವರ್ತುಕಂ ಮತ್ತಮಂ॥
ತದು ವಿಶ್ವೇಶ್ವರ ದೇವತಾಯತನಮಾ ಚೂತಂ ಮುನಿಶ್ರೇಷ್ಠನಿ।
ರ್ಪ್ಪುದೆ[1]ನಲ್ ಮಂತ್ರಿಯ ಮಾತುಗೇಳುತುಮಣಂ ಗರ್ವಾಂಧನುರ್ವೀಶ್ವರಂ॥೩॥

ಕಂ॥ ಇದು ದಲ್ ವಿಸ್ಮಯಮಾಂ ಕಂ।
ಡುದು ಕನಸೆಂದಿಂತು ಬಗೆದಿರಲ್ ಪ್ರತ್ಯಯಮಾ॥
ದುದೆನುತ್ತುಂ ಭೂವರನೆ।
ಯ್ದಿದನಾಗಳ್ ತದ್ವನೋಪಕಂಠೋರ್ವರೆಯಂ ॥೪॥

ಮ॥ [2]ಪೆಸರ್ವೆತ್ತಾ ವನದಗ್ರ ಧಾರಿಣಿಯೊಳತ್ಯಾಶ್ಚರ್ಯದಿಂ [3][ಭಾವಿಪೊಂ]।
ದೆಸಕಂಬೆತ್ತ ವಿಚಿತ್ರಭಂಗಿ ರಸಭಾವ ಸ್ಫೂರ್ತಿಗಳ್ ಪೆರ್ಚ್ಚೆ ಜೀ॥
ವಸಮಾವೇಷ್ಟಿತಮಿಂತಿದೆಂಬ ತೆಱದಿಂ ಕಣ್ಗಂ ಮನಕ್ಕಂತು ಮೋ।
ಹಿಸಿ ಮುಂದಿರ್ದ ಶಿಲಾವಧೂ ಪ್ರತಿಮೆಯಂ ಕಂಡಂ ಮಹೀವಲ್ಲಭಂ ॥೫॥

---

1. ಸನ್ಮಂ. 2. ಪಸು. 3. (ಪಾ.)—ರಾಜಿಪೊಂ, ಶೋಭಿಪೊಂ.

ಅದಂ ಕಂಡು ನರೇಂದ್ರಂ ಕರೀಂದ್ರದಿಂದವನಿತಳಕ್ಕವತರಿಸಿ ಮಂತ್ರಿ ಮುಖ ಮನಭೀಕ್ಷಿಸಿದಾಗಳ್—

ಕಂ॥ ತಾನಿಲ್ಲಿ ಮುನ್ನಮಿಲ್ಲಿದ।
ನಾನಱಿಯೆಂ ಚಿತ್ರ[ವಿೞ] ವಿಚಿತ್ರದ ಪೆಣ್ ತಾ॥
ನೇನೆಂದು ಬಂದುದಿಂ[1]ತೆನೆ।
ತಾನುಂ ವಿಸ್ಮಯದೆ ನೋಡುತಿರ್ದಂ ಸಚಿವಂ ॥೬॥

ಗಣಿಯಿಪೊಡಿದು ಸೌಂದರ್ಯದ।
ಕಣಿಯೆನುತುಂ ನೋಡಿ ತಚ್ಛಿಲಾ ಪುತ್ರಿಕೆಯಂ॥
ಮಣಿ ಕುಂಡಲಮಾಂದೋಳಿಸೆ।
ಮಣಿಕುಂಡಲ ನೃಪತಿ ತೂಗಿದಂ ಮಸ್ತಕಮಂ ॥೭॥

ಮ॥ ಮದನಂ ಮೂಜಗಮುಂ ಗೆಲಲ್ ಪದೆಪಿನಿಂ ತಾಂ ಮಾಡಿ ಮೆಯ್ವೆರ್ಚೆ ನೋ।
ಡಿದ ಸಂಮೋಹನ ಕಾಂತಿ ತನ್ನ ಮನಮಂ ಸಂಮೋಹಿಸಲ್ ಪೋಲ್ತ ಭಾ॥
ವದಗುರ್ವಂ ರತಿ ಕಂಡು ಕೋಪದೊಳೆ ಶಾಪಂಗೊಟ್ಟಳಂತಕ್ಕುಮ।
ಲ್ಲದೊಡೇಕಾಯ್ತು ಶಿಲಾಸ್ವರೂಪಮೆನುತುಂ ನೋಡುತ್ತುಮಿರ್ದಂ ನೃಪಂ ॥೮॥

ಕಂ॥ ಮನುಜಾಕೃತಿಯಾಗಿರ್ದುಂ।
ವನಿತಾಕೃತಿಯಂ ನಿರೀಕ್ಷಿಸುತ್ತೆನಸುಂ ತಾ॥
ನನಿಮೇಷಾಕೃತಿಯಾದಂ।
ತನಿಶಂ ಮಣಿಕುಂಡಲಾಂಕನೀಕ್ಷಿಸುತಿರ್ದಂ ॥೯॥

ಮ॥ ಇದು [ದಲ್ ಕಾರು]ಗಳಿಂದೆ ಕಂಡರಿಸಿ ರೂಪಾಶ್ಚರ್ಯಮಾಗಲ್ಕೆ ಮಾ।
ಡಿದ ಪೆಣ್ಣಾಕೃತಿಯಲ್ತು ಭಾವಿಪೊಡಪೂರ್ವಂ ಪೂರ್ವ ಸಂಬಂಧಮಿಂ॥
ತಿದದೇಕಿಲ್ಲಿರುತಿರ್ಪ್ಪುದೆಂಬ ತೆಱನಂ ಕೇಳ್ವಂ ತ್ರಿಕಾಲೈಕ ಸಂ।
ವಿದನಪ್ಪಾ ಕಪಿಲ ಪ್ರತೀಶ್ವರನೊಳೆಂದಲ್ಲಿಂ ನೃಪಂ ಪಿಂಗಿದಂ ॥೧೦॥

ತಳರ್ದಲ್ಲಿಂ ಬರುತಿರ್ಪಿನಂ ಬನದೊಳಾ ಬಾಲಾತಪ ಶ್ರೀಯನ।
ಸ್ಖಲಿತಂ ಬೀಱುವ ಚಂಕನತ್ಕನಕ ತತ್ಕೂಟಂಗಳಿಂ ತೋರ್ಪ್ಪುದ ನಿ॥

1. ತಿನಿ.

ರ್ಮಳ ವಿಶ್ವೇಶ್ವರ ದೇವತಾಯತನಮುಂ ಕಂಡಾತ್ಮ ಹಸ್ತಾಬ್ಜ ಕು।
ಟ್ಮಳ[ಮಂ ಶೀರ್ಷದೊಳಿಟ್ಟದೇಂ ನಲಿದನೋ ಭೂಪಂ]ಮನೋಲೀಲೆಯಿಂ॥೧೧॥

ವಿನಯಂ ಕೈಮಿಗೆ ಕೈಗಳಂ ಮುಗಿದು ಪೊಕ್ಕಾ ವಿಶ್ವನಾಥಂಗೆ ಭೋಂ।
ಕನೆ ಸದ್ಭಕ್ತಿ ಭರಾವನಮ್ರ ಮುಕುಟಂ ತಾನಾಗಿ ನಾನಾ ವಿನೂ॥
ತನ ರತ್ನಂಗಳ[ಕಾಂತಿಯಿಂದವನಿಯಂ ನೀರಾಜಿತಂಗೆಯ್ದು] ಭೂ।
ವನಿತೇಶಂ ಮಣಿಕುಂಡಲಂ ಪಡೆದನತ್ಯಾನಂದ ಸಂದೋಹಮಂ ॥೧೨॥

ಲಲಿತ ರಗಳೆ॥ ದೇವ ನಿಖಿಲಾಮರ ಪ್ರಣತ ಪದಪದ್ಮ ಜಯ।
ದೇವ ಮುನಿಜನ ಹೃದಯ ಸರಸಿರುಹ ಸದ್ಮ ಜಯ।
ಹರಿ ಹರ ಹಿರಣ್ಯಗರ್ಭತ್ರಯಾಕಾರ ಜಯ।
ಸುರುಚಿರ ಸ್ಥಿತಿ ಲಯೋತ್ಪತ್ತಿ ಪ್ರಕಾರ ಜಯ।
ಕಮಲಸಖ ಕುಮುದಸಖ ಪವನಸಖ ನೇತ್ರ ಜಯ।
ಕಮನೀಯ ಶಶಿಕಳಾದೃತ[1][ಸಿತಚ್ಛತ್ರ] ಜಯ।
ನಿರವದ್ಯ ವರಕಳಾಂಚಿತ ಪಂಚವದನ ಜಯ।
ನಿರತಿಶಯ ಸಕಲ ಶುಭ ಸಂಘಾತ ಸದನ ಜಯ।
ನಿಖಿಳ ಭುವನೋಪಚಿತ ಬೃಹದುದರ ಕುಹರ ಜಯ।
ಅಖಿಳ ಪರಮಾಣುಗತ ನಿಖಿಲ ಕಲಕಂಠ ಜಯ।
ಸತತಮುಗಜಾ ಯೋಗ ಕೇಳೀ ವಿಲೋಲ ಜಯ।
ಶಶ್ವದವಿಭೇದ ಪ್ರಯುಕ್ತ ವೈಕುಂಠ ಜಯ।
ಭುವನ ಪೀಠಕ ನಟನ ಕೃತ ಸೂತ್ರಧಾರ ಜಯ।
ವಿವಿಧ ಲೋಕಾಲೋಕ ಸಮುದಯಾಧಾರ ಜಯ।
ಕಲಿ ವಿಮೋಹನ ಮದನ ವಿಧ್ವಂಸ ಲೀಲ ಜಯ।
ಕರಣ ಪ್ರಪಂಚಗತ ಗುಣಗಣಾತೀತ ಜಯ।
ಕರಣೀಯ ಭೂತಾಂತರಂಗ ಭವಭಕ್ತ ಜಯ।
ಭಕ್ತಜನ ವಾಂಛಿತ ಫಲಪ್ರದ ವಿನೋದ ಜಯ।
ನಿಷ್ಕಳ ನಿರಾಮಯ ನಿರಂಜನ ನಿರಸ್ತ ಜಯ।
ನಿಷ್ಕಪಟ ಭಕ್ತಿ ವಿಸ್ತರ ಶಿರೋನ್ಯಸ್ತ ಜಯ।
ಶ್ರುತಿ ಸಮುದಯ ಸ್ತುತಿಗಣಾಗಮ್ಯಮಾನ ಜಯ।
ಉದ್ಭೂತ ವಿಜಯ ಜಯ ಮಾಯಾ ವ್ಯಪೇತ ಜಯ।
ಜಾಯಾ ಸಮೇತ ಜಯ ಪ್ರಕಟ [2]ನಿಜರೂಪ ಜಯ।

1. (ಪಾ.)—ಶಿರೋಭೂಷ, ಶಿತಭೂತಿಗಾತ್ರ, ಶುಭಗಾತ್ರ 2. ಹಿಮ್ನೋಪ.

ಸಕಲ ಸ್ವರೂಪ ಜಯ ಪಾವನ ಸುಮೂರ್ತಿ ಜಯ।
ವರ ನಿಖಿಳತತ್ವ ಜಯ ನಿರವಧಿ ಮಹತ್ತ್ವ ಜಯ।
ವಿಶ್ವ ಜಗದೀಶ ಜಯ ಶಾಶ್ವತ ನಿವಾಸ ಜಯ।
ದೇವಾಧಿನಾಥ ಜಯ ಶ್ರೀ ವಿಶ್ವನಾಥ ಜಯ।

ಅಂತು ವಿಶ್ವನಾಥ ಸ್ತುತಿಗೆಯ್ದು—

ಮ॥ ಶಿವಪೂಜೋತ್ಸವ[1]ಲಕ್ಷ ಯುಕ್ತ ಹೃದಯಾಂಭೋಜಾತನಾದಾ ಬಟಿ।
ಕ್ಕವನೀಶಂ ಮಣಿಕುಂಡಲಂ ಮುದದೆ ವಿಶ್ವೇಶಂಗೆ ಬಿಟ್ಟೊಂಡು ತ॥
ದ್ಭವ ಗೇಹಾಗ್ರದ ಚೂತದಲ್ಲಿ ಮುನಿ ವೃಂದಾಕೀರ್ಣನಾಗಿರ್ದ ದಿ।
ವ್ಯ ವಿಭಾಸ್ವತ್ಕಪಿಲಾಹ್ವಯ ಪ್ರತಿಪನಂ [ಕಂಡಂ] ಮನೋರಾಗದಿಂ ॥೧೩॥

ಕಂ॥ ಆ ಕಪಿಲ ಮುನೀಂದ್ರನ ವಿಮ।
ಳಾಕೃತಿಯಂ ಕಾಣಲೊಡನೆ ಮಣಿಕುಂಡಲ ಭೂ॥
ಮೀಕಾಂತಂ ಮುದಮಾಂತಂ।
ರಾಕಾಶಶಿಯಂ ನಿರೀಕ್ಷಿಸಿದ ಜಲಧಿಯವೋಲ್ ॥೧೪॥

ಚಂ॥ ಮುನಿಪನ ರೂಪನೀಕ್ಷಿಸಲೊಡಂ ಮಣಿಕುಂಡಲ ಭೂಮಿಪಾಲ ಲೋ।
ಚನಮೆನಸುಂ ಮುದಶ್ರು ಜಲ ಮಿಶ್ರಿತಮಾದುದು ಗಾತ್ರದಲ್ಲಿ ಪಾ॥
ವನ ಪುಳಕಾಂಕುರಾಕುಳಿತಮಾದುದೆನಲ್ ಪೆಱತೇಂ ಜಗತ್ರಯಾ।
ಭಿನುತ[ಮಹಾನು]ಭಾವರನಭೀಕ್ಷಿಸೆ ಸಂಮುದಮಾಗದಿರ್ಪುದೇ ॥೧೫॥

ಮ॥ ಪಿರಿದುಂ ಕಣ್ಗನುರಾಗಮಾಯ್ತು ತನುಗಂ ದಂಡಪ್ರಣಾಮೋತ್ಸವೋ।
ತ್ಕರಮಂ ಮಾಡುವೆನೀಗಳಾನೆನುತುಮೆಯ್ದುಂದಾ ಮಹೀಶಂ ಮುನೀ॥
ಶ್ವರ ಪಾದಾಂಬುರುಹಕ್ಕೆ ತಾನೆರಗಿದಂ ತನ್ಮೌಳಿ ಮುಕ್ತಾಳಿಯಿಂ।
ಚರಣಾಗ್ರಾವನಿಯಲ್ಲಿ ಪೂವಲಿಯ ಚೆಲ್ವಂ ಚಿತ್ರಿಸುತ್ತಿರ್ಪಿನಂ ॥೧೬॥

ಚಂ॥ ವಿಪುಳ ಸುಭಕ್ತಿಯಿಂದೆಱಗಿದಾ ಮಣಿಕುಂಡಲ ಭೂಮಿಪಂಗೆ [2]ತ।
ತ್ಕೃಪೆಯ ಸುಧಾಪ್ರವಾಹ ತತಿಯೋ ಹೃದಯಾಂಬುಜ ಪೀಠದೊಳ್ ವಿರಾ॥
ಜಿಪ ವಿಮಳಾತ್ಮ ದೀಧಿತಿಯೊ ಪೇಟ್ಟೆನೆ [3]ಸಂದ ಮರೀಚಿ ಪೊಣ್ಮೆ ತಾಂ।
ಕಪಿಲ ಮುನೀಶ್ವರಂ ಪರಸಿದಂ ಪರಮೋತ್ಸವ ಸಂಪದಾಸ್ಪದಂ ॥೧೭॥

1. ಲಕ್ಷ್ಯ 2. ಸ 3. ತಂ

ಕಂ॥ ಪದೆಪಿಂದಾ ಸಮಯದೊಳು।
ಣ್ಮಿದುದಾಶೀರ್ವಾದ ನಾದಮಾ ಮುನಿಪತಿಯಾ॥
ವದನದಿನಾಗಳ್ ಪಿರಿದೊಂ।
ದೊದವಿದ ಕಾರುಣ್ಯ ಜಲಧಿ ಘೋಷದ ತೆಱದಿಂ ॥೧೮॥

ಆ ಸಮಯದೊಳ್—

ಕಂ॥ ಆ ಪರಮವ್ರತಿಪನ ತ।
ದ್ಭ್ರೂಪಲ್ಲವ ಸಂಜ್ಞೆಯಿಂದೆ ಶಿಷ್ಯರೊಳೊರ್ವಂ॥
ತಾಪಸನಾ ಮಣಿಕುಂಡಲ।
ಭೂಪತಿಗಿರದಿತ್ತನಾಗಳುಚಿತಾಸನಮಂ ॥೧೯॥

ಚಂ॥ ಗುರು ವಿನಯ ಪ್ರಭಾವ ಹೃದಯಂ ಮಣಿಕುಂಡಲ ಭೂಪನೊಲ್ಲ[1]ದಾ।
ಸ್ಫುರದುಚಿತಾಸನಾಂತಿಕ ಧರಾತಳದಲ್ಲಿ ಸಮಂತು ಸಾರ್ದು ಕು॥
ಳ್ಳಿರಲನುಗೆಯ್ಯೆ ಕಂಡು ಕಪಿಲವ್ರತಿಪಂ ತನಗಾಜ್ಞೆಯಿಟ್ಟೊಡಂ।
ನಿರವಿಸೆ ಮಾರಲಣ್ಮದೆಯಳಂಕೃತ ವಿಷ್ಟರನಾದನಱ್ರ್ತಿಯಿಂ ॥೨೦॥

ಆಗಳಾ ಮತಿವರ್ಧನಂ ಕೃತಪ್ರಣಾಮನುಂ ಪರಿಲಬ್ಧಾಶೀರ್ವಾದನುಮಾಗಿ ಕೆಲದೊಳ್ ಕುಳ್ಳಿರೆ—

ಕಂ॥ ಮುನಿಪತಿಯ ದಯಾಮೃತ ಸೇ।
ಚನದಿಂ ಮಿಗೆ ನೊಳೆತ ಪುಳಕ ಚಯದಿಂದೆಳ ಮು॥
ತ್ತಿನ ಕಂಚುಕಮಂ ತಾಳ್ದಿದ।
ನೆನೆ ಮಣಿಕುಂಡಲ ನೃಪಂ ವಿರಾಜಿಸುತಿರ್ದಂ ॥೨೧॥

ಇಂತು ಕಡವಲರ್ದಂತೆ ಕಂಟಕಿತ ಕಳೇಬರನಾಗಿ ಮಣಿಕುಂಡಲ ನೃಪ ಚಕೋರಂ ಆ ಮುನೀಂದ್ರನ ವದನ ವಿಧುಬಿಂಬಮಂ ನಿರೀಕ್ಷಿಸುತ್ತುಮಿರ್ಪಿನ ಮಾಗಳ್—

ಕಂ॥ ಆ ಮಣಿಕುಂಡಲ ನೃಪನ ಮ।
ನೋಮುದಮಪ್ಪಧಿಕ ಭಕ್ತಿಗಂ ತನ್ಮುಖದೊಳ್॥

1. ದತಿತ್ಸುತ.

ಪ್ರೇಮಂ ಕೈಮಿಗೆ ಕಪಿಲ ಮ।
ಹಾಮುನಿಪಂ ಕುಶಲ ವಾರ್ತೆಯಂ ಬೆಸಗೊಂಡಂ ॥೨೨॥

ಆಗಳ್—

ಮ॥ ಎಲೆ ಕಾರುಣ್ಯ ಮಹಾಸುಧಾರ್ಣವ ಮುನೀಂದ್ರೋತ್ತಂಸ ನಿಮ್ಮಂಘ್ರಿ ಮಂ।
ಗಲ ನೀರೇರುಹ ಯುಗ್ಮಮಂ ಕನಸಿನೊಳ್ ನಾಂ ಕಂಡೆನಿಂತಿಲ್ಲಿ ಕ॥
ಣ್ಮಲರಾಜಿಲ್ ನೆಱೆ ಕಂಡೆನೀಗಳೆನಲೆಂತುಂ ಪೇೞ್ವಿನ್ನೆನ್ನೊಳಂ।
ಸಲೆ ಸುಕ್ಷೇಮಮುಮಾವಗಂ ಪ್ರಮುದಮುಂ ನಿತ್ಯಂ ಮನೋರಾಗಮುಂ ॥೨೩॥

ಎಂದಿಂತು ನುಡಿಯೆ—

ಚಂ॥ ವಿನಯಮನಪ್ಪುಕೆಯ್ದು ಮಣಿಕುಂಡಲ ಭೂರಮಣಂಗೆ ಹರ್ಷಮ।
ಪ್ಪಿನಮೆನಸುಂ ವಿನೂತ್ನ ಶಿವಧರ್ಮ ಕಥಾವಳಿಯಂ ಶಿವೋಕ್ತಿಯ॥
ಪ್ಪನುಪಮ ಸತ್ಪುರಾಣ ತತಿಯಂ ಶಿವತತ್ತ್ವ ನಿಜಸ್ವರೂಪಮಂ।
ಮನವೊಸೆದಿಂತು ಪೇೞುತುಮಿರಲ್ ಪದೆಪಿಂ ಕಪಿಲ ವ್ರತೀಶ್ವರಂ ॥೨೪॥

ಆ ಮುನೀಶ್ವರಂ ಪೇೞ್ವ ಪರಮ ತತ್ತ್ವಪ್ರಸಂಗದಿಂ ಚಿತ್ಸುಖ ಸುಧಾರಸ ತರಂಗಿಣೀ ತರಂಗಿತಾತ್ಮನಾಗಿಯುಂ ಮಣಿಕುಂಡಲಂ ಮಾಣದೆ ತನ್ಮುಖೇಂದು ಮಂಡಲದ [ಕಮ]ನೀಯ ಕೃಪಾಮೃತಾಸಾರಮಂ ಕಣ್ಗುಡಿತೆಗಳಿಂದೀಂಟುವಂತೆ ನಿಷ್ಪಂದ ಪಕ್ಷ್ಮನಾಗಿ ಹರ್ಷಾಶ್ರುಜಲ ವಿಲೋಚನಂ ನೀಡುಂ ನೋಡುತ್ತುಮಿರೆ—

ಚಂ॥ ಎಲೆ ಮಣಿ ಕುಂಡಲ ಕ್ಷಿತಿಪ ನಿನ್ನ ಮನಂ ಪೆಱತೊಂದು ಕಾರ್ಯಮಂ।
ಸಲೆ ತಿಳಿವಟ್ಟಿಯಪ್ಪುದಿದು ತೋರ್ಪುದಸಂಶಯಮಿಲ್ಲಿ ನೀಂ ನಿರಾ॥
ಕುಳದಿನದಂ ಸಮಂತು ಬೆಸಗೊಳ್ಳೆನುತುಂ ವಿಳಸದ್ದಯಾಮೃತಾ।
ಕಲಿತ ವಚಃಕಳಾಪನೊಲವಿಂ ನುಡಿದಂ ಕಪಿಲ ವ್ರತೀಶ್ವರಂ ॥೨೫॥

ಕಂ॥ ಅತುಳ ದಯಾಸಿಧಿ ಕಪಿಲ।
ವ್ರತಿಪನ ವಚನ ಪ್ರಸಾದಮಂ ಪಡೆದು ಮನೋ॥
ಗತಮಂ ಬಿನ್ನವಿಪುತ್ಕಂ।
ಠತೆಯಂ ಮಣಿಕುಂಡಲ ಕ್ಷಿತೀಶಂ ತಳೆದಂ ॥೨೬॥

ಶಾ॥ ಈ ಸಾರ್ವರ್ತುಕ ನಾಮಧೇಯ ವನದೊಳ್ ಸೌಂದರ್ಯದಿಂದೊಂದಿ ಸ।
ದ್ಭಾಸಂಬೆತ್ತು ತದಂಗನಾಪ್ರತಿಮೆ ಕಣ್ಗೊರಂತಿರಾಶ್ಚರ್ಯ ಶೋ॥
ಭಾ ಸಂಪತ್ತಿಯುನೀಯುತಿರ್ಪ್ಪದದು ತಾಂ ಪಾಷಾಣಮಲ್ಲಂತು ನಿಂ।
ದಾ ಸಂಬಂಧಮದೇನದಂ [1]ಬೆಸಸೆಲೈ ಕಾಲತ್ರಯಾಭಿಜ್ಞ ನೀಂ ॥೨೭॥

ಇಂತು ಬಿನ್ನವಿಸಿದಾಗಳ್—

ಚಂ॥ ಮಿಸುಗೆ ದಿಶಾಳಿಯೊಳ್ ಶಶಿಯ ತಣ್ಗದಿರ್ಗಳ್ ಕುಡಿಯಿಟ್ಟುವೆಂಬಿನಂ।
ಪಸರಿಸಿ ದಂತಕಾಂತಿ ಸಭೆಯಂ ಬೆಳಗುತ್ತಿರಲಾ ಮುನೀಶ್ವರಂ॥
ನಸು ನಗುತೆಂದನಾಗಳೆಲೆ ಭೂಪತಿ ಪೇಟ್ದೊಡಮಾ ಶಿಲಾವಧೂ।
ವ್ಯಸನ ಕಥಾ ಪ್ರಪಂಚವೆನಸುಂ ಪಿರಿದೇವುದು ತದ್ವಿಚಾರಣಂ ॥೨೮॥

ಕಂ॥ ಅದು ಪಿರಿದಾದೊಡಮೇಂ ಪರ।
ಮ ದಯಾನಿಧಿ[ಮುನಿ]ಲಲಾಮ ನೀನೊಲವಿಂ ಪೇ॥
ಟ್ವುದಱಿಂ ತಿಳಿಯದಿರದು ತಡೆ।
ಯದೆ ನೆಱೆ ಪೇೞಲ್ಕೆವೇೞ್ಕುಮೆನಗೆಸೆ ಜನಪಂ ॥೨೯॥

ಉ॥ ಆ ಮಣಿಕುಂಡಲ ಕ್ಷಿತಿವರಂ ಪಿರಿದಾಗ್ರಹಮುಣ್ಮೆ ತನ್ನ [2]ಚೇ।
ತೋಮುದದಿಂ [3]ಪುನಃಪ್ರಣತನಾಗಲೊಡಂ ಕಪಿಲ ವ್ರತೀಶ್ವರಂ॥
ಪ್ರೇಮಮನಪ್ಪುಕೆಯ್ದು ಕುಸುಮಾವಳಿಯೆಂಬ ಶಿಲಾವಧೂ ನಿಜೋ।
ದ್ದಾಮ ಕಥಾಪ್ರಪಂಚಮನವಂ ನೆಱೆ ಪೇಟ್ವುದನಂತೊಡರ್ಚಿದಂ ॥೩೦॥

ಅದೆಂತೆಂದೊಡೆ—

ಮ॥ ಜಳದಾಧ್ವಸ್ಥಳದಂತೆ ವಿಶ್ರುತ ವಿಚಿತ್ರೋದ್ಯದ್ದ್ವಿಶಾಖಾ ಕುಜಾ।
ವಳಿಯಿಂದಂ ವಿಕಸತ್ಸಿತಾಬ್ಜ [4]ಶಿಖಿ ಸೌಮ್ಯೋರುತ್ಸವದಿಂ ಹಂಸ ಮಂ॥
ಡಳ ಶೋಭಾನ್ವಿತದಿಂ ಧ್ರುವ ಪ್ರಮುಖ ಧಿಷ್ಣ್ಯಗ್ರಾಮ ಸದ್ಧಾಮ ಮಂ।
ಡಳದಿಂದೊಂದು ವಸಂತಕಾಖ್ಯ ವಿಷಯಂ ತಾನಿರ್ಪ್ಪುದುರ್ವೀಪತೀ ॥೩೧॥

ಕಂ॥ ಜಳರುಹನಾಭನ ಶಯ್ಯಾ।
ತಳದಂತದು ತಾನನಂತಪುರಮಯಮೆಂದುಂ॥

1. ಬೆಸಸೆಲೇ ಕಾಲತ್ರಯ ಜ್ಞಾತಕಾ. 2. ತೇಜೋ. 3. ಘನ. 4. ಸರ.

ನಳಿನಾಂಬಕನವತಾರಾ ।
ವಳಿಯಂತಾರಾಮ ಮಯಮಮಂ ತದ್ವಿಷಯಂ ॥೩೨॥

ಕಂ॥ ಸರಸಿಜ ಸಂಭವನಂತಿರೆ ।
ಶರನಿಧಿಯಂತಿರೆ ಕಳಾಪದಂತಿರೆ ದಿವಸೇ ॥
ಶ್ವರನಂತಿರೆ ಹರಿ ಭುಜದಂ ।
ತಿರೆ ಗೋಮಂಡಲಮಯಂ ವಸಂತಕ ವಿಷಯಂ ॥೩೩॥

ಚಂ॥ ಪುರತತಿ ರತ್ನಗೋಪುರಮಯಂ ಪುರಗೋಪುರದಾ ಪುರಸ್ಸರಂ ।
ಧರೆ ಸರಸೀಮಯಂ ಸರಸಿಗಳ್ ಪುದಿದಚ್ಛ ಸರೋಮಯಂ ಸರಂ ॥
ಸರಸ ಸರೋಜ ಸಂಕುಲಮಯಂ ಸರಸೀರುಹಮಾಲೆ ಷಟ್ಪದೋ ।
ತ್ಕರಮಯಮಾಗೆ ಕಣ್ಗೊಳಿಪುದಾ ವಿಷಯಂ [ಸತತಂ] ಮಹೀಪತೀ ॥೩೪॥

ಬಹುವನ ಭಾಸುರಂ ಶರಧಿಯಂತೆ ವಿರಾಜಿತ ವಾಹಿನೀಕುಳಾ ।
ವಹಮದು ಭಾರತಾಜಿಮುಖದಂತೆ ಸದಾ ಬುಧಶೋಭಿತಂ ನವ ॥
ಗ್ರಹ ಗಣದಂತೆ ಸಂತತ ಮಹಾದ್ವಿಜ [1]ಮಂಡಲ ಮಂದಿರಂ ಪಯೋ ।
ರುಹದಳ ನೇತ್ರನಂತೆ ಪರಿಭಾವಿಪೊಡಾ ವಿಷಯಂ ಮಹೀಶ್ವರಾ ॥೩೫॥

ಮತ್ತಮಾ ವಸಂತಕ ವಿಷಯಂ ನಿಶೀಥಿನಿಯಂತೆ ತೀವ್ರಕರ ಬಾಧಾವ್ಯಪೇತಮುಂ, ದಿನಾಬ್ಜ ಲಕ್ಷ್ಮಿಯಂತೆ ರಾಜಪೀಡಾ ರಹಿತಮುಂ, ವಿದ್ಯಾಧರ ವೃಂದದಂತೆ ಕುಮಾರ್ಗ ವರ್ಜಿತಮುಂ, ಚಂಪಕ ಶ್ರೀಯಂತೆ ಮಧುಪಾವಳಿ ವಿದೂರಮುಂ, ಪನಸಾವನಿಜದಂತೆ ವ್ಯಪೇತ ಪ್ರಸೂನಮುಂ, ಸಂಕ್ರಂದನಾಸ್ಥಾನದಂತೆ ಸುಧರ್ಮಾಧಿಷ್ಠಿತಮುಂ. ದಿವಿಜ [ಗಜಶುಂಡಾ]ದಂಡದಂತೆ ದಾನ ಪ್ರಸಂಗ ಶೋಭಿತಮುಂ, ಶಶಿಧರನಂತೆ ವೃಷೋಮಾಭಿರಾಮಮುಂ, ನಭೋಂಗಣದಂತೆ ಮಂಗಳ ಬುಧ ಗುರು ಪ್ರಭಾಭಾಸುರಮುಂ, ವಾರಾಶಿಯಂತೆ ವಿವಿಧ ಕವಿಕುಲಾಕೀರ್ಣಮುಂ, ವಿದಳಿತ ರಣಾಂಗಣದಂತೆ ವಿಪ್ರೋತ್ಕೀರ್ಣ [2]ಶರಪ್ರಕರಮುಂ. ಬಡಬಾಮುಖದಂತೆ ಅನಂತ ಭೋಗಿ ಜನ ಭರಿತಮುಂ, ಕ್ಷೀರ ವಾರಾಶಿಯಂತೆ ಅನಂತ ಪುರುಷೋತ್ತಮೋಪೇತಮುಂ, ವತ್ಸರಾವಳಿಯಂತೆ ಬಹುಧಾನ್ಯ ಬಂಧುರಮುಂ, ವಿಚಾರಂ ತತ್ತ್ವದೊಳ್, ಮಂದಪ್ರಚಾರಂ ವಾರವೃಂದದೊಳ್. ಅವಿಚಾರ ವೃತ್ತಿಯನಲನೊಳ್. ವಿರುದ್ಧ ಭಾವಮಲಂಕಾರದೊಳ್, ಲಘುತ್ವಂ ಛಂದೋಗಣಂಗಳೊಳ್, ಕರ್ಕಶತ್ವಂ ಕಮಲ ನಾಳಂಗಳೊಳ್, ಕಳಾಹೀನತೆ ಪ್ರತಿಪತ್ಸುಧಾಮರೀಚಿಯೊಳ್. ಪ್ರಭಂಜನ

1. ಸುಂದರ. 2. ಸುರ.

ಪ್ರಿಯತ್ವಂ ಪಾವಕನೊಳ್, ಕುಟಿಲತೆ ಲತಾವಳಿಯೊಳ್, ಮಧುಸೇವೆ ಷಟ್ಪದಂಗಳೊಳ್, ಗೋತ್ರವಿರೋಧಂ ಸುತ್ರಾಮನೊಳ್, ಮಿತ್ರ ವೈರಂ ಕೈರವಂಗಳೊಳ್, ವಿಪರೀತತೆ ಫಲಿತ ಭೂಜಾತದೊಳ್, ಕುಮುದಂ ಸರಸೀಸಮಾಜದೊಳಲ್ಲದಿಲ್ಲ ಮಂತುಮಲ್ಲದೆಯುಂ—

ಮ॥ ಎನಸುಂ ಕಾಂಚನ ಸಂಚಯೋದ್ಭವಮುದಂ ದುತ್ತೂರದೊಳ್ [1]ಭಂಗವ ।
ರ್ತನವಂಭೋಧಿಯೊಳುಚ್ಚ ನೀಚತೆ ವಿಪಂಚೀ ವಾದಸೋದ್ಭೂತ ನಿ ॥
ಸ್ವನದೊಳ್ ವಿಶ್ರುತಿ ಕಾತ ಚೂತಕುಜದೊಳ್ ನಿಸ್ತೇಜಮುಸ್ತಾದ್ರಿ ಕೂ ।
ಟ ನಿಷಣ್ಣಾರ್ಕನೊಳಲ್ಲದಿಲ್ಲ ಪೆಱತಿನ್ನಾ ಭೂಮಿಯೊಳ್ ಭೂಪತೀ ॥೩೬॥

ಕಂ॥ ಖರ ದಂಡಂ ಸರಸಿರುಹಾ ।
ಕರದೊಳ್ ಮಾತ್ರಾಧಿಕಂ ಪ್ಲುತಾಕ್ಷರ ತತಿಯೊಳ್ ॥
ಪಿರಿದುಂ ಗುಣಹೀನತೆ ಸುರ ।
ವರ ಬಾಣಾಸನದೊಳಲ್ಲದಿಲ್ಲಾ ನಾಡೊಳ್ ॥೩೭॥

ವಕ್ರಗತಿ ಫಣಿಯೊಳನ್ಯೋ ।
ನ್ಯ ಕ್ರಮಣಂ ರಮಣಿಯರ ಕುಚದ್ವಯದೊಳ್ ವೈ ॥
ರ ಕ್ರಮಮದು ಕೇಸರಿ ಕರಿ ।
ಚಕ್ರದೊಳೊದವಿರ್ಪುದಲ್ಲದಿಲ್ಲಾ ನಾಡೊಳ್ ॥೩೮॥

ಚಂ॥ ಫಳಭರ ಶೋಭೆಯಂ ನೆಱೆ ನಿರೀಕ್ಷಿಸುತಿರ್ದಪುದೆಯ್ದೆ ತೀವಿ ತ ।
ವ್ಮೊಳೆ ತಿಳಿದಿರ್ಪ ತಜ್ಜಲದೊಳೆಂಬಿನಮಾ ಕಣಿಶಂಗಳೋಳಿ ಸಂ ॥
ಗಳಿಸಿದ ಭಾರದಿಂ[2]ದೆಱಗಿ ಕಂಪಿನ ಸೊಂಪನೆ ಸಾಱಿ ಬೀಱುವೊ ।
ಳ್ಗಳವೆಯ ಕೆಯ್ವೊಲಂ ಸಲೆ ವಿರಾಜಿಪುದಾ ವಿಷಯಾಂತರಾಳದೊಳ್ ॥೩೯॥

ಕಂ॥ ಎಱಗಿದ ಮಱಿ ಗಿಳಿಗಳ ನು ।
ಣ್ಗಱಿದುಱುಗಲ ಪೊಳೆಪಿನಿಂ ಮೃಗಾವಳಿಗೆನಸುಂ ॥
ಮಿಱುಗುವ ಪೊಸಪಸುರ್ವುಲ್ಲಿಂ ।
ಬೆಱಕಮನೊದವಿಸುವುವಲ್ಲಿ ಕಳವೆಯ ಕೆಯ್ಗಳ್ ॥೪೦॥

1. ಸಂ. 2. ದೊ.

ಅನಿಲ ಹತಿಯಿಂದೆ ಕಳವೆಯು ।
ತೆನೆದುಜುಗಲೊಳೊಱೆತು ಸುರಿವ ಪಾಲಂ ಶಿಶು ಹಂ ॥
ಸ ನಿಕಾಯವಿಾಂಟೆ ಪಾಳಿಯು ।
ನನವರತಂ ಬಿಡದು [1]ಶಾಳಿಯುಂ ಪಾಲಿಪವೋಲ್ ॥೪೧॥

ಮ॥ ಕನಕಾಪೇಕ್ಷೆಯಿನಾವಗಂ ಖನನಮುಂ ಮಾಳ್ಪುದ್ಗತಾಯಾಸಿಗ ।
ಳ್ಗೆನಸುಂ ಸತ್ಕರಣಾತ್ಮೆಯಾಗಿ ಬೆಳೆದಳ್ ಭೂದೇವಿ ತಾನಿಲ್ಲಿ ಸಾ ॥
ಲ್ವನಿತಂ ಪೊಂಬೆಳಸಂ ದಲೆಂಬ ತೆಱದಿಂ ಪೊಂಗೊಂಚಲಿಂದೆಯ್ದೆ ಹೇ ।
ಮ ನಿಭ ದ್ಯೋತದಿನೊಪ್ಪುತಿರ್ಪ ಕಳಮಕ್ಷೇತ್ರಂಗಳಾ ದೇಶದೊಳ್ ॥೪೨॥

ಚಂ॥ ಕರತಳ ತಾಡನಂ ಬೆರಸು ಭೋರ್ಗರೆದೆಲ್ಲುಲಿಯುತ್ತುಮಿರ್ಪ ಪಾ ।
ಮರಿಯರ [2]ಜೋಲ್ವ ಮೆಯ್ದೆಱೆಗಳಂ ನೆಱೆ ಭಾವಿಸಿ ಬೀಡುವೆತ್ತು ಬಿ ॥
ತ್ತರಿಸುವ ದಾಡಿಮ ವ್ರಜಮಿದೆಂಬಭಿಶಂಕೆಯನಪ್ಪುಕೆಯ್ದು ಪೀ ।
ವರ ಕುಚದಲ್ಲಿ [3]ತಾಗಲನುಗೆಯ್ದುದು ಕೀರಕುಳಂ ನಿರಾಕುಳಂ ॥೪೩॥

ಮ॥ ಮುದ[ದಿಂ ಪಾಮರಿಯರ್ ತೊಳಪ್ಪ] ಕಳಮ ಕ್ಷೇತ್ರಾಧಿದೈವಕ್ಕೆ ಮಾ ।
ಡಿದ ಪೂಜಾವಳಿಯಂತೆ ಶಾಳಿಗಳ ಸುತ್ತಲ್ ಶೋಭೆವೆತ್ತಿರ್ಪ ಕೊ ॥
ರ್ವಿದ ಪೊಂಬಾಳೆಯ ಪಣ್ಣ ಬಿಣ್ಗೊನೆಗಳೊತ್ತಂಬಂ ಕರಂ ಬೀಱುತಿ ।
ರ್ಪುದು ಪಾಂಥರ್ಕಳ ಕಣ್ಗೆ ಕೂಡೆ [4]ತಣಿವಂ ಚಿತ್ತಕ್ಕಲಂಪಂ ನೃಪಾ ॥೪೪॥

ಉ॥ ಕೀರ ಕಿಶೋರ ಚಂಚು ಹತಿಯಿಂದೆನಸುಂ ಕಣಿಶಾಗ್ರ ಭಾಗದಿಂ ।
ಭೋರನೆ ಸೋರ್ವ ಪಾಲ್ಬೊನಲೆ ಕಾಲ್ಬೊನಲಾಗೆ ಜಲ ಪ್ರವಾಹಮುಂ ॥
ಪಾರದೆ ಸಂತತಂ ಬೆಳೆಯುತಿರ್ಪ ಮಹಾಕಳಮ ಪ್ರಸಿದ್ಧ ಕೇ ।
ದಾರ ಸಮಾಜದಿಂ ಮಿಗೆ ವಿರಾಜಿಪುದಾ ವಿಷಯಾಂತರಂ ನೃಪಾ ॥೪೫॥

ಚಂ॥ ಮಿಸುಗುವ ನಾಳಿಕೇರವೆಳನೀರ ಪೊನಲ್ ಕದಳೀ ಸಮಾಜದಾ ।
ರಸದ ಪೊನಲ್ ಸವೇಕ್ಷುಗಳ ಸೋರ್ವ ಪೊನಲ್ ಕಣಿಶಂಗಳಗ್ರದಿಂ ॥
ದೊಸರ್ದುಗುತಿರ್ಪ ಶಾಳಿಗಳ ಸಾಲ್ವೆರಸೊಂದರೊಳೊಂದು ಕೂಡುತುಂ ।
ಪಸರಿಸಿ ಸಂತತಂ ಪರಿಯುತಿರ್ಪುವು ಕಣ್ಗೊಳಿಕೆಯ್ವೊಲಂಗಳೊಳ್ ॥೪೬॥

1. ಶಾ. 2. ದೋರ. 3. ತೇಗಿದನುಗೆಯ್ದು ಕಿರಾತ. 4. ದ.

ಮ॥ ಧುರದೊಳ್ ಶಕ್ರನಸೊಕ್ಕಲಿಕ್ಕಿ ಸೆಱೆಗೆ ಕಪ್ಪಂಗೊಂಡ ಪೀಯೂಷಮಂ।
ಭರದಿಂದೀಂಟುವಲಂಪಿನಿಂ ಗರುಡನಂತಶ್ಯುದ್ಧಿಯಂ ಮಾಡಲೆಂ॥
ದಿರದುದ್ಗಾರಿಸಿದೊಂದು ಪಿತ್ತರಸವೆತ್ತಂ ತಳ್ತವೋಲ್ ಪಚ್ಚನಾ।
ಗಿ ರಸಾವೇಷ್ಟಿತ ಮುಷ್ಟಿಮಾತ್ರದೆಳವುಲ್ಲಲ್ಲಲ್ಲಿ ವಿಭ್ರಾಜಿಕುಂ ॥೪೭॥

ಮೊಲೆಯಿಂಪಂಬಿರಿವಿಟ್ಟು ಪಾಲುಗುತುವೋರಂತಿರ್ದೊಡಂ ತಮ್ಮ ಕೆ।
ಚ್ಚಲ ಕೊರ್ಬೋಯ್ಯನೆ ಕುಂದದಂ[1]ತೆ ಕೆಲನಂ ನುರ್ಗೊತ್ತೆಯುಂ ಕಾಲಗ॥
ಲ್ದಲಸಂಬೆತ್ತಿರೆ ಪೋಗದಂತು ನಡೆಯಂ ಮಾಣ್ದಿಂತು ಮೆಲ್ಕೊತ್ತುತುಂ।
ಸಲೆ ವಿಭ್ರಾಜಿಸುತಿರ್ಪುದಾ ವಿಷಯದೊಳ್ ಧೇನು ವ್ರಜಂ ಭೂಭುಜಾ ॥೪೮॥

ಪೊಲನೆಲ್ಲಂ ಸಲೆ ಸರ್ವಸಸ್ಯಮಯಮುರ್ವೀಜಾತಮೆಲ್ಲಂ ಲಸ।
ತ್ಫಲ ಸಂತಾನಮಯಂ ಲತಾ ಪ್ರತತಿಯೆಲ್ಲಂ ಪುಷ್ಪ ಮಾಲಾಮಯಂ॥
ಜಲಮೆಲ್ಲಂ ಸರಸೀಜ ರಾಜಿಮಯಮೂರೂರೆಲ್ಲಮುತ್ಕೃಷ್ಟ ಮಂ।
ಗಲ ಶೋಭಾಮಯಮಾವಗಂ ಜನಮದೆಲ್ಲಂ ಹರ್ಷಚೇತೋಮಯಂ॥೪೯॥

ಕಂ॥ ಆ ವಿಷಯಂ ಕಾಮನ ವಾ।
ರ್ತಾವಿಷಯ[2]ಕಗೋಚರಂ ವಸಂತಕಮೆಂದೆಂ॥
ಬಾ ವಿಷಯದ ಜನಕೀಕ್ಷಿಪೊ।
ಡಾ ವಿಷಯಂ ತಾನಗೋಚರಂ ಯುಗಯುಗದೊಳ್ ॥೫೦॥

ಚಂ॥ ಅನವರತಂ ಸ್ವಕಾರ್ಯವಶದಿಂಡೆಡೆಯಾಡುತುಮಿರ್ಪ ಪಾಂಥರೊಳ್।
ಜನಿಯಿಸಿದಾ ಪಥಶ್ರಮವನಾಱಿಸಲಲ್ಲಿಯ ಬಟ್ಟೆವಟ್ಟೆಯೊಳ್॥
ವನಜಜಸಿಟ್ಟ ತಣ್ಣೆಲಲ ಶಾಲೆಗಳೆಂದೆನೆ ಗುಜ್ಜುಗೊಂಡು ಮಾ।
ವಿನ ಮರನೋಳಿ ಪರ್ಣ ಫಲದಿಟ್ಟಳದಿಂದೆಸೆದಿರ್ಪುದಾವಗಂ ॥೫೧॥

ಮ॥ ಸರಸಂಬೆತ್ತೆಳಗೊಂಬು ಸಾರ್ದ ಪದವಿಲ್ಲುನ್ಮತ್ತ ಭೃಂಗ ವ್ರಜಂ।
ತಿರಿ ತಳ್ತಿರ್ಪುವ ನುಣ್ದಾಳಿದಿರ್ದೊಣೆ ಲಸತ್ಪುಷ್ಪಾಳಿ ಬಾಣಂಗಳಾ॥
ಗೆ ರತೀಶಂ ಪರಿಪಂಥಿ ರೂಪನಿಸುತಿರ್ಪಂ ಮಾರ್ಗಮಾರ್ಗಾಮ್ರ ಭೂ।
ಮಿ ರುಹಾನೀಕಮನೊತ್ತುಗೊಂಡು ಬಿಡದಧ್ವಶ್ರಾಂತರಂ ಪಾಂಥರಂ ॥೫೨॥

1. ಜ ಕೆಲನಂ ಪೇರ್ಗೊತ್ತೆಯುಂ ಕಾಲ ಗಲ್ಲಲಸ. 2. ಕ್ಕಗೋಮಿಕ್ಷಿ ಪೋದಾ.

ವರ ಖರ್ಜೂರ ರಸಂ ನವೇಕ್ಷು[1]ಕ ರಸಂ ದ್ರಾಕ್ಷಾರಸಂ ನಾಳಿಕೇ।
ರ ರಸಂ ಚಂದನದಣ್ಪಿನಿಂ ಕುಳಿರ್ವ ತಣ್ಪಿಂ ಪೆತ್ತು ತೀವಿರ್ಪ ಬಂ॥
ಧುರ ಜಾಂಬೂನದ ಕುಂಭ ಸಂಕುಳ ಸಮುತ್ಕೀರ್ಣ ಪ್ರಪಾ ಶಾಲೆಗಳ್ ।
ಪಿರಿದುಂ ರಂಜಿಪುವೆತ್ತ ನೋಡುವೊಡ[2]ಮತ್ತಂ ಮಾರ್ಗಮಾರ್ಗಂಗಳೊಳ್ ॥೫೩॥

ಪದೆಪಿಂ ಸೀರೆಱೆವಾ ಲತಾಂಗಿಯ[3]ರ ಸಲ್ಲಾವಣ್ಯ ಪೀಯೂಷ ಪೂ।
ರದವೋಲ್ ಪೊಣ್ಮಿ ಪೊದಳ್ದು ಸೀಳ್ದ [4][ವಿಳಸತ್ಪೂಗೀ] ಕದಂಬಂ ನಿವೇ॥
ಷ್ಟಿತ ಖರ್ಜೂರ ಕುಜವ್ರಜಂ ಭರಿತ ಭಾಸ್ವಲ್ಲುಂಗ ಸಂಘಾತಮಿಂ।
ತತಿ ವಿಭ್ರಾಜಿಸುತಿರ್ಪುದಲ್ತೆ ವಿಪುಳೋದ್ಯಾನಂ ಧರಾಧೀಶ್ವರಾ ॥೫೪॥

ಕಂ॥ ಪರಿವೃತ ವಿದ್ರುಮನಂತಾ।
ಹರಿಯುಕ್ತಂ ಶಿಖಿ ಸಮೇತಮುತ್ಕಳಿಕಾಗ್ರಂ॥
ಪುರದುಪವನಂ ಸುಧಾ ಸಾ।
ಗರಮುಂ ಸಲೆ ಮಿಗುವುದಪ್ರಬಾಧ್ಯಮಭಂಗಂ ॥೫೫॥

ಮಿಸುಗುವ ಪಚ್ಚೆಯ ರತ್ನ।
ಕ್ಕೆ ಸುವರ್ಣದ ಪರಿಧಿಯಾದ ತೆಱದಿಂ ಮಿಱುಗು॥
ತ್ತಿಸೆವುದು ವನ ವಳಯದೊಳಾ।
ರಸ ಪಕ್ವದ ಕಣಿಶ ಕಳಮ ಕೇದಾರ ಕುಳಂ ॥೫೬॥

ಮ॥ ಜಳಯಂತ್ರಂಗಳ ರತ್ನಪುತ್ರಿಕೆಗಳೆತ್ತಂ ತಳ್ತ ತಾರಾಕುಳಾ।
ವಳಿಯಿಂ ಸೋರ್ವಮಳೇಂದುಕಾಂತ ಸಲಿಲೋದ್ಯತ್ಪೂರ ಕಾಸಾರ ಸಂ॥
ಕುಳದಿಂ ಶಕ್ರಧನುಸ್ಸಮಾಜದಗೆಯೆಂಬಂತೊರ್ಮೆಯುಂ ನೀಳ್ದ ನಿ।
ರ್ಮಳ ನಾನಾಮಣಿ ರೋಚಿಯಿಂ ಕೃತಕ ಶೈಲಶ್ರೇಣಿ ಕಣ್ಗೊಪ್ಪುಗುಂ ॥೫೭॥

ಚಂ॥ ತರಣಿ ಕರೋತ್ಕರಾಹತಿಗೆ ತಕ್ಕ ತಮಂ ನೆಱೆ ಬಂದು ತನ್ನನಾ।
ವರಿಸಿದುದೆಂಬಿನಂ ಬೆಳೆದು ಕತ್ತಲಿಸಿರ್ಪೆಲೆವಳ್ಳಿ ಪೆತ್ತ ಭೂ॥
[5]ತರುಣಿಗೆ ಕಾಣ್ಕೆಯುಂ ಕುಡುವವೋಲ್ ನೆಲನಂ ಸಲೆ ಮೋದುತಿರ್ಪ ಪೀ।
ವರ ಫಲ ಮಾತುಳುಂಗ ತತಿ ಸಂತತಮೊಪ್ಪುವುದಾ ವನಾಂತದೊಳ್ ॥೫೮॥

1. ವ. 2. ಮ. 3. ಲ. 4. ವಿಳಸಜ್ಜಂಬೂ. 5. ರಮೊಗೆನೆ.

ಮ॥ ಫಳ ಸಂಭನ್ನಮನಪ್ಪುಕೆಯ್ದು ಭರದಿಂದಾಂದೋಳಿಸುತ್ತಿರ್ಪ ಕೋ।
ಮಳ ಖರ್ಜೂರ ಕುಜಾಳಿಯಿಂ ತೊನೆವ ಪೂಗವ್ರಾತದಿಂ ಮುನ್ನಮು॥
ಗ್ಗಳಮಾ ಕಾಣ್ಕೆಯನೀವೆನೆಯ್ದೆ ಗಗನಶ್ರೀಗೆಂಬವೋಲ್ ತೋರ ಕಾ।
ಯ್ಗಳ ತಾಳದ್ರುಮ ಮಾಳೆ ನೀಳ್ದೆಸೆವುದೋರಂತಾ ವನೋಪಾಂತದೊಳ್ ॥೫೯॥

ಕಂ॥ ಸ್ಮರರಾಜನ ಜಲಯಂತ್ರೋ।
ತ಼್ಕರಮೆನೆ ಪೆರ್ಗಾಯ್ಗಳಿಂದಮೆಳನೀರಂ ಬಿ॥
ತ್ತರದೆ ಸುರಿಯುತ್ತುಮಿರ್ಪುವು।
ನಿರಂತರಂ ಬನಕೆ ನಾಳಿಕೇರ ಕುಜಂಗಳ್ ॥೬೦॥

ಅಲರಂಬನ ತೂಣೀರ।
ಕ್ಕಲರ್ಗಣೆಯುಂ ಪಡೆದು ಕುಡದ ತಪ್ಪಿಂಗಾಯಿತ್ತಾ॥
ಫಲ ಭಾರಮೆನಿಸಿ ಕಾತೆಳ।
ವಲಸುಗಳೆಸೆದಿರ್ಪುವನಿಶಮಾ ಪುರ ವನದೊಳ್ ॥೬೧॥

ಮ॥ ಪದೆಪಂ ಪೆತ್ತು ಕಱಂಗುತಿರ್ಪಳಿಗಳೊಳ್ಮೆಯ್ವೆಡ್ದು ಕೈ ಸಂದ ಕೈ।
ಮದಮುಂತಾ ಪಣೆಯಲ್ಲಿ ಸೋರ್ವ ಸೊನೆಗಳ್ ಕಿರ್ಗೊಂಬು ಕೂರ್ದಾಡೆ ಷ॥
ಟ್ಪದ ಝುಂಕಾರಮುದಗ್ರ ಡಿಂಡಿಮ ರವಂ ತಾನಾಗೆ ಕಂದರ್ಪನ।
ಗ್ಗದ ಮತ್ತೇಭದವೋಲ್ ವಿರಾಜಿಪುದು ಚೂತವ್ರಾತಮುದ್ಯಾನದೊಳ್ ॥೬೨॥

ಕಂ॥ ಲಲಿತ ಕಿಸಲಯಮೆ [1]ಬಾಸಂ।
ಮಲರಕ್ಷತಮಳಿರುತಿ[2]ಶ್ರುತಿ ಸ್ವರಮಾಗಲ್॥
ಸಲೆ ಕಂತುವಿನ ಪುರೋಹಿತ।
ಕುಲಮೆನಿಸಿತು ಬನದ ಬಾಲ ಚೂತವ್ರಾತಂ ॥೬೩॥

ಉ॥ ನೆಟ್ಟನಧೀಶನಪ್ಪ ಕುಸುಮಾಸ್ತ್ರ ಮಹೀರಮಣಂಗೆ ಕಾಣ್ಕೆಯಂ।
ಕೊಟ್ಟೆಱಗುತ್ತುಮಿರ್ಪ ತೆಱದಿಂದೆಸೆದಿರ್ಪುವು ತೋರಗಾಯ್ಗಳಿಂ॥
ದಿಟ್ಟೆಳಮಾದ ಬಿಣ್ಗೊನೆಯ ಭಾರದಿನುರ್ಬಿಗೆ ಜೋಲ್ದು ಬಾಳೆಗಳ್।
ದಿಟ್ಟಿಗಲಂಪನೋಲಗಿಸುತಿರ್ಪುವು ತದ್ವನದೊಳ್ ನಿರಂತರಂ ॥೬೪॥

1. ಬಾಸರ।ವಲ. 2. ಶ್ವರಶ್ವರ.

ನಾಡೆ ಕಜಿಂಗಿ ಪಣ್ತೆಸೆಯುತಿರ್ಪರಸೇಜಾಲ ಮಾಲೆ ಬೀಡೆವ।
ಣ್ಣೊಡೆ ಪೊದಟ್ದು ದಾಡಿಮುದ ತಿಂತಿಣಿ ಪಣ್ಗೊನೆಗುರ್ಪಿ ನಿಂದು ತೂ॥
ಗಾಡುವ ಕೌಂಗಿನುರ್ಬು ತನಿವಣ್ಗಳಸಾಂತೆಸೆವೀಳೆಯೋಳಿಯು।
ಚ್ಚಾಡಿವುದಾ ಪುರೋಪವನದೊಳ್ ನಡೆ ನೋಟ್ಪರ ಕಣ್ಗಳಂ ನೃಪಾ ॥೬೫॥

ಮ॥ಸ್ರ॥ ಬಿಸಿಲುಂ ಬಿಳ್ದಿಂಗಳುಂ ಕಟ್ಟಿಲೆಯುಮೆನಸುವೊಂದಿಪ್ಪುವೆಂಬಂದದಿಂ ಕ।
ಟ್ಟಿಸಿದಾ ಮಾಣಿಕ್ಯದಿಂದೂಪಳದುರು ಹರಿನೀಲಾಶ್ಮದುತ್ಸಾನ ಸೋಪಾ॥
ನ ಸಮುದ್ಯತ್ಕಾಂತಿಯಿಂ ಕೌತುಕ[1]ಮೊದವಿಸೆ ಶೋಣಾಬ್ಜ ಶುಭ್ರಾಬ್ಜ ನೀಲಾ।
ಬ್ಜ ಸಮಾಜಾಕೀರ್ಣ ಕಂಜಾಕರತತಿ ವಿಪುಳೋದ್ಯಾನದೊಳ್ ರಮ್ಯಮಾದಂ ॥೬೬॥

ಮ॥ ತನಿವಣ್ಣಿಂ ನೆಜ[2] ತಳ್ತು ಕಟ್ಟಲಿಸುತಿರ್ಪುತ್ತುಂಗ ಜಂಬೂ ಕುಜಾ।
ಳಿ ನವಾ[2]ಬ್ದಾವಳಿಯೆಂದು ನರ್ತಿಸುವ ಕೇಕೀ ಸಂಕುಲಂ ಸೋರ್ವ ತೆಂ॥
ಗಿನ ಪೆಗ್ಗಾಯೆಳನೀರ ಧಾರೆಗಳನಂಭೋಜಾತ ನಾಳಂಗಳೆಂ।
ದು ನಿತಾಂತಂ ಸವಿಗರ್ಚ್ಚಲುಜ್ಜುಗಿಪ ಹಂಸಾನೀಕಮುದ್ಯಾನದೊಳ್ ॥೬೭॥

ಕಂ॥ ವಿರಹಿಗಳಸಿಸುವ ಮದನನ।
ಶರ ಮುಕ್ತೋದ್ಭೂತ ಝುಂಕೃತಿ ಸ್ವರಮೆಂಬಂ॥
ತಿರೆ ಮೊಜ[3]ವ ಮಧುಕರಂಗಳ।
ಸುರುಚಿರ ಝುಂಕಾರ[3]ಭರಿತಮಾ ವಿಪುಳವನಂ ॥೬೮॥

ಅಲರ್ಗಣೆಗಳನಲರಂಬಂ।
ಗೊಲವಿಂದೀಯಲ್ಕೆ ವಿಹಿತಮೆನೆ ಕುಟ್ಮಳ ಸಂ॥
ಕುಲಮಿಳಿತ ಮಲ್ಲಿಕಾವಳಿ।
ಸಲೆ ಸೊಗಯಿಪುದೆತ್ತ ನೋಟ್ಪೊಡಂ ತದ್ವನದೊಳ್ ॥೬೯॥

ಚಂ॥ ಎಲರಲೆಪಿಂ ಸಮಂತೊಸರ್ವ ಪಕ್ವಫಲಂಗಳ ಸಾರಮಿಾಂಟಿದಾ।
ನಲವಿನೊಳಗ್ಗಳಂ ಗಟಿಪುತಿರ್ಪ ಶುಕಪ್ರಕರಂ ನವಾಮ್ರ ಕೋ॥
ಮಲ ಕಳಿಕಾ ರಸ ಪ್ರಸರ ಸೇವೆಯ ಸಂಮದದಿಂ ಕುಕಿಲ್ವ ಕೋ।
ಕಿಲ ಕುಳಮಾ ಪುರೋಪವನದೊಳ್ ಪರಿದೊಪ್ಪುವುದುರ್ವರೇಶ್ವರಾ ॥೭೦॥

---

1. ಮನೊದವಿ. 2. ಬ್ದಾ, ಭ್ರಾ. 3. ಮೊರವಿತಾ ವನ ತಳ.

ಚಂ॥ ಅಳಿಗಳ ಪಕ್ಷಸಂಭವ ಮರುತ್ತತಿಯಿಂ ತನಿಗೊರ್ಪ್ಪಿ [1]ಕಂಪಿತಾ।
ಖಿಲ ಕುಸುಮೋಲ್ಲಸತ್ಪರಿಮಳೋತ್ಕರದಿಂ ಪೊಱೆಯೇಱೆ ಕೇಸರಾ॥
ವಳಿಯು ಮೊದಲ್ಗಳೊಳ್ ಪುದಿದ ಚಾರು ಪರಾಗದೆ ರೂಪುಗೊಂಡು ತಾಂ।
ಸುಳಿವುದು ಸಂತತಂ ಪುರ ಬಹಿರ್ವನ ಚಾರಣನಾ ಸಮೀರಣಂ ॥೭೧॥

ಮತ್ತಮಾ ವಿಪುಳ ವನದೊಳ್ ಮಧುಕರ ತತಿಯ ಸಂಛನ್ನದಿಂದುರ್ಬಿಕೊ [2]ರ್ಬಿದ ಮಬ್ಬಿಂ ರಾತ್ರಿ ಬಂದುದೆಂಬ ಶಂಕೆಯಿಂದಾತಂಕಮನಪ್ಪುಕೆಯ್ವ ಜಕ್ಕವಕ್ಕಿಗಳ ಚಿತ್ತಕ್ಕೆ ಪಗಲನಭಿನಯಿಸಿ ಮಿಸುಗುವರುಣಮಣಿ ಶಿಲಾಮಯ ಸರೋಜಾಕರಂಗಳುಂ, ಆ ಸರೋಜಾಕರಂಗಳ ಬೆಳಗಂ ಪಗಲೆಂದು ಬೆಗಡುಗೊಳ್ವ ಚಕೋರಚಯಕ್ಕೆ ಚಂದ್ರಿಕಾ ಸಾಂದ್ರತೆಯನೊದವಿಸುವಿಂದುಕಾಂತ ಮಣಿ ಶಿಲಾ ಘಟಿತ ಕುಮುದಾಕರಂಗಳುಂ. ಆ ಕುಮುದಾಕರಂಗಳ ತನಿವೆಳಗಿನ ಬಳಗಮಂ ಪಾಲ್ಪೊನಲ ಪೂರಮೆಂದು ಪೀರ್ವಾಸೆಯಿಂ ಪರಿತರುತಿರ್ಪ್ಪ ತರುಣ ಕಲಹಂಸ ಪ್ರಸರಮುಂ, ಆ ತರುಣ ಕಲಹಂಸಂ ಮೆಲ್ದುಳಿದ ಕನ್ನೆಯ್ದಿಲ ಕಾವುಗಳಂ ಬಾಲೋರಗ ಭ್ರಾಂತಿಯಿಂ ಬಿಡದಡಸಿ ಕರ್ದುಕುವ ಕಿಶೋರ ಕೇಕಿ ನಿಕಾಯಮುಂ, ಆ ಕಿಶೋರ ಕೇಕಿನಿಕಾಯದ ಕಮನೀಯ ಕಳಾಪಚ್ಛವಿಯಂ ಪೊಸಮಿಸುಪ ದೂರ್ವಾಂಕುರ ಪ್ರಸರಮೆಂದು ಬಱಿವಿಡಿದು ಬರ್ಪ್ಪ ಮೃಗಶಾಬ ಸಮಿತಿಯುಂ, ಆ ಮೃಗಶಾಬ ಸಮಿತಿಯ ಮಧುರಾವಲೋಕನಮಂ ಕಲಲೆಂದು ಕೆಳೆಗೊಂಡೊಡನೊಡನೆ ಪಾಡುತಿರ್ಪ್ಪ ಮುಗ್ಧಾಂಗನಾ ನಿವಹಮುಂ, ಆ ಮುಗ್ಧಾಂಗನಾ ನಿವಹದ ಸೊಗಯಿಸುವ ಬಾಯ್ದೆಱೆಗಳಂ ಬೀಡೆಯೊಡೆದ ದಾಡಿಮದ ಪಣ್ಗಳೆಂದು ತಳಿರ ತೊಂಗಲೊಳ್ ನಿಳ್ಕಿ ನೋಡುವ ಶುಕಶಿಶು ಪ್ರಕರಮುಂ, ಆ ಶುಕ ಶಿಶು ಪ್ರಕರ ಚಂಚೂಪುಟ ಸಂಚಯಮಂ ಚೂತಕಳಿಕಾ ಕುಳಮೆಂದು ನಲಿಗರ್ಚ್ಚಲೆಂದವ್ವಳಿಪ ಕಲಕಂಠ ಜಾಲಕಂಗಳುಂ; ಆ ಕಲಕಂಠ ಜಾಲಕಂಗಳ ಕಳಕಳಕ್ಕೆ ತೆರಳ್ದು ಕೀಱೆ ಪಾಯ್ವ ಗೋಲಾಂಗೂಲಂಗಳಗತಿ ಪ್ಲುತಾಕಂಪನದಿಂ ಪಱಿದು ಬಿಱ್ದೊಡೆದ ತಾಳತರುವಿನ ತನಿವಣ್ಗಳ ರಸಪ್ರವಾಹಮುಂ, ಆ ರಸಪ್ರವಾಹಮನ ಭೀಕ್ಷಿಸಿ ನೆಲಕ್ಕೆ ಪಾಯ್ದು ಮೊಗವಿಟ್ಟಲಂಪಿಸಿಂದೀಂಟುವ ಕಪಿಪೋತ ವ್ರಾತಮುಂ, ಆ ಕಪಿಪೋತವ್ರಾತದ ಗಂಡೂಷ ರಸ ಪರಿಮಳಕ್ಕೆ ಪರಿಮಱಿಯಾಡುವ ಪಱಿಮೆವಱಿಗಳ ಝುಣತ್ಕಾರ ಸಾರದಿಂದತಿ ವಿಚಿತ್ರ ಶೋಭೆವೆತ್ತಿರ್ಪುದಂತುಮಲ್ಲದೆಯುಂ—

ಮ॥ ಮದನಂಗುದ್ಭವ ಭೂಮಿ ಮನ್ಮಥನ ಸೌಖ್ಯಾವಾಸಮಂಗೋದ್ಭವಂ।
ಗದು ಕೇಳೀನಿಳಯಂ ರತೀಶ್ವರನ ರಾಗಸ್ಥಾನಮೆಂಬೊಂದು ಸಂ॥

---

1. ಕಶ್ಮತಾ. 2. ವಿ.

ಪದದಿಂದಾ ವಿಪುಳಾನದೀ ಪರಿಸರೋದ್ಯಾನಂ ಕರಂ ಶೋಭಿಸಿ ।
ರ್ಪುದು ಭೂವಲ್ಲಭ ದುಷ್ಪ್ರವೇಶ ದಿನಕೃಚ್ಚಂಡ ಪ್ರಭಾಮಂಡಲಂ ||೭೨||

ಮ॥ ಮನುಜರ್ಗಾರ್ಗಮಲಂಘ್ಯಮೆಂದು ನೆಱೆ[1]ದಂ ತನ್ನಲ್ಲಿ ದೈತ್ಯೇಂದ್ರನೆಂ ।
ದೆನಸುಂ ವೈರಮನೋವದೇಱುಸಿದ ಸೀತಾಧೀಶನಸ್ತ್ರಕ್ಕೆ ಸೀ ॥
ರ್ಷನಿಯಾಯ್ತಬ್ಧಿಯೆನುತ್ತಮಾರ್ದುಲಿವವೋಲೊಪ್ಪಿರ್ಪುದಾ ಪೇರಗಳ್ ।
ಘನ ಮತ್ಸ್ಯ ಪ್ರಚಳೋಚ್ಚಳದ್ಘುಳುಘುಳು ಧ್ವಾನಾಂಬು ಗಂಭೀರದಿಂ ||೭೩||

ಮುನಿ ಹಸ್ತಕ್ಕೊಳಗಾದುದೊರ್ವೆ ನೃಪವಂಶೋದ್ಧ್ವಂಸಕಂಗಳ್ಕೆ ಭೋಂ ।
ಕನೆ ಬಿಟ್ಟೋಡಿದುದೊರ್ಮೆ ಬಾಲ ಕಪಿ ಜಾಲ ಕ್ರೀಡೆಗೀಡಾಗಿ ಪಾ ॥
ತನ ಪಾಷಾಣ ಗಣಂಗಳಿಂದೆ ನೆಱೆ ಬದ್ಧಂಬೆತ್ತುದಂದೊರ್ಮೆಯೆಂ ।
ದೆನಸುಂ ಪೇರಗ[2]ಳಬ್ಧಿಯುಂ ನಗುವುದಾ ಡಿಂಡೀರ ಪಿಂಡಾಂಶುವಿಂ ||೭೪||

ಕಂ॥ ಪರಿವೃತಮಾಗಿಂತೆಸೆವಾ ।
ಪರಿಖಾವಳಯಂ ಸಮುಗ್ರ ಝಷ ಕರಿ [3]ಮಕರೋ ॥
ತ್ಕರ ಕಠಿನ [4]ಪುಚ್ಛ ಸಂಚಳ ।
ತರಳಿತ ಘನ ನಿನದ ಬಧಿರಿತಾಶಾ ವಳಯಂ ||೭೫||

ಮ॥ ತ್ರಿಜಗತ್ಸಾರ ಸಮಸ್ತ ವಸ್ತುಗಳನೇಕ ಸ್ಥಾನದೊಳ್ ರಾಶಿಗೆ ।
ಯ್ದು ಜನಾಕೀರ್ಣ ಸುವರ್ಣ ಕಾಂಡಪಟಮಂ ಸುತ್ತಿಟ್ಟನೆಂಬಂತೆವೋಲ್ ॥
ನಿಜಮಪ್ಪುನ್ನತಿಯಿಂ ಪಯೋದ ಪಥಮಂ ತಾಂ ಸೋಂಕಿ ಸತ್ಕಾಂತಿ ದಿ ॥
ಗ್ವ್ರಜಮಂ ವ್ಯಾಪಿಸಲಿರ್ಪು [5]ದೊಪ್ಪಿ ಕನಕ ಪ್ರಾಕಾರಮಾಶ್ಚರ್ಯದಿಂ ||೭೬||

ಕಂ॥ ಗಗನ ಗತಿ ಶ್ರಮಮಂ ನೆ ।
ಟ್ಟಗೆ ಕಳೆವರ್ ಖಚರರದರ[ರನ್ನದೆ]ನೆಗಳೋ ॥
ಳಿಗಳೊಳ್ ತೊಡರ್ದಿರ್ದೇ[ಪ]ರಿ ॥
ಪೊಗಳ್ವೆಂ ಪ್ರಾಕಾರದುನ್ನತಿಯನವನಿಪತೀ ||೭೭||

ಅದಲ್ಲದೆಯುಂ—

---

1. ತನ್ನಂ ದೇವೇಂದ್ರನಂ. 2. ಳಾಳಿಯಿಂ. 3. ಕಮಠೋ.
4. ಪುಂಚ್ಛಸಂಚಳ ತರರಹ. 5. ದೋರ್ಪ.

ಕಂ॥ ತಪನ ರಥ [1]ಮದಾ ಪುರದೆ ಮಿ।
ಗೆ ಪುಗಲ್ ತಡೆಯಿಲ್ಲದಬ್ಜ ಜಂ ಮಾಡಿದ ರಂ॥
ಧ್ರಪಥಂಗಳೆಂಬಿನಂ ರಾ।
ಜಿಪುವಾ ತೆನೆತೆನೆಗಳೆಂಬುಗಂಡಿಗಳೆನಸುಂ ॥೭೮॥

ಮ॥ ಧರೆಯೆಲ್ಲಂ ವರಹೇಮ ಧಾಮಮಯಮಾಶಾ ಚಕ್ರಮೆಲ್ಲಂ ವಿಭಾ।
ಸುರ ಕಾರ್ತಸ್ವರ ಕಾಂತಿ ಸಂತತಿಮಯಂ ವ್ಯೋಮಾಧ್ವಮೆಲ್ಲಂ ನಿರಂ॥
ತರಮಾಕೀರ್ಣ ಸುವರ್ಣ[ವರ್ಣ]ಮಯಮಪ್ಪಂತಪ್ಪ ಪೀತ ಪ್ರಭೋ।
ತ್ಕರಮಂ ಬೀರುತುಮಿರ್ಪ್ಪುದಾ ಕನಕ ಕೋಟಾ ಚಕ್ರಮಾಶ್ಚರ್ಯದಿಂ ॥೭೯॥

ಕಂ॥ ಭುವನ[2]ನುತ ಮರುದ್ಭವ ಭವ।
ಭವ ಸುಮಹತ್ತ್ರೇಜದಂತಿರತ್ಯುನ್ನತಿಯಿಂ॥
ದವಿರಳದಿನಪ್ರತರ್ಕ್ಯದಿ।
ನವಿರಳಮಾಕೀರ್ಣಮೆಸೆವ ಕೋಟಾ ಚಕ್ರಂ ॥೮೦॥

ಚಂ॥ ಸತತಮತರ್ಕ್ಯ ಬಂಧುರ ಚತುರ್ಮುಖ ಗೋಪುರ ರಮ್ಯ ಯುಕ್ತದಿಂ
ವಿತತಮುದಗ್ರ ಸಾಮಜ ಪದೋತ್ಕರ ಸಂಗತಿಯಿಂ ನಿರಂತರಾ॥
ವೃತ ವರ ರಾಜಹಂಸ ಪರಿಶೋಭಿತೆಯಿಂ[ದೆನಸುಂ] ಚಿರಂತನ।
ದ್ಯುತಿ ಕಮನೀಯದಿಂದೆ ವಿಮಳಾಪುರಿ ಪೋಲ್ವುದು ಪದ್ಮಗರ್ಭನಂ ॥೮೧॥

ಮ॥ಸ್ರ॥ ಕರಿಶಿಕ್ಷಾ ಕ್ರೀಡೆಯಂ ಮಾಡುವ ವರ ತುರಗಾರೂಢಿಯಂ ತೋರ್ಪ ಚಾಪಾ।
ದ್ಯುರು ಶಸ್ತ್ರಾಭ್ಯಾಸಮಂ ಬಿತ್ತರಿಪ[ಖುರಳಿಯೊಳ್ ಸಾಧನಂ]ಗೆಯ್ವ ತೇರಂ॥
ಪರಿಯಿಪ್ಪಾಟೋಪದಿಂ ಕಂದುಕಮನೊದೆವ ಭೂಭೃತ್ಕುಮಾರ ವ್ರಜೋತ್ಥ॥
ಸ್ವರದುರ್ಬಿಂ ತತ್ಪುರೀಗೋಪುರ ಮುಖ ಮಹಿಗಳ್ ತುಂಗ ನಾದಾತ್ಮಕಂಗಳ್॥

ಉ॥ ಆ ವಿಮಳಾಪುರೀ ವಿಪುಳ ಗೋಪುರ ರಾಜಿಯ [ರತ್ನರಾಜಿ]ಶೋ।
ಭಾವಹ ಭೂಮಿಕಾವ್ರಜದ ಕಿಟ್ಕಿಲೆಯೊಪ್ಪುವ ಮತ್ತವಾರಣ॥
ವ್ಯಾವೃತ ಘಂಟಿಕಾವಳಿಯ ನಾದಮನುದ್ಭವಿಸುತ್ತೆ ಸೋಂಕಿ ಸೈ॥
ತಾವಗಮಲ್ಲಿ ಪೋಪುದು ವಿಯಚ್ಚರ ಚಾರು ವಿಮಾನ ಸಂಕುಳಂ ॥೮೩॥

1. ಮಾಪುರದ ಮಿಗೆ ಪೋಗಲ್ಕಡೆ 2. ನುತ ಮರುದ್ಭವ.

ಕಂ॥ ನೆಗಟ್ದುಟ್ವಾಳ[ಕದೋಳಿಯೊ]।
ಳೊಗೆದೆಸಪುಂ ಮಿಸುಪ ಸಿತ ಪತಾಕಾ ಚಲ ಮಾ ॥
ಲೆಗಳೆಸೆದು ತುಱುಗಿ ತೋರ್ಪುವು।
ಗಗನ ತರಂಗಿಣಿಯ ತೊಳಪ ತೆರೆಗಳ ತೆಜದಿಂ ॥೭೪॥

ಮ॥ ವಿದಿತಂ ಧಾತ್ರಿಯ ದುರ್ಗ ವರ್ಗದೊಳನೂನೌನ್ನತ್ಯ ಸಂಪತ್ತಿವೆ।
ತ್ತುದು ನಿತ್ಯಂ ಪರಿಭಾವಿಸಲ್ಕಿದೆನಗತ್ಯಾಧಾರವಾಯ್ತೆಂದು ಸ॥
ಮ್ಮದಮಂ ಚಿತ್ತದೊಳಪ್ಪುಕೆಯ್ದು ಗಗನ ಶ್ರೀದೇವಿ ತಾಂ ಸೇಸೆಯಿ।
ಕ್ಕಿದಳೆಂಬಂತೆ ನಿರಂತರಂ ತೆನೆಗಳೊಳ್ ತಳ್ತೊಪ್ಪುಗುಂ ತಾರೆಗಳ್ ॥೭೫॥

ಮ॥ಸ್ರ॥ ಪರದಾರಾಸಕ್ತನಿಂದಂ[ಡಲೆ]ವಡೆದುದು ತಾನೆಂದು [ಕೈಲಾಸ]ಧಾತ್ರೀ।
ಧರಮಂ ನಿತ್ಯಂ ನಗುತ್ತಿರ್ದಪುದೆನೆ ನಭಮಂ ಸೋಂಕಿ ಶುಭ್ರಾಂಶುವಿಂ ಬಿ॥
ತ್ತರಿಸುತ್ತುಂ ಚಂದ್ರಕಾಂತೋಪಳ ಘಟಿತ ಘಟತ್ಕೂಟ ಸಂಭಿನ್ನ ಚಿತ್ರೋ।
ತ್ಕರಮಪ್ಪುತ್ತುಂಗ ದೇವಾಯತನ ವಿತತಿ [ರಾರಾಜಿಸು]ತ್ತಿರ್ಪುವೆತ್ತಂ ॥೭೬॥

ಮ॥ ಶ್ರುತಿ ಶೈವಾಗಮ ಶಬ್ದ ಶಾಸ್ತ್ರ ಗಣಿತಚ್ಛಂದೋಭಿಧಾನೋತ್ತಮ।
ಸ್ಮೃತಿ ವೇದಾಂತ ಸುಕಾವ್ಯ ನಾಟಕ ಮಹಾತರ್ಕಂಗಳಂ ಪೇಟ್ವ ಸ॥
ನ್ಮತಿಯಿಂ ವಾಕ್ಪತಿಯನ್ನರಪ್ಪ ಮುನಿವೃಂದಾಚಾರ ಸಂಪನ್ನರು।
ನ್ನತಿವೆತ್ತರ್ ಶಿವಸದ್ಮ[ಸಂಗತ] ಮಠ ಪ್ರಾಂತಂಗಳೊಳ್ ಖ್ಯಾತಿಯಿಂ ॥೭೭॥

ಪುರ ಲಕ್ಷ್ಮೀಶನ ಪುಣ್ಯ ಕಲ್ಪಲತಿಕಾನೀಕಕ್ಕೆ ನೀರೇಜಮಂ।
ದಿರನಾನಂದದೊಳಿಟ್ಟಡರ್ಪುಗಳೆವೆಂಬಂತೆಯ್ದೆ [1]ನೀಜದ್ದಿತ್ತಮಂ ॥
ಬರಮಂ ಜಕ್ಕುಲಿಸುತ್ತುಮಿರ್ಪ್ಪುವು ರವದ್ಘಂಟಾ ಮುಹುಸ್ತಾಡನಂ।
ಬೆರಸುಚ್ಚ ಧ್ವಜ ರಾಜಿಗಳ್ ವರ ಶಿವಾಗಾರಾಗ್ರ ಭಾಗಂಗಳೊಳ್ ॥೭೮॥

ಕಂ॥ ಮುದದೆ ನಭೋಲಕ್ಷ್ಮಿಗೆ ಸುರ।
ನದಿಯಿಕ್ಕುವ ಫೇನ ಚಮರರುಹ ಚಯಮೆನೆ ನೀ ॥
ರದ ಪಥದೊಳ್ ಸತತಂ ಮಿಳಿ।
ರ್ಪುದು ಶಿವಭವನಾಗ್ರ ಕೇತು ಸಿತಪಟ ಪಟಲಂ ॥೭೯॥

1. ನಿಜಕ್ಕುರಿ.

ಮ॥ ಪಡೆಗುಂ ತಾನಿದನಂತ ಕಾಂತಿಯುರಸೆಂದಾ ದೈತ್ಯರುಂ ದೇವರುಂ।
ಕಡಯುತ್ತಿರ್ದೊಡೆ ಪೆತ್ತುದೊರ್ಪ್ವಳಸೆನುತ್ತಾದಂ ನಗುತ್ತಿರ್ಪುದಿಂ॥
ಗಡಲಂ ವಾರ ವಧೂ ಸಮಾಜಮಯ ವೇಶ್ಯಾವಾಟಿಯೆಂದುಂ ಕರಂ
ಕುಡಿಯಿಟ್ಟೊಪ್ಪುವ ತನ್ನ ಸಾಂದ್ರ ಶಶಿಕಾಂತಾದಭ್ರ ಶುಭ್ರಾಂಶುವಿಂ॥೯೦॥

ಕಂ॥ ಧವಳ ದ್ಯುತಿಯಿಂ ದೆಸೆಯುಂ।
ಧವಳಿಸುತುಂ ಬಳ್ಳಿಮಾಡದಿಂ[ದೆಸೆ]ದಿಪ್ಪಾರ್॥
ಧವಳೇಂದುಕಾಂತ ವಿರಚಿತ।
ಧವಳಾಗಾರಂಗಳೊರ್ಮೆಯುಂ ರಮ್ಯತರಂ ॥೯೧॥

ಉ॥ ಆ ಮಣಿ ಮತ್ತವಾರಣದೊಳಿರ್ಪೆಳವೆಂಡಿರ ವಕ್ತ್ರ ಮಂಡಲ।
ಸ್ತೋಮದೊಳಿಂದು ಮಂಡಲಮಣಂ ಬೆರಸಿರ್ಕುಮೆನುತ್ತೆ ರೋಹಿಣಿ॥
ಪ್ರೇಮದಿನಿಟ್ಟ ಚಿಹ್ನಮನದಂ ನೆಱೆ ಕಂಡು ಜನಂ ವಿತರ್ಕದಿಂ।
ತಾಮದು ಪುತ್ತಿದೆಂದು ಮೃಗಮೆಂದು ಶಶಾಂಕಮಿದೆಂದು ಕಲ್ಪಿಪರ್ ॥೯೨॥

ಮ॥ ವನಿತಾಸ್ಯ ಶ್ವಸಿತೋಲ್ಲಸತ್ಪರಿಮಳಕ್ಕುನ್ಮುಕ್ತ ತಾಂಬೂಲದಿಂ।
ಬಿನ ಕಂಪಿಂಗಜಿರಾ[1]ಭಿಷೇಚನದ ಕಸ್ತೂರೀಜಲ ಸ್ಫಾರ ಪಾ॥
ವನ ಗಂಧಕ್ಕೆ ಬಲಿ ಪ್ರಸೂನ [2]ವರ ಸೌರಭ್ಯಕ್ಕೆ ಸಂರಂಭದಿಂ।
ದೆನಸುಂ ಪಾಯ್ವಳಿನೀ ಝುಣತ್ಕೃತದೆ ವೇಶ್ಯಾವಾಟಿ ವಿಭ್ರಾಜಿಕುಂ ॥೯೩॥

ಕಂ॥ ನೆಗೆದುನ್ನತ ಹರ್ಮ್ಯದ ಮಲ।
ಗುಗಳೊಳ್ ಸಲೆ ಸೊಗಯಿಪಬಲೆಯರಸೀಕ್ಷಿಸಲಾ॥
ಗಗನ ಗತಿಚ್ಛಲದಿಂ ಖಚ।
ರ ಗಣಂ ಚರಿಯಿಪುದು ಪವನ ಪಥದೊಳ್ ಸತತಂ ॥೯೪॥

ನೆಲಗಟ್ಟೆಲ್ಲಂ ಪಳುಕಿನ।
ನೆಲಗಟ್ಟುಗಳಿ[ರ್ಪ್ಪನಿ]ಳಯಮೆಲ್ಲಂ ರತ್ನೋ॥
ಪಲ ನಿಳಯಂ ತತ್ಪುರದೊಳ್।
ಸಲೆ ಬೆಳಗುವ ದೀಪಮೆಲ್ಲಮಾ ಮಣಿದೀಪಂ ॥೯೫॥

1. ಜಿಸೇ. 2. ಕರ.

ಪುರ ಲಕ್ಷ್ಮಿಯ ದರಹಾಸೋ।
ತ್ಕರ ದೀಧಿತಿ ಸಲಿಲ [1]ಮಾಡುದೆನೆ ಪಿಮಳ ಪಯೋ॥
ಭರಿತಾಂಬುಜ ಷಂಡಾವಳಿ।
ಪಿರಿದೆಸೆವುದು ಹರ್ಮ್ಯಹರ್ಮ್ಯದಾ ಪರಿಸರದೊಳ್ ॥೯೬॥

ತೊಳಪ ಪೊಸಕತ್ತುರಿಯ ನೀ।
ರ್ದಳಿಪಂ ಕಡೆಯಿಲ್ಲದೆಸೆವ ಮುತ್ತಿನ ಕಡೆ ಕ॥
ಣ್ಗೊಳಿಪ ವಿಚಕಿಲದ ಪೂವಲಿ।
ಗಳ ಬಳಗಂ ಗೃಹ ಗೃಹಂಗಳಜಿರ ವ್ರಜದೊಳ್ ॥೯೭॥

ಪ್ರಮುದಿತ ಕಂಕೇಲ್ಲಿಯವೋಲ್ ।
ಪ್ರಮದಾ ಪದ ಜತು ರಸಾಂಕಿತಂ ಸರಸೀ ವಿ॥
ಭ್ರಮದಂತೆ ನೀರಜ ಸ್ತೋ।
ಮಮಾಗಿ ರಾಜಿಪುದು ಪುರದ ವೀಧೀಯಘಂ ॥೯೮॥

ಉ॥ ಲೋಳ ತರಂಗ ರಾಜಿತ ವಿಯತ್ತಟಿನೀ ತಟ ಚಾರು ಕಲ್ಪಭೂ।
ಜಾಳಿಯ ಬೀಟಲೆಂದೆನೆ ಘನ ಸ್ಫಟಿಕಾಶ್ಮದ ನೀಟ್ದ ಕಂಬದಿಂ॥
ಲಾಳಿತ ಮೌಕ್ತಿಕಾವಳಿಯ ದಾಮ ಸಮಾಜದಿನಾದಮೊಪ್ಪುವಾಂ।
ದೋಳನಮಲ್ಲಿಗಲ್ಲಿಗೆಸೆದಿಪ್ಪುವು ತತ್ಪುರ ವೀಧಿವೀಧಿಯೊಳ್ ॥೯೯॥

ಚಂ॥ ಅಗಣಿತ ಶೋಭೆವೆತ್ತ ಪುರಲಕ್ಷ್ಮಿಯ ಭಾಳದ ಲೋಚನಾಂಶು ಮಾ।
ಲೆಗಳೆನೆ ಕಾಂತಿಸಂತತಿ ದಿಶಾವಳಿಯೊಳ್ ಕುಡಿಯಿಟ್ಟು ನಾಡೆಯುಂ॥
ಸೊಗಯಿಪ ಚಂದ್ರಕಾಂತ ಮುಕುರಾವಳಿ ರಾಜಿತ ರತ್ನತೋರಣಾ।
ಳಿಗಳ ವಿಳಾಸಮುಗ್ಗಳಿಸಿ ತೋಪ್ಪುದು ತತ್ಪುರ ವೀಧಿವೀಧಿಯೊಳ್ ॥೧೦೦॥

ನವ ನಿಧಿಯೊಳ್ ಸಮುದ್ಭವಿಸಿದಾಕರ ಮಾಳಿಕೆಯೆಂಬಗುಬ್ಬನಿಂ।
ದವಿರಳಮಾಗೆ ಸನ್ನುತ ಸಮಸ್ತ ಸುವಸ್ತು ಸಮೃದ್ಧಿಯಿಂದಮೊ॥
ಪ್ಪುವ ವಿಪಣಿ ವ್ರಜಂ ಕರತರಂಬಿಡಿದಿಪ್ಪುದು ತತ್ಪುರಾಮೃತಾ।
ರ್ಣವ ನವ ಫೇನ ಪಙ್ಕ್ತಿಯೆನಿಪಂತೆ ಹಿಮೋಪಳ ಕೂಟ ಕೋಟಿಯಿಂ॥೧೦೧॥

---

[1] ಮಾಗೆ ನೆಜೆ.

ಕಂ॥ ಧನಪತಿಯೆಂಬಭಿಧಾನಂ।
ತನಗೆಂತನ್ವಾರ್ಥ ರಕ್ಷಕಂಗೆಂದು ಕುಬೇ॥
ರನನಿಳಿಕೆಯ್ವರ್ ನಿಜಮು।
ಪ್ಪನುಪಮ ಧನದಿಂದೆ ಚಿನ್ನವರದರ್ ಪುರದೊಳ್ ॥೧೦೨॥

ಶರನಿಧಿ ತನ್ನಯ ರತ್ನಾ।
ಕರ ನಾಮಮನಿಲ್ಲಿ ಸಾರ್ಥಕಂಮಾಡಲ್ ಬಂ॥
ದಿರುತಿರ್ದಪುದೆನೆ ಮಣಿಗಾ।
ಅರ ಪಸರಂ ಮಿಸುಗುತಿರ್ಪ್ಪುದಾ ಪುರವರದೊಳ್ ॥೧೦೩॥

ಚಂ॥ ಪರಿದುರೆ ಪಾರಿಪ್ರೋಕುಮನಿಳಾಹತಿಯಿಂ ಶರದಭ್ರಮಾಲೆ ದು।
ಸ್ತರಮಿದು ದುಃಪ್ರವೇಶಮಿದು ವಾಯುಗೆ ತಾನೆನುತಲ್ಲಿ ತಂದು ಬ॥
ಯ್ತಿರಿಸಿದನಬ್ಜಗರ್ಭನೆನೆ ಬೆಳ್ಪೆಳಗಂ ಬಿದಿರುತ್ತೆ ಕಂಚಗಾ।
ಅರ ಪಸರಂ ಪೊದೞ್ದಿಸೆವುದಾ ವಿಮಳಾಪುರಿಯೊಳ್ ನಿರಂತರಂ ॥೧೦೪॥

ಕಂ॥ ಸುರವೈದ್ಯನಪ್ಪ ಧನ್ವಂ।
ತರಿ ತರಿಸುವನಿಲ್ಲಿ ತನಗೆ ದೊರಕದ ತಂತ್ರೋ॥
ತ್ಕರಮನೆನೆ ನಿರುಪಮೌಷಧಿ।
ವೆರಸಿದ ಗಂದಿಗರ ಪಸರಮುಸದಳವೆಸೆಗುಂ ॥೧೦೫॥

ಮ॥ ನಳಿತೋಳ್ ಪೆರ್ಮೊಲೆ ಕುಂತಳಂ ವಿಟರ ಚಿತ್ತಂಗೂಡಿ ತೂಗಾಡೆ ಕೆಂ।
ದಳದಿಂ ಸಣ್ಣಿಗೆಯುಂ ತೆರಳ್ಚಿ ತಿರುಪುತ್ತುಂ ಸುಯ್ಯೆಲರ್ ಕಂಪನ॥
ಗ್ಗಳಿಸಲ್ ಗಂಧನಿಷದ್ವರಕ್ಕೆ ನವಘರ್ಮಂ ಗಾತ್ರದೊಳ್ ಪೊಣ್ಮಿಪ।
ಜ್ಜಳಿಸಲ್ ಕುಟ್ಟಿ ಮಗುಳ್ಚುವರ್ ವರ ವಿಳಾಸೋದ್ದಾಮೆಯರ್ ಭಾಮೆಯರ್॥

ಕಂ॥ ಪವಣಿಸಿ ಷಡ್ವರ್ಗಂಗಳ।
ನವನುದ್ಭವಿಸಿದ ವಿರಂಚಿಗಚ್ಚರಿಯಂ ಬೀ॥
ಱುವ ಬಹು ವರ್ಣಂಗಳ ವ।
ಸ್ತ್ರ ವಿತಾನವೆಸಿಪ್ಪುದೊಪ್ಪಿ ದೂಸಿಗವಸರಂ ॥೧೦೭॥

ಕಂ॥ ಗುಣಕರ್ಮ ಘಟ್ಟಿವೆಸ ಕೀ।
ಲಣೆಯುತ್ಕಟಮೆನೆ ವಿಚಿತ್ರ ಬೆಸುಗೆಗಳಂ ತತ್॥

ಕ್ಷಣದೆ ಗಣೆಯಿಸದೆ ಮಾಟ್ಪೇ।
ರಣಿಗರ ಕಮ್ಮಿಜರ ಸಾಲ್ಗಳಭಿರಾಜಿಸುಗುಂ ॥೧೦೮॥

ಚಂ॥ ಸ್ಫುರಿತ ನಖಾಂಶು ಮಂಜರಿಯೆ ಪೂವಿನಮಂಜರಿಯೆಂದದಂ ಕೊಳಲ್।
ಕರಮನಡುರ್ತು ನೀಡಿ ನೆಱೆ ನಾಣ್ಚೆ ವಿಟರ್ ನಱುಸುಯ್ಗೆ ಪೂಗೆ ಸೂ॥
ಟ್ಫುರುತಿರೆ ತುಂಬಿ ಕಣ್ ಮನಸಿಜಾತನ ಶಾತ ಶರಾಧಿದೇವತಾ।
ಪರಿಕರದಂತಿರಿರ್ದರಲರೋಳಿಯನೆತ್ತಿದ ಮಾಲೆಗಾರ್ತಿಯರ್ ॥೧೦೯॥

ಮ॥ಸ್ರ॥ ಪುರವೀಥೀ ಯೂಥವೋರಂತಿರೆ ಮುಖರ [1]ಮುದಂಚದ್ಧ್ವಜವ್ರಾತ ಘಂಟಾ।
ಸ್ವರದಿಂದಂ ಚಾರು ಪಾರಾವತ ಕುಹರಣದಿಂದಂ ಶುಕಾಲಾಪದಿಂ ತೂ॥
ರ್ಯರುತಿಪ್ರಸ್ತೋಮದಿಂದಂ ಮಧುಕರ ಕುಲ ಝುಂ[ಕಾರದಿಂದಂ ಮಯೂರೋ।
ತ್ಕರ ಕೇಕಾನಾದದಿಂದಂ] ಸುರುಚಿರ ವನಿತಾ ನೂಪುರಾರಾವದಿಂದಂ ॥೧೧೦॥

ಚಂ॥ ತರುಣಿಯ [ರಮ್ಯ] ನಿಶ್ವಸಿತ ಸೌರಭಮಂ ಕೊಳುತುಂ ಕುಚಂಗಳೊಳ್।
ಪರಿಮುರಿಯಾಡುತುಂ ಪುದಿದ ನಾಭಿಯ ಕತ್ತುರಿಯಂ ತೆರಳ್ಚುತುಂ॥
ಗುರು ಜಘನಾಗ್ರಮಂ ತುಡುಕುತುಂ ಬಿಡದೊಯ್ಯನೆ ನೀವಿಯಂ ತೆಱೆಂ।
ದಿರಿಪುತುಮಲ್ಲಿ ತೀಡುವುದು ಕಾಮುಕನಂದದೆ ಸಾರ ಮಾರುತಂ ॥೧೧೧॥

ಮತ್ತಮಾ ಪುರಂ ದನುಜೇಂದ್ರ ಸಭೆಯಂತೆ ವರೇಣ್ಯ ಧಿಷ್ಣ್ಯಮಯಮುಂ ಪುಣ್ಯಜನೋಪಚಯಮುಂ, ವಾಸವಾಸ್ಥಾನದಂತಪ್ಸರೋರಾಜಿತಮುಂ ವಿಬುಧ ವಿಭ್ರಾಜಿತಮುಂ, ಸಿತಪಕ್ಷ ರಜನಿಯಂತೆ ರಾಜಲೀಲಾ ವಿಳಾಸ ವರ್ಧಮಾನಮುಂ ಕುವಲಯಾನಂದ ಕೇಳೀಸ್ಥಾನಮುಂ, ಶರಧಿಪತಿಯಂತೆ ಬಾಡಬೋಪೇತಮುಂ ಗರ್ಭೀಕೃತ ಕುಭೃದ್ವ್ರಾತಮುಂ, ಲಕ್ಷ್ಮೀಕಾಂತನಂತೆ ತಾರ್ಕ್ಷ್ಯ ಸಮಾವೃತಮುಂ ರಮಾಭಿಶೋಭಿತಮುಂ, ಸನ್ನದ್ಧ ವಾಹೋತ್ತಮದಂತೆ ಕವಿ ಸಮೇತಮುಂ ಗಂಧರ್ವ ಕುಲಖ್ಯಾತಮುಮಾಗಿಪ್ಪುದಂತುಮಲ್ಲದೆಯುಂ—

ಕಂ॥ ಸುಮನಸ್ಸಮಾಜ ಮಯದಿಂ।
ಸಮಗ್ರಶಾಖಿ ಪ್ರತಾನಮಯದಿಂ ಸುರ ಶೈ॥
ಲಮನೆ ಸುರಲೋಕಮನೆ ಸಲೆ।
ವಿಮುಳಾಪುರಿ ಪೋಲ್ತು ನಾಡೆಯುಂ ಕಣ್ಗೊಳಕುಂ ॥೧೧೨॥

1. ಮುದಂಥ.

ಚಂ॥ ಪರಿವೃತ ರಾಜಹಂಸ ರಮಣೀಯದಿನುದ್ಗತ ಪುಂಡರೀಕ ವಿ।
ಸ್ಫುರಿತ ವಿಳಾಸದಿಂ ಕರಿ ಸಮಾಜ ವಿರಾಜಿತದಿಂ ವರ ದ್ವಿಜೋ॥
ತ್ಕರ ಕಮನೀಯದಿಂ ವನ ಸಮುನ್ನಿತ ವಿಭ್ರಮದಿಂ ಪೊದಟ್ದು ತಾ।
ವರೆಗೊಳದಂದದಿಂದೆ ವಿಮಳಾಪುರಿ ಕಣ್ಗೊಳಿಸಿರ್ಪುದಾವಗಂ ॥೧೧೩॥

ಮ॥ ಆ ಲಲಿತೇಂದು ಬಿಂಬಮನಣಂ ಬಿಡದಿರ್ಪ ಕಳಂಕ ಪಂಕಮಂ।
ಪಾಳಿಸಲೆಂದು ನೀಳ್ದಮೃತವಾರ್ಧಿಯ ವಿಭ್ರಮದಿಂದೆ ರಮ್ಯ ಹ॥
ರ್ಮ್ಯಾಳಿಯ ಶುಭ್ರದೀಧಿತಿ ಕುಲಂ ಕುಡಿಯಿಟ್ಟು ಸವಿಸ್ತಾರ ಮಾರ್ಗಮಂ।
ಮೇಳಿಸೆ ತತ್ಪುರಂ ಮೆರೆವುದುಜ್ಜ್ವಲ ಕಾಂತಿಯ ಕೋಶಮೆಂಬಿನಂ ॥೧೧೪॥

ಕಂ॥ ಆ ಪುರ ಮಧ್ಯದೊಳಿರ್ಪುದು।
ಭೂಪ ನಿವಾಸದ ವಿಳಾಸಮಂ ನೋಡಲ್ ತಾ॥
ರಾಪತಿ ತಳೆದಂ ಕೋಟಾ।
ರೂಪಮನೆನೆ ಮಿಸುಗೆ ಶಶಿಶಿಲಾ ಪ್ರಾಕಾರಂ ॥೧೧೫॥

ಅತಿಶಯಮೆನಿಪ್ಪ ವಪ್ರೋ।
ನ್ನತ ಲಕ್ಷ್ಮಿಯ ಮುಖಮಿದೆನಿಸಿ ಭೂಮಿಕೆಗಳ್ ಸಂ॥
ಗತಿವಡೆದ ಚಂದ್ರಶಾಲಾ।
ಧೃತ ಗೋಪುರಮೆಸೆವುದಖಿಳ ಮಣಿಗಣ ರಚಿತಂ ॥೧೧೬॥

ಒಂದನೆ ಪಡೆದುದು ತುರಗಮು।
ನೆಂದಮೃತಾರ್ಣವಮನುರದೆ ನಗುವಂತೆಸೆಗುಂ॥
ಸಂದಣಿಸಿದ ಶಶಿಕಾಂತದ।
ಮಂದುರೆಗಳವರ ತುರಂಗತತಿ ಸಂಗತಿಯಿಂ ॥೧೧೭॥

ಇದು ಕೈಲಾಸದ ಸಾಲೆಂ।
ಬುದನೆನಸುಂ ನೆನೆಯಿಸುತ್ತುಮಭಿರಾಜಿಸುತಿ॥
ರ್ಪುದು ಸದಮಳ ಶಶಿಕಾಂತಾ।
ಶ್ಮದ ವಿಪುಳೋತ್ತುಂಗ ದಂತಿಶಾಲಾನೀಕಂ ॥೧೧೮॥

ಮ॥ ತರದಿಂದೊಪ್ಪುವುದಲ್ಲಿ ಶಸ್ತ್ರಕುಟಿ ಕೋಶಾವಾಸಮೇಕಾಂತಮಂ।
ದಿರಮಭ್ಯಾಸ ನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋ॥

ಹರ ಶಯ್ಯಾವಸಥಂ ವಿಭೂಷಣ ಗೃಹಂ ದೇವಾರ್ಚನಾಗಾರಮಂ ।
ಬರ ವೇಶ್ಮಂ ವರ ಭೋಜನೌಕಮವರೋಧಸ್ತ್ರೀ ನಿವಾಸಾಸ್ಪದಂ ॥೧೧೯॥

ಚಂ॥ ಕಮಲ ದಳಾಕ್ಷನಂದದಿನಿರುತ್ತೆ ಸುಪರ್ಣ ಸಮನ್ವಿತ ಪ್ರಭಾ ।
ವಮನೊಳಕೆಯ್ದುಮಂತಮೃತ ಸತ್ಸುಮನಃಕುಲಮಾಗಿಯುಂ ಮಧು ॥
ಪ್ರಮದಕರಂ ತಮಃಪ್ರಯುತಮುದ್ಘ ರಜೋಮಯಮಪ್ಪಗುರ್ವಿನಿಂ ।
ಪ್ರಮದವನಂ ಕರಂ ಪ್ರಕಟಿಸುತ್ತೆಸೆದತ್ತು ವಿರುದ್ಧ ಭಾವಮಂ ॥೧೨೦॥

ಚಂ॥ ಪ್ರಣುತ ಮಹಾಗಜೇಂದ್ರ ಘಟೆಯಂತೆ ಸಮುನ್ನತ ಭದ್ರ ಮತ್ತವಾ ।
ರಣಮಯಮುತ್ತರಾಜಿ ಮುಖದಂತೆ ಸಮಗ್ರ ವಿಚಿತ್ರ ಪತ್ರ ಭೂ ॥
ಷಣಮಯಮುದ್ಘ ರೋಹಣ ಮಹೀಧರದಂತೆ ನಿರಂತರಂ ಸಮು ।
ಲ್ಬಣ ಮಣಿಕೂಟ ಕೋಟಿಮಯಮಾಗಿ ಕರಂ ಕರುಮಾಡಮೊಪ್ಪುಗುಂ ॥೧೨೧॥

ಮ॥ ಕೆಳೆಯಲ್ತಾತನೆ ಮಿತ್ರನೆಂದೆನಿಸಿಯುಂ ಮಾರ್ತಂಡನಬ್ದಾಧ್ವಮಂ ।
ಡಲಮಂ ಮಾಣದೆ ನಿಚ್ಚನಿಚ್ಚಮಡರ್ವಾ ದೋಷಾಂಧನಲ್ತಾನೆನು ॥
ತ್ತಿಳಿಕೆಯ್ದಾವಗಮೊಪ್ಪುವುಪ್ಪರಿಗೆಯುಗ್ರ ಸ್ಥೂಲ ರತ್ನೋಲ್ಲಸ ।
ತ್ಕಳಶಂ ಪಜ್ಜಳಿಸುತ್ತುಮಿರ್ಪುದು ನಿಜಾಂಶು ಸ್ತೋಮದಿಂ ವ್ಯೋಮದಿಂ ॥೧೨೨॥

ಚಂ॥ ಪರಪಿದ ಮಲ್ಲಿಕಾ ಮುಕುಳ ಮಾಲೆಯ ಪೂವಲಿ ಪೆಂಪುವೆತ್ತ ಬಂ ।
ಧುರ ಹರಿನೀಲ ಕುಟ್ಟಿಮ ತಳಂ ಕಮನೀಯಮನಪ್ಪುಕೆಯ್ದು ಬಿ ॥
ತ್ತರಿಪುದು ರಮ್ಯಮಪ್ಪ ಕರುಮಾಡಮನೀಕ್ಷಿಸಲಿಂದುತಾರೆಗ ।
ಳ್ಪಿರಸೊಲವಿಂದೆ ಬಂದು ಪರಿವೇಷ್ಟಿಸಿದಂಬರಮಂ ನೃಪಾಲಕಾ ॥೧೨೩॥

ಸ್ಥಿರತರಮಾಗಿ ಪರ್ಬಿದ ಸುಪರ್ವ ಶರಾಸನಮಾಳೆ ಮೇಣಿದಂ ।
ಬುರುಹಭವಂ ಧರಾ ರಮೆಗೆ ಕಟ್ಟಿದ ಚಾರು ವಿಚಿತ್ರ ವರ್ಣ ವಿ ॥
ಸ್ಫುರಿತ ವಿತಾನಮೆಂದೆನೆ ನಭೋಂಗಣಮಂ ನೆಱೆ ತಿಂಬುತಿರ್ಪುದು ।
ಪ್ಪುರಿಗೆ ನಿರಂತರಂ ನಿಖಿಳ ರತ್ನ ಮರೀಚಿ ಕಳಾ ಕಳಾಪದಿಂ । ॥೧೨೪॥

ಕಂ॥ ನಿರುಪಮಮೆನಿಪಾ ಧನದನ ।
ವರ ಪುಷ್ಪಕಮಂ ವಿಮಾನಮೆಂದೆನಿಸುತ್ತುಂ ॥
ಕರಮೊಪ್ಪುವುದನವರತಂ ।
ಕರುಮಾಡಂ ತಾಂ ಸಮಾನ ಲಕ್ಷಣ ಗಣದಿಂ ॥ ॥೧೨೫॥

ಚಂ॥ ಸೊಗಯಿಪ ಚಿತ್ರಪತ್ರ ಘಟಿತಾಖಿಳ ಕೂಟ ವಿಭೂಷಣಂಗಳಿಂ।
ಬಗೆಗವುಳುಂಬವಾಗಿ ವಿಗೆ ಪೊಣ್ಮುವ ತನ್ನ ನವೀನ ರತ್ನಕಾಂ॥
ತಿಗಳ ವಿಚಿತ್ರ ವಸ್ತ್ರ ಪರಿವೇಷ್ಟಿತದಿಂ ಕರುಮಾಡವಾವಗಂ।
ನಗುವುದು ಜಾತರೂಪಧರನೆಂದೆನಸುಂ ಕನಕಾಚಲೇಂದ್ರನಂ ॥೧೨೬॥

ಮ॥ ಹರಿನೀಲ ದ್ಯುತಿ ಜಾಲದಿಂ ರವಿಗೆ ಶೀತದ್ಯೋತಿಗುದ್ಭೂತ ಭೀ।
ಕರ ರಾಹುವ್ರಜ ಶಂಕೆಯಂ ಮರಕತ ಪ್ರದ್ಯೋತ ಜಾತ ಪ್ರಭಾ॥
ಸುರದಿಂದಾ ಹಯ ಸಂಕುಲಕ್ಕೆ ಹರಿಣಂಗುತ್ಕೀರ್ಣ ದೂರ್ವಾಂಕುರೋ।
ತ್ಕರ ವಿಭ್ರಾಂತಿಯನುಂಟುಮಾಡಿ ಕರುಮಾಡಂ ನಾಡೆ ಕಣ್ಗೊಪ್ಪುಗುಂ ॥೧೨೭॥

ಮ॥ಸ್ರ॥ ನುತ ನಾನಾರತ್ನ ದೀಪ ಪ್ರಚಯ ಪರಿಚಿತಂ ಪ್ರೋಜ್ಜ್ವಲವ್ಯಕ್ತ ಮುಕ್ತಾಂ।
ಚಿತ ಲಂಭೂಷಾವಲಂಬಂ ಮಣಿ ಕಲಶ ಕುಲಾಲಂಕೃತಂ ರುಕ್ಮಘಂಟಾ॥
ತತಿ ರಮ್ಯಂ ನಿರ್ಮಳೇಂದೂಪಲ ಕೃತ ಬಹು ಪಾಂಚಾಲಿಕಾ ರಂಜಿತಂ ಸ।
ಪ್ತತಳ ಪ್ರಾಸಾದವೊಪ್ಪಿರ್ಪುದು[1] ನಿಚಿತ ರುಚಿವ್ಯೂಹವಾ ರಾಜಗೇಹಂ॥೧೨೮॥

ಉ॥ ಆ ವಿಮಲಾಪುರೀ ನಿರುಪಮೋನ್ನತ ಶೋಭೆಯನೆಯ್ದೆ ಕಂಡು ಲ।
ಜ್ಜಾವಹದಿಂದೆ ಗೊಂಟುಡುಗಿದತ್ತಳಕಾಪುರಿಯತ್ತ ಪೋಯ್ತು ಲ॥
ಜ್ಜಾವಹದಿಂದೆ ರೂಢಿಯಮರಾವತಿ ತಾಂ ಕೆಳಗಣ್ಗೆ ಪೋಯ್ತು ಲ।
ಜ್ಜಾವಹದಿಂದೆ ಭೋಗವತಿಯೆಂದೆನೆ ಪೇಟ್ ಪೊಗಟ್ವಿನ್ನನಾವನೋ ॥೧೨೯॥

ಮ॥ಸ್ರ॥ ಪರಿಕಲ್ಪಂಗೆಯ್ವದನ್ನಂ ಕುಡದಮರ ಕುಜಂ ಪೆರ್ಚು ಕುಂದುಳ್ಳುದಾ ಸಾ।
ಗರವೆಂದುಂ ದುಷ್ಟದೋಷಾಚರನ ಕರತಳ [ಕ್ಕೈತ್ತು ಗುಂಡಾಯ್ತು] ತಾರಾ॥
ಗಿರಿಯೆಂದೇಳ[2]ಪ್ಪ ದಾನೋನ್ನತಿಯಿನತುಳ ಗಾಂಭೀರ್ಯದಿಂ ಸ್ಥೈರ್ಯದಿಂ ಬಿ।
ತ್ತರಿಪಂ ತಾನಿಂತಜಸ್ರಂ ಕೃತಿರತಿರಮಣಂ ಸಾಹಸೋದ್ದಾಮಭೀಮಂ ॥೧೩೦॥

ಇದು ಕಮನ ಕುಧರೇಂದ್ರ ನಂದನಾ ಲೋಲಲೋಚನ ಚಕೋರೀ ಸುಖಪ್ರದ
ಪರಮಾಂಗಕಾಂತಿ ಸಂತಾನ ಸಾಂದ್ರಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖಮಯೂಖೋತ್ಫುಲ್ಲ ಮಲ್ಲಿಕಾ
ಶೇಖರ ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ
ಕುಸುಮಾವಳೀ ಮಹಾಪ್ರಬಂಧದೊಳ್
ವಸಂತಕ ವಿಷಯವರ್ಣನ
ವಿಮಳಾಪುರೀ ವರ್ಣನಂ
ದ್ವಿತೀಯಾಶ್ವಾಸಂ.

---

1. ವಿಜೆ. 2. ಪ್ಪುದಾಯ್ತುನ್ನತಿಯು.

# ತೃತೀಯಾಶ್ವಾಸಂ

ಕಂ॥ ಶ್ರೀಪತಿ ಗೋಪತಿ ಭಾಷಾ।
ಶ್ರೀಪತಿಯಜನೆಂಬ [1]ನಿಂದೆಯಟೆುಪಂದು ಯಶ॥
ಶ್ರೀಪತಿ ಚಾತುರ್ಯ ವಚ।
ಶ್ರೀಪತಿ ಭುಜಬಲ ಮರುತ್ತನೂಭವ ಭೂಪಂ ॥೧॥

ಮ॥ಸ್ರ॥ ಪೆಸರ್ವೆ[2]ತ್ತಿರ್ದಾ ಪುರಾಧೀಶ್ವರನತುಳ ನಿಜಾಜ್ಞಾಲತಾಕೀರ್ಣ ದಿಗ್ಭಿ।
ತ್ತಿ ಸಮಾಜಂ ವಿಶ್ವಲೋಕ ಸ್ತುತನುಪಚಿತ ಸತ್ತ್ವೋನ್ನತಾರಾತಿ ಭೂಪ॥
ಪ್ರಸರಾಸ್ಯಾಂಭೋಜಬಿಂಬ ಪ್ರತಿಕೃತಿ ನಖ ರಮ್ಯಾಂಘ್ರಿಪದ್ಮಂ ಸದಾ ಶೋ।
ಭಿಸುವಂ ಸಾಮ್ರಾಜ್ಯಲೀಲೋನ್ನತಿಯೊಳೊದವಿ ವಿಶ್ವಂಭರ ಕ್ಷೋಣಿಪಾಲಂ॥೨॥

ಮ॥ ಸಲೆ ಪಣ್ಯಾಂಗನೆಯಂತನಂತ ಭುಜಗೋದ್ಯತ್ಸಂಗತಂಬೆತ್ತಳಂ।
ನೆಲವೆಣ್ಣಂ ಚತುರಂಬುರಾಶಿ ರಶನಾಳಂಕಾರೆಯಂ ವಿಕ್ರಮಾ॥
ತುಲ ಸೌಂದರ್ಯದಿನಿಂತು ಕೂರಿಸಿ ನಿಜಚ್ಛತ್ರಾಮಳಚ್ಛಾಯೆಯೊಳ್।
ನಿಲಿಸಿಟ್ಟಂ ಸತತಂ ಸಮಗ್ರವಿಭವಂ ವಿಶ್ವಂಭರೋರ್ವೀಶ್ವರಂ ॥೩॥

ಮ॥ಸ್ರ॥ ಧರೆಯಂ ಮುಂತಾಳ್ದಿಯುಂ ಮಾಣಿಸಿದನೆ ಭರಮಂ ನಮ್ಮೊಳೆಂದಿಂತು ಕಂಜೋ।
ದರನಂ ಕೀಟ್ಮಾಡುತುಂ ದಿಕ್ಕರಿ ತತಿ ಸತತಂ [3]ಸಲ್ಲಕೀ ಖಾದ್ಯ ಲೀಲೋ॥
ತ್ಕರಮಂ ಶೇಷಂ ಸುಖಾಸೀನಮನುರು ಕಮಠಂ ನಿರ್ಭರಾನಂದಮಂ ತಾ।
ಳ್ದಿರೆ ತಾಳ್ದಿರ್ದಂ ಸಮಸ್ತಾವನಿಯನೆಸೆವ ವಿಶ್ವಂಭರ ಕ್ಷೋಣಿಪಾಲಂ ॥೪॥

ಕಂ॥ ಜಲನಿಧಿ ಪರಿವೃತ ವಸುಧಾ।
ತಲಮಂ ತೋಳೊಳ್ ನಿರಂತರಂ ನಿಲಿಸಿ ಕರಂ॥
ನಿಲಿಸಿದನಾಜ್ಞಾ ರತ್ನಮ॥
ನಿಲೇಶಸಿತರ ಕ್ಷಿತೀಶ ಮಣಿಮೌಳಿಗಳೊಳ್ ॥೫॥

1. ಸಂಬಗಿಂದೆ ಪೇಟೆುಪುದೀ. 2. ತ್ತುತ್ತಾ. 3. ಸಮ್ಯಕಿ ಚಾದ್ಯ.

ಮ॥ ದಿನದೊಳ್ ಮೂದೆಱನಾಯ್ತು ಭಾನುವಿನ ತೇಜಂ ಗೊಂಟುಗೊಂಡೆಯ್ದಿದಂ।
ತೆನಸುಂ ವಹ್ನಿಯ ತೇಜನೆಬ್ಬಿಡವಿಯೊಳ್ ಮಱ್ಗಿತ್ತು ದಾವಾಶ್ರಯಾ॥
ಶನ ತೇಜಂ ಜಲರಾಶಿಯೊಳ್ ಮುಱುಗಿದತ್ತೌರ್ವಾಗ್ನಿಭೂ ತೇಜಮೆಂ।
ದು ನಗುತ್ತಿರ್ಪ್ಪುದು ನೀಳ್ದ ತೇಜದೆಸಕಂ ವಿಶ್ವಂಭರಾಧೀಶನಾ ॥೬॥

ಮ॥ಸ್ರ॥ ಅನುರಾಗ ಜ್ಯೋತಿ ಮಿತ್ರಾವನಿಯೊಳಪರಿಹಾರಾನಲ ಜ್ವಾಲೆ ಮತ್ತಾ।
ರಿ ನಿಕಾಯಕ್ಷೋಣಿಯೊಳ್ ವಿದ್ರುಮರುಚಿ ವಸಧಿವ್ರಾತದೊಳ್ ಪೊಂಬಿಸಿಲ್ಕಾಂ॥
ಚನ ಶೈಲೋಪಾಂತದೊಳ್ ಸಿಂದುರವೆಸೆವ ದಿಶಾಕುಂಭಿ ಕುಂಭಂಗಳೊಳ್ತಾ।
ನೆನೆ ತಳ್ತುರ್ಬಿತ್ತು ವಿಶ್ವಂಭರನೃಪನ ಮಹೋದಗ್ರ ತೇಜಸ್ಸಮಾಜಂ ॥೭॥

ಮ॥ಸ್ರ॥ ಸತತಂ ಮೆಯ್ವೆರ್ಚಿತಾನಿಂದೊಡವೆಳಸುವುದಾತ್ಮೀಯ ವಿಕ್ರಾಂತ ಭಾಸ್ವ।
ಲ್ಲತೆಯೊಳ್ ಶತ್ರುವ್ರಜಾಂತರ್ಭವಭಯಲತೆಯಂ[1]ಸಾರ್ಚಿಶೋಭಾಸಮುಗ್ರೋ॥
ನ್ನತ ರಾಜ್ಯಶ್ರೀ ವಿಳಾಸಾಬ್ಧಿಯೊಳಿತರ ಕುಭೃತ್ಕಾಮಿನೀಸ್ತೋಮ ನೇತ್ರೋ।
ದ್ಗತಬಾಷ್ಪೋದಾಬ್ಧಿಯಂ ಕೊರ್ವಿಸುವುದೆಸೆವ ವಿಶ್ವಂಭರೋರ್ವೀಶ ತೇಜಂ॥೮॥

ಕಂ॥ ವಿನತ ನೃಪನಿಕರ ಕುಮುದಮಿ।
ದೆನಿಸಿಯುಮನತಾರಿನೃಪರ ಕುಮುದಂ ತಾನೆಂ॥
ದೆನಿಸಿದುದು ತನ್ಮಹೀ ನಾ।
ಥನ [ನವ] ತೇಜಃಪ್ರಭಾವಮಿದು ಚಿತ್ರತರಂ ॥೯॥

ಮ॥ ನೆಗಳ್ದಾ ಭೂಪನ ಶತ್ರು ಮಿತ್ರ ಪುರ ವರ್ಗಂ ಸಂತತೋನ್ಮತ್ತ ದಂ।
ತಿಗಳಿಂ ರಾಜಭುಜಂಗ ಸಂಗಯುಗದಿಂ ಸ್ತ್ರೀಯೂಥದಿಂ ಪುಂಡರೀ॥
ಕ ಗಣಾಕೀರ್ಣತೆಯಿಂ ದ್ವಿಜವ್ರಜದೆ ಲಕ್ಷ್ಮೀಯುಕ್ತದಿಂ ಖಡ್ಗಿ ರಾ।
ಜಿಗಳಿಂ ತದ್ಘನಘೋಷದಿಂ ಹರಿಗಳಿಂದೊಪ್ಪಿರ್ಪುದೇಂ ಚಿತ್ರಮೋ ॥೧೦॥

ಮ॥ಸ್ರ॥ ಎನಸುಂ ವಿಶ್ವಂಭರೋರ್ವೀಶ್ವರನುರು ರಭಸಕ್ಕಳ್ಕಿ ಸಂಗ್ರಾಮದೊಳ್ ಭೋಂ।
ಕನೆ ಬೆನ್ನಿತ್ತನ್ಯಭೂಪ ಪ್ರಕರಮುವಿರತಂ ಕಿಟ್ಟಿ ಬಾಳಂತೆ ಕಾಲ್ಯಾ॥
ನನ ಶೀತದ್ಯೋತಿಯಂತತ್ಯಧಿಕ ಪರಮ ಯೋಗೀಶರಂತುದ್ಘ ಶೋಭಾ।
ಜನಿತ ಪ್ರಾಸಾದದಂತಂಬುಜಸಖ [2]ಮುಖ[ಮಾಂ]ತಿರ್ದುದೆತ್ತಂ ವಿಚಿತ್ರಂ॥೧೧॥

1. ಸ್ವಾಚಿ. 2. ಸುಖ.

ಉ॥ ಆ ವಸುಧಾಧಿಪಂಗೆಡಱಿದನ್ಯ ನೃಪಾಳಿಗೆ ವನ್ಯಕೇಕಿ ಕೋ।
ಶಾವಳಿ ಕೋಶಮುಗ್ರತರ ದುರ್ಗಮೆ ದುರ್ಗಮುದಗ್ರ ಖಡ್ಗಿಗಳ್ ॥
ವ್ಯಾವೃತ ಖಡ್ಗಿಗಳ್ ಮಹಿಷಿಗಳ್ ಮಹಿಷೀತತಿ ಕಂಚುಕಿ ಕಂಚುಕಿವ್ರಜಂ।
[1]ಭಾವಿಸೆ ಕಂಚುಕಿ ವ್ರಜಮಿವಿರ್ಪುವು ಕಾನನ ರಾಜ್ಯಭಾರದೊಳ್ ॥೧೨॥

ಮ॥ಸ್ರ॥ ಕರಿ ವಾಜಿ ವ್ರಾತಮಂ ಕಪ್ಪಮನನವರತಂ ತಂದು ತಂದೀವ ಭೂಪೋ।
ತ್ಕರಮಂ ಕಂಡೆಯ್ದೆ ತಮ್ಮಾನೆಗಳನೆಳೆದುಕೊಳ್ಗುಂ ದಲೆಂದಂಜಿ ತಾಂ ಮೆ॥
ಯ್ಗರೆದಿರ್ದಿಂದ್ರಾದ್ಯರಂತಾ ನೆವದೊಳೆ ದೆಸೆಯಂ ಕೂಡೆ ಪೊಕ್ಕರ್ ತುರಂಗಂ।
ಬೆರಸರ್ಕಂ ವ್ಯೋಮಮಂ ಬಿಟ್ಟರನೆನೆ ನೃಪ ವಿಕ್ರಾಂತಮೇನಪ್ರತರ್ಕ್ಯಂ ॥೧೩॥

ಕರಿಯೊಂದಂ ವಾಜಿಯೊಂದಂ ಪಡೆದುಮೆಸೆವುದೇಕೆಂದುದುಗ್ಧಾಬ್ಧಿಯಂ ಮಾಂ।
ಕರಿಸುತ್ತುಂ ಪೆತ್ತಳೋ ಭೂವನಿತೆಯೆನೆ ಚತುರ್ದಂತ [2]ದಂತ್ಯಾಳಿಯಿಂ ವಾ॥
ಯು ರಯಾಶ್ವಾನೀಕದಿಂದಂ ಸತತಮವನಿ ತೀವಿರ್ಪುದೆಂ[3]ಬಂದು ವಿಶ್ವಂ।
ಭರ ಧಾತ್ರೀನಾಥನಾ ಸೇನೆಯ ಬಹುಳತೆಯಂ ಲೆಕ್ಕಿಸಲ್ ತಕ್ಕನಾವಂ ॥೧೪॥

ಕಂ॥ ನಿಮಿರ್ದಾ ನರನಾಥನ ವಿ।
ಕ್ರಮಶಿಖಿ ರಿಪುಪುರದೊಳಖಿಳ ತದ್ವನಿತಾ ದೃ॥
ಕ್ಸಮುದಯದೊಳ್ ಪುಲ್ಲಂ ನೀ।
ರುಮನೆಂದುಂ ಬೆಳೆಯಿಸುವುದಿದೇನಚ್ಚರಿಯೋ ॥೧೫॥

ಮ॥ಸ್ರ॥ ಜಲಧಿ ವ್ಯಾವಿಷ್ಟ ಭೂಚಕ್ರದೊಳೊದವಿದ ವೀರಾಸುಹೃಜ್ಜಾಲ ಜೀವಾ।
ನಿಲ ಪೀತಾಹಾರದಿಂದಂ ತಣಿಯದೆ ನಿಶಿತೋದಗ್ರ ಧಾರಾಗ್ರ ಶಷ್ಪ॥
ಚ್ಚಲ ಜಿಹ್ವಾ ಯುಗ್ಮಮಂ ನೀಟ್ಕರಿಸಿದನಿತೆ ನೀಡುತ್ತುಮಿಂತಿರ್ಪುದಾಜ್ಞಾ।
ಬಲವದ್ವಿಶ್ವಂಭರೋರ್ವೀಶ್ವರ ಕರ ಕಲಿತೋಗ್ರಾಸಿ ಕಾಲೋರಗೇಂದ್ರಂ ॥೧೬॥

ಬಳ ಸಂಚಾರಕ್ಕೆ ಧಾತ್ರೀತಳಮದು ತೆಱಪಿಲ್ಲಾಹವಕ್ಕಟ್ಟಿಯಿಂದಂ।
ತಳರಲ್ ಮಾಱಾಂಪ ಬಾಹಾಬಲ ಭಟ ನೃಪರಿಲ್ಲೊರ್ಮೆಯುಂ ಮಾಳ್ಪ ದಾನಂ॥
ಗಳ ಹೇಮ ಸ್ತೋಮಮುಂ ಪೊತ್ತಡಕಲಲಸದಿರ್ಪರ್ಥಿ ಸಂದೋಹಮಿಲ್ಲಾ।
ರಳವಾದಂ ಬಣ್ಣಿಸಲ್ಕಾ ನರಪತಿಯ ನಿಜಾನಲ್ಪ ಸಾಮ್ರಾಜ್ಯದೊಳ್ಪಂ ॥೧೭॥

---

1. ವೂಡಮೆ ತಾಂ ಬೆಸಂಗೊಳುತ್ತಿರ್ಪುದು. 2. ದಂತಾಳಿ. 3. ದಂದು

ಶಾ॥ ಆ ವಿಶ್ವಂಭರ ಭೂಭುಜಂಗೆ ಪೆಸರ್ವೆತ್ತಿರ್ಪಗ್ಗದಾ ಪಟ್ಟದಾ ।
ದೇವಿ ಶ್ರೀವಿಜಯಾವತೀ ಸತಿಯೆ ಸಲ್ಲಾವಣ್ಯ ಪೀಯೂಷ ಪಾ ॥
ರಾವಾರೋದ್ಭವ ಲಕ್ಷ್ಮಿ [1]ವಿಶ್ರುತ ಕಳಾಪ್ರಾಗಲ್ಭ್ಯ ವಾಗ್ಭಾಮೆಯಾ ।
ಜ್ಞಾ ವಿಸ್ತೀರ್ಣಕರ ಪ್ರಸಿದ್ಧ ಮಹಿಮೋಮಾದೇವಿ ವಿಭ್ರಾಜಿಪಳ್ ॥೧೮॥

ಕಂ॥ ಆವಗಮೆಸೆವಳ್ ಸಕಲ ಕ ।
ಲಾವತಿ ರೂಪವತಿ ವಿವಿಧ ಗುಣವತಿ ವರ ಶೋ ॥
ಭಾವತಿ ವಿವೇಕವತಿ ವಿಜ ।
ಯಾವತಿಯಾ ನೃಪನ ಪಟ್ಟಮಹಿಷೀ ಪದದೊಳ್ ॥೧೯॥

ಆ ಬಲವದ್ಭೂವರನ ಭು ।
ಜಾಬಲನನುಪಮ ಸಮಗ್ರ ರಾಜ್ಯ ರಮಾ ರ ॥
ಕ್ಷಾ ಬಳಮೆನಿಸಿರ್ಪಂ ಪ್ರ ।
ಜ್ಞಾಬಲನೆಂಬಂ ಪ್ರಧಾನನುಕ್ತಿ ನಿಧಾನಂ ॥೨೦॥

ಮ॥ಪ್ರ॥ ಬಿಸಜಾತೋದ್ಭೂತನೆಂದುಂ ಜಡಮತಿ ದಿವಿಜಾಚಾರ್ಯನುತ್ಪನ್ನ ಕಾರ್ಯ ॥
ಕ್ಕೆ ಸಮಂತೌಚಿತ್ಯಮಂ ಯೋಜಿಸಲರಿಯನಮರ್ತ್ಯಾಹಿತಾಚಾರ್ಯನುತ್ಪ್ರೇ ।
ಕ್ಷಿಸನಾತ್ಮೋದಗ್ರ ಕಾರ್ಯ ಕ್ಷಯಮನೆನುತುಮವ್ಯಾಹತ ಪ್ರಜ್ಞನಿಂದೇ ।
ಳಿಸುವಂ ಪ್ರಜ್ಞಾಬಲಾಖ್ಯಂ ಸಚಿವನಿಚಯ ಮುಖ್ಯಂ ಹತಾರಾತಿ ಸೌಖ್ಯಂ॥೨೧॥

ಸಲೆ ಸೇನಾಶಕ್ತಿಯಿಂದೋಲಗಿಸುವ ನೃಪರಿಂ ಮಂಡಲಾಧೀಶರಿಂ ದೋ ।
ರ್ಬಲವದ್ದಂಡೇಶರಿಂದುರ್ಬಿಸುವ ಪೆಸರ ಸಾಮಂತರಿಂ ಸಾಮಜಾಶ್ವಾ ॥
ವಲಿ ಸೇನಾಧೀಶರಿಂದಗ್ಗದ ಬಿರುದಮರ್ದಾ ನಾಯಕಾನೀಕದಿಂದ ।
ಸ್ಖಲಿತಂ ವಿಶ್ವಂಭರೋರ್ವೀಶ್ವರನರಸುಗೆಯುತ್ತಿರ್ಪನಾಗಳ್ ಪೊಡರ್ಪಿಂ ॥೨೨॥

ಮತ್ತಮಾ ವಿಶ್ವಂಭರನರೇಶ್ವರಂ ಮರುದ್ದಿಕ್ತಟದಂತೆ ಮಹಾಬಲ ಸಮನ್ವಿತನುಂ, ಧೃತರಾಷ್ಟ್ರನಂತೆ ದುರ್ಯೋಧನ ಪ್ರಿಯನುಂ, ಧರ್ಮಸುತನಂತೆ ವಿಜಯಾಲಂಕೃತನುಂ, ಪ್ರಾಚೀನಾಚಲದಂತೆ ಮಿತ್ರಮಂಡಲಾನುರಾಗನುಂ, ಶರಧಿಯಂತೆ ಶರಣಾಗತ ಕುಭೃತ್ಪಾಲಕನುಂ, ಸುರಗಿರಿಯಂತೆ ಸಮುನ್ನತ ಸತ್ತ್ವನುಂ, ಕುಬೇರಾಶಾ

---

1. ಸುಶ್ರುತ.

ಕರೀಂದ್ರದಂತೆ ಸಾರ್ವಭೌಮನುಂ, ರಾಕಾ ಸಮಯದಂತೆ ಸಕಲ ರಾಜಾಭಿರಾಜಿತನುಮಾಗಿರ್ಪಂ; ಅಂತುಮಲ್ಲದೆಯುಂ—

ಮ॥ಸ್ರ॥ ವರ ರಾಜ್ಯಶ್ರೀ ನಿಜಚ್ಛತ್ರದ ಕುಳಿರ್ವ ನೆಳಲ್ದಾಣದೊಳ್ ಲೀಲೆಯಿಂದೊ।
ಪ್ಪಿರೆ ತಾನೆಂದುಂ ಜಯಶ್ರೀ ವಿಪುಳತರ ಭುಜಾದಂಡದೊಳ್ ಬಂಧುರಂ ಬೆ॥
ತ್ತಿರೆ ಕೀರ್ತಿಶ್ರೀ ನಿಜಾತ್ತಂ ತ್ರಿಜಗದೊಳನಿಶಂ ತೀವಿ ಸತ್ಕಾಂತಿಯಂ ತಾ।
ಳ್ದಿರೆ ತದ್ಭೂಕಾಂತನೋರಂತರಸುತನಮನಾ ರೂಢಿಯಂ ಮಾಡುತಿರ್ಪಂ ॥೨೩॥

ಮ॥ ಕವಿ ಸಂಗೋಷ್ಠಿಯಿನೊರ್ಮೆ ವಿಶ್ರುತ ಪುರಾಣ ಶ್ರೇಣಿಯಿಂದೊರ್ಮೆ ತ।
ತ್ತ್ವ ವಿಚಾರಂಗಳಿನೊರ್ಮೆ ಚಾರು ರಸ ಚಿತ್ರಾಲೋಕದಿಂದೊರ್ಮೆ ಹಾ॥
ಸ್ಯ ವಿನೋದಂಗಳಿನೊರ್ಮೆ ಮೋಹನ ಮಹಾ ಸಂಗೀತದಿಂದೊರ್ಮೆ ಶ।
ಸ್ತ್ರ ವರಾಭ್ಯಾಸದಿನೊರ್ಮೆ ಪೊೞ್ತುಗಳೆವಂ ವಿಶ್ವಂಭರೋರ್ವೀಶ್ವರಂ ॥೨೪॥

ತುರಗಾರೋಹದಿನುನ್ಮದೇಭ[ವ]ರ ಶಿಕ್ಷಾಕ್ರೀಡೆಯಿಂ ಜಟ್ಟಿ ಮ।
ಲ್ಲರ ಯುದ್ಧೇಕ್ಷಣದಿಂ ಚಮತ್ಕೃತಿ ಕಲಾ ವಿಕ್ಷೇಪದಿಂ ವೈಣಿಕೋ॥
ತ್ಕರ ವೀಣಾ ಮಧುರ ಧ್ವನಿ ಶ್ರವಣದಿಂ ನಿತ್ಯೋಚಿತ ದ್ಯೂತದಿಂ॥
ಸರಸೋದ್ಯಾನ ವಿಹಾರದಿಂದೆ ಕಳೆವಂ ಪೊೞ್ತಂ ನರೇಂದ್ರೋತ್ತಮಂ ॥೨೫॥

ಕಂ॥ ಸಂತತಮಲಂಪು ಮಿಗೆ ಭೂ।
ಕಾಂತಂ ಕಮನೀಯ ರೂಪವತಿಯೆನಿಪ ಲಸ॥
ತ್ಕಾಂತೆ ವಿಜಯಾವತೀಸತಿ।
ಯುಂ ತಾನುಂ ನಲಿಯುತಿರ್ಪರುತ್ಸವದಿಂದಂ ॥೨೬॥

ಮ॥ ದಿವಸಶ್ರೀ ದೊರೆಕೊಂಡ ಕೋಕ ಮಿಥುನಂ ಚಂದ್ರಾತಪಾನೂನ ವೈ।
ಭವದೊಳ್ ಸಂದ ಚಕೋರ ದಂಪತಿ ಪೊದಟ್ದಬ್ಜಾಕರಂ ತಾಣಮಾ॥
ದ ವಿರಾಜತ್ಕಳಹಂಸ ಯುಗ್ಮಮೆನೆ ಕೂಡಿ ಕ್ರೀಡಿಸುತ್ತಿರ್ಪರು।
ತ್ಸವದಿಂದಾ ವಿಜಯಾವತೀ ಯುವತಿಯುಂ ವಿಶ್ವಂಭರೋರ್ವೀಶನುಂ ॥೨೭॥

ಇಂತು ಕ್ರೀಡಾ ರೂಢಮಾನಸನಾಗಿರ್ದೊಂದು ದೆವಸದೊಳ್—

ಮ॥ಸ್ರ॥ ಪೊಡೆಯಿಪ್ಪಾಭೀಳ ನಿಸ್ಸಾಳದ ಕಡು ದನಿಗಾಶೇಭ ಕರ್ಣೋತ್ಕರಂ [1]ಘೀ।
ಟೊಡೆ ಸೈನ್ಯೋದ್ಭೂತ ನಾನಾ ಪಟಹ ಪಟುಸಿನಾದಂ ನಭಕ್ಕಾಕ್ಷಣಂ ಧೀಂ॥
ಕಿಡೆ ಕೇತುವ್ರಾತ ಭಾಸ್ವದ್ವಿರುದ ಪಟಕುಳಾಕೀರ್ಣದಿಂ ವಾಯು ಯಾನಂ॥
ಗಿಡೆ ರಾಜದ್ವಾಹಳೀ ಕೇಳಿಗೆ ನೆಱೆ ಪೊರಮಟ್ಟಂ ಮಹೀನಾಥನಾಗಳ್ ॥೨೮॥

ಮ॥ ತುರಗಾನೀಕ ಮುಖೋಚ್ಚಯೋದ್ಗಳಿತ ಲಾಲಾಫೇನ ಸಂತಾನದಿಂ।
ಧರೆ ಶುಭ್ರಾಂಶುಮಯಂ ದಲಾಗೆ ಕಠಿಣ ಪ್ರೋದ್ಯತ್ಖುರಾಘಾತದಿಂ॥
ಗಿರಿಗಳ್ [2]ಘೂರ್ಣತೆವೆತ್ತು ಧೂತ್ಕೃತ ಮರುತ್ಸಂರಂಭದಿಂ ಪಾಱೆಯಂ।
ಬರ ಗಂಗಾಕರಮಾಗೆ ಮಾಡಿದನಿಳೇಶಂ ವಾಹಳೀ ಕೇಳಿಯಂ ॥೨೯॥

ಉ॥ ಕೂಡೆ ದಿಶಾಂತಮೆಯ್ದದನಿಶಂ ಹಯ ಸಂಪ್ರಸರಕ್ಕೆ ವೇಗ ಸಂ।
ತಾಡಿತ ತೀವ್ರ ತತ್ಖುರ ಕುಳೋದ್ಗತ ಲೋಷ್ಟ ಚಯಕ್ಕೆ ಭೂತಳಂ॥
ನಾಡೆಯುಮೆಯ್ದದೆಂದೆನೆ ಮಹಾದ್ಭುತ ಭಾವಮದುಣ್ಮೆ ವಾಹಳೀ।
ಕ್ರೀಡೆಯನಿಂತು ಮಾಡಿ ಮಗುಟ್ದಿಂ ವಿಮಳಾಪುರಿಗಾ ನರೇಶ್ವರಂ ॥೩೦॥

ಚಂ॥ ಕರಿಮದ ಪೂರದಿಂ ಹಯ ಮುಖಂಗಳ ಬೆಳ್ನೊರೆಯೋಳಿಯಿಂ ನಿರಂ।
ತರಮಖಿಳೋರ್ವಿಯೊಳ್ ಪರೆವಿನಂ ವರ ಸಿಂಧುಗಳೆತ್ತಲುಂ ಕಡ॥
ಲ್ವರಿದವೊಲಾಗೆ ಪೊಣ್ಮುವ ಬಲಾಹಕ ಭೀಷಣ ಘೋಷದಿಂ ದಿಶೋ।
ತ್ಕರಮನಿತುಂ ಕರಂಗಿ ಕಡುವೀಱುತಿರಲ್ ಬರುತಿರ್ದನಾ ನೃಪಂ ॥೩೧॥

ಇಂತು ಬಂದು ಪುರಮಂ ಪೊಕ್ಕು ನಿಜ ನೃಪನಿವಾಸ ಗೋಪುರದೊಳ್ ನಿವಾರಿತ ಪರಿವಾರನಾಗಿ—

ಉ॥ ಬೋಳಯಿಸುತ್ತುಮಾ ತುರಗಮಂ ಗಳಮೂಲ ಮುಹುರ್ಮುಹುರ್ಮೃದು।
ಸ್ಫಾಳನ ಪಾಣಿಪಟ್ಟ ಗುಣರಶ್ಮಿ ಕಳಾವೃತ ವಾಮ ಹಸ್ತನಾ॥
ಲೋಳ ನವೋತ್ತರೀಯ ವಸನಾಂಚಲನುಜ್ಜ್ವಲ ರತ್ನ ಕುಂಡಲಾಂ।
ದೋಳ ಕಪೋಲಭಿತ್ತಿ ಯುಗನಿಂತೆಸೆದಂ ಬರುತುಂ ಧರಾಧಿಪಂ ॥೩೨॥

ಕಂ॥ ಪ್ರಿಯ ವಿಕ್ಷೇಪಣ ನಯನ।
ದ್ವಯದುತ್ಸುಕ ವೃತ್ತಿಯಱಿದು ತಂದುದು ತಾನೀ॥

---

1. ಘಿಂವಿಡೆ. 2. ಚೂರ್ಣತೆ.

ಹಯಮೆನೆ ವಿಜಯಾವತಿ ದೇ।
ವಿಯ ಮಣಿ ನಿಳಯಕ್ಕೆ ಬಂದನಿಂತು ನರೇಂದ್ರಂ ॥೩೩॥

ಕಂ॥ ಕರತಳ ಗೃಹೀತ ಕಂಧರ।
ಹರಿಕೇಶ ಪ್ರಸರನಾಗಿ ಮುಜೂದಮಳಾಂಗಂ ॥
ಪಿರಿದೆಸೆಯೆ ಚರಣ ವಿನಿಹಿತ।
ಧರಣೀ ತಳನಾದನಾಗಳಾ ಧರಣೀಶಂ ॥೩೪॥

ಇಂತು ಸಮುತ್ಸಾರಿತ ತುರಂಗನಾದ ನರೇಶ್ವರಂ ಕರಂಕ ವಾಹಿನೀ ಕರನ್ಯಸ್ತ ಹಸ್ತನಾಗಿ ಅಂತಃಪುರ ಮಂದಿರಮಂ ಪುಗುತರ್ಪಾಗಳ್—

ಕಂ॥ ಸರಭಸದೆ ಸೆಜ್ಜೆವನೆಯೋ।
ವರಿಗಿರದೆ ಬರುತ್ತುಮಿರ್ದಪಂ ದೇವಿ ಮಹೀ॥
ಧರನೆಂದು ಬಿನ್ನವಿಸಿದಳ್।
ಪರಿಚಾರಿಕೆಯಪ್ಪ ಹರ್ಷವರ್ಧನೆಯಾಗಳ್ ॥೩೫॥

ಆ ಹರ್ಷವರ್ಧನೆಯ ಬಿನ್ನಪಮನೆಂತಾನುಂ ಚಿತ್ತದೊಳವಧರಿಸಿ—

ಮ॥ ಪಿಡಿಯುತ್ತುಂ ನಯನಾಂಬುವಂ ನಖದಿನಾಗಳ್ ಶಯ್ಯೆಯಿಂದೆದ್ದು ತಾಂ।
ನಿಡುಸುಯುತ್ತಮೆ ಸಾರ್ದು ಪೀಠ ಶಿರದೊಳ್ ಕುಳ್ಳಿರ್ದು ಚಿಂತಾತುರಂ॥
ತೊಡರ್ದಿರ್ಪಾ ವಿಜಯಾವತೀ ಸತಿಯ ದೀನ ಮ್ಲಾನ ವಕ್ತ್ರಾಬ್ಜಮಂ।
ಪೊಡವೀಶಂ ಪುಗುತುಂ ನಿರೀಕ್ಷಿಸಿ ಭಯಂಬೆತ್ತಂ ನಿಜ ಸ್ವಾಂತದೊಳ್ ॥೩೬॥

ಕಂ॥ ಇಂದೇಕೆ ದೇವಿಯರ ವದ।
ನೇಂದುವ ಚಂದ್ರಿಕೆ ಮದೀಯ ಚಿತ್ತ ಚಕೋರಾ॥
ನಂದಮನೆ ಮಾಡದೆನುತುಂ।
ಬಂದಾ ಶಯ್ಯಾ ವಿಭೂಷನಾದನಿಳೇಶಂ ॥೩೭॥

ಮ॥ ವಿನಯಂಗುಂದಿದುದಿಲ್ಲ ಪೊಲ್ಲಮೆಯನೆಂತುಂ ಮಾಡೆನೀ ಪೋದಿರುಳ್।
ಮುನಿಸಂ ತಾಳ್ದಿರೆನಂತದಲ್ಲದಿತರ ಸ್ತ್ರೀ ಸಂಗಮಾಯ್ತೆಂಬೊಡಿಂ॥
ತನಿತಂ ತಾನಜುವಳ್ ಮದೀಯ ಧೃತ ಶೋಭಾ ಭಾರಮಂ ಮತ್ತಮೇ।
ಕಿನಿತುಂಗ್ಲಾನಿಯನಾಂತಳೆಂಮುಮನದೊಳ್ ತಾಂ ನೊಂದನಾಭೂಭುಜಂ ॥೩೮॥

ಕಂ॥ ಆದೊಡಮೇನಿಂತಾ ನೋ।
ವಾದುದು ಚಿತ್ರಕ್ಕೆ ದುರ್ಧರ ಜ್ಞಾನಿಗಿದೇಂ॥
ಭೇದಿಸುವೆಂ ದೇವಿಯರ ಮು।
ಖೋದಿತ ವಚನಂಗಳಿಂದವೆಂದಿಂತೆಂದಂ ॥೩೯॥

ಚಂ॥ ಘನಕುಚ ಶೈಲ ಮೌಳಿಗಿಡುಕುಂಬಸಿಯಂ ಬಿಡುತಿರ್ಪುದೇಕೆ ಲೋ।
ಚನ ಕಲಿತಾಂಬುದಂ ಶ್ವಸಿತಮೇಕಳಿ ಮಾಲೆಗೆ ಕಾಯ್ದು ನೀಟ್ಟುದಾ॥
ನನ ಸರಸೀಜಮಂ ಕರ ಸರೋಜಮಿದೋಲಗಿಸಲ್ಕೆ ಸಾರ್ದುದೇ।
ಕೆನಗಿನಿತಂ ಸಮಂತು ನೆಱೆ ಸೂಚಿಸು ನೀಂ ವಿಜಯಾವತೀ ಸತೀ ॥೪೦॥

ಕಂ॥ [1]ಅರುಣಾಂಗುಳಿ ದಳ ವಿಲುಳಿತ।
ಚರಣಾಬ್ಜದಿನೆಸೆವ ನೀಲಮಣಿ ವಿರಚಿತ ನೂ॥
ಪುರ ಚಾರು ಚಂಚರೀಕೋ।
ತ್ಕರಮೇಕೋಲಗಿಸದಿಂದು ಪೇೞಿಂದುಮುಖೀ ॥೪೧॥

ತನುಮಧ್ಯೆ ನಿನ್ನ ಕೋಮಲ।
ತನುಲತೆಗಾವಾಲಮೆಸಿಪ ಘನ ಜಘನದೊಳಿಂ॥
ದು ನಿಜ ಪ್ರಭಾಂಬು ಪೂರಮು।
ನೆನೆಸುಂ ಬಿಡದೇಕೆ ಮೌಕ್ತಿಕಾಲಿ ಕಲಾಪಂ ॥೪೨

ಪ್ರಿಯೆ ನಿನ್ನ ಘನ ಪಯೋಧರ।
ಪಯೋಧರಂ ತಾರ ಹಾರ ರುಚಿ ಜಲ ಧಾರಾ॥
ಚಯದಿಂದೆ ಮುದಮನಿಂದೆ।
ನ್ನಯ ಚೇತಶ್ಚಾತಕಕ್ಕೆ ಮಾಡದದೇನೋ ॥೪೩॥

ಸರಸಿರುಹ ವದನೆ ನಿನ್ನಯ।
ಸುರುಚಿರ ಸುಕುಮಾರ ಬಾಹು ವಲ್ಲೀ ಯುಗಳಂ॥
ತರಳತರ ವಿಮಳ ಮುಕ್ತಾ।
ಕರ ವಳಯ ಪ್ರಸವದಿಂದೆ ಮೆಱೆಯದದೇನೋ ॥೪೪॥

1. ಚರಣಾಂಗುಲಿ ತಳ.

ಮಿಗೆ ಮಿಸುಪಮಳಿನ ಮುಕ್ತಾ।
ಳಿಗಳವತಂಸದ್ವಿ[1]ತಯದಿನೆಲೆ ಸತಿ ನಿನ್ನೀ ॥
ಸೊಗಯಿಪ ಮುಖ ಶಶಿಬಿಂಬಂ।
ತ್ರಿಗುಣಿತಮಾಗೆಸೆಯದಿರ್ಪ ಕಾರಣಮೇನೋ ॥೪೫॥

ವದನಾಂಶು ಪಯೋಧಿಯೊಳು।
ಣ್ಮಿದ ವಿದ್ರುಮ ಲೇಖೆಯಂತೆ ನಿನ್ನೆಸೆವಧರಂ ॥
ಪುದಿದರುಣತೆಯಂ ದ್ವಿಗುಣಿಸ।
ದುದಕ್ಕೆ ಕಾರಣಮಿದೇನೊ ಕೈರವ ನೇತ್ರೇ ॥೪೬॥

ಪರಿಕಳಿತ ಕಳಂಕಚ್ಛವಿ।
ವೆರಸುಜ್ಜ್ವಳಿಪರ್ಧ ಚಂದ್ರನಂ ಪೋಲದದೇಂ ॥
ವರ ಕಸ್ತೂರೀ ತಿಲಕದಿ।
ನುರು ಶೋಭಾಘಾಟಮೆಸಿಪ ನಿನ್ನ ಲಲಾಟಂ ॥೪೭॥

ಕಂ॥ ತಾರೆಗಳನಮರ್ದು ಮುತ್ತಿದ।
ಕಾರಿರುಳೆಂಬಂತೆ ವಿಚಕಿಳ ಪ್ರಚಯದೆ ವಿ ॥
ಸ್ತಾರಿಸದು ನಿನ್ನ ಕಬರೀ।
ಭಾರಮಿದೇಕೆಂದು ಪೇಳಿ ಲಲಿತ ಲತಾಂಗೀ ॥೪೮॥

ಮ॥ ಇಸಿತೊಂದುಮ್ಮಳಮಾವ ಕಾರಣದಿನಾದತ್ತೆಂಬುದಂ ದೇವಿ ಪೇ।
ಚಿನುತುಂ ತನ್ನಯ ತೋಳ್ಗಳಿಂ ತೆಗೆದು ತಚಿಕ್ಕೈಸುತ್ತುಮುತ್ತುಂಗಮು ॥
ಪ್ಪ ನಿಜೋತ್ಸಂಗದೊಳಿಟ್ಟು ಲೋಲ ವಿಲಸನ್ನೇತ್ರಂಗಳಿಂ ಪಾಯ್ವ ಕ।
ಣ್ಬನಿಯಂ ತನ್ನ ಕರಾಗ್ರದಿಂದೆ ತೊಡೆದಂ ವಿಶ್ವಂಭರೋರ್ವೀಶ್ವರಂ ॥೪೯॥

ಕಂ॥ ಮನದುಮ್ಮಳಮದು ಪವಣಿಪೊ।
ಡನಂತಮೆಂದಱಪುವಂತಿರೆಡೆವಿಡದೋರಂ ॥
ತೆನಸುಂ ಪೊಱಸೂಸುವ ಕ।
ಣ್ಬನಿಯಂ ಕಂಡರಸನತುಳ ವಿಸ್ಮಿತನಾದಂ ॥೫೦॥

1. ತೀಯದಿ.

ಚಂ॥ ನಿನಗಿನಿತುಮ್ಮಳಂ ಪುದಿದ ಕಾರಣಮಾವುದದೆಂದು ಭೂಪನೊ।
ಯ್ಯನೆ ಚುಬುಕಾಗ್ರಮಂ ನಿಜ ಕರಾಂಗುಳಿಯಿಂ ಪಿಡಿದೆತ್ತಿ ದೇವಿ ಪೇ॥
ಳಿನಲುಸುರಲ್ಕೆ ನಾಣ್ಚಿ ತಲೆವಾಗಿ ಕರಂ ಮನದನ್ನಳಪ್ಪ ತ।
ನ್ನನುಚರೆ ಹರ್ಷವರ್ಧನೆಯ ವಕ್ತ್ರಮನೀಕ್ಷಿಸಿದಳ್ ಕಟಾಕ್ಷದಿಂ ॥೫೧॥

ಕಂ॥ ಸುತ ದೋಹಳ ಧೃತೆ ವಿಜಯಾ।
ವತಿ ಸತಿಯೀಕ್ಷಿಸೆ ಕಟಾಕ್ಷ ಸಂಜ್ಞೆಯೊಳರಸಂ॥
ಗತಿಮುದದೆ ಬಿನ್ನವಿಸಲು।
ದ್ಯತೆಯಾದಳ್ ನೆಗಟ್ದ ಹರ್ಷವರ್ಧನೆಯಾಗಳ್ ॥೫೨॥

ಉ॥ ದೇವ ಭವತ್ಕ್ರಿಯಾ ಜನಿತಮಪ್ಪ ನಿರೋಧಮದೇನುಮಿಲ್ಲ ಸಂ।
ಭಾವಿಸೆ ದೇವಿಯಗ್ಗ್ರ್ಗಿ ನೃಪ ಬಿನ್ನಪಮಿಂದು ಮಹೀಸುರೋತ್ತಮಂ॥
ದೇವಲನೆಂಬ ನಮ್ಮಯ ಪುರಾಣಕನುತ್ಸವದಿಂ ಮಹಾ ಪುರಾ।
ಣಾವಳಿಯಂ ಪ್ರಭಾತದೊಳೆ ಪೇಳುತುಮಿರ್ಪುದುಮಾ ಪ್ರಸಂಗದೊಳ್ ॥೫೩॥

ಮ॥ ಪೆಸರ್ವೆತ್ತಾ ವಸುಭೂತಿಯೆಂಬ ಪರದಂ ತದ್ಭಾರ್ಯೆ ಸೌಂದರ್ಯೆಯುಂ।
ನಿಸದಂ ಪ್ರೇಮದೆ ದೇವ ನಿಮ್ಮ ಪೆಸರಂ ತಾನಿಟ್ಟೆನೆಂಬೊಂದು ಸಂ॥
ತಸಮಂ ಭಕ್ತಿಯನಿಂತು ತೋರ್ಪ್ಪ ಬಗೆಯಿಂದಂ ದೇವಿಯಗ್ಗ್ರಿಂದು ಕಾ।
ಣಿಸಿದರ್ ತಂದು ವಿಶೀರ್ಣ ಕಜ್ಜಳ ವಿಲೇಖಾ ನೇತ್ರನಂ ಪುತ್ರನಂ ॥೫೪॥

ಉ॥ ಶೂಲಿಯ ಬಾಳವೋಲ್ ಸುಲಲಿತಾಲ್ಪ ಜಟಂ ವ್ರತಿವೋಲ್ ಪ್ರಕೀರ್ಣ ರ।
ಕ್ಷಾ ಲಸದಂಗನಿಂದ್ರಕರಿವೋಲ್ ಚತುರಂಚಿತ ದಂತ ದೀಪ್ತಿ ರೇ।
ಖಾಲುಳಿತಾನನಂ ವರುಣ ದಿಗ್ಮುಖ ದಂತಿವೊಲಂಜನ ಪ್ರಭಾ।
ಲಾಲಿತನಾಗಿ ಕಣ್ಗೊಳಿಪ ಬಾಲಕನಂ ನೃಪ ದೇವಿ ನೋಡಿದಳ್ ॥೫೫॥

ಇಂತು ನೋಡಿ—

ಮ॥ ಪುಳಕಂ ಮುಂಬಳಿದೆತ್ತಲಂಶುಕಮನಾಗಳ್ ಬೇಗದಿಂದೆತ್ತಿದಳ್।
ವಳಿ ಲಂಬಾಲಕನಪ್ಪ ಬಾಲಕನನಾ ಬಾಲಂಗೆ ಬಾಲೋಚಿತಂ॥
ಗಳೆನಿಪ್ಪಾಭರಣಂಗಳಂ ಪಲವನಿತ್ತುತ್ಕರ್ಷಮಂ ಹರ್ಷಮಂ।
ತಳೆದಿರ್ದೊಯ್ಯನೆ ದೇವಿಯೀಕ್ಷಿಸಿದಳಾ ಪೌರಾಣಿಕಾಸ್ಯಾಬ್ಜಮಂ।

ಕಂ॥ ದೇವಿ ಮೊಗಮಂ ನಿರೀಕ್ಷಿಸೆ।
ಭಾವಮನದನಱಿದು ನಮ್ಮ ದೇವಲಭಟ್ಟಂ॥
ಪಾವನ ವಿನೂತನೋಕ್ತಿ ಕ।
ಳಾ ವಿಭವಂ ವಿನಯದಿಂದೆ ಪದೆದಿಂತೆಂದಂ ॥೫೭॥

ಮ॥ ಘನ ಸಂಸಾರ ಸುಖಕ್ಕೆ ಸಾರಮಿದು ಪುತ್ರಾಸ್ಯಾಂಬುಜಾಲೋಕನಂ।
ತನಯಾಲಿಂಗನಮಾತ್ಮಜಾ ಸದೃಶ ವಾಕ್ಯಾಕರ್ಣನಂ ದೇವಿ ನಂ॥
ದನ ಲಾಲಾಮುಖ ಚುಂಬನಂ ಸುತ ಶಿರೋಜಾಘ್ರಾಣನಂ ಸೂನು ಲೋ।
ಚನ ರೋಚಿಷ್ಪರಿಚರ್ಚೆ ತೋಕ ತನು ಲಿಪ್ತಕ್ಷೋದ ಸಂದರ್ಶನಂ ॥೫೮॥

ಕಂ॥ ಸಂಸಾರ ಶ್ರಮ ಪರಿಹಾ।
ರಂ ಸುತಮುಖ ದರ್ಶನಂ ಕವಿತ್ವಂ ಸತ್ಸಂ॥
ಗಂ ಸಂಭಾವಿಸುವೊಡೆ ಪಿರಿ।
ದುಂ ಸಾರಂ ದೇವಿ ಪುತ್ರನುತ್ಸವ ಪಾತ್ರಂ ॥೫೯॥

ಬಗೆವೊಡೆ ಸುತನಿಹ ಸೌಖ್ಯದ।
ಬಗರಗೆ ಪೆಱತಲ್ತು ದೇವಿ ಸತತ 'ಮಪುತ್ರ॥
ಸ್ಯ ಗತಿರ್ನಾಸ್ತಿ' ಯೆನುತ್ತುಂ।
ಮಿಗೆ ಸಾಱುವುವಖಿಳ ವೇದ ಪೌರಾಣಂಗಳ್ ॥೬೦॥

ಉ॥ ಇಂತುಚಿತೋಕ್ತಿಯಂ ನುಡಿದ ದೇವಲಭಟ್ಟನ ನೀತಿ ವಾಕ್ಯಮೋ।
ರಂತೆ ನಿಜ ಶ್ರವಾಂತಮನೆ ಸೋಂಕಿ ಮನಂ ನೆಱೆ ನೊಂದು ನೋಯದಿ॥
ರ್ಪಂತೆ ತದೀಯ ಬಾಲಕನ ಮಾತೃಪಿತೃ ದ್ವಿತಯಕ್ಕೆ ದೇವಿ ಬೇ।
ಟ್ಪಂತೊಸೆದಿತ್ತು ಮನ್ನಿಸಿ ವಿಸರ್ಜಿಸಿದಳ್ ನಯದಿಂ ನರೇಶ್ವರಾ ॥೬೧॥

ಕ॥ ಬಱಿಕ ಬಹಿರ್ಮುದದಿಂದಾ।
ಗಳೆ ಮನ್ನಿಸೆ ತತ್ಪುರಾಣಕನನೋಲಗದಿಂ॥
ಕಳಿಪಿ ನಡೆತಂದು ಶಯ್ಯಾ।
ತಳದೊಳ್ ಮೆಯ್ಯಿಕ್ಕಿ ದೇವಿ ಚಿಂತೆಯನಾಂತಳ್ ॥೬೨॥

ನುಡಿಯಳ್ ನೋಡಲದೇನಂ।
ಮಿಡುಕಳ್ ಕಂಬನಿಯ ತಂದಲಂ ಕಡೆಗಣ್ಣಿಂ॥

ಗುಡುಗುಡನೆ ಸುರಿಯುತೆನಿಸುಂ ।
ನಿಡುಸುಯ್ಯುತ್ತುಸುರದಿರ್ದಳೊಂದರೆ ಜಾವಂ ॥೬೩॥

ಆನುಂ ಪರಿಚಾರಿಕೆಯರು ।
ಮೇನೆಂದೆನಲಱಿಯದೊತ್ತಿ ದೇವಿಯರನದೆ ॥
ತ್ತಾನುಂ ನುಡಿಯಲ್ಕಮ್ಮದೆ ।
ಮೋನಂಗೊಂಡಂತಿರಿರ್ದೆವಿರ್ಪುದುಮಾಗಳ್ ॥೬೪॥

ಉ॥ ಮೆಲ್ಲನೆ ಕಣ್ಗಳಂ ತೆರೆದು ತನ್ನೊಳೆ ತಾಂ ನುಡಿಯುತ್ತುಮಿರ್ದಳು ।
ದ್ಯಲ್ಲಲಿತಾಂಗನಪ್ಪ ಮುದಧೀಶ್ವರ ರೂಪ ವಿಳಾಸನಪ್ಪ ಭಾ ॥
ಸ್ವಲ್ಲಸಿತಾಳಕ ಪ್ರಕರನಪ್ಪ ಸಮಗ್ರ ಸುಲಕ್ಷಣೋರು [ಕಂ ।
ಜೋ]ಲ್ಲಲಿತಾಕ್ಷನಪ್ಪ ಸುತನಂ ಪಡೆವುತ್ಸವಮೆಂದು ಸಾರ್ಗ್ಗುವೋ ॥೬೫॥

ಭೋರನೆ ಭಾಮೆಯರ್ ಪರಸಿ ತೂಪಿರಿಯುತ್ತೆನಗಂ ಕುಮಾರಕಂ ।
ಗಾ ರಮಣೀಯ [1]ರಕ್ಷೆಗಳನಾಗಳೆ ತಂದು [2]ತೊಡರ್ಚೆ ಸೂತಿಕಾ ॥
ಗಾರದೊಳದ್ರಿ[3]ಗಹ್ವರದೆ ಸಿಂಹ ಕಿಶೋರ ಸಮೇತ ಸಿಂಹಿಕಾ ।
[4]ಸ್ಫಾರಮನಾಂತು ಭಾಗ್ಯವತಿಯಪ್ಪ ವಿಳಾಸಮನೆಂದು ಕಾಣ್ಬೆನೋ ॥೬೬॥

ಕಂ॥ ಅರಸನ ಕೈಗೆನ್ನಯ ಕೈ ।
[5]ಗಿರದೆಡೆಯಾಡುತ್ತು [6]ಮಿರ್ವರೊಳ್ ಸಮ ಹರ್ಷೋ ॥
ತ್ಕರಮಂ ಸಮನಿಪ ಸುತನಂ ।
ಪರಿಭಾವಿಪ ಸೌಖ್ಯಮೆನಗದೆಂದಾದಪುದೋ ॥೬೭॥

ವಿಲುಳಿತ ಮಣಿ ಕುಟ್ಟಿಮದೊಳ್ ।
ಸಲೆ ಮಾರ್ಪೊಟಿ[3]ದೆಸೆವ ತನ್ನ ನೆೞ[7]ಲಂ ದಾಯೆಂ ॥
ದುಳಿದು ನಗುತ್ತುಂ ನಂದನ ।
ನೊಲವಿಂ ದಟ್ಟಡಿಯನಿಡುವುದೆಂದಾದಪುದೋ ॥೬೮॥

ಚಂ॥ ಒಗೆವ ನಿಜಾಂಘ್ರಿ ನೂಪುರದ ನುಣ್ದನಿಗಂದೊಡವರ್ಪ ಹಂಸ ಮಾ ।
ಲೆಗೆ ಬಗೆಯೊಳ್ ಬಿಗುರ್ತು ಪಿರಿದುಂ ಪರಿತಂದಿರದೋವಿ ಸೋವುಗುಂ ॥

---

1. ರಕ್ಷಿಗಳ. 2. ತೊಡರ್ಚಿ. 3. ಗಹ್ವರದ. 4. ಗಾರ.
5. ಗರೆದೆಡೆ. 6. ಮಿರ್ಪ್ಪ. 7. ಲೆಂದಾ.

ಮೊಗಮನೆನುತ್ತುಮೆನ್ನ ಕೊರಲಂ ಬಿಗಿಯುಪ್ಪುವ ಮುಗ್ಧಭಾವದಿಂ।
ಸೊಗಯಿಪ ಪುತ್ರನಿಂತೆನಗೆ [ಪೆರ್ಚಿಪ] ಸೌಖ್ಯಮನೆಂತು ಮಾಳ್ಪನೋ ॥೧೯॥

ಉ॥ ಇಂತು ಬಹು ಪ್ರಕಾರದೊಳೆ ದೇವಿ ತನೂಭವ ದೋಹಳಂಗಳಂ।
ಚಿಂತಿಸುತಿರ್ದಳಿನ್ನೆವರೆಗಂ ಪೆಱತಂ ಮಱೆದೆಂದೆನುತ್ತುಮೋ ॥
ರಂತಿರೆ ಹರ್ಷವರ್ಧನೆಯುದಂ ನೆಱೆ ಭಿನ್ನವಿಸಲ್ಕೆ ಕೇಳ್ದು ತಾ।
ನುಂ ತಳೆದಂ ಸ್ವಕೀಯ ಹೃದಯಾಂಬುಜದೊಳ್ ನೃಪನುದ್ಘಚಿಂತೆಯಂ ॥೨೦॥

ದೇವಿಯರಿಂತು ಚಿಂತಿಸಿದವೋಲ್ ಸುತನಿಲ್ಲದ ರಾಜ್ಯಭೋಗ ಲೀ।
ಲಾವಹಮಿಾ ಸಮಗ್ರ ವಿಭವೋತ್ಕರಮಿಾ ಮದವದ್ದ್ವಿಪಾಶ್ವಮಾ ॥
ಲಾವೃತ ಸೈನ್ಯಮಿಾ ವಿದಿತ ಸರ್ವಮಹೀತಳಮಿಾ ಸಮಸ್ತ ಕೋ।
ಶಾವಳಿ ನಾಡೆ ನಿಷ್ಫಲಮೆನುತ್ತುಮೆ ಚಿಂತಿಸುತಿರ್ದನಾ ನೃಪಂ ॥೨೧॥

ಕಂ॥ ಆ ವಿಶ್ವಂಭರ ನೃಪನುಂ।
ದೇವಿಯುಮೋರಂತೆ ಪುತ್ರ ದೋಹಳ ಚಿಂತಾ ॥
ಭಾವದೊಳಿರ್ಪ್ಪುದುಮಾಯೆಡೆ।
[1]ಗಾವಾ ಪ್ರಜ್ಞಾಬಲ ಪ್ರಧಾನಂ ಬಂದಂ ॥೨೨॥

[2]ಅಂತು ಬಂದಾ ಸಮಯದೊಳ್—

ಚಂ॥ ಅನಿಮಿಷಮಾದ ಕಣ್ಮಲರ್ಗಳಿಂ ಕದಪಂ ತಳೆದಾ ಕರಾಬ್ಜದಿಂ।
ಜನಪತಿಯುಂ ತದಂಗನೆಯುಮಿರ್ಪ್ಪಿರವಂ ನೆಱೆ ಕಂಡು ವಿಸ್ಮಯಂ ॥
ಜನಿಯಿಸೆ ನಾಡೆ ಭಾವಿಸುತುಮಿರ್ದ್ದ ಮಹಾಸಚಿವಂಗೆ ಹರ್ಷವ।
ರ್ಧನೆ ಕಮನೀಯಮಪ್ಪುಚಿತ ವಿಷ್ಟರಮಂ ಪದೆಪಿಂದೆ ಸಾರ್ಚಿದಳ್ ॥೨೩॥

ಕಂ॥ ಆಗಳಲಂಕೃತ ವಿಷ್ಟರ।
ನಾಗಿ ನರೇಂದ್ರಂ ತದೀಯ ದೇವಿಯ ನಿಜ ಚೇ ॥
ತೋಗತ ಚಿಂತೆಯ[ನಱಿದಂ]।
ಬೇಗದೊಳಾ ಭಾವದಿಂ ಪ್ರಧಾನ ನಿಧಾನಂ ॥೨೪॥

1. ಗಾವಗ. 2. ಇಂತು.

ಇದು ಸುತ ದೋಹಳ ಚಿಂತೆಯೆ ।
ಪುದಿದುದು ಚಿತ್ತದೊಳೆನುತ್ತುಮಱಿದರಸಂಗಾ ॥
ಪದದೊಳ್ ಬಿನ್ನವಿಸಿದನತಿ ।
ಮುದದಿಂ ಪ್ರಜ್ಞಾಬಳಂ ಪ್ರಸನ್ನೋಕ್ತಿ ಬಳಂ ॥೭೫॥

ಉ॥ ದೇವರದೇಕೆ ಚಿಂತಿಸಲನಾರತಮಜ್ಞರವೋಲ್ ವಿರಾಜಿಸ ।
ಲ್ಕಾವುದು ಸಿದ್ಧಿ ಚಿಂತಿಪುದಱಿಂ ಸುತಲಾಭದ ವಾಂಛೆಯುಳ್ಳೊಡಿಂ ॥
ತಾವಗವಿಾಶ ಪೂಜೆ ಬಹುದಾನ ಸುಧರ್ಮ ತನೂಜ ಕಾಮು ಯ ।
ಜ್ಞಾವಳಿಯೆಂಬಿವಂ ನೆಗಟ್ದೆ ಸಿದ್ಧಿಸದಿಪ್ಪುದದೇಂ ನರೇಶ್ವರಾ ॥೭೬॥

ಕಂ॥ ಗೋದಾನಮಶ್ವ ದಾನಂ ।
ಭೂದಾನಂ ಹೇಮದಾನಮಿವು ಮುಖ್ಯದ ನಾ ॥
ನಾ ದಾನಂಗಳನ[1]ವಿರತ ।
ಮಾದರದಿಂ ನೆಗಟ್ದೆ ಬಗೆದುದಾಗದುದುಂಟೇ ॥೭೭॥

ಮ॥ ಫಳ ದಾನಂಗಳನಿಷ್ಟ ತುಷ್ಟಿಯನನಾಥ ಪ್ರೀತಿಯಂ ವಿಪ್ರ ಸಂ ।
ಕುಳ ಸಂತೃಪ್ತಿಯನೊರ್ಮೆಯುಂ ವಿನಯದಿಂ ಮಾಡುತ್ತಿರಲ್ ನಾಡೆ ಸಂ ॥
ಗಳಿಕುಂ ಕಾಮಿತಸಿದ್ಧಿಯೆಂದು ಪಿರಿದುಂ ಪ್ರಜ್ಞಾಬಲಂ ಸೂಕ್ತಿಯಿಂ ।
ತಿಳಿಪುತ್ತುಂ ಕಟದೆಂ ನರೇಂದ್ರನ ಮನಶ್ಚಿಂತಾಕುಳ ಭ್ರಾಂತಿಯಂ ॥೭೮॥

ತದನಂತರಂ—

ಮ॥ ಮುನಿವೃಂದಾರಕ ಪತ್ನಿಯರ್ ಪದೆಪಿನಿಂ ಮುಂ ನೋಂತ ವಿಖ್ಯಾತಮ ।
ಪ್ಪನಿತುಂ ನೋಂಪಿಗಳಂ ಯಥೋಚಿತದೆ ಮಾಡುತ್ತಿರ್ಪುದುಂ ದೇವಿ ಭೋಂ ॥
ಕನೆ ನಿಮ್ಮೊಂದು ಮನೋಭಿವಾಂಛಿತ ಫಲಂ ಕೈಸಾರ್ಗುಮೆಂದಿಂತು ಮಂ ।
ತ್ರಿ ನಿಧಾನಂ ವಿಜಯಾವತೀಸತಿಯ ಚಿತ್ತಭ್ರಾಂತಿಯಂ ತೂಳ್ದಿದಂ ॥೭೯॥

ತದನಂತರಂ—

ಮ॥ ಇತರ ಕ್ಷ್ಮಾಪತಿಗಳ್ ಸುವಸ್ತು ವರ ವಾಹ ವ್ಯೂಹಮುಂ ದಂತಿ ಸಂ ।
ತತಿಯಂ ಕೊಟ್ಟು ಭವತ್ಪದಾಂಬುಜಯುಗ ಪ್ರೋಲ್ಲೀಢ ಕೋಟೀರರ ॥

1. ವರತ.

ಪ್ರತುಳೌತ್ಸುಕ್ಯದಿನಿರ್ದಪರ್ ಸಮಯಮಂ ಪಾರ್ದಿಲ್ಲರುಂ ದೇವ ಸೀ ।
ವತಿ ಕಾರುಣ್ಯದೆ ವಿಪ್ರರಾಗ್ರ[1]ಮಣಿಯಾಗಲ್ವೇಳ್ಪು[1]ವಿಂ ಬೇಗದಿಂ ॥೮೦॥

ವಿಪುಳಪ್ರಜ್ಞನೆನಿಪ್ಪ ನಮ್ಮ ಸಚಿವಂ ಪ್ರಜ್ಞಾಬಳಂ ಮಾಳ್ಪ ಬಿ ।
ನ್ನಪಮಂ ಚಿತ್ತದೊಳಪ್ಪುಕೆಯ್ದು ಪಿರಿದಾನುಂ ಪ್ರೀತಿಯಿಂ ದೇವಿಯಾ ॥
ಸ್ಯ ಪಯೋಜಾತಮನಾಗಳೀಕ್ಷಿಸಿ ತದೀಯಾನುಜ್ಞೆಯಂ ಪೆತ್ತಿಳಾ ।
ಧಿಪನಂತಃಪುರ ಸದ್ಮದಿಂದೆ ಪೊಱಮಟ್ಟೆಳ್ತಂದನಾನಂದದಿಂ ॥೮೧॥

ಮ॥ಸ್ರ॥ ಕಮನೀಯಂಬೆತ್ತ ಕಾಳಿಂದಿಯೊಳಲರ್ದ ನವಾಂದಭ್ರ ಶುಭ್ರಾಬ್ಜಮಂ ರಾ ।
ಜ ಮರಾಳಂ ರಾಗದಿಂದೇಱುವ ಪರಿ[2]ಜಿನವೋಲ್ ನೀಲ ರತ್ನ ಸ್ಫುರತ್ಕು ॥
ಟ್ಟಿಮದೊಳ್ ವಿಭ್ರಾಜಿಪಿಂದೂಪಲ ಮಣಿಕೃತ ಸಿಂಹಾಸನಾಸೀನನಾದಂ ।
ವಿಮಳ ಕ್ಷೌಮಾಂಬರಾಳಂಕೃತ ವರತನು ವಿಶ್ವಂಭರ ಕ್ಷೋಣಿಪಾಲಂ ॥೮೨॥

ಕಂ॥ ತಣ್ಗದಿರ್ಗಳ ತುರುಗಲಿವೆನೆ ।
ಕಣ್ಗೊಳಿಸುವ ಚಮರರುಹದಿನಾ ನೃಪತಿಯ ಪಿಂ ॥
ದಣ್ಗೊಳೆ ಬಂದಂದೆಸೆದರ್ ।
ಪೆಣ್ಗಳ ತೊಡವೆನಿಸಿ ತೊಳಪ ಚಾಮರಿಯರ್ಕಳ್ ॥೮೩॥

ಮ॥ ಗಿರಿಜಾಧೀಶ್ವರ ಪಾರ್ಶ್ವದೊಳ್ ಹರಿ ಸುರ ವ್ರಾತಾಧಿಪೋಪಾಂತದೊಳ್ ।
ಗುರುವಿರ್ದಂತೆ ನರೇಂದ್ರನುನ್ನತಿ ವಿಭಾಸ್ವತ್ಪೀಠ ವಾಮೇತರೋ ॥
ರ್ವರೆಯೊಳ್ ಬಂದು ಯಥೋಚಿತಾಸನಮನತ್ಯಾನಂದದಿಂ ತಾನಲಂ ।
ಕರಿಸಿರ್ದಂ ಸಕಲ ಕ್ಷಮಾಜನ ನುತಂ ಪ್ರಜ್ಞಾಬಲಾಖ್ಯೋನ್ನತಂ ॥೮೪॥

ರಸಮಂ ರೂಪಿಸುತಿರ್ಪ ಸತ್ಕವಿಗಳಿಂ ಮಾಧುರ್ಯಮಂ ನಾಡೆ ಮೋ ।
ಹಿಸುತಿರ್ಪಾ ಗಮಕೀಂದ್ರರಿಂ ರಸನೆಗೆಟ್ಟಿಂದುಕ್ತಿಯಂ ಸುಪ್ರತಿ ॥
ಷ್ಠಿಸುತಿರ್ಪುದ್ಧತ ವಾದಿವೃಂದ ವೃತದಿಂ ವ್ಯಾಖ್ಯಾನಮಂ ಚಿತ್ರಮಾ ।
ಗಿಸುತಿರ್ಪಗ್ಗದ ವಾಗ್ಮಿ ಸಂಕುಲದಿನಿಂತೊಪ್ಪಿರ್ಪುದೊಡ್ಡೋಲಗಂ ॥೮೫॥

ಚಂ॥ ಸೊಗಯಿಪ ಧಾತು ಧಾತುಗಳವಟ್ಟ ಸದರ್ಥದ ಮಾತು ಮಾತಿನೊಳ್ ।
ಮಿಗೆ ಪುದಿದಿರ್ಪ ರೀತಿ ನೆಱ[3] ರೀತಿ ರಸಂಬಡೆಯಲ್ ಪ್ರಬಂಧ ಸೂ ॥

---

1. ಹಣಿ. 2. ಮಿಾಪೇಗ. 3. ಜಡ.

ಕ್ತಿಗಳನಣಂ ಕ್ಷಣಾರ್ಧದೊಳೆ ಪಾಡುವ ರೂಢಿಯುನಾಂತು ರಂಜಿಪಾ ।
ಬಗೆಯ ರಸಾಬ್ಧಿಯಪ್ಪ ಬಗೆಕಾಱರ ಮೊತ್ತದಿನೊಪ್ಪಿತೋಲಗಂ ॥೮೬॥

ಮ॥ ಲಲಿತಾಕಾರದ ರಾಜಪುತ್ರ ತತಿಯಿಂದುದ್ದಂಡ ದಂಡಾಧಿಪಾ ।
ವಲಿಯಿಂದಗ್ಗದ ಮಂಡಲೇಶ್ವರ ಮಹಾಸಾಮಂತರಿಂ ಶೈಲ ಸಂ ॥
ಕುಲಮಂ ಚಾಳಿಪ ಮಲ್ಲಜಟ್ಟಗಳ[1]ನಶ್ವಾರೂಢಿಯಾರೋಹಕಾ
ಕುಲದಿಂ ಸಂದ[2]ರಸಾಸ್ಯವಾದಿಗಳಿನಿಂತೊಪ್ಪಿರ್ದುದೊಡ್ಡೋಲಗಂ ॥೮೭॥

ಕಂ॥ ದಾಯಿತರಿಂ ಪೆಸರ್ವೆತ್ತ ಪ ।
ಸಾಯಿತರಿಂ ಸುಭಟ ಚೇಟಕ ಪ್ರಕಟ ಮಹಾ ॥
ನಾಯಕರಿಂ ನಿರುಪಮ ಶೋ ।
ಭಾಯತಮಾಯ್ತೋಲಗಂ ಮಹೀಪಾಲಕನಾ ॥೮೮॥

ಮ॥ ಸರಳಾಂಗಾವಯವಂಗಳಿಂದೊಗೆವ ಲಾವಣ್ಯಾಂಶುವಂ ನೀಟ್ಟುದ್ದ ಮುಂ ।
ಬರಿವಂಚನ್ನಖ ದೀಪ್ತಿಯಿಂ ಕುಡಿಯಿಡುತ್ತಿರ್ಪಾ ಕಟಾಕ್ಷ ಪ್ರಭೋ ॥
ತ್ಕರದಿಂದಂ ನಿಶಿತಂಗಳಪ್ಪ ಮದನೋದ್ಯನ್ಮೋಹನಾಸ್ತ್ರಂಗಳಂ ।
ತಿರೆ ಕಣ್ಗೊಳ್ವ ವಿಳಾಸಿನೀ ನಿವಹದಿಂ ವಿಭ್ರಾಜಿಸಿತ್ತೋಲಗಂ ॥೮೯॥

ವರ ಸೌಂದರ್ಯ ಗಭೀರ ವಾರಿನಿಧಿಯೋ ಶೃಂಗಾರ ಸಂದೋಹ ಸಾ ।
ಗರವೋ ಸೌಖ್ಯಕಳಾ ಕಳಾಪ ವಿಳಸದ್ವಾರಾಶಿಯೋ ಸುಪ್ರಸ ॥
[3]ನ್ನ ರಸಾಧೀಶ್ವರ ವಾರ್ಧಿಯೋ ಸಕಲ ಸಾಹಿತ್ಯಾಮೃತಾಂಭೋಧಿಯೋ ।
ಪಿರಿದುಂ ತಾನೆನೆ ಪೆಂಪುವೆತ್ತುದವನೀಶೋದ್ಯತ್ಸಭಾ ಮಂಡಲಂ ॥೯೦॥

ಕಂ॥ ಚಳ ಚಮರರುಹ ಸಮಾಜಾ ।
ನಿಳನಿಂದೊಗೆದೆಸೆವ ಚಾರು ಕರ್ಪೂರ [4]ರಜೋ ॥
ವಳಯದೆ ಭೂಷಣ ಮಣಿಗಳ ।
ಬೆಳಗಿಂ ಗೆಲೆವಂದುದೋಲಗಂ ಪಾಲ್ಗಡಲಂ ॥೯೧॥

ಮ॥ ವಿನುತಾನೂನ ಸಭಾ ಕುಭೃಜ್ಜನದ ನಾನಾ ಭೂಷಣಾನರ್ಘ್ಯ ನೂ ।
ತನ ರತ್ನಪ್ರಚಯ ಪ್ರಭಾ ಚರಿತದಿಂ ಭೂನಾಥನಾಸ್ಥಾನಮಿಂ ॥

1. ನತ್ಯಾ. 2. ರಸಾಸೆ. 3. ವರಸಾಶರ. 4. ರಜಾ ವಳಿಯಿಂ.

ತೆನಸುಂ ಕಣ್ಗೊಳಿಸಿರ್ದುದಲ್ತೆ ಮುಳಿಸಿಂದಾಕರ್ಷಿಸಲ್ ತನ್ಮನೀ।
ಶನ ಹಸ್ತಾಬ್ಜಮನೆಯ್ದಿಯಸ್ತ ಜಡಮಾದಂಭೋಧಿಯೆಂಬಂದದಿಂ ॥೯೨॥

ಕಂ॥ ಕಣ್ಬೆಳಗುಂ ಲಲಿತಾಂಗದ।
ನುಣ್ಬೆಳಗುಂ ತೊಟ್ಟ ಮುತ್ತಿನೊಳ್ತೊಡವುಗಳಾ॥
ಕಣ್ಬೆಳಗುಂ ಪದೆಪಿಂದೆ ಪ।
ವಣ್ಬಡೆವೊಡತರ್ಕ್ಯಮಾದುದೊಡ್ಡೋಲಗದೊಳ್ ॥೯೩॥

ಮ॥ ಕೆಲಸಾರ್ ಸಿಂಹಳ ಸಂತವಿರ್ ಮಗಧ ಮೆಯ್ಯಿಕ್ಕಾಂಧ್ರ ನಿಂದಂತಿರ।
ತ್ತಲೆ ನೇಪಾಳ ಕಳಿಂಗ ಕಾಣುಸುರದಿರ್ ಪಾಂಚಾಲ ಹಿಮ್ಮೆಟ್ಟು ಕೇ।
ರಲ ಪೋಗಿಂತು ವರಾಳ ನಿಲ್ ಮಲಹ ಮಾಣ್ ಹಮ್ಮಿರ ಬಾ ಗೌಳ ಸೈ।
ತೆಲೆ ನೀನೆಂಬ ಸಮಗ್ರ ವೇತ್ರಧರರಿಂದೊಪ್ಪಿರ್ದುದೊಡ್ಡೋಲಗಂ ॥೯೪॥

ಉ॥ ಶ್ರೀ ವಿಪುಲ ಪ್ರಭಾವ ಭೃತದಿಂದೆ ಸುದರ್ಶನ ಶೋಭೆಯಿಂದೆ ನಾ।
ನಾ ವಿಬುಧಾಭಿವರ್ಧನತೆಯಿಂದೆ ತಮೋಹೃತ ತೇಜದಿಂದೆ ರಾ॥
ಮಾವೃತ ರಮ್ಯದಿಂದೆ ನೆಲೆವೆರ್ಚಿದನಂತ ವಿಳಾಸದಿಂದೆ ರಾ।
ಜೀವ ದಳಾಕ್ಷನಂತೆಸೆದುದೋಲಗಮಾ ನರನಾಥ ಚಕ್ರಿಯಾ ॥೯೫॥

ಕಂ॥ ಸಮ ಭಾವ ರಮ್ಯದಿಂ ಕಾಂ।
ತಿ ಮನೋಹರದಿಂ ಪ್ರಸಾದದಿಂ ಸದುದಾರ॥
ಕ್ರಮದಿಂದಮಾ ನರೇಂದ್ರೋ।
ತ್ತಮ ಸಭೆ ಶೋಭಿಸುವುದಿಂತಲಂಕಾರದವೋಲ್ ॥೯೬॥

ಚಂ॥ ನಿರುಪಮ ತೇಜದಿಂ ದಿನಪನೋಲಗದೋರಗೆ ಚಾರುಭೋಗ ಬಂ।
ಧುರದಿನಹೀಂದ್ರನೋಲಗದ ಸನ್ನಿಭಮುನ್ನತ ಕಾಂತಿಶೋಭೆಯಿಂ॥
ಸುರುಚಿರ ಚಂದ್ರನೋಲಗದ ಪಾಸಟಿ ತೀವಿದ [ಸಂಪದಂಗಳಿಂ।
ಸುರಪತಿಯೋಲಗಕ್ಕೆ ಸಮಮಾಯ್ತು] ನರೇಶ್ವರ ಚಕ್ರಿಯೋಲಗಂ ॥೯೭॥

ಮ॥ಸ್ರ॥ ದರಹಾಸೋಲ್ಲಾಸದಿಂದಿರ್ಪುಡಿಸೆ ದಶನ ದೀಪ್ತಿವ್ರಜಂ ಕಾಯ ಕಾಂತ್ಯು।
ತ್ಕರದಿಂ ಮೆಯ್ವೆರ್ಚೆಯಾ ಶೀತಳ ಮಳಯಜ ಮಂದಾಲಸತ್ತಾರ ಹಾರ॥

ಸ್ಫುರಿತ ಪ್ರದ್ಯೋತದಿಂ ಪಜ್ಜಳಿಸೆ ರುಚಿರ ಚೀನಾಂಶು[1]ಕಂ ತಾಂ ಪೊದಟ್ಟಿ।
ಚ್ಚರಿಯಾಗಲ್ಕಾಗಳೊಡ್ಡೋಲಗದೊಳೆಸೆದನಾ ರಾಜ ರಾಜೀವನೇತ್ರಂ ॥೯೮॥

ಇಂತು ವಿಜಿತಭಾವ ನರೇಂದ್ರನಾಗಿ ವಿಶ್ವಂಭರ ನರೇಂದ್ರನೊಡ್ಡೋಲಗಂಗೊಟ್ಟಿರ್ಪ್ಪುದುಮಾ ಪ್ರಸ್ತಾವದೊಳಾಕುಂಚಿತ ಕಳೇವರಂ ವೇತ್ರದಂಡ ವಿನಿಹಿತ ಕಕ್ಷಂ ನಿಟಿಲತಟ ಘಟಿತ ಕರಕಮಲ ಕುಟ್ಮಳಂ ದೌವಾರಿಕಂ ದೇವ ಭವಚ್ಚರಣ ದರ್ಶನಾ[2]ಕುಲತೆಯಿಂ ವರವಸ್ತು ವಾಹನಂಬೆರಸು ಭೂವರರ್ ಸಮಯಮಂ ಪಾರ್ದಿರ್ದಪರೆಂದು ಬಿನ್ನವಿಸೆ ಭ್ರೂಪಲ್ಲವಾದೇಶದಿಂ ಬರವೇೞ್ದಾಗಳ್—

ಮ॥ ಧರಣೀವಲ್ಲಭ ಪುಲ್ಲನಾಭನ ವಿಭಾಸ್ವತ್ಪಾದ ಪೀಠಾಂತಿಕೋ।
ರ್ವರೆಯೊಳ್ ತಮ್ಮ ಕಿರೀಟಕೋಟಿ ಘಟಿತಾನೇಕ ಸ್ಫುರದ್ರತ್ನ ನೂ॥
ತ್ನ ರುಚಿ ಶ್ರೇಣಿಗಳಿಂದೆ ಬಣ್ಣವುರಮಂ ತೀವಿತ್ತು ವೈಚಿತ್ರ್ಯಮಾ।
ಗಿರೆ ಸಂರಂಭದೊಳಾಗಳಂತೆ ಸೆಱ[3]ದೆಟ್ಟಿಂದಾ ನರೇಂದ್ರ ವ್ರಜಂ ॥೯೯॥

ಮಿಗೆ ಚಿತ್ರಂಬುಗುವಂತೆ ಭೂವರ ಮುಕುಂದಂಗಾಕ್ಷಣಂ ತಂದ ವ।
ಸ್ತುಗಳಂ ಕಾಣ್ಕೆಯನಿತ್ತು ಮತ್ತಭಯಹಸ್ತಾಂಭೋಜ ವಿನ್ಯಸ್ತ ಮೌ॥
ಳಿಗಳಾದಾ ಒಟಾಕಂ ತದೀಯ ಸಚಿವ ಭ್ರೂಸಂಜ್ಞೆಯಿಂ ಸಾರ್ದು ಮೆ।
ಲ್ಲಗೆ ಕುಳ್ಳಿರ್ದುದು ತನ್ಮಹೀಶ ಕುಲಮಾ ಚಿತ್ರಾಸನಾನೀಕದೊಳ್ ॥೧೦೦॥

ಆ ಪ್ರಸ್ತಾವದೊಳ್—

ಮ॥ಪ್ರ॥ ಸ್ಫುರಿತಾಂಗ ಜ್ಯೋತಿಯಿಂದಂಬರಮದು ಧವಳೋದ್ಯತ್ಪ್ರಭಾ ಪೂರಮಾಗು।
ತ್ತಿರ[3]ಲಭ್ರಶ್ರೇಣಿ [4]ವಿದ್ಯುತ್ಕರ ತತಿಮಯಮಾಗುತ್ತಿರಲ್ ಭೂತಳಂ ಶೀ॥
ತ ರುಚಿ ಗ್ರಾವ ಸ್ವರೂಪಂಬಡೆಯುತಿರಲಿಳಾಧೀಶನೊಡ್ಡೋಲಗಕ್ಕೈ।
ಟ್ತಿರುತಿರ್ದಂ ಮೇಘಮಾರ್ಗಾಂತರದಿನನುಪಮಂ ದೇವ ಯೋಗೀಂದ್ರ
[ನೊರ್ಬಂ ॥೧೦೧॥

ಮ॥ [5]ಕಳಿವೆಂ ಮತ್ಪಿತನಪ್ಪ ಸಾಗರನನೆಂದುಂ ತಾಳಿ ತಾನೊಪ್ಪುತಿ।
ರ್ಪಿಳೆಗಾದುಗ್ರ ಲಯಾಗ್ನಿ ತಾಪಮನೆನುತ್ತುಂ ಪಕ್ಷದಿಂ ಬರ್ಪ ನಿ॥

1. ಕೋಶಲ. 2. ತುರ. 3. ಲಾನಾ. 4. ದಿದ್ಯು. 5. ತಳದಿಂ.

ರ್ಮಳಿನಂ ಚಂದ್ರಮನೆಂಬಿನಂ ಗಗನದಿಂದಾ ಭೂಪನೊಡ್ಡೋಲಗ।
ಕ್ಕೆಳಿದಂ ಸುಪ್ರಭನೆಂಬ ದಿವ್ಯ ಮುನಿಪಂ ಸದ್ಬೋಧ ಭಾ[1]ರಂಜಿತಂ ॥೧೦೨॥

ಕಂ॥ ಸುಪ್ರಭ ಮುನೀಶನಮಳ ತ।
ನು ಪ್ರಭೆ ಮುಂಬರಿದು ಬೆಳಗಿದತ್ತು ಶಿವಜ್ಞಾ॥
ನ ಪ್ರಭೆ ದಯಾಮೃತಾಸಾ।
ರ ಪ್ರಭೆಯೆನೆ ತನ್ಮುನೀಶನೊಡ್ಡೋಲಗಮಂ ॥೧೦೩॥

ಮ॥ ಭರದಿಂದೋಲಗ ಸಾಲೆಗೆಯ್ದಿ ಪುಗುತರ್ಪಾ ಸುಪ್ರಭ ಶ್ರೀಮುನೀ।
ಶ್ವರನಂ ನಿರ್ಮಳ ಚಿತ್ಸುಖ ಪ್ರಸರನಂ ನವ್ಯಾಂಗ ಶುಭ್ರಾಂಶು ಭಾ॥
ಸುರನಂ ನಿರ್ಜಿತ ಚಿತ್ತಜನ್ಮ ಶರನಂ ಕಾರುಣ್ಯ ಪೀಯೂಷ ಸಾ॥
ಗರನಂ ಕಟ್ಟೆದಿರಲ್ಲಿ ಕಂಡನೆನಸುಂ ವಿಶ್ವಂಭರೋರ್ವೀಶ್ವರಂ ॥೧೦೪॥

ಕಂ॥ ಆಗಳ್ ಕಂಡಿದಿರೆದ್ದನು।
ರಾಗಂ ಮಿಗೆ ಮುಕುಟ ಮೌಕ್ತಿಕಾಂಶುಗಳಿಂದಾ॥
ವೇಗದಿನರಸಂ ಸುಪ್ರಭ।
ಯೋಗೀಂದ್ರನ ಪದ ಪಯೋಜಮಂ ಪೂಜಿಸಿದಂ ॥೧೦೫॥

ಸ್ಫುರದಮಳ ವದನ ಸಿತರುಚಿ।
ಕಿರಣ ಶಲಾಕಾ ಸಮಾಜಮೆನೆ ದಶನಾಂಶೂ॥
ತ್ಕರಮುಣ್ಮೆ ಸುಪ್ರಭ ವ್ರತಿ।
ವರನಾಗಳ್ ಪರಸಿದಂ ದಯೋದಯದಿಂದಂ ॥೧೦೬॥

ಆ ಮುಣೀಶ್ವರನಂ ಮಣಿಮಯಾ [ಸನಾ] ಸೀನನಂ ಮಾಡಿ—

ಮ॥ ನಿಜದಿಂ ನೀರಜನೆಂದು ತನ್ಮುನಿಯ ಪೆಂಪಂ ತೋರ್ಪವೋಲ್ ನಾಡೆ ನೀ।
ರಜಮಾಗಿರ್ದೊಡಮಂಘ್ರಿ ಪಂಕರುಹಮಂ ಪ್ರಕ್ಷಾಳನಂಗೆಯ್ದು ಸಾಂ॥
ದ್ರ ಜಳಾ[2]ರ್ದ್ರತ್ವಮನುತ್ತರೀಯ ವಸನ ಸ್ನಿಗ್ಧಾಗ್ರದಿಂದೊತ್ತಿ ಭೂ।
ಭುಜನಾಗಳ್ ನಯದಿಂ ಸ್ವಪಾಣಿ ತಳದಿಂದೊತ್ತುತ್ತುಮತ್ತಿರ್ಪದುಂ ॥೧೦೭॥

1. ಪೂಜಿತಂ. 2. ದ್ರುತ್ವಮಂ.

ಮನದೊಳ್ ಸಾತ್ವಿಕವಾದ ಭಕ್ತಿಗೆ ಮುನೀಂದ್ರಂ ಚಿತ್ತದೊಳ್ ತುಷ್ಟನಾ।
ಗಿ ನರೇಂದ್ರೋತ್ತಮ ಸಾಲ್ವುದಿಂ[1]ತಿರವು ನೀಂ ಸಿಂಹಾಸನಾಸೀನನಾ॥
ಗೆನೆ ನಿಮ್ಮಂಘ್ರಿ ಸರೋರುಹ ದ್ವಯದುಪಾಂತಂ ಸಾಲ್ವುದೆಂದುರ್ವರಾ।
ಸನನಾದಂ ವಿನಯ ಪ್ರಭಾವಚರಿತಂ ವಿಶ್ವಂಭರೋರ್ವೀಶ್ವರಂ ॥೧೦೮॥

ಕಂ॥ ನರನಾಥಂ ದಿವ್ಯಮುನೀ।
ಶ್ವರ ದರ್ಶನ ಹರ್ಷದಿಂ[ದೆ] ಕಂಟಕಿತ ಕಳೇ॥
ವರನಾಗಿ ತನ್ನ ಪುಣ್ಯದ।
ಪರತೆಗೆ ಮೆಯ್ವೆರ್ಚಿ ಮತ್ತಮಿಂತೆನುತಿರ್ದಂ ॥೧೦೯॥

ಮ॥ ಅನಪತ್ಯಂಗೆನಗೇಕ ದೇಹಿಗೆ ನಿರರ್ಥಂಬೆತ್ತ ಸಂಸಾರ ಭೋ।
ಗ ನಿಕಾಯಂಗೆ ವಿಪೂಜ್ಯ ರಾಜ್ಯವಿಭವಂಗೊಲ್ದಿಂತು ಕಾರುಣ್ಯದಿಂ॥
ದೆನಸುಂ ನೀವಿರದೀಗಳಿಂತು ಬಿಜಯಂಗೆಯ್ದೆನ್ನನತ್ಯಂತ ಪಾ।
ವನನಂ ಮಾಡಿದಿರಿಂ ಕೃತಾರ್ಥನೆ ವಲಂ ಸತ್ಯಂ ಮುನೀಂದ್ರೋತ್ತಮಾ॥೧೧೦॥

ನೆವದಿಂ ತಾನನಪತ್ಯನಪ್ಪುದನದಂ ಪ್ರೌಢೋಕ್ತಿಯಿಂ ನಾಡೆ ಬಿ।
ನ್ನವಿಪಂದಕ್ಕೆ ಮುಗುಳ್ನಗುತ್ತೆಲೆ ನೃಪಾ ನೀಂ ಪುತ್ರಕಾಮಾರ್ಥ ಯಾ॥
ಗವನಿಂ ಮಾಡೆ ವಿನಿರ್ಜಿತಾಂಗಭವ ರೂಪಂ ಪುಟ್ಟುವಂ ಪುತ್ರನು।
ತ್ಸವ ಪಾತ್ರಂ ನಿನಗೆಂದು ಪೇೞ್ದು ಪರಸುತ್ತುಂ ಪೋದನಾ ಸುಪ್ರಭಂ ॥೧೧೧॥

ಅವನೀಶಾಗ್ರಣಿಯುಂ ಸಭಾಜನಮುಮುನ್ನ[2]ಕ್ತಾಬ್ಜ ರಸ್ಪಂದ ಪ।
ಕ್ಷ್ಮ ವಿಳಾಸಾಂಬಕರಾಗಿ[3]ಯಾಕ್ಷಿಸುತಿರಲ್ಕಾ ಸುಪ್ರಭಾಖ್ಯಾತ ಯೋ॥
ಗಿವರೇಣ್ಯಂ ನಿಜದೇಹ ದೀಪ್ತಿ ದೆಸೆಯಂ ತಳ್ಪೊಯ್ಯೆ ವಿದ್ಯುಲ್ಲತಾ।
ಘವಿದೆಂಬಂ[4]ತಿರಲೆಯ್ದಿದಂ ನೆಱೆ ನಭೋಂತರ್ಭಾಗಮಂ ಬೇಗದಿಂ ॥೧೧೨॥

ಕಂ॥ ಪಿರಿದಾನುಂ ಪೊೞ್ತುವರಂ।
ಪರಿಭಾವಿಸುತಿರ್ದು ವಿಸ್ಮಿತಸ್ಮೇರ ಮನ॥
ಸ್ಸರಸಿಜನಾದಂ ಬೞಿಕಂ।
ನರೇಂದ್ರನಾ ಪೀಠ ಮಸ್ತಕ ಸ್ಥಿತನಾದಂ ॥೧೧೩॥

1. ತರವು. 2. ಕ್ತಾಂಬ. 3. ನೀಕ್ಷಿಸು. 4. ತಲೆಯಿದಿದಂ.

ಮ॥ ಮುನಿವೃಂದಾರಕ ವಕ್ತ್ರದಿಂದೊಗೆದ ವಾಕ್ಯಾಕರ್ಣನೋತ್ಸಾಹದಿಂ।
ತನುಜಾಸ್ಯಾಂಬುಜ ವೀಕ್ಷಣೋದ್ಭವ ಸುಖಂಬೆತ್ತಂತೆ ಪುತ್ರಾಂಗ ಸಂ॥
ಗ ನವೀನೋತ್ಸವಮಂ ಸಮಂತು ಪಡೆವಂತಾನಂದಯುಕ್ತಾತ್ಮ ನಾ।
ಗಿ ನರೇಂದ್ರಂ ನಿಜಮಂತ್ರಿಮುಖ್ಯನ ಮುಖಾಂಭೋಜಾತಮಂ ನೋಡಿದ ॥೧೧೪॥

ಕಂ॥ ಸುತನುದಯಂ ಸತ್ಯಮಿದೆಂ।
ದತಿಮುದದಿಂ ಬಿನ್ನವಿಪ್ಪ ಸಚಿವನ ವಾಕ್ಸಂ॥
ಗತಿಯಂ ಕರ್ಣಂ ಪುಳಕೋ।
ನ್ನತಿಯಂ ತನು ತಳೆದುದಾ ಕ್ಷಣಂ ಕ್ಷಿತಿಪತಿಯಾ ॥೧೧೫॥

ಮ॥ ಅತುಳಾಂತರ್ಮುದನಾಗಿ ತತ್ಸಮಯದೊಳ್ ಮುಂಕೊಂಡು ಕುಳ್ಳಿರ್ದಿಳಾ।
ಪತಿಗಳ್ ನಿರ್ಭರದಿಂ ಸ್ವರಾಜ್ಯ ಪದದೊಳ್ ಸ್ಥೈರ್ಯಮಂ ಸತ್ಪ್ರ್ರೋ॥
ನ್ನತಿಯಿಂ ಮನ್ನಿಸಿ ಬೇಗದಿಂ ಕಳಿಪೆ ಮಂತ್ರೀಶಂಗೆ ಬೀಳ್ಕೊಟ್ಟು ಸ।
ನ್ನುತನೊಡ್ಡೋಲಗಮಂ ವಿಸರ್ಜಿಸಿದನುರ್ವೀನಾಥ ಚಕ್ರಾಯುಧಂ ॥೧೧೬॥

ಮ॥ಸ್ರ॥ ತಳೆದತ್ತಾಸ್ಥಾನದಿಂದಾ ಕ್ಷಣದೊಳಖಿಳ ಭೂಪಾಲ ಜಾಳಂ ಚಳತ್ಕುಂ।
ಡಳ ಭಾಸ್ವತ್ಕರ್ಣಪೂರಂ ಭುಜ ವಳಯ ಝುಣತ್ಕಾರಮಾಳಂ ಪ್ರಕಂಪಾಂ॥
ಚಳ ಚಂಚಚ್ಚಿಹ್ನ ಚೇಳಂ ನಖರುಚಿ [ರಚಿ]ತೇಳಂ ಕಿರೀಟಪ್ರಭಾ ಸ।
ಮ್ಮಿಳಿತಾಶಾ ಚಕ್ರವಾಳಂ ಪರಿವೃತ ಸುಭಟೋತ್ಖಾತ ಖಡ್ಗಾಂಶು ಲೋಳಂ
॥೧೧೭॥

ಮಿಳದುದ್ಯನ್ಮೇಖಲಾ ಕಿಂಕಿಣಿ ರಣಿತ ನಿತಂಬಂ ಝುಣತ್ಕಾರ ಜಾತಾ।
ತುಳಮಂಜೀರಾವಳಂಬಂ ಕುಚಭರ ಬಳ[1]ಸಂವ್ಯಾನ ಶೋಭಾ ಕುಟುಂಬಂ॥
[2]ಚಳದುದ್ವೇಣೀ ವಿತಾನೋಪರಿ ವೃತ ಮದರೋಲಂಬಮುಬ್ಜಾಸ್ಯ ಬಿಂಬಂ।
ವಿಳಸತ್ಕಾಂತಾ ಕದಂಬಂ ಬೆರಸೆ ತಳರ್ದನಾಸ್ಥಾನದಿಂದಂ ನರೇಂದ್ರಂ ॥೧೧೮॥

ಜಯಲಕ್ಷ್ಮಿ ಪ್ರೇಮದಿಂ ಭೂವಧುವೆರಸು ಭುಜಾವಿಷ್ಟರಾಧಿಷ್ಠೆ ತಾನಾ।
ಗೆಯುಮುದ್ಯಲ್ಲಕ್ಷ್ಮಿ ಸತ್ತ್ವೋತ್ತಮೆವೆರ[ಸೊಲವಿಂ] ಹೃತ್ತಟಾರೂಢೆ ತಾನಾ॥
ಗೆಯುಸಾಮ್ರಾಜ್ಯಲಕ್ಷ್ಮಿ ಕೀರ್ತಿಪ್ರಮದೆವೆರಸು ದಿಕ್ಕುಂಜರಾರೂಢೆ ತಾನಾ।
ಗೆಯುಮಿಂತಾರೂಢಿವೆತ್ತಂ ಕೃತಿರತಿರಮಣಂ ಸಾಹಸೋದ್ದಾಮಭೀಮಂ॥೧೧೯॥

1. ಸಂಬ್ಯಾನ. 2. ಮಣಿವ.

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀವಿಶ್ವನಾಥ ಚರಣ ನಖಮಯೂಖೋತ್ಫುಲ್ಲ ಮಲ್ಲಿಕಾಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾಪ್ರಬಂಧದೊಳ್ ವಿಶ್ವಂಭರನರೇಶ್ವರ ವಿಭವ
ವರ್ಣನಂ ವಿಜಯಾವತೀ ಪುತ್ರವಾಂಛಾದಿ
ಚಿಂತಾವರ್ಣನಂ ಸುಪ್ರಭ ಮುನೀಶ್ವರ
ದರ್ಶನವರ್ಣನಂ
ತೃತೀಯಾಶ್ವಾಸಂ

---

# ಚತುರ್ಥಾಶ್ವಾಸಂ

---

ಕಂ॥ ಶ್ರೀಗೆ ಜಯಶ್ರೀಗೆ ವಚಃ।
ಶ್ರೀಗೆ ಶುಭಶ್ರೀಗೆ ವಿತರಣಶ್ರೀಗೆ ಗುಣ॥
ಶ್ರೀಗೆ ಸಮುನ್ನತ ಸತ್ವ॥
ಶ್ರೀಗುದ್ಭವ ಭೂಮಿ ಭುಜಬಲೋನ್ನತ ಭೀಮಂ ॥೧॥

ಮತ್ತಮಾಗಳ್—

ಮ॥ ಇಳೆಯಂ ಸಂಭ್ರಮದಿಂದಮುಗ್ಗಡಿಸುತುಂ ವಾರಾಂಗನಾನೀಕ ಮಂ।
ಜುಳ ಮಂಜೀರ ಝಣತ್ಕೃತಂ ಚಳ ಕರೋದ್ಯಚ್ಚಾಮರೀ ಹಸ್ತ ಮಂ॥
ಡಳ ಚಂಚನ್ಮಣಿ ಕಂಕಣಾಳಿ ರುತಿ ಸಾಱುತ್ತುಂ ಬರಲ್ ಕಂಡಳಾ।
ಗಳವಳ್ ಬೇಗದೆ ಹರ್ಷವರ್ಧನೆ ಸಮಂತೆಲ್ತಿರ್ಪನಂ ಭೂಪನಂ ॥೨॥

ಚಂ॥ ಜನಪತಿ ಬೇಗದಿಂ ಬರುತುಮಿರ್ದಪನೆಂದು ಸಮಂತು ಹರ್ಷವ।
ರ್ಧನೆ ಪರಿತಂದು ಭಿನ್ನವಿಸೆ ರಾಗದಿನೋಲಗಮಂ ನಿವಿುರ್ಚಿ ಮಾ॥
ನಿನಿ ವಿಜಯಾವತೀ ಯುವತಿ ಕುಳ್ಳಿರಲಾ ಕ್ಷಣದಿಂದೆ ಬಂದನಾ।
ವಿನುತ ವಿಳಾಸಿಸೀ ಜನ ಪರೀತ ವಿಭಾಸುರನುರ್ವರೇಶ್ವರಂ ॥೩॥

ಆಗಳ್—

ಮ॥ ಒಳಕೆಯ್ವಂತಮರ್ದಪ್ಪುವಂತವಯವಾಸೀಕಾಭಿ ನಿಮ್ನೋನ್ನತಂ।
ಗಳೊಳಾದಂ ಪುಗುವಂತಲಂಪು ಮಿಗೆ ಮೇಲ್ವಾಯ್ವಂತೆ ಸೌಂದರ್ಯ ನಿ॥
ರ್ಮಳ ಪೀಯೂಷಮನೆತ್ತಿ ಕಣ್ಗುಡಿತೆಯಿಂ ತಳ್ತೀಂಟುವಂತುತ್ಸವಾ।
ಕುಳದಿಂ ನೋಡಿದನಾಗಳಿಂತರಸಿಯಂ ವಿಶ್ವಂಭರೋರ್ವೀಶ್ವರಂ ॥೪॥

ಅಮರ್ದಂ ಸಿಂಪಿಸುವಂತೆ ಚಂದ್ರಿಕೆಯ ಬೆಳ್ಪಂ ಚೆಲ್ಲಿಪಂತುಜ್ಜ್ವಲೋ।
ತ್ತಮ ಕರ್ಪೂರ ಕಳಾ ಶಲಾಕೆಗಳನಾದಂ ಸೂಸುವಂತಾ ದಳ॥

ತ್ಕುಮುದೋಪಗ್ರ ದಳಂಗಳಂ ಕೆದರುವಂತಾಲೋಲ ನೇತ್ರಂಗಳಿಂ ।
ದಮಿಳಾಕಾಂತನನಾಗಳಿಂತು ಪದೆಪಿಂ ಮಾದೇವಿ ತಾಂ ನೋಡಿದಳ್ ॥೫॥

ಆಗಳ್ ಸ್ವಕೀಯ ಮಣಿಮಯ ಮೃಗೇಂದ್ರವಿಷ್ಟರಮನಿತ್ತು ಕೆಲ ಸಾರ್ದು ನಿಂದ ವಿಜಯಾವತೀ ದೇವಿಯಂ ತೆಗೆದು ವಾಮಾಂಕ ಪುಟ ಪೀಠ ಭೂಷಿತೆಯಂ ಮಾಡಿ ಮಹೀವರ ಮುಕುಂದನಿಂತೆಂದಂ—

ಚಂ॥ ಎಲೆ ಸತಿ ನಿನ್ನ ವಾಂಛಿತಮೆ ಸಿದ್ಧಿಸಿತೆಂತೆನೆ ದಿವ್ಯಯೋಗಿ ನಿ ।
ರ್ಮಲ ತನುವೋಲಗಕ್ಕೆ ನಭದಿಂದಿಳಿತಂದು ಮನೋನುರಾಗದಿಂ ॥
ಸಲೆ ಸುತಕಾಮ್ಯ ಯಜ್ಞಮನೊಡರ್ಚು ಮಹೋತ್ತಮ ಪುತ್ರನಾದಪಂ ।
ಸುಲಲಿತ ರೂಪನೆಂದೆನಗೆ ಪೇಳ್ದುರದೆಯ್ದಿದನಭ್ರ ಮಾರ್ಗಮಂ ॥೬॥

ಕಂ॥ ಮುನಿ ವಚನಮಮೋಘಂ ನಂ ।
ದನನಪ್ಪುದು ತಪ್ಪದೆಂದು ಜನಪತಿ ಪೇಳಲ್ ॥
ತನಯಂ ತನಗುದಿಯಿಸಿದಪ ।
ನೆನಿಪಂತಿರೆ ದೇವಿ ತಳೆದಳತ್ಯುತ್ಸವಮಂ ॥೭॥

ಆ ಸಮಯದೊಳ್—

ಚಂ॥ ಮಿಸುಗುವ ಕಾಂಚನಾಚಲದ ಕಾಂತಿ ಕಳಾಪಮನೆಯ್ದೆ ಪೀರ್ದು ತ ।
ನ್ನೆಸಕದ ತೇಜದುಗ್ರತೆ[1]ಯಿನಾ ತಪ[2]ನಂ ತಪನೀಯ ದೀಧಿತಿ ॥
ಪ್ರಸರಮ[3]ನಟ್ಟಿಸಲ್ ನೆಱೆಯದಿಂತು ಮಗುಳ್ಚ[4]ದನೆಂಬಿನಂ ವಿರಾ ।
ಜಿಸಿದುದು ಪೊಂಬಿಸಿಲ್ ಪದೆಪಿನಿಂದಪರ ಪ್ರಹರಾರ್ಧ ಕಾಲದೊಳ್ ॥೮॥

ಕಂ॥ ಅನವರತಂ ತೊಲಗದೆ ತ ।
ನ್ನನೆ ಬಲವರುತಿರ್ಪ ರವಿಯ ಬೆಳಗಂ ತನ್ನಂ ॥
ತೆನಸುಂ ಮಾಡಿದುದಾ ಕನ ।
ಕ ನಗಮ[ದೆನೆ] ಮಿಸುಗಿ ಪೊಂಬಿಸಿಲ್ ರಂಜಿಸುಗುಂ ॥೯॥

ಮ॥ಸ್ರ॥ಕನಕ ಕ್ಷೋಣೀಧರೇಂದ್ರಂ ಪ್ರಬಲ ವಿಲಯ ವಹ್ನಿಜ್ವಲಜ್ವಾಲೆಯಿಂ ಮು ।
ನ್ನೆನಸುಂ ಕಾಯ್ದಾಗಳೆತ್ತಂ ಕರಗಿ ಪರಿಯೆಯುಂ ಮತ್ತದಂ ಮಾಡಲಬ್ಜಾ ॥

1. ಯನಾತಪ. 2. ದಾತಪ. 3. ನಕ್ಕಿಸಲ್. 4. ದುದೆಂಬಿನಂ.

ಸನನೋಱಂತೊಂದುನಿಯಸ್ವ ಪದದೊಳೊಪವದಲ್ಲಲ್ಲಿ ಪತ್ತಿರ್ದ ತತ್ಕಾಂ।
ಚನಕಾಂತಿ[1]ಶ್ರೇಣಿಪ್ರೋಲ್ ಪೊಂಬಿಸಿಲಿಸಿದುದುಮಾಳಂಗಳೊಳ್ ತಳ್ತದಿತ್ತಂ॥೧೦॥

ಕಂ॥ ಅನುರಕ್ತತೆಯಿಂದನ್ಯಾಂ।
ಗನೆಯುಂ ಕುಮುದಿನಿಯುನೆಯ್ದೆ ತೊಡರ್ದಪುದುಂ ತೊ॥
ಟ್ಟನೆ ತೊಡರ್ದುದಪ್ರಭಾವಂ।
ತನಗೆನೆ ತಿಗ್ಮಪ್ರಭಂ ಗತಪ್ರಭನಾದಂ ॥೧೧॥

ಮ॥ ನೆರೆಯಲ್ಕೆನ್ನುದಯ ಪ್ರಭಾವಮನೆ ಪಾರ್ದೋಱಂದದಿಂ ಜೀವಿಸಿ।
ರ್ದ ರಥಾಂಗ ಪ್ರಜೆಯಕ್ಕೆ ಪೊರ್ದುವ ವಿಯೋಗಾವಸ್ಥೆ[2]ಯಂ ವೇಗದಿಂ॥
ಪಿರಿದುಂ ಬಾರಿ[3]ಸದೆನ್ನ ತೇಜದೊದವಿನ್ನೇಬಾರ್ತೆಯೆಂದೆಯ್ದೆ ತ।
ನ್ನುರು ತೀವ್ರಾಂಶುವನಿಂತು ಬಿಟ್ಟನೆನೆ[4] ತಣ್ಪಂ ತಾಳ್ದನಾ ಭಾಸ್ಕರಂ ॥೧೨॥

ಮ॥ ತಿಮಿರಂ ಮೆಲ್ಲನೆ ಪೊಣ್ಮೆ ಪೂರ್ವದಿಶೆಯಂ ತಾಂ ಪೊರ್ದೆ ಘೂಕಾಳಿ ಬಂ।
ದು ಮಹೀಭೃತ್ಕುಹರಂಗಳಿಂ ಪೊಱಗನಾದಂ ಪೊರ್ದೆ [5]ತತ್ಪ್ರೋತ ಯೂ॥
ಥಮುಮಾ ಪಾತ್ರ ವಿಹಂಗ ಪಕ್ಷಪುಟಮೊತ್ತಂ ಪೊರ್ದೆ[6]ತಮ್ಮಿರ್ಕೆದಾ।
ಣಮನಾ ಕುಕ್ಕುಟಕೋಟಿ ಪೊರ್ದೆ ರವಿಯುಂದಸ್ತಾದ್ರಿಯಂ ಪೊರ್ದಿದಂ ॥೧೩॥

ಕಂ॥ ವನನಿಧಿಯ ಗುಣ್ಪನೀಕ್ಷಿಪ।
ವಿನೋದದಿಂದೆಟ್ಟಿ ನಿಂದ ವರುಣನ ವಿಲಸ॥
ತ್ಕನಕ ಮಕುಟಾಗ್ರ ರತ್ನವಿ।
ದೆನಿಸಿದುದಿನಬಿಂಬಮಸ್ತ ಗಿರಿ ಮಸ್ತಕದೊಳ್ ॥೧೪॥

ಗುರುಸತಿಗೆಳಸಿದ ದೋಷಾ।
ಕರನಳಿಪಿಂದಿಂದು ನೀಡುಗುಂ ಕಣ್ಗಳನೆಂ॥
ದಿರದೇವೈಸಿಯೆ ಸುಗಿವಂ।
ತಿರೆ ಮುಗಿದುದು ಸರಸಿಜಾಳಿ ಸರಸೀ ಕುಲದೊಳ್ ॥೧೫॥

ಚಂ॥ ದಳಿತ ವಿಳಾಸಮಬ್ಜ ದಿನನಾಥ ವಿಯೋಗದೊಳಾದವಸ್ಥೆಯ।
ಗ್ಗಳಿಸಿರೆ ಕಂಡು ತಾಂ ನಲವಿನಿಂ ನಗುತುಂ ನೆಲೆವರ್ಚೆ ರಂಜಿಪು॥

1. ಶ್ರೋಣಿಯೊಲ್ಪೊಂದಿ. 2. ಯಿಂ. 3. ಸಿ. 4. ತಂಪಿಂಪಾದ. 5. ನಿಷ್ಪ್ರೀತ ಯೂಥವನಾಂ ಮಾಮೃತ. 6. ವಂಮಿಕ್ಕೆ.

ತ್ಪಳಿನಿಗೆ ಕೋಪದಿಂ ಪುದಿದು ಪದ್ಮಿನಿ ಪಲ್ಮೊರೆವಂದಮಾಯ್ತು ಕು ।
ಟ್ಮಳಿತ ಸರೋರುಹೋದರ ಗತೋನ್ಮದ ಭೃಂಗ ಝಣತ್ಕೃತ ಸ್ವನಂ ॥೧೬॥

ಕಂ॥ ಜನನಿಯೆನಿಪಬ್ಜಿನಿಗೆ ಮುನಿ ।
ದಿನಿತಂ ಮಾಡಿದ[1]ನಪ ಪ್ರಯೋಜಕನಜನೆಂ ॥
ದೆನೆಸುಂ ಪಳಿವಂತಳಿಗಳ್ ।
ಜಿನುಗಿದುವಿರದೆಬ್ಬಿ ಮುಕುಳಿತಾಂಬುಜ ವನದೊಳ್ ॥೧೭॥

ಪೊಣ್ಮಿದ ಪಟುತೇಜಂ ತವೆ ।
ಯುಣ್ಮಿದ ನಿಸ್ತೇಜದಿಂದಮಸ್ತಾದ್ರಿಗೆ ವಂ ॥
ದಾಣ್ಮನನೀಕ್ಷಿಸಲಾರದೆ ।
ಕಣ್ಮುಚ್ಚುವ ತೆಱದೆ ಮುಗಿದುದಬ್ಜ ಸರೋಜಂ ॥೧೮॥

ಚಂ॥ ಬಿಸರುಹ ಮಿತ್ರನೆಂದೆನಿಸಿದೆಮ್ಮಿನನೀಗಳೆ ರಾಜ ಬಾಧೆಗೊ ।
ಪ್ಪಿಸಿ ಪೆಱಸಾರ್ದನೋಲಗಿಪ ಭೃಂಗ ಭಟಾವಳಿ ಬಿಟ್ಟು ಪೋಯ್ತು ತ ॥
ಳ್ತಿಸೆವ ವಿಕಾಸ ಲಕ್ಷ್ಮಿ ಪಗೆಯಂ ನೆಱೆ ಪೊರ್ದಿದುದೇವುದಿಂತು ಜೀ ।
ವಿಸುವುದೆನುತ್ತೆ ಮೂರ್ಛಿಸುವವೋಲ್ ಮುಗಿದತ್ತರವಿಂದ ಸಂಕುಳಂ ॥೧೯॥

ಕಂ॥ ಇನನ ವಿಯೋಗಾವಸ್ಥೆಯ ।
ದೆನಗಂ ನಿನಗಂ ಸಮಾನಮೆನುತುಂ ಮುನಿವ ॥
ಬ್ಜಿನಿಯ ಕೆಲದಲ್ಲಿ ಕೋಕಾಂ ।
ಗನೆ ಕಣ್ಬನಿಯಂ ಕಱಲ್ಚಿ ಖೇದಿಸಿ[2]ದಾಗಳ್ ॥೨೦॥

ಮ॥ ಇನಿಯಳ್ ಮೆಲ್ಲುಳಿದಬ್ಜ ನಾಳಮಿದು ನಲ್ಲಳ್ ನಲ್ಮೆಯಿಂದೆನ್ನನು ।
ಯ್ದಿನಸುಂ ಕ್ರೀಡಿಸುತಿರ್ದ ತಾಣಮಿದು ಮತ್ಪ್ರಾಣೇಶ್ವರಿ ಪ್ರೇಮದಿಂ ॥
ದೆನಗಾಗಳ್ ತಿಳಿದಿಲ್ಲಿ ಮೆಲ್ಲುಟುಕನೀಯುತ್ತಿರ್ದ ತಾವಿಂತಿದೆಂ ।
ದೆನುತುಂ ಪಂಬಲಿಸುತ್ತುಮಿರ್ದುದು ಕರಂ ಕೋಕಂ ವಿಯೋಗಾಕುಳಂ ॥೨೧॥

ಕಂ॥ ಇರುಳಂ ಪಡೆದನದೇಕೆಯೊ ।
ವಿರಿಂಚಿ ದುರ್ವಿದನೆನುತ್ತುಮಂಬುರುಹ ದಳಂ ॥

1. ಪನ 2. ತಾಗಳ್

ಕೊರಗುವಿನಂ ನಿಡುಸುಯ್ದುದು।
ಸುರಿಯುತ್ತುಂ ಬಾಷ್ಪ ಜಲಮನೊಂದು ರಥಾಂಗಂ ॥೨೨॥

ಮ॥ಸ್ರ॥ ನಳಿನೀವೃಂದಂ ವಿಕಾಸಾಭ್ಯುದಯಮುಡುಗಿ ಸಂಕೋಚಮಪ್ಪಂದಮಂ ಪ।
ಜ್ಜಳಿಸುತ್ತುಂ ನಾಡೆ ನೀಲೋತ್ಪಲಿನಿ ನಗುವುದಂ ಚಕ್ರವಾಕಂ ವಿಯೋಗಾ॥
ಕುಳ ತೀವ್ರಾವಸ್ಥೆಯಿಂದಂ ನೆಱೆ ಮರುಗುವುದಂ ನೋಡಲೇವೈಸಿದಂತಾ।
ಗಳೆ ತಾನಸ್ತಾಚಲೇಂದ್ರಾಗ್ರದಿನಿೞಿದಪರಾಂಭೋಧಿಯಂ ಪೊಕ್ಕನರ್ಕಂ ॥೨೩॥

ಕಂ॥ ಬಡಬಾನಲನ ಶಿಖಾವಳಿ।
ಕುಡಿಯಿಟ್ಟುದು ನೆಗೆದು ಮೇಲೆ ವಳಿಗಳೊಳೆನೆ ಕೆಂ॥
ಪಿಡಿದಡರ್ದುದಾಗಿ ಪಡುವಣ।
ಕಡಲೆನಸುಂ ಮಿಸುಗೆ ಮುಳುಗಿದಂ ಬಿಸಜಸಖಂ ॥೨೪॥

ಇನನೆನ್ನೊಳ್ ನೆರೆದಂ ಬಂ।
ದನುರಕ್ತತೆಯಿಂದವೆಂದು ಪಶ್ಚಿಮ ದಿಕ್ಕಾ।
ಮಿನಿಯನುರಾಗನೆಯ್ದಿದ।
ಳೆನೆ ಸಂಧ್ಯಾರಾಗವೊದವಿ ರಾಜಿಸಿತಾಗಳ್ ॥೨೫॥

ವ॥ ವರುಣಂಗಿಕ್ಕುವ ಚಾಮರೀ ಚಮರ ಜಾತಾಲೋಲ ವಾತಾಹತೋ।
ತ್ಕರದಿಂದಂಜನ ಕುಂಜರೇಂದ್ರದ ಕನತ್ಕುಂಭಾಗ್ರ ಸಿಂದೂರ ಬಂ
ಧುರ ರೇಣು ಪ್ರಸರಂ ಕರಂ ಪಱದು ತೋಱುತ್ತೆಂಬವೋಲಂಬರಾಂ।
ತರಮಂ ತಳ್ತು ವಿರಾಜಿಸಿತ್ತು ನವ ಸಂಧ್ಯಾರಾಗ ರುಗ್ಮಂಡಲಂ ॥೨೬॥

ಕಂ॥ ಅಂಬರಮದು ಮಿತ್ರ ವಿಯೋ।
ಗಂ ಬೇಗದೊಳಾಗಲು[1]ಬ್ಬೆಗದೊಳಂ ಕಾಷಾ॥
ಯಾಂಬರಮಂ ತಳೆದುದು ತಾ।
ನೆಂಬಿನಮಾ ಸಂಜೆಗೆಂಪಿನಿಂ ರಂಜಿಸುಗುಂ ॥೨೭॥

ಉ॥ ತಾನೊದವಿತ್ತು ಕತ್ತಲೆ ಗತ ಪ್ರಭನಾಗಿರಬಾರದಿನ್ನೆನು।
ತ್ತಾನಿಮಿರ್ದಸ್ತ ಶೈಲ ಶಿಖರಾಗ್ರದಿನಾಗಳೆ ಭಾನು ಪಶ್ಚಿಮಾಂ

1. ಬೇಗದಿಂ.

ಭೋನಿಧಿಯಲ್ಲಿ ಬಿಟ್ಟ ಪದದೊಳ್ ಪೆಱಪಿಂಗಿದ ರಾಗಮಂಬರ।
ಸ್ಥಾನಮನೆಯ್ದೆ ತಳ್ತುದೆನೆ ಸಂಜೆಯ ಕೆಂಪಿನ ಸೊಂಪು ರಂಜಿಕುಂ ॥೨೮॥

ಮ॥ಸ್ರ॥ ನಿಮಿರ್ದಾದಂ ನೀಳ್ದಿ ಜಾಂಡೋದರಮನವಿರಳಾಕಾರದಿಂ ತೀವಿ ದಿಕ್ಚ।
ಕ್ರಮನೆತ್ತಂ ಸುತ್ತಿ ತಳ್ಪೊಯ್ದಖಿಳ ಜಲಧಿ ಕಲ್ಲೋಲ ಜಾಲಕ್ಕೆ ಸಂರಂ
ಭಮೆಸಿಪ್ಪಾ ನರ್ತನ ಕ್ರೀಡೆಯನೊದವಿಸಿ ಪರ್ಬಿತ್ತು ಮೆಯ್ವೆರ್ಚೆ ಸಂಧ್ಯಾ।
ಸಮಯ ಪ್ರೋದ್ಭೂತ ನಾನಾ ಭವಭವನ ಗಭೀರೋರು ಭೇರೀನಿನಾದಂ ॥೨೯॥

ಆ ಸಮಯದೊಳ್ ಪಣ್ಯವಾಟಿಯ ವಾರಾಂಗನೆಯರಂಗಮನಧಿವಾಸಿಸಲಿಕ್ಕಿದ ಗುರು ಧೂಪ ಧೂಮಲತೆಯನಗೆಯೆತ್ತಿ ವಿಟಜನ [ಮನ]ಕ್ಕೆ ಮನಸಿಜನ ಕೂರಸಿಯ ಕರ್ಬೊಗರುರ್ಬಿದೆಂಬ ಶಂಕೆಯನುಂಟುಮಾಡಿಯುಂ ಕುಸುಮಾಯುಧ ಸಾಯಕಾಧಿದೇವತೆಯರಂತೆಸೆವ ಮಾಲಾಕಾರ ನಾರಿಯರ್ ನೆಗಪಿದ ಪೂಮಾಲೆಯ ಪರಿಮಳದೆಸುಯ್ಯ ಸವಿಗಂಪನೊಡಗಲಿಸಿ ಮಧುಕರಂಗಳಂ ಮರುಳ್ಗೊಳಿಸಿಯುಂ ಕುಸುಮಾಸ್ತ್ರ-ನಸ್ತ್ರಂಗಳಂ ಮೆಯ್ಯೊಳ್ [1]ನೆಯ್ದೋರಂತೋಜೆಯರ್ ತೊಡೆದಂಗಾನುಲೇಪನದ ಸೌರಭ್ಯಮಂ ತೆರಳ್ಚಿ ವಿಟಜನಘ್ರಾಣಕೆ ಪಾರಣೆಯನೊಡರ್ಚಿಯುಂ ಮನಸಿಜನ ಮೋಹಬಾಣದ ಗಱಿದೊಂಗಲಂತೆಸೆವ ರಮಣಿಯರ ನಿಱಿಯ ತುಱುಗಲಂ ಕಾಮುಕ ಜನದ ಮನದೊಡನೆ ತೂಗಾಡಿಯುಂ ಮಣಿ ಮತ್ತವಾರಣಂಗಳೊಳ್ ಕುಳ್ಳಿರ್ದ ಕಾಂತಾಜನದ ಧಮ್ಮಿಲ್ಲ ಮಲ್ಲಿಕಾ ಕುಟ್ಮಳಂಗಳನಲರ್ಚಿ ನವ ಪರಾಗಮಂ ದೆಸೆದೆಸೆಗೆ ಪಸರಿಸಿಯುಂ ಉಪಭೂಮಿಕೆಯ ಮಲಗುಗಳೊಳ್ ಮನಃ[2]ಪ್ರಿಯರಿಂ ವಾಮಾಂಕ ವಿನ್ಯಸ್ತೆ[ಯ]ರಾಗಿ ಜೇವಡೆಯೆ ಬಾರಿಸುವ ವನಿತೆಯರ ವಿಪಂಚಿಯಿಂಚರಮನಂಚಿತ ಮಾಗಿ ನಗರಿಯೊಳ್ ತೆಕ್ಕನೆ ತೀವಿಯುಂ ರಮ್ಯಹರ್ಮ್ಯಂಗಳ ಪರಿಸರ ಸರೋವರ ಸಲಿಲಕ್ಕೆ ವಳಿಗಳಾವರ್ತಮನುದ್ಭವಿಸಿಯುಂ ವಿಕಾಸ ಲಕ್ಷ್ಮಿಯ ಬರವಿಂಗೆ ತೆಱಪು ಗುಡುತಲಿರ್ದ ಕುವಲಯಂಗಳ ಕಿಟಿಸೆಟ್ಟಿಳೊಳ್ ಪೊಕ್ಕು ನೆಗೆದೊಯ್ಯನೊಯ್ಯ ನಲರ್ಚಿಯುಂ ನಿಜಾಗ್ರಜನಪ್ಪ ನಿಶಾಕರನ ಕೈಸೋಂಕು ಸಮನಿಸಲಾಗದೆಂದು ಕುಟ್ಮಳಿತಮಾದ ಕಮಲಂಗಳೊಳ್[3]ಕಂಪಮನೊದವಿಸಿಯುಂ ನಳಿನ ದಳಂಗಳೊಳ್ ನೆಱಲ್ದು ಬಿರಯಿಸುವ ಜಕ್ಕವಕ್ಕಿಗಳ ಮದನಾನಲ ಜ್ವಾಲೆಗೆ ಜೌವನಮನೊಡರಿಸಿಯುಂ ಶಿವನ ಭವನಂಗಳಂ ಬಲವಪ್ಪರ್ ಲಲನೆಯರ ಲಲಿತಗೇಯ ಪ್ರಣಾದಮಂ ತಳ್ಪೊಯ್ದು ಪೆರ್ಚಿಸಿಯುಂ ಇಂತು ಸಾಯಂತನ ಸಮಯ ಸಮೀರಣಂ ತೀಡುತ್ತು ಮಿರ್ಪಾಗಳ್—

1. ನೆಯ್ದೊದೆವಂತೆ, ನೆಯ್ದೊರೆವಂತೆ. 2. ಪ್ರಿಯರ. 3. ಕಂಪುಮ.

ಕಂ॥ ಎನಗೆ ಕಡುಗಾಯ್ದು ನಿನನಾ।
ತನ ತೇಜಮನಲೆವ ತಮಮುನಾಂ ಪಡೆದಪೆನಿ॥
ನ್ನೆನುತುಮಿಳೆ ಪೆತ್ತ ತೆಱದಿಂ।
ಜನಿಯಿಸಿ ಮಿಗೆ ಮರ್ಬು ಕೊರ್ಬಿ ಪರ್ಬಿತ್ತಾಗಳ್ ॥೩೦॥

ಚಂ॥ ಅಡಿಯಿಡಲುರ್ವಿಯಿಲ್ಲ ತಳರಲ್ ನೆಱೆ ನಾಲ್ದೆಸೆಯಿಲ್ಲ ಕಾಣ್ಕೆಯು।
ಪ್ಪೊಡೆ ನಯನಕ್ಕದಿಲ್ಲ ತನುವಿರ್ಪುದಿಲ್ಲೆನುತುಂ ಕರಾಗ್ರದಿಂ॥
ತಡವರಿಸುತ್ತೆ ವಿಸ್ಮಯದೆ ಭೂ ಜನಮಿಂತಿರುತಿರ್ದುದಿರ್ದವೋಲ್।
ಮಿಡುಕದೆ ಸುಮ್ಮನಿರ್ಪಿನಮಗುರ್ಬಿಸೆ ಪರ್ಬಿತು ಮರ್ಬು ಲೋಕಮಂ ॥೩೧॥

ಕಂ॥ ರಸೆಯಿದು ದೆಸೆಯಿದು ನೆಗೞ್ದಾ।
ಗಸಮಿದು ತಾನೆಂಬ ಭೇದವೞಿದಾ ಕ್ಷಣದಿಂ॥
ರಸೆಯುಂ ದೆಸೆಯುಂ ನೆಗೞ್ದಾ।
ಗಸಮುಂ [1]ಕೞ್ತಲಿಸೆ ತೞ್ತುದಿಂ[2]ತಸಮ ತಮಂ ॥೩೨॥

ಮ॥ಸ್ರ॥ ತಿಮಿರ ಸ್ತೋಮಾಬ್ಧಿಯೊಳ್ ತೊಟ್ಟನೆ ಮುೞುಗಿದುದೋ ದುಸ್ತರೋ[3]ದ್ಯ
[ತ್ತಮಃ ಕ।
ರ್ದಮದೊಳ್ ಕೀಳೞ್ದುದೋ ಕಜ್ಜಳ ಬಹುಳ ರಜೋರಾಜಿಯೊಳ್ ಬಿೞ್ದುದೋ
[ಧ್ವಾಂ॥
ತ ಮಹಾಕೂಪಾಧರ ಸ್ಥಾನದೊಳಿಳಿದಱುದೇನೞ್ಗತೋ ನಿಶ್ಚಯಂ ಲೋ।
ಕಮಿದೆಂಬಂತುರ್ಬಿ ಪರ್ಬಿತ್ತತಿ ನಿಬಿಡತರಾ[4]ಪಾರ ಘೋರಾಂಧಪಾರಂ ॥೩೩॥

ಎಡಗೈಯಿಂ ನೀವಿಯಂ ಸಾರ್ಚುತುಮುರಸಿಜದೊತ್ತಂಬದಿಂ ಬಳ್ಕುತುಂ ಸೋ।
ರ್ಮುಡಿಯಂ ಸೈತೊತ್ತುತುಂ ನೂಪುರಮನೆ ಪದದಿಂದುರ್ಚಿ ಕೈಗಿಕ್ಕುತುಂ ಕ॥
ಣ್ಗಡೆ ಬೆಳ್ಪಿಂಗಂಜಿ ಚೀನಾಂಶುಕದ ಸೆರಗನಡ್ಡೈಸುತುಂ ನಾಡೆಯುಂ ಮೆ।
ಲ್ಲಡಿಗೆಂಪಿಂ ಧಾತ್ರಿಯಂ ಚಿತ್ರಿಸುತುಮಸತಿಯರ್ ಪೋದರಂತತ್ತಮಿತ್ತಂ ॥೩೪॥

ಉ॥ ಪಾರದೆ ಬರ್ಪ ದೂದವಿಯರಂ ತವಕಂ ತವೆ ಮಿಕ್ಕು ನೀವಿಯೊಳ್।
ಚಾರು ಕಳಾಪಮಂ ಸಿಲಿಸುತುಂ ದೆಸೆಯಂ ನಡೆ ನೋಡುತುಂ ಪೊದ॥
ೞ್ದೂರು ಯುಗಂಗಳಿಂದಿೞಿವ ನಾಣ್ಬದನಂ ನಿಜಾಯಿಂದಮೊತ್ತುತುಂ।
ಜಾರೆಯರೆಯ್ದುತಿರ್ದರುಪಕಾಂತರನಂದು ಮಹಾಂಧಕಾರದೊಳ್ ॥೩೫॥

1. ಕೞ್ತಲಿಸಿ. 2. ತಸುಮು. 3. ದಸ್ತಮುಷ್ಕ. 4. ಪೂರ.

ಮ॥ಸ್ರ॥ ಜನಿತಾಹ್ಲಾದಾಕುಲಾಲೋಕನಮುಪಚಿತ ಸಂಪಕ್ವ ತಾಂಬೂಲ ದಾನಂ।
ಮುನಿಸಂ ಕೈಕೊಳ್ವ ಕಿಂಚಿತ್ಪ್ರಣಯ ಕಲಹಮುತ್ಯುತ್ಸುಕ ವ್ಯಾವೃತಾಲಿಂ॥
ಗನಮುಸ್ಪಷ್ಟೋಸಲ್ಲಚ್ಚುಂಬನಮುಸದೃಶ ವಾಗ್ಜಲ್ಪಮುವ್ಯಕ್ತ ಕಂಠ।
ಸ್ವನಮಿಾಷತ್ತಾಡನಂ ಬಿತ್ತರಿಸಿ ನೆರೆವುದೋರಂದದಿಂ ಜಾರವೃಂದಂ ॥೩೬॥

ಮ॥ ಮದನಾಂಬು ಪ್ಲವದುರ್ಕು ಮಟ್ಗಿದೆ ಲಸತ್ಪ್ರೀನಸ್ತನಂ ಕೆತ್ತುಗುಂ।
ದದೆ ಸುಯ್ ನಿಲ್ಲದೆ ಕಣ್ಗಳೆಚ್ಚರದೆ ಘರ್ಮಾಂಭಃಕಣಾನೀಕಮಿಂ॥
ಗದೆ ರಂಭೋರುವ ಕಂಪಮುಟ್ಗಿದೆ ನಿಜೋಷ್ಠ ಸ್ಪಂದನ ಸ್ಫೂರ್ತಿ ಮಾ।
ಣದೆ ಮೆಯ್ಸೋದೆಯದಾರದಿಂತು ಸುಸಿಲಿಂದಾ ಪಾಣ್ಬೆಯರ್ ಪಿಂಗಿದರ್ ॥೩೭॥

ಚಂ॥ ಸುರತಟಿನೀ ನವೋದಕಮನೂಡಿ ಮನಂ ಪರಿತೃಪ್ತಿವೆತ್ತು ಫೂ।
ತ್ಕರಿಸುವ ಚಕ್ರ ಸಿಂಧುರದ ಪುಷ್ಕರದಿಂದಿರದುಣ್ಮಿ ಪಾಯ್ವ ಶೀ॥
ಕರ ನಿಕರಂ ಕರಂ ಪುದಿದು ಪತ್ತಿದುವೆಂಬಿನಮಾದಮಂಬರಾಂ।
ತರಮನತರ್ಕ್ಯದಿಂ ತುಱುಗಿ ತಾಂ ಮಿಱುಗಿರ್ದುದು ತಾರಕೋತ್ಕರಂ ॥೩೮॥

ಕಂ॥ ರಜನೀ ಭಾಮಿನಿಗೆ ವಿಯ।
ದ್ಭುಜಗಂ ಶೃಂಗಾರ ಶೋಭೆಯಂ ಮೆಱೆಯಲ್ ಮೇ॥
ಘ ಜನಂ ಮೌಕ್ತಿಕ ಭೂಷಾ।
ವ್ರಜಮಂ ತಳೆದಂತೆ ಭಗಣಮೊಗೆದುದು ನಭದೊಳ್ ॥೩೯॥

ಚಂ॥ ಒದವಿದ ಭಾಸ್ಕರಾತಪದ ತೀವ್ರತೆಯಿಂ ಕಡು ಸೇದೆವಟ್ಟ ಲೋ।
ಕದ ಪರಿತಾಪಮಂ ಕಳೆದು ಮತ್ಪ್ರಿಯಮಂ ನೆಱೆ ಮಾಡಲೆಂದು ಬೇ॥
ಗದಿನಮೃತಾಂಶು ಬಂದಪನೆನುತ್ತ ಜನಂಬರಮೆಯ್ದೆ ತಿಂಬಲಿ।
ಕ್ಕಿದ ಕಡೆಮುತ್ತಿನೋಳಿಯೆನೆ ಕಣ್ಗೊಳಿಸಿರ್ದುವು ತಳ್ತ ತಾರೆಗಳ್ ॥೪೦॥

ಕಂ॥ ಇಡಿದಡಸಿದಂಧಕಾರಂ।
ಸಡಿಲೆ ಸುರಾಧೀಶ ದಿಕ್ತಟಂ ನಸುಗೆಂಪಿಂ॥
ಗೆಡೆಯಾಗೆ ಮೂಡಲುದಯಿಸ।
ಲೊಡರಿಸೆ ತಿಮಿರಾದ್ರಿ [1]ಶಂಬಮಾ ಶಶಿಬಿಂಬಂ ॥೪೧॥

---

1. ಶಂಬ

ಚಂ॥ ಕುಮುದಿನಿ ಕಾಣದೀ ತೆಱಪಿನೊಳ್ ಪರಿರಂಜಿಪೆನೀಗಳೆಂದು ಚಂ।
ದ್ರಮನನುರಾಗದಿಂ ಸುರ ದಿಶಾಂಗನೆಯಂ ಪಿಡಿದಾದಮಪ್ಪಲಾ॥
ರಮಣಿಯ ಪೀವರ ಸ್ತನದ ಕುಂಕುಮ ಪಂಕಮೆ ಪತ್ತಿದತ್ತು ಗಾ।
ತ್ರಮನೆನೆ ಕೆಂಪಿನಿಂ ಪುದಿದು ಪೊಣ್ಮಿದುದಿಂತಮೃತಾಂಶು ಮಂಡಲಂ ॥೪೨॥

ಕಂ॥ ಇದು [1]ತರಣಿ ಬಿಂಬಮೆಂಬತಿ।
ಮುದದಿಂದಱಿಯಿಪ ರಥಾಂಗ ತತಿಗಾಗಳೆ ತ॥
ಣ್ಣಿದಿರ್ಗೆದರಿ ಮದನ ತಾಪಮು।
ನೊದವಿಸಿತರುಣಾವಲಂಬಮಾ ಶಶಿಬಿಂಬಂ ॥೪೩॥

ಕಂ॥ ಹೃದಯಂಗುಡದುದನಱಿಯದೆ।
ಪದುಮಿನಿಗಿರದುಳಿಪಿ ಕೈಯ್ಯನಿಕ್ಕುವ ಶಶಿಯಂ॥
ಪದೆದೀಕ್ಷಿಸಿ ಮಿಗೆ ನಗುವಂ।
ದದಿನಲರ್ದುದು ನೋಡೆ ನಾಡೆ ಕುವಲಯ ನಿವಹಂ ॥೪೪॥

ಮ॥ ಅಳಿಪಿಂ ನೀಡಿದ ಕೈಗೆ ಪದ್ಮಿನಿ ಮುದಂ ಗೆಂಟಾಗಲೇವೈಸಿ ಸಂ।
ಚಳಿಸಲ್ ಕಂಡುಪಹಾಸದಿಂ ಕೆಲದೊಳಿರ್ದಾ ರೋಹಿಣೀದೇವಿ ತಾಂ॥
ಪಳಿದಾದಂ ನಗೆ ತತ್ಪ್ರಹಾಸ ರುಚಿರಾಂಶು ಶ್ರೇಣಿ ತನ್ನಂಗಮಂ।
ಬಳಸಿತ್ತೆಂದೆನೆ ನೋಡೆ ನಾಡೆ ನಭದೊಳ್ ಬೆಳ್ಪೇರಿದಂ ಚಂದ್ರಮಂ ॥೪೫॥

ಕಂ॥ ಉದಯಂಗೆಯ್ದಾಗಳೆ ತಡೆ।
ಯದೆ ಕಾಮುಕ ಸಮಿತಿಗತುಳ ರಾಗಮನದನಿ॥
ತ್ತುದಱಿಂ ನಿಜ ಧವಳತೆ ಪೊ।
ಣ್ಮಿದುದೆನೆ ಬೆಳ್ಪೇರಿದಂ ಕರಂ ತುಹಿನಕರಂ ॥೪೬॥

ಮ॥ ಅಲರಂಬಿಂಗದಟೇರೆ ಕಾಮುಕಜನಂ ನೀಱೇರೆ ಕಂದರ್ಪದ।
ರ್ಪ ಲತಾಗ್ರಂ ಕೊನರೇರೆ ಕೋಕಕುಳ ಹೃತ್ಕಾಮಾಗ್ನಿ ಕಾಯ್ಪೇರೆಯು॥
ತ್ಪಲ ಲಕ್ಷ್ಮೀ ವದನ ಪ್ರಹಾಸವೆನಸುಂ ಚೆಲ್ವೇರೆ ವಾರಾಶಿಯೊಳ್।
ವಿಳಸದ್ವರ್ಧನ ಶೋಭೆಯೇರೆ ನಭದೊಳ್ ಬೆಳ್ಪೇರಿದಂ ಚಂದ್ರಮಂ ॥೪೭॥

1. ರಮಣಿ.

ತಲೆವಿಕ್ಕೆಯ್ದಿ ತಗುಳ್ದು [1]ಗೊಂಟುಗೊಳಿಸುತ್ತುಗ್ರಾಂಧ್ಯಮಂ ಕೈರವಾ ।
ವಳಿಯೊಳ್ ಪೊಕ್ಕು ವಿಕಾಸ ಲಕ್ಷ್ಮಿಗೆಡೆಮಾಡುತ್ತರ್ಣವಾನೀಕದೊಳ್ ॥
ವಿಳಸದ್ವೀಚಿಯ ಸಾಲನಂಟು ನೆಗಪುತ್ತಾಗಳ್ ಚಕೋರ ಕ್ಷುಧಾ ।
ನಳನಂ ತಾ [2]ನಲೆಯುತ್ತೆ ತಣ್ಗದಿರ್ಗಳೆತ್ತಂ ಪರ್ಬಿದತ್ತುರ್ವಿಯೊಳ್ ॥೪೮॥

ಮ॥ ಎಲೆ ಶೀತಪ್ರಭ ನಿನ್ನ ಜನ್ಮನಿಳಯಂ ತಾನಪ್ಪ ಮದ್ಗರ್ಭವಂ ।
ಸಲೆ ಕಾಯ್ಪಿಂ ಬಿಡದಿಂತು ಶೋಷಿಸುವ ಕೀಳಾಭೀಳನಂ ಬಾಡಬಾ ॥
ನಲನಂ ಬಾಡಿಸು ನೀನೆನುತ್ತುಮೆನಿತಾನುಂ ಪೇಟಲೆತ್ತಿಂದುದು ।
ಜ್ಜ್ವಲ ದುಗ್ಧಾಬ್ಧಿಯೆನಿಪ್ಪಿನಂ ಭುವನಮುಂ ಪರ್ವಿತ್ತು ಚಂದ್ರಾತಪಂ ॥೪೯॥

ಭುವನ ಶ್ರೇಣಿಗಳಂ ನಿಜೋದರದೊಳೋರಂತೆಯ್ದೆ ತಾಳ್ದಿರ್ಪ ವಿ ।
ಷ್ಣುವನೆಂದುಂ ಪದೆಪಿಂದೆ ತ[ನ್ನ ವಿವ]ರಾಂತರ್ಭಾಗದೊಳ್ ತಾಳ್ದಿದು ॥
ತ್ಸವದಿಂದಂ ನೆಲೆವೆರ್ಚುತಿರ್ದಪುದೊ ಪೇಟಂತಾ ಪಯೋವಾರ್ಧಿಯೆಂ ।
ಬವೊಲೀ ಲೋಕಮನುರ್ಬಿ ಪರ್ಬಿ ಪಿರಿದುಂ ಚೆಲ್ವಾಯ್ತು ಚಂದ್ರಾತಪಂ ॥೫೦॥

ಮ॥ ಭುವನ ಶ್ರೇಣಿಗಳಂ ನಿಜೋದರದೊಳೋರಂತೆಯ್ದೆ ತಾಳ್ದಿರ್ಪ ವಿ ।
ಷ್ಣುವನೆಂದುಂ ಪದೆಪಿಂದೆ ತ[ನ್ನಜಠ]ರಾಂತರ್ಭಾಗದೊಳ್ ತಾಳ್ದಿದು ॥
ತ್ಸವದಿಂದಂ ನೆಲೆವೆರ್ಚುತಿರ್ದಪುದೊ ಪೇಳಂತಾ ಪಯೋವಾರ್ಧಿಯೆಂ ।
ಬವೊಲೀ ಲೋಕಮನುರ್ಬಿ ಪರ್ಬಿ ಪಿರಿದುಂ ಚೆಲ್ವಾಯ್ತು ಚಂದ್ರಾತಪಂ ॥೫೧॥

ಮ॥ಸ್ರ॥ ಜಳದಾಧ್ವಂ ಸ್ವರ್ಧುನೀ ಫೇನದ ನೆವದೆ ಪೆಱುತ್ತಿರ್ದುದೋ ತಾನದಭ್ರಾ ।
ಮಳ ಶುಭ್ರ ಜ್ಯೋತಿಯಂ ಮೇಣ್ ನಿಜಸುತನೆನಿಪಾ ಶೀತರುಗ್ಭಂಸನಂ ತ ॥
ನ್ನೊಲವಿಂದಂ ತೃಪ್ತಿಗೆಯ್ವುಜ್ಜುಗದೊಳಡರ್ದುದೋ ದುಗ್ಧ ವರಾಶಿಯೆಂಬಂ ।
ತಲಘುತ್ವಂಬೆತ್ತು ಪರ್ಬಿತ್ತೆನಸು ಮಿಸುಪ ಜೊನ್ನಂ ಚಕೋರಾಮೃತಾನ್ನಂ ॥೫೨॥

ಮ॥ ಸುರರಾಜ ದ್ವಿಪ ಕಾಯಕಾಂತಿ ಮದಲೇಖಾ ಕಾರ್ಷ್ಣ್ಯ ಸಂಯುಕ್ತಮಾ ।
ಹರ ಹಾಸಪ್ರಭೆ ಕಾಳಿಕೋಪಚಿತಮಾ ಶೇಷಾಹಿ ದೇಹಾಂಶು ತ ॥

---

1. ಗೊಂಟುಗೆಳೆ ಸುತ್ತು ಗ್ರಾಂಥ. 2. ತಾನಲಿಯುತ್ತೆ.

ದ್ಗರಳ ವ್ಯಾವೃತವಾ ಸುಧಾಬ್ಧಿರುಚಿ ಕೃಷ್ಣೋಪೇತಮೆಂದಿಂತು ಮಾಂ।
ಕರಿಸುತ್ತಿರ್ಪುದು ನಿರ್ಮಳ ಪ್ರಕೃತಿಯಿಂ ಚಂದ್ರಾತಪಾಡಂಬರಂ ॥೫೩॥

ಚಂ॥ ಅರೆ ಮುಗಿದಕ್ಷಿಗಳ್ ತೆಱೆದ ಚಂಚುಪುಟಂ ನಸು ಕೊಂಕಿ ನೀಳ್ದ ಕಂ।
ಧರಮಿರದಿಕ್ಕೆಲಂಗಳೊಳೆಟಲ್ದ ಪತತ್ರ ಪುಟಂ ಸಡಿಲ್ವ ಮೆಯ್॥
ಸರಳತೆವೆತ್ತು ಬಿರ್ಚಿದ ನವಿರ್ ಪರಿರಂಜಿಸಲೀಂಟುತಿರ್ದುದು।
ಬ್ಬರಿಸಿದ ಚಂದ್ರಿಕಾ ರಸಮನಂಚಿತ ಚಾರು ಚಕೋರ ಸಂಚಯಂ ॥೫೪॥

ಅಸಮತರ ಕ್ಷುಧಾಗ್ನಿ ನೆಱೆ ನಂದೆ ಬಸಿಱ್ ಮಿಸುಪೇಱು ಪೊಂಗೆ ಮೆಯ್।
[1]ಪಸರಿಸೆ ನೀಳ್ದ ಕಣ್ ತುಮುಟೆ ಚಂದ್ರಿಕೆಯುಂ ಪದೆಪಿಂದಮಿಾಂಟೆ ಸಂ॥
ತಸಮೆರ್ದೆ[2]ಗೊಂಡ ದಂಪತಿ ಚಕೋರ ಚಯಂ ನಲಿದಲ್ಲಿಗಲ್ಲಿಗಂ।
ತೆಸೆದುದು ನುಣ್ಚರಂ ಪುದಿದ ಲಲ್ಲೆಯ ಚೆಲ್ಲದ ಕೂಟದಾಟದಿಂ ॥೫೫॥

ಆ ವಿಮಳಾಪುರಿಯ ಕನಕ ಕೋಟಾಚಕ್ರಮಂ ಚಂದ್ರಕಾಂತಮಯ ಮೆನಿಸಿಯುಂ ಬೀದಿವೀದಿಯೊಳ್ ಪಾಲ್ಗಡಲ ಪೂರಂ ಮೇರೆದಪ್ಪಿ ಪರಿವಂದಮೆ ನಿಸಿಯುಂ [3]ದೀಹದಂಚೆಗಳ ಚಿತ್ತಕ್ಕಪರಿಮಿತ ಪಯಃಪೂರಮೆನಿಸಿಯುಂ ಹರ್ಮ್ಯ ಹರ್ಮ್ಯಾಂಗಳೊಳಿರ್ಪೆಲವೆಂಡಿರ ತಂಡಮಂ ಚಂದ್ರಕಾಂತದ ಚಲನ ಮಣಿಪುತ್ರಿಕೆ ಗಳೆನಿಸಿಯುಂ ಪುಷ್ಪಲಾವಿಯರೆತ್ತಿದ ಪಾಟಲ ದಾಮಮಂ ಮಾಱುಗೊಳ್ವ ನೀಱರ ಕಣ್ಗೆ ಮಲ್ಲಿಕಾಕುಸುಮಮೆನಿಸಿಯುಂ ಬಯಲ್ದಾಣದಾ ವನಂಗಳೊಳ್ [4]ಸೆಱೆಗೆಯ್ದ ಮದಕರಿಗಳಂ ಸುರಕರಿಗಳೆನಿಸಿಯುಂ ನಸೆಯಲಂಪಿಂ ಪಱಿವ ಮುಹುರ್ಮುಹುರ್ಘ ಮಹಾರವ ಪುಂಗವಂಗಳನಭವ ಪುಂಗವಂಗಳೆನಿಸಿಯುಂ ಕಡುಗಪ್ಪುವೆತ್ತು ಬಿತ್ತರಿಪ ಗಂಡೆರಲೆ ಗಳಂ ಬೆಳ್ಳೆರಲೆಗಳೆನಿಸಿಯುಂ ಗಣಿಕಾ ವಾಟಿಯೊಳ್ ಸುಳಿವ ಬೋಜಗರ ವಿಚಿತ್ರವರ್ಣ ವರ್ಣ ವಸನಂಗಳಂ ದುಕೂಲ ಚೇಲಂಗಳೆನಿಸಿಯುಂ ಇಂತು ಪಜ್ಜಳಿಪ ಸಾಂದ್ರ ಚಂದ್ರಾತಪಾಡಂಬರಮಂ ಕಂಡು—

ಕಂ॥ ದೇವಿ ಚಕೋರಿಯು ತೆಱದಿಂ।
ಭಾವಿಸಿ ಬೆಳ್ದಿಂಗಳತ್ತಲಭಿಮುಖ ನಯನೇಂ॥
ದೀವರೆಯಾದುದನಱದು ಮಹೀ।
ವರನಾ ನಿಳಯದೊಳಗಣಿಂ ಪೊಱಮಟ್ಟಂ ॥೫೬॥

1. ಪರಿಸೆಸೆ. 2. ಗೊಂಡು. 3. ದಿವ. 4. ಸೆಱೆಗೆಯ್ದು.

ಚಂ॥ ವರ ವನಿತಾಜನಂಬೆರಸು ತದ್ಭವನಾಗ್ರದ ರತ್ನ ಕುಟ್ಟಿಮಾಂ।
ತರದೊಳಿಳೇಶನುಂ ಸತಿಯುಮುತ್ಸವದಿಂದೆಸೆದಿರ್ದರಾಗಳಂ॥
ಬರತಳದಿಂ ಧರಿತ್ರಿಗಿೞಿತಂದು ಸಮುಜ್ಜ್ವಲ ಚಾರು ತಾರೆಗ।
ಳ್ವೆರಸಿರುತಿರ್ಪ ಶೀತರುಚಿ ರೋಹಿಣಿಯೆಂಬ ವಿಳಾಸದೇೞ್ಗೆಯಿಂ ॥೫೭॥

ಉ॥ ಮಂಗಳಮಪ್ಪ ಪಾಲ್ಗಡಲೊಳಾ ಹರಿಯುಂ ಸಿರಿಯುಂ ವಿಳಾಸಿನೀ।
ಸಂಗತಿಯಿಂದವೋಲಗದ ಲೀಲೆಯನಾಂತೆಸೆವಂತೆ ತಳ್ತ ಬೆ॥
ಳ್ದಿಂಗಳ ಶೋಭೆಗತ್ಯಧಿಕ ಶೋಭೆಯನೀಯುತುಮಿರ್ದರಲ್ಲಿ ವಾ।
ರಾಂಗನೆಯರ್ ಸಮೇತಮವನೀಪತಿಯುಂ ಸತಿಯುಂ ವಿನೋದದಿಂ ॥೫೮॥

ಮ॥ ಪ್ರಮದಂಬೆತ್ತ ಚಕೋರ ದಂಪತಿಯವೋಲ್ ಚಂದ್ರಾತಪ ಶ್ರೀಯೊಳಿಂ।
ತು ಮನೋರಾಗಮನಪ್ಪುಕೆಯ್ದು ಪಿರಿದಾನುಂ ಪೊೞ್ತಿರ್ದಂ ಬೞಿ॥
ಕ್ಕಮಿಳೇಶಂ ವಿಜಯಾವತೀ ಸ್ಮಿತ ಕಟಾಕ್ಷಾದೇಶದಿಂದಾಗಳಾ।
ರಮಣೀ ಸಂಚಯಮಂ ವಿಸರ್ಜಿಸಿ ಸಮಂತೆೞ್ದಂ ಸತೀಸಂಯುತಂ ॥೫೯॥

ರತಿರಾಗೋದ್ಭವ ಮಂದಿರಂ ಮದನ ಕೇಳೀಶಾಲೆ ಸಮ್ಮೋಹನಾ।
ಕೃತಿ ಗೇಹಂ ಬಹು ಚಿತ್ರಪತ್ರ ರಸಚಿತ್ರಾನೀಕ ಸದ್ಮಂ ಸಮು॥
ನ್ನತ ಸೌರಭ್ಯ ಸುಧಾಮುಮೆಂದೆನಿಪ ಶಯ್ಯಾವಾಸಮಂ ಪೊಕ್ಕನ।
ಕ್ಷತಸೌಖ್ಯಂ ವಿಜಯಾವತೀ ಸತಿಯುತಂ ವಿಶ್ವಂಭರಾ ವಲ್ಲಭಂ ॥೬೦॥

ಕಂ॥ ಜನಿಯಿಸಿದಗರುವ ಧೂಪದ।
ತನಿಗಂಪಿಂ ಸಕಲ ಕುಸುಮ ಪರಿಮಳದಿಂ ಪಾ॥
ವನ ಸೌರಭ್ಯ ಕರಂಡಕ।
ಮೆನಿಸಿದುದಾ ರಯ್ಯಮಪ್ಪ ಶಯ್ಯಾ ಸದನಂ ॥೬೧॥

ಮ॥ ಸುರತಾಸಕ್ತಿಯನಪ್ಪುಕೆಯ್ದುವಬಳಾಯುಕ್ತಂ ಮರಾಳಂ ಮನೋ।
ಹರ ಶುಭ್ರಾಂಬುರುಹೋಪರಿ ಸ್ಥಳಮನಾಗಳ್ ಬೇಗದಿಂ ಪೊರ್ದುವಂ॥
ತಿರೆ ಮೆಯ್ವೆರ್ಚೆ ಕರಂ ರತಾತುರ ಧೃತಸ್ವಾಂತಂ ಸಕಾಂತಂ ಮಹೀ।
ವರನಾಚ್ಛಾದಿತ ಸದ್ದುಕೂಲಮೆನಿಪಾ ಪರ್ಯಂಕಮಂ ಪೊರ್ದಿದಂ ॥೬೨॥

ಕಂ॥ ಮೆದೆಗೆಡೆಯೆ ಪುಳಕತತಿ ನಾ।
ಣ್ಚಿದನಾದಂ ಧಾರಿಣೀಶ್ವರಂ ತಣಿಯೆ ಮನಂ॥

ವದನಾಬ್ಜಂ ಪೊಂಪುಟೞಯೊಳ್ ।
ಪುದಿದಿರೆ ವರ ಸುರತ ಸುಖಮನೆಯ್ದಿದ[1]ನಾಗಳ್ ॥೬೩॥

ಅಂತವನಿಪತಿಯುಂ ಸತಿಯುಂ ರತಿಸುಖ ರಸ ಪರಿಮಗ್ನ ಮನಶ್ಚಕೋರ ರಾಗಿರ್ಪಾಗಳ್—

ಉ॥ ಸಂಗಳಿಸಿ[2]ರ್ಪಳಗ್ರ ಮಹಿಷೀಪದ ಗರ್ಭದೊಳಾವ ಕಾಮಿನೀ।
ಸಂಗಮನಾಗಲೀಯ[3]ಳೆನಸುಂ ವಿಜಯಾವತಿಯೆಂದು ಮತ್ಸರಂ॥
ಪಿಂಗದೆ ತಾನಿರಲ್ ನೆರೆವೆನಾತನನೆಂಬವೊಲಾಗಳಂತೆ ನಿ।
ದ್ರಾಂಗನೆ ಬಂದು ಬೇಗದೊಳೆ ಪೊರ್ದಿದಳಾ ನರನಾಥ ಚಕ್ರಿಯಂ ॥೬೪॥

ಮ॥ ವಿಪುಳಾಂತಸ್ಸರಸೀಜ ಮಂದಿರದೊಳೋರಂತಿರ್ಪ ಬೋಧಾಂಗನಾ।
ಲಪನಾಲೋಕನ ಕಾಂಕ್ಷೆಯಿಂದಮೊಳಪೊಕ್ಕಂ ಸಸ್ಮಿತಾಕ್ಷಂ ಸಘ॥
ರ್ಮ ಪಯೋಬಿಂದು ಕಪೋಲ ಭಾಳ ಪುಟನಿರ್ದಂ ತತ್ತ್ರಮಿಸ್ರಾಂತಯಾ।
ಮ ಪರಾರ್ಧ ಪ್ರಹರಂಬರಂ ನೃಪವರಂ ನಿದ್ರಾಂಗನಾ ಸಂಗದೊಳ್ ॥೬೫॥

ಚಂ॥ ಭಗಣ ವಿಲಾಸಮಾಕ್ಷಣದೆ ಪಿಂಗಲೊಡರ್ಚಿದುದಾ ಚಕೋರ ಕೋ।
ಟಿಗಳ ಮನೋಮುದಂ ಕರಗುವಂದಮನೊಂದಿದುದುತ್ಪಲಂಗಳಾ॥
ನಗೆಯುಗೆಯೆಟ್ಟು ಪೋಗಲನುಗೆಯ್ದುದು ಯಾಮಿನಿ ಮಾಯವಾಗಲು।
ಜ್ಜುಗಿಸಿದುದಾಗಳಾಗಳೆ ಗತಪ್ರಭನಾಗುತಿರಲ್ ಸಿತ ಪ್ರಭಂ ॥೬೬॥

ಮೊದಲೊಳೆ ಪಿಂಗೆ ಸಾಂದ್ರ ನವಚಂದ್ರಿಕೆಯಂ ಧರಿತ್ರಿಯೊಳ್।
ಕೆದಱುತುಮಿರ್ಪ ತಣ್ಗದಿರ ತೊಂಗ[4]ಲಡಂಗೆ ನಿಮಿರ್ಕೆವೆತ್ತ ತ॥
ಣ್ಗದಿರ ಪೊದಟ್ಕೆಯಂ ಕರೆವ ನವ್ಯಕಲಾ ವಿಸರಂ ಮಸುಟ್ದು ಮಾ।
ಸಿದ ಮುಕುರಂ[5]ಬೊಲಂತೆ ವಿಗತ ಪ್ರಭನಾಯ್ತಮೃತಾಂಶು ಮಂಡಲಂ ॥೬೭॥

ತಲೆಗರೆದಾಗಳಂತೆ ರಜನೀ ನಿಜಶೋಭತೆ ಪೋಯ್ತು ಕೈರವಾ।
ವಲಿಯ ವಿಶಾಲ ಲಕ್ಷ್ಮಿ ಲವಮಿಲ್ಲದೆ ಪೋಯ್ತು ಚಕೋರ ಚಿತ್ತದೊಳ್॥
ನೆಲಸಿದ ಸನ್ಮುದಂ ತವೆದು ತೊಟ್ಟನೆ ಪೋಯ್ತು ಪೊದಟ್ದು ತಾರಕಾ।
ಕುಲಮಿರದೆಯ್ದೆ ಪೋಯ್ತು ನೆಱೆ ನಿಷ್ಕಳನಾಗೆ ಕರಂ ನಿಶಾಕರಂ ॥೬೮॥

---

1. ರಾಗಳ್. 2. ರ್ಭದ. 3. ನಸುಂ. 4. ಲಡಂಗಿ. 5. ಪದಂತೆ.

ಮ॥ಸ್ರ॥ ವನ ಭೂಜಾಕೀರ್ಣ ಪರ್ಣ ಪ್ರಚಯದ ಪನಿಪುಲ್ಲಂಬುವಂ ಸೂಸಿ ನಿಷ್ಪ್ರಾ।
ತ ನಿಕಾಯಕ್ಕೊರ್ಮೆ ದಲ್ ಶೀತಮನೊದವಿಸಿ ತನ್ನೀರಜಾನೀಕಮಂ ತೂ ॥
ಗಿ ನವಸ್ಮೇರಕ್ಕೆ ಪಕ್ಕಾಗಿಸು[1]ತಮಳ ನಿಶಾಂತಂಗಳಂ ಪೊಕ್ಕು ತತ್ಕೇ
ತನ ದೀಪಶ್ರೇಣಿಯೊಳ್ ಕಂಪಮನೊದವಿಸುತುಂ ತಂಬೆಲರ್ ತೀಡಿತಾಗಳ್ ॥೭೯॥

ಕಂ॥ ಬಳಸಿ ಚಿಲಿಮಿಲಿಪ ವಿಹಗಂ।
ಗಳ ಕಳಕಳದೊಡನೆ ತೊಡರ್ದು ಸರಸಿಜ ದಳಮಂ ॥
ಪಳಿಗೊಳಿಸಿ ಕುಮುದ ಮುಖಮಂ।
ಪೆಳರಿಸಿ ತೀಡಿತ್ತು ಸುಪ್ರಭಾತ ಸಮೀರಂ ॥೭೦॥

ಚಂ॥ ಒದವಿದ ತೂಂಕಡೋಸರಿಸೆ ಕಣ್ದೆಱೆದೀಕ್ಷಿಸಿ ನಿಟ್ಟೆಱಂಕೆಯಂ।
ಬಿದಿರ್ದು ನಿಮಿರ್ಚಿ ಗೋಣ್ಮುರಿದೆರಱ್ಕಲನಂ ಕಮನೀಯ ಚಂಚುವಿಂ॥
ಕರ್ದುಕಿ ಕುಲಾಯದಿಂದೆ ಪೊಱಮಟ್ಟು ವಿಹಂಗಮ [2]ಸಂಘಮುಂ ಮಹೀ।
ಜದ ಬಹುಶಾಖೆಯೊಳ್ ಚಿಲಿಮಿಲಿ ಧ್ವನಿಗೆಯ್ದುದು ಸುಪ್ರಭಾತದೊಳ್ ॥೭೧॥

ಮ॥ಸ್ರ॥ ತನುವಂ ತಳ್ಪೊಯ್ದು ತಣ್ಣಾಳಿಯ ಪದೆಪಿನೊಳೆಟ್ಟುತ್ತು ಪಕ್ಷಂಗಳೊಳ್ಪ।
ಟ್ಟನಿತುಂ ಪೋತಂಗಳಂ ವೀಕ್ಷಿಸುತೆಱಕೆಗಳಂ ಮೆಲ್ಲನುರ್ಬೆತ್ತಿ ನಿಂದೊ॥
ಯ್ಯನೆ ಮುಯ್ಪಂ ತ್ರೋಟಿಯಿಂದಂ ತೊಡೆದುಗಱಗಳಂ ನುಣ್ಣ ವಿರ್ಬಿರ್ಚಿ [ಮೆಯ್ಯಂ।
ತೊನೆದುದ್ದಂ ನೀಡಿ ಗೋಣಂ ನವ ದಿನಮುಖದೊಳ್ ಕುಕ್ಕುಟಂ ಕೂಗಿ [ತಾಗಳ್ ॥೭೨॥

ಘನ ನಿದ್ರಾಮುದ್ರೆಯಿಂ ಮೆಯ್ಮಱೆದು ಸುಖದೊಳಾಲಾನಮಂ ನೆಮ್ಮಿದುಗ್ರೇ।
ಭ ನಿಕಾಯಕ್ಕೆಚ್ಚರಂ ಪುಟ್ಟಸುತುಮುದಯ ಸೇಮಸ್ಥರೊಳ್ ವ್ಯಗ್ರಮಂ ತೊ॥
ಟ್ಟನೆ ತಾನೀಯುತ್ತುಮೇತತ್ಪತಗ ಕುಹರಣ ಶ್ರೀಯನೂಱ್ದತ್ತುತುಂ ಭೋಂ॥
ಕನೆ ಪರ್ಬಿತ್ತುರ್ಬ್ಬಿ ದೇವಾಯತನ ತತಿಯ ಶಂಖಪ್ರಭೂತ ಪ್ರಣಾದಂ ॥೭೩॥

ಮ॥ ನಿನದಂಗೆಯ್ದುಱುಪುತ್ತುಮೆಯ್ದೆ ಪಱತಂದಾನಂದದಿಂದೊಂದನೊಂ।
ದನುವಿಂ ಪಿಂತಮರ್ದಪ್ಪಿ ತಣ್ಣೆಲರ್ಗಳಿಂ ಹರ್ಷಾಶ್ರು ಮೆಯ್ವೆರ್ಚೆ ಭೋಂ।

1. ತವನಿಳನರ್ಥ. 2. ಸಂಗಮಂ.

ಕನೆ ಚಂಚೂಪುಟದಿಂ ಕರ್ದುಂಕಿ ತಲೆಯಂ ತತ್ಕೂಜಿತ ಧ್ವಾನಮು॥
ಣ್ಮೆನವಾಂಭೋಜದಿಜುಮ್ಬಿನೊಳ್ ನೆಱೆದುದೋರಂತಾ ರಥಾಂಗವ್ರಜಂ ॥೭೪॥

ಕಂ॥ ಪರಿತರುತಿರ್ಪಿನಿಯನನಂ।
ಬುರುಹದಿಜುಮ್ಬಿಂಗೆ ಚಂಚುವಿಂ ಪಿಡಿದತ್ಯಾ॥
ತುರದಿಂದೆಟದುಯ್ದೆನಸುಂ।
[1]ನೆರೆದೋಡಿದುದೊಂದು ಕೋಕ ಕಾಮಿನಿಯಾಗಳ್ ॥೭೫॥

ಪೊಕ್ಕನುರಾಗದೊಳಾ ಪೊಣ।
ರ್ವಕ್ಕಿಗಳೆಟ್ತಿಂದು ತಮ್ಮ ಕೆಲದೊಳ್ ನೆರೆವಾ॥
ತ್ಸುಕ್ಯಮನದನೀಕ್ಷಿಸಿ ನಗೆ।
ವೊಕ್ಕಳಮಾದಂತಿರಲರ್ದುವಂಬುರುಹಂಗಳ್ ॥೭೬॥

ಚಂ॥ ಇವನ ವಿಯೋಗದೊಂದು ನೆವದಿಂ ಮುಸಿದೆಮ್ಮ ಕುಟುಂಬ ಕೋಟಿಗಿಂ।
ತನುಪಮಮಪ್ಪ ಸನ್ಮದಮನೀಯದೆ ಜೈತಿರಿಸಿರ್ದಿರೆಂದು ಬಂ॥
ದನುವಿಸಿ ತುಂಬಿಗಳ್ ಬಲವರಲ್ ದಯೆಯಿಂ ವೊಗವಿತ್ತ ಮಾಟ್ಕೆಯಿಂ
ವನಜ ಸಮಾಜಮುಳ್ಳಲರ್ದುದಾಗಳೆ ವಾರಿಜಷಂಡ ಷಂಡದೊಳ್ ॥೭೭॥

ಮ॥ ಸುರದಿಕ್ಕಾಂತೆಯೊಳೋತು ಭಾನು ನೆರೆಯಲಾ ಬಂದುಜ್ಜುಗಂಗೆಯ್ದನಂ।
ಬುರುಹಶ್ರೀ ವಧು ಕಂಡೊಡಂ ಕಲುಷಮಂ ಕೈಕೊಳ್ಗುಮಿಂದೆಂದು ಭಾ॥
ಸುರ ನವ್ಯಾರುಣಮಪ್ಪ ಕಾಂಡಪಟಮಂ ತಂದೆತ್ತಿದಂ ಬೇಗದಿಂ।
ದರುಣಂ ತಾನೆನೆ [2]ಸಾಂದ್ರಮಾಯ್ತುದಯದೊಳ್ ಸಂಧ್ಯಾಮರೀಚಿ [ವ್ರಜಂ
॥೭೮॥

ಸರಸೀಜಾನನೆ ಚಕ್ರವಾಕ ವಿಳಸದ್ವಕ್ಷೋಜೆ ನೀಲಾಂಬರಾಂ।
ಬರ ವಿಭ್ರಾಜಿತೆಯಾಗಿ ಬಂದ ದಿವಸಶ್ರೀ ದೇವಿಗೈಂದ್ರೀತನೂ॥
ದರಿ ತಂದುತ್ಸವದಿಂದೆ ತೋರ್ಪರುಣ ರತ್ನಾದರ್ಶವೆಂಬಂತೆ ಬಿ।
ತ್ತರಿಸುತ್ತಿರ್ದುದು ಭಾನು ಬಿಂಬಮಮರೇಂದ್ರಾಶಾ ಗಿರೀಂದ್ರಾಗ್ರದೊಳ್ ॥೭೯॥

1. ನಸುದೋಱಿ. 2. ಸಾದ್ರF.

ಕಂ॥ ದಿವಸಶ್ರೀಗಮರಾಶಾ।
ಯುವತಿ ಕರಂ ಪ್ರೇಮದಿಂದೆ ಕಾಣ್ಕೆಯನೀವಾ॥
ನವ ಮಾಣಿಕ್ಯಮೆ ತಾನೆಂ॥
ಬ ವಿಳಾಸಮನಾಂತು ರಂಜಿಸಿತು ರವಿಬಿಂಬಂ ॥೮೦॥

ಆ ಸಮಯದೊಳ್—

ಮ॥ಸ್ರ॥ ಫೇನ ಶೋಭಾಶಯ್ಯೆಯಿಂದುಪ್ಪವಡಿಸಿ ಘೃತ ಸಂವೀಕ್ಷಣಂ ವಿಪ್ರ ವೇದ।
ಧ್ವನಿ ಗೀತಾಕರ್ಣನಂ ಪಾವನತರ ಕಪಿಲಾ ಸ್ಪರ್ಶನಂ ದರ್ಪಣಾಲೋ॥
ಕನಮಾತ್ಮೀಯಾದಿ ದೇವಾರ್ಚನಮಿನ ಮುಖ ಸಂದರ್ಶನಂ ನಿತ್ಯದಾನಾ।
ದಿ ನುತಾನೇಕ ಪ್ರಭಾತ ಕ್ರಿಯೆಗಳನಿತುಮಂ ಮಾಡಿದಂ ಭೂವರೇಂದ್ರಂ ॥೮೧॥

ಕಂ॥ ಪ್ರಿಯದಿಂದೆ ತತ್ಪ್ರಭಾತ।
ಕ್ರಿಯೆಯಂ ನೆಱೆ ಮಾಡಿ ತಾಂ ಮನೋಹರಮಾಗಲ್॥
ಪ್ರಿಯದಿಂದೆ ತನುಗೆ ಭೂಷಾ।
ಕ್ರಿಯೆಯಂ ನೆಱೆ ಮಾಡಿದಂ ಬಟಿಕ್ಕಮಿಳೇಶಂ ॥೮೨॥

ತದನಂತರದೊಳ್—

ಮ॥ಸ್ರ॥ ಜಯಕಾಂತಾ ಕೇಕರಾಂಶು ಪ್ರಸರಮೆನೆ ಭುಜೋತ್ಪಾತ ಖಡ್ಗಂ ಪ್ರಭಾತ।
ಕ್ರಿಯೆಯಂ ಸಂಚಾರಿಸುತ್ತುಂ ಬರೆ ಪರಿಚಿತ ರಕ್ಷಾ ಭಟರ್ಕಳ್ ಮನೋ ಲೀ॥
ಲೆಯೊಳಾ ವಿಶ್ವಂಭರೋರ್ವೀಪತಿ ಸುರುಚಿರ ತಾಂಬೂಲ ಸಂವಾಹಿನೀ ಸ್ಕಂ॥
ಧ ಯುತೋದಂಚತ್ಕರಾಬ್ಜಂ ಮಣಿಮಯ ರಚಿತಾಸ್ಥಾನಮಂ ಬಂದು ಪೊಕ್ಕಂ ॥೮೩॥

ಕಂ॥ ಸ್ಫುರಿತೇಂದೂಪಲ ಹರಿವಿ।
ಷ್ಟರ ರುಚಿಯಿಂ ಧವಳಮೆನಿಸಿದಾಸ್ಥಾನ ಗೃಹಾಂ॥
ತರಮಂ ಪೊಕ್ಕೆಸೆದಂ ಭೂ।
ವರನಮೃತಾರ್ಣವದೊಳೆಸೆವ ಬಿಸಜಾಕ್ಷನವೋಲ್ ॥೮೪॥

ಮ॥ ಜಳಧಿ ವ್ಯಾವೃತ ಸಪ್ತ ವಿಶ್ವ ವಸುಧಾ ವಿಖ್ಯಾತ ಚಾತುರ್ದಿಶಾ।
ವಳಯುಕ್ಕೊರ್ಬನೆ ತಾನಧೀಶ್ವರನದೆಂತುಂ ಸತ್ಯಮೆಂದಿಂತು ನಿ॥

ರ್ಮಳ ಶೋಭಾಕೃತಿ ಸೂಚಿಸಂತೆ ಮಣಿಭಿತ್ತಿ ವ್ರಾತದೊಳ್ ರೂವು ಮಾ।
ರ್ಪೊಳೆಯುತ್ತಿರ್ಪಿನಮಿಂತು ವಿಷ್ಟರ ಶಿರೋಲಂಕಾರನಾದಂ ನೃಪಂ ॥೮೫॥

ಬರವೇಟ್ಟಿರ್ದ್ದ ಜೇಗದೊಳ್ ವಿನಯಮಾದಂ ಪೆರ್ಚಿ ಬಂದಾ ಮುನೀ।
ಶ್ವರ ವಿಶ್ವಂಭರ ಭೂಮಿಪಾಲಕನ ತದ್ವಾಮೇತರೋಪಾಂತಿಕೋ॥
ರ್ವರೆಯೊಳ್ ತಾನುಚಿತಾಸನೋಕ್ತ ತಟದೊಳ್ ಕುಳ್ಳಿರ್ದನಾಜ್ಞಾಬಳಂ।
ವರ ಮಂತ್ರೋಕ್ತ ಬಳಂ ಪ್ರಧಾನ ಮುಕುರ ಪ್ರಜ್ಞಾಬಳಂ ದೋರ್ಬಳಂ ॥೮೬॥

ಇಂತುಚಿತಾಸನನಾದ ಸಚಿವನ ಮೊಗಮಂ ನೋಡಿ—

ಮ॥ ಮಿಗೆ ಕಾರುಣ್ಯದೆ ಬಂದು ದಿವ್ಯ ಮುನಿನಾಥಂ ಪೇಟ್ದವೋಲ್ ಬೇಗದಿಂ।
ನೆಗಟಲ್ವೇಟ್ಪುದು ಪುತ್ರಕಾಮ್ಯ ಮಖಮಂ ನಾವೀಗಳಾ ಯಜ್ಞಸಿ॥
ದ್ಧಿಗೆ ಪೇಟಧ್ವರಿಯಪ್ಪರಾರ್ ಮುನಿಪರೊಳ್ ತತ್ಕಾರ್ಯ ನಿಷ್ಪತ್ತಿಗು।
ಜ್ಜುಗಮೇನೆಂದವನೀಶನಿಂತು ಬೆಸಗೊಂಡಂ ಮುಖ್ಯ ಮಂತ್ರೀಶನಂ ॥೮೭॥

ಅಂತು ಬೆಸಗೊಳ್ವುದುಂ—

ಮ॥ ವಿನುತಂಬೆತ್ತುದು ದೇವ ನಮ್ಮ ಪುರದೈಂದ್ರೀಭಾಗದಿಂದೀರೆಂಟು ಯೋ।
ಜನ ಮಾತ್ರಾವನಿಯೊಳ್ ಶಿವಂಕರ ವನಂ ಶ್ರೀಕಂಠದೇವಂ ಧರಾ॥
ವನದೊಳ್ ಸನ್ಮುನಿ ಸಂಚಯೋಪಚಿತನಾಗಿರ್ಪ್ಪಂ ಸುಧರ್ಮವ್ರತೀ।
ಶನಿಳಾಚಾರ್ಯವರಂ ವರ ಕ್ರತು ಕುಲಾನೂನ ಕ್ರಿಯಾ ತತ್ಪರಂ ॥೮೮॥

ಸಮುಪೇತ ವ್ರತಿಯೂಥನಪ್ಪ ಬಹು ಯಜ್ಞಾಳಿ ಕ್ರಿಯಾಭಿಜ್ಞನ।
ಪ್ಪ ಮುನೀಂದ್ರೋತ್ತಮನಪ್ಪ ಸುಶ್ರುತ ಸುಧರ್ಮಾಚಾರ್ಯನಂ ತಂದು ತ॥
ತ್ಕ್ರಮ ವಸ್ತೂತ್ಕರದಿಂದೆ ಮಾಡಿಸುವವಿಾಗಳ್ ಬೇಗದಿಂ ಪುತ್ರಕಾ।
ಮ್ಯ ಮಹಾಯಾಗಮನೆಂದು ಭಿನ್ನವಿಸಿದಂ ಭೂಪಂಗೆ ಮಂತ್ರೀಶ್ವರಂ ॥೮೯॥

ಕಂ॥ ಮನದೊಳ್ ನೆನೆದುದ್ಯೋಗ।
ಕ್ಕನುರೂಪಮದೆನಿಸಿ ನುಡಿದ ತನ್ಮಂತ್ರಿ ವರೇ॥
ಣ್ಯನ ಬಿನ್ನಪಮಂ ಕೇಳ್ದಾ।
ಜನಪಂ ಸುತನೊಗೆದ ತೆಱದೆ ಮಿಗೆ [1]ಮುದವಾಂತಂ ॥೯೦॥

1. ಮುದನಾದಂ.

ಚಂ॥ ಪುದಿದನುರಾಗದಿಂ ಗೃಹಮುಹತ್ತರನಂ ಬರವೇೞ್ದು ಮಾಡು ಪೆ।
ರ್ಚಿದ ಭರದಿಂದೆ ನಮ್ಮ ವಿಮಳಾಪುರಿಯಾ ಪೊೞಗಿಂದ್ರದಿಕ್ಪ್ರದೇ॥
ಶದೊಳಿನಸುಂ ಸುಲಕ್ಷಣ ಸಮನ್ವಿತಮಪ್ಪಿನಮೊಂದು ಸನ್ಮಖಾ।
ಸ್ಪದಮನೆನುತ್ತಮಂಗೆ ಪೆಸರ್ವೇೞ್ದನಿಳಾಧಿಪ ವಾರಿಜೋದರಂ ॥೯೧॥

ಆಗಳ್—

ಮ॥ಸ್ರ॥ ತಱಸಂದುಣ್ಮುತ್ತಿರಲ್ ಮಂಗಳ ಪಟಹ ರವಂ ಕೂಡೆ ದಿಕ್ಚಕ್ರಮಂ ಕ।
ಣ್ದೆಱೆಯಲ್ ತೀವ್ರಾಯುಧ ವ್ರಾತದ ಬೆಳಗುಗಳಾಭೀಳ ನಿಸ್ಸಾಳ ನಾದಂ॥
ನೆಱೆ ಮಿಕ್ಕಂಭೋಜ ಗರ್ಭಾಂಡಮನೆ ಬಿರಿಯಿಸುತ್ತಿರ್ಪಿನಂ ಬೇಗದಿಂ ತಾಂ।
ಪೊಱಮಟ್ಟಂ ಶ್ರೀ ಸುಧರ್ಮವ್ರತಿ ಸವನಕೆ ವಿಶ್ವಂಭರ ಕ್ಷೋಣಿಪಾಲಂ ॥೯೨॥

ಚಂ॥ ಕರಿಪದ ಪಾತದಿಂದರೆ ಸುರುಳ್ತಿರೆ ವಾಜಿ ಖುರ ಪ್ರಘಾತದಿಂ।
ಗಿರಿ ನೆಱೆ [1]ನುಗ್ಗಿ ಸಂಚರ ಪದಾತಿ ಸಮುದ್ಭವ ಪಾಂಸುವಿಂದಮಂ॥
ಬರಮಿಳೆಯಾಗ[2]ಲುದ್ಗತ ಸಿತಾತಪ ವಾರಣ ಜಾಲದಿಂ ಪಗಲ್।
ಗುರು ನಿಶೆಯಾಗಿ ತೋಱೆ ನಡೆದಂ ಮುನಿನಾಥ ವನಕ್ಕಿಳಾಧಿಪಂ ॥೯೩॥

ಮದವದಿಭೇಂದ್ರ ದಾನ ಸಲಿಲಂ ನದರೂಪಮನೆಯ್ದೆ ವಾಜಿವ।
ಕ್ತ್ರದ ನವಮಾಲೆ ಫೂತ್ಕೃತ ಮರುದ್ಧತಿಯಿಂ ದೆಸೆಯಂತಮೆಯ್ದೆ ಸೈ॥
ನ್ಯದೊಳೊಗೆದಾನಕ ಧ್ವನಿ ಸರೋಜ ಭವಾಂಡಮನೆಯ್ದೆ ರಾಗದೆ।
ಯ್ದಿದನಿರದಾ ಸುಧರ್ಮ ಮುನಿಪೋತ್ತಮನಾಶ್ರಮಮಂ ನೃಪೋತ್ತಮಂ ॥೯೪॥

ಮ॥ ಭುವನಾರೂಢಿಯ ಪಟ್ಟವರ್ಧನ ಗಜೇಂದ್ರ ಸ್ಕಂಧದಿಂ ಬೇಗದಿಂ।
ದವನಿ ನ್ಯಸ್ತ ಪದಾಬ್ಜನಾಗಿ ಬಹಿರುರ್ವೀಸ್ಥಾನದೊಳ್ ಸೈನ್ಯಮೆ॥
ಲ್ಲವನಂತಂತಿರವೇೞ್ದು ತಾಂ ಸಮುಚಿತಾತ್ಮೀಯರ್ಕಳಿಂ ಪೊಕ್ಕನೊ।
ಪ್ಪುವ ವಿಖ್ಯಾತ ಶಿವಂಕರಾಖ್ಯ ವನಮಂ ವಿಶ್ವಂಭರೋರ್ವೀಶ್ವರಂ ॥೯೫॥

ವನಮಂ ಪೊಕ್ಕು ತದೀಯ ಮಧ್ಯದೊಳಪಾರ ಸ್ವಚ್ಛ ಪಾನೀಯಮು।
ಪ್ಪನವಾಂಭೋರುಹ ಷಂಡದೊಳ್ ಪದ ಮುಖ ಪ್ರಕ್ಷಾಳನಂಗೆಯ್ದು ಭೋಂ॥

1. ನುಗ್ಗಿ. 2. ಲುದ್ಘ.

ಕನೆ ಬಂದಲ್ಲಿ ವಿರಾಜಿಸಿಪ್ಪರ್ ವಿನುತ ಶ್ರೀಕಂಠ ದೇವರ್ಗೆ ಸಂ।
ಜನಿತೋದ್ಭಾಸುರ ಭಕ್ತಿಯಿಂದೆಱಗಿದಂ ವಿಶ್ವಂಭರೋರ್ವೀಶ್ವರಂ ॥೯೬॥

ಇಂತು ಕೃತ ನಮಸ್ಕಾರನಾಗಿ ಶಿವ ಭವನಮಂ ಪೊಱಮಟ್ಟಾಗಳ್--

ಮ॥ ವರ ವೇದಾಧ್ಯಯನ ಧ್ವನಿ ಪ್ರಸರದಿಂ ಶ್ರೀ ವಿಶ್ವ ಮಂತ್ರಾಕ್ಷರೋ।
ಚ್ಚರಣ ಪ್ರಸ್ಫುಟ ನಾದದೊಂದೆಸಕದಿಂ ಶಬ್ದಾದಿ ನಾನಾ ವಿಭಾ॥
ಸುರ ಶಾಸ್ತ್ರ ಪ್ರಕರ ಪ್ರಕಾಶ ಕರಣ ವ್ಯಾಖ್ಯಾನ ಗಂಭೀರ ಸು।
ಸ್ವರದಿಂ ತೆಕ್ಕನೆ ತೀವಿ ತೋರ್ಪ ಮಠಮಂ ಕಂಡಂ ಧರಾಧೀಶ್ವರಂ ॥೯೭॥

ಮ॥ಸ್ರ॥ ಸತತಂ ದೋಷಾನುಬಂಧಂ ಸಲೆ ಮಳಹೃದಯಂ ಸಂತತಂ ರಾಹುಬಾಧಾ।
ವೃತನೆಂದುಂ ಕುಂದುವಂ ಪೆರ್ಚುವನೆನುತಮೆ ಶೀತಾಂಶುವಂ ಬಿಟ್ಟುಬಂದೀ॥
ಯತಿಪಂ ನಿರ್ದೋಷಿ ನಿತ್ಯಂ ಸದಮಳ ಹೃದಯಂ ನಾಡೆ ನಿರ್ಬಾಧ್ಯನತ್ಯು।
ನ್ನತನೆಂದೆಟ್ಟಿಂದು ತಚ್ಚಂದ್ರಿಕೆಯಮರ್ದ ವೊಲೊಪ್ಪಿತ್ತು ಭಸ್ಮಾನುಲೇಪಂ
॥೯೮॥

ಮ॥ ಪರಮಾತ್ಮಾಗಮ ವೇದಶಾಸ್ತ್ರ ತತಿಯಂ ಕೇಳ್ವಾ ಪರಿವ್ರಾಜಕಾಂ।
ತರಮಂ ತೀವು[ತೆ ತನ್ನ ತೇಜದೊದವಿಂ] ಹಾರಂಗಳೆಂಬಂತೆ ಭಾ॥
ಸುರ ದಂತದ್ಯುತಿ ಮಾಲೆ ಮುಂಬಱಿವಿನಂ ವ್ಯಾಖ್ಯಾನಮಂ ಮಾಡುತ।
ಚ್ಚರಿವೆತ್ತಿರ್ದ ಸುಧರ್ಮಯೋಗಿ ವರನಂ ಕಂಡಂ ಧರಾಧೀಶ್ವರಂ ॥೯೯॥

ಕಂ॥ ಮುನಿಪತಿಯಂ ಕಾಣಲೊಡಂ।
ಜನಪತಿಯ ವಿಶಾಲ ನೇತ್ರ ಪುತ್ರಿಕೆಗಳ್ ಪಾ॥
ವನ ಸಲಿಲ ಪುತ್ರಿಕಾ ಯುಗ।
ಮೆನಿಸಿದುದೊದವಿದ ಮುದಶ್ರು ಧಾರಾಶ್ರಿತದಿಂ ॥೧೦೦॥

ಚಂ॥ ಜನಿತ ಮುದಶ್ರು ಮಿಶ್ರ ನಯನ ದ್ವಿತಯಂ ನರನಾಥ ಚಕ್ರಿ ಸ।
ದ್ವಿನಯದೆ ಸಾರ್ಗ್ಗೆ ವಂದು ಮುನಿಸೇವ್ಯ ಸುಧರ್ಮ ಮುನೀಶ್ವರಾಂಘ್ರಿ ಪಾ॥
ವನ ವನಜಕ್ಕೆ ತಾನೆಱಗಿದಂ ನೆಱೆ ಮುಂಚಱಿದಾತ್ಮ ಮೌಳಿ ಮಂ।
ಡನ ಕರ ಮೌಕ್ತಿಕ ದ್ಯುತಿ ನಖ ದ್ಯುತಿಯೊಳ್ ಪುದಿಯುತ್ತುಮಿರ್ಪಿನಂ ॥೧೦೧॥

ಕಂ॥ ಈ ನೆವದೊಳ್ ಭೂ ಸತಿಯಂ।
ತಾನಪ್ಪಿದನೆನೆ ಮುನೀಂದ್ರ ಪದ ಪಂಕರುಹ॥

ಕ್ಕಾನಂದ ಭಕ್ತಿಯಿಂದಿನಿ।
ತಾನುಂ ದಂಡಪ್ರಣಾಮಮನಾದನಿಳೇಶಂ ॥೧೦೨॥

ವಿನಯದಿನೆಱಗಿದ ಭೂಪನ।
ಮನದಭಿಮತ ಲತೆಯನೊದವಿಸಲ್ ಪಱವ ಸುಧಾ ॥
ವನಧಿ ಪ್ರವಾಹಮೆನೆ ದಂ।
ತ ನವದ್ಯುತಿ ನಿಮಿರೆ ಪರಸಿದಂ ಮುನಿನಾಥಂ ॥೧೦೩॥

ಕಂ॥ ತೊಳಪ ಪದ ನಖ ಮಯೂಖಾ।
ವಳಿ ಶೇಖರನಾದ ಸಚಿವ ವರನಂ ಪ್ರಜ್ಞಾ ॥
ಬಳನನತಿ ಮುದದಿನಾ ಮುನಿ।
ಕುಳ ವರ್ಯಂ ಪರಸಿದಂ ಸುಧರ್ಮಾಚಾರ್ಯಂ ॥೧೦೪॥

ಮ॥ ಹೃದಯೋದ್ಭೂತ ನವ ಪ್ರಸನ್ನ ಸುಧೆ ಪೂರಂಗೊಂಡುದೆಂಬಂತೆ ದಂ।
ತದ [1]ಕಾಂತ ದ್ಯುತಿಮಾಲೆ ಮುಂಬಱಯುತಿರ್ಪನ್ನಂ ಮುನೀಂದ್ರಂ ಮನೋ ॥
ಮುದದಿಂ ತಾಂ ಬೆಸಗೊಂಡನೇಂ ಕುಶಲಮೋ ಪೇಟೀಂ ದಿಟಂ ಮತ್ತಮಾ।
ವುದು ನೀವಿಲ್ಲಿಗೆ ಬಂದ ಕಾರ್ಯಮೆನುತುಂ ತದ್ಭೂವರೋಪೇಂದ್ರನಂ ॥೧೦೫॥

ಮುನಿನಾಥಂ ಮನಮೊಲ್ದು ತಾಂ ಬೆಸಗೊಳಲ್ ಕಾರುಣ್ಯಮಂ ಕಂಡು ಭೋಂ।
ಕನೆ ಭೂಪಾಗ್ರಣಿ ಕುಟ್ಮಳೀಕೃತ ಕರಾಂಭೋಜಾತನಾಗಿರ್ದು ಮೆ ॥
ಲ್ಲನೆ ಚಿತ್ತಂಬುಗುವಂತೆ ಬಿನ್ನವಿಸಿದಂ ಶ್ರೀ ಸುಪ್ರಭಾಖ್ಯ ಪ್ರತೀ।
ಶನತಿ ಪ್ರೇಮದೆ ಬಂದು [2]ಕೇಳ್ದನಿತುಮಂ ತಾಂ ಬಂದ ವೃತ್ತಾಂತಮಂ ॥೧೦೬॥

ಕಂ॥ ಮನಮಿತ್ತು ಕೇಳ್ವುದಂ ಕಂ।
ಡು ನರೇಂದ್ರಂ ಮತ್ತಮಾಗಳಿಂತೆಂದಂ ನೀ ॥
ವೆನಗೆ ದಯೆಯಿಂದೆ ಬಂದೆಲೆ।
ಮುನಿಪತಿಯಾಚಾರ್ಯರಾಗವೇಟ್ಪುದು ಮಖದೊಳ್ ॥೧೦೭॥

ಇಂತು ಬಿನ್ನವಿಸಿದಾಗಳ್—

1. ಕಾಂತಿ. 2. ಪೇಳ್ದ.

ಮ॥ ಸಿನಗಾನಂದಮನೀವ ನಂದನನನೀವಾ ಯಜ್ಞಮಂ ಮಾಳ್ಪುದಂ।
ನೆನೆದೀಗಳ್ ನೃಪ ಲೇಸುಮಾಡಿದೆ ಕರಂ ನೀನೆಂದುದಂ ಮಾಳ್ಪೆವೆಂ॥
ದೆನುತುಂ ಶಾಸ್ತ್ರ ಶಿವಾಗಮಾಧ್ಯಯನಮಂ ತಾಂ ಪೇಳ್ವುದಂ ಮಾಣ್ದು ತ।
ನ್ಮುನಿ ವೃಂದಂ ಬೆಱಸೆಟ್ಟನಾಗಳೆ ಸುಧರ್ಮಾಚಾರ್ಯನಾರ್ಯೋತ್ತಮಂ ॥೧೦೮॥

ಚಂ॥ ಪರಿವೃತ ಶಿಷ್ಯ ಸಂಯಮಿ ಸಮಾಜ ಸಮೇತದಿನಾಗಳಂತೆ ಭಾ।
ಸುರ ಋಷಿಯಿಂದಮೇಳ್ವ ಮುನಿರಾಜನ ದಕ್ಷಿಣ ಪಾಣಿ ಪಲ್ಲವ॥
ಕ್ಕಿರದೆ ನಿಜ ಪ್ರಕೋಷ್ಠ ಪುಟಮಂ [1]ಪದೆದಿತ್ತು ನರೇಶ್ವರಂ ಶಿವಂ।
ಕರ ವನಮಂ ಸಮಂತು ಪೊಱಮಟ್ಟನುದಗ್ರ[2]ತರಾನುರಾಗದಿಂ ॥೧೦೯॥

ಅಲ್ಲಿಂ ಮುಂದೆ—

ಚಂ॥ ಬನದ ಬಹಿರ್ಮಹೀ ತಳದೊಳಿರ್ದ ವರೂಥಿನಿಗೆಯ್ದೆ ವಂದು ತ।
ನ್ನನುಪಮ ಪಟ್ಟವರ್ಧನ ಗಜೇಂದ್ರಮನಾಗಳೆ ತಂದು ಸಾರ್ಚಿ ತ॥
ಜ್ಜನಪತಿ ಬೇಗದಿಂದೆಲೆ ಮುನೀಶ್ವರ ನೀವಿದನೇಱಕೊಳ್ಳಿಮೆಂ।
ದನುವಿಸಿದಂ [3]ಕ್ರಿಯಾತುರನದೆಂತಱವಂ ಸಮಯೋಚಿತಂಗಳಂ ॥೧೧೦॥

ಅನುವಿಸದಿರ್ ನರೇಂದ್ರ ವರ ವಾಹನಮೇಱುವುದೇ ತಪಸ್ವಿಗ।
ಳ್ಗನುಚಿತಮೊಲ್ಲೆವೆಂದು ಪದ ಮಾರ್ಗದೆ ಬರ್ಪುದ[4]ಕುಜ್ಜುಗಂಗೆಯಲ್॥
ವಿನಯದಿನಂಘ್ರಿಗಳ್ಗೆಱಗಿ ತಂದು ಸುಧರ್ಮ ಮುನೀಶನಂ ವಿನೂ।
ತನಮೆನಿಪಾ ಸುಖಾಸನಮನೇಱಸಿದಂ ನೃಪ ನೀರಜಾಂಬಕಂ ॥೧೧೧॥

ಮ॥ ಮುನಿನಾಥೋಚ್ಚಯ ಹರ್ಷದೊಳ್ ಮುದದೆ ತಾನುಂ ಮಂತ್ರಿಯುಂ ತದ್ವಿನೂ।
ತನ ವಾಹಂಗಳನೇಱ ಸೈನ್ಯ ಪಟಹ ಪ್ರಧ್ವಾನಮುಗ್ರೇಭ ಯೂ॥
ಥ [5]ನಿಜೋದ್ಬೃಂಹಿತ ನಿಸ್ವನಂ ತುರಗ ಹೇಷಾಘೋಷಮೆತ್ತಂ ದಿಶಾ।
ವನಿಯಂ ತೆಕ್ಕನೆ ತೀವಲಿಂತು ತಳರ್ದಂ ವಿಶ್ವಂಭರೋರ್ವೀಶ್ವರಂ ॥೧೧೨॥

ಕಂ॥ ನರ ಕರಿ ತುರಗ ವರೂಥೋ।
ತ್ಕರ ಸರಭಸ ಗಮದಿನೊಗೆವ ರೇಣು ವ್ರಜಮಂ॥

1. ಪಡೆ. 2. ತನಾಸು. 3. ಪ್ರಿಯಾ. 4. ಸುಜ್ಜುಗಂ. 5. ನಿಜೋಬ್ರಾಂಬಿತ ವಿಶ್ವನಂ.

ಬರದತ್ತಭಿಮುಖಮಾಗು।
ತ್ತಿರೆ ವಿಮಳಾಪುರಿಗೆ ಭೂಪನಭಿಮುಖನಾದಂ ॥೧೧೩॥

ಮ॥ಸ್ರ॥ ಗಗನಾಂತರ್ಭಾಗಮಂ ಜಕ್ಕುಲಿ[1]ಸೆ ಬಲಿದ ನಾನಾ ಧ್ವಜೋದಗ್ರ ದಂಡಾ।
ಳಿಗಳಾ ದಂಡಾಗ್ರದೊಳ್ ರಂಜಿಪ ಬಿರುದ ಪಟ ವ್ರಾತಮೋರಂದದಿಂ ವಾ॥
ಯು ಗಮ ವ್ಯಾಪಾರಮಂ ನೆಟ್ಟಗೆ ತೆಗೆಯೆ ಸಮಸ್ತಾಯುಧೋದ್ಯತ್ಪ್ರಭಾ ಮಾ।
ಲೆಗಳಾಶಾ ಚಕ್ರಮಂ ಬಾಸಣಿಸೆ ಬರುತುಮಿರ್ದ್ದಂ ಪುರಕ್ಕುರ್ವರೇಶಂ ॥೧೧೪॥

ಇಂತು ಬರುತ್ತುಮಾಗಳ್—

ಕಂ॥ ಸುರ ಪುರಿಯನಿಳಿಪ ವಿಮಳಾ।
ಪುರಿಯ ಬಹಿರ್ಮಹಿಯೊಳತ್ಯಪೂರ್ವ ವಿಶೋಭಾ॥
ಕರಮಾಗೆ ವಿರಚಿಸಿದ ಸುರು।
ಚಿರ ಮುಖ ಮಂಡಪಮನವನಿಪಾಲಂ ಕಂಡಂ ॥೧೧೫॥

ಮ॥ ಪದೆದಿಂ ಬಂದು ತದೀಯ ಮಂಟಪ ಮುಖ ದ್ವಾರೋರ್ವಿಯೊಳ್ ನಿಂದು ಬೇ।
ಗದಿನಂತಾ ಹಯ ರತ್ನದಿಂದಿಳಿದು ಸೇನಾಧ್ಯಕ್ಷನಂ ಸೈನ್ಯ ಯು॥
ಕ್ತದೆ ನೀನಿಂತಿರೆನುತ್ತೆ ನೇಮಿಸಿ ಸುಧರ್ಮಾಚಾರ್ಯವರ್ಯಂಗೆ ರಾ।
ಗದೆ ಕೈಗೊಟ್ಟೊಡಗೊಂಡು ಪೊಕ್ಕನಖಿಳೋರ್ವೀಶಂ ಮಖಾವಾಸಮಂ ॥೧೧೬॥

ಮ॥ಸ್ರ॥ ನವಕುಂಡಾವೇಷ್ಟಿತಂ ವೇದಿಕೆ [2]ವಿಷದನಲೌಚಿತ್ಯ ವಸ್ತು ವ್ರಜೋತ್ಕೀ।
ರ್ಣ ವಿಳಾಸಂಬೆತ್ತು ತನ್ಮಧ್ಯದೊಳಿರೆ ಮಣಿ ಕುಡ್ಯಂಗಳಿಂ ಪಲ್ಲವ ವ್ರಾ॥
ತ ವಿಭಾಸ್ವತ್ತೋರಣಾಲಂಕೃತ ರುಚಿರ ಚತುರ್ದ್ವಾರದಿಂ ರತ್ನ ವಿಸ್ತೀ।
ರ್ಣ ವಿತಾನೋಪೇತದಿಂದೊಪ್ಪಿದುದುಪಚಿತ ಯೋಗ್ಯೇಧ್ಮಮಾ ಯಜ್ಞ
ಸದ್ಮಂ ॥೧೧೭॥

ಚಂ॥ ನುತತರ ಸತ್ಕ್ರಿಯೋಚಿತ ಸುವಸ್ತು ಸಮಾವೃತ ರತ್ನ ಭಾಜನ।
ಪ್ರತತಿಗಳಿಂ ಲಸತ್ಕಿಸಲಯೋಪಚಿತೋಜ್ಜ್ವಲ ಗಂಧ ಚರ್ಚನಾಂ॥
ಚಿತ ಧೃತ ಕುಂಭ ಕೋಟಿಗಳಿನೆತ್ತಿದ ಕೇತು ವಿತಾನದಿಂದೆ ಕ।
ಣ್ಗೆತುಳ ವಿಶೋಭೆಯಂ ಪಡೆಯುತಿರ್ದುದು[3]ಬಂಧುರ ಯಜ್ಞಮಂದಿರಂ ॥೧೧೮॥

---

1. ಸಿ ಬಲದ. 2. ವಿಷದನವೌ. 3. ಬಂದುರು.

ಕಂ॥ ನಿರತಿಶಯ ಸಕಲ ಶೋಭಾ।
ಕರಮೆನೆ ವಿರಚಿಸಿದ ಸುರುಚಿರಾಧ್ವರ ಶಾಲಾಂ॥
ತರಮನೊಳಪೊಕ್ಕಭೀಕ್ಷಿಸಿ।
ನರನಾಥ ಮುಕುಂದ[1]ನತುಳ ವಿಸ್ಮಿತನಾದಂ ॥೧೧೯॥

ಮ॥ ಕರ ಕಂಜಾತ ಯುಗೈಕ ಕುಟ್ಮಲ ಕೃತಂ ತಾನಾಗಿ ಭೂಪಾಂಬುಜೋ।
ದರ ನಿವ್ಯಾಜ್ಞೆಯೊಳಪ್ಪುದೇನಿರದೆನುತ್ತುಂ [2]ತನ್ನಪಾವಾಸ ಭಾ॥
ಸುರಮುಂ ಯಜ್ಞ ವಿಧಾನ ವಸ್ತು ತತಿಯುಂ ತೋಱುತ್ತುಮಿರ್ದಾ ಮಹ।
ತ್ತರನಂ ಮನ್ನಿಸಿ ಮೆಚ್ಚುಗೊಟ್ಟನೊಲವಿಂ ವಿಶ್ವಂಭರೋರ್ವೀಶ್ವರಂ ॥೧೨೦॥

ತದನಂತರದೊಳ್—

ಉ॥ ಯಾಗ ವಿಧಾನ ವಸ್ತು ತತಿಯೆಲ್ಲವನೂನತೆವೆತ್ತು ನಾಡೆ ಸ।
ದ್ಯೋಗಮಿದಾಯ್ತು ಮತ್ಸುಕೃತದಿಂದಮೆ ನಿರ್ಮೊಲವಾಯ್ತು ತತ್ಕ್ರಿಯೋ॥
ದ್ಯೋಗ ಮುಹೂರ್ತಮೆಂದದನಭೀಕ್ಷಿಸೆ ನೇಮಿಸಿ ನೀವೆನುತ್ತುಮಾ।
ಯೋಗಿ ವರಂಗೆ ಬಿನ್ನವಿಸಿದಂ ಪದೆಪಿಂ ಮಹಿಭೃಜ್ಜನಾರ್ದನಂ ॥೧೨೧॥

ಕಂ॥ ನರನಾಥನ ಬಿನ್ನಪಮಂ।
ಪರಿಭಾವಿಸಿ ಭೂಪ ಸನ್ಮುಹೂರ್ತಮಿದೆನುತುಂ॥
ವರ ನಿಧಿ ಸುಧರ್ಮ ಯೋಗೀ।
ಶ್ವರನೆಸೆವಧ್ವರಮನಾಗಳುದ್ಯೋಗಿಸಿದಂ ॥೧೨೨॥

ಅನ್ನೆಗಮಿತ್ತಲ್—

ಕಂ॥ ಅರಸಿಯನುರು ಮುದದಿಂ ತಾಂ।
ಬರವೇೞ್ಪು ಮಹೀಶ ಚಕ್ರಿ ಕಳುಪಲೊಡಂ ಚ॥
ಚ್ಚರದಿಂದೆ ವೇತ್ರಧರ[3]ರಂ।
ದಿರದೆಯ್ದಿದರಶ್ರಿ ದೇವಿಯರಮನೆಗಾಗಳ್ ॥೧೨೩॥

1. ನಖಿಲ. 2. ತನ್ನಭಾ. 3. ರಂ। ತಿರ.

ಬರವೀಟ್ಟಿನರಸನೆನೆ ಕೇ ।
ಳ್ದರು ಮುದದಿಂ ಮಂಗಳಾ[1]ಭಿಷವಮಂ ನೆಗಟ್ಟಾ ॥
ದರದಿನಲಂಕಾರ ಗೃಹಾಂ ।
ತರಮಂ ಪೊಕ್ಕರಸಿ ಶುಭ ವಿಭೂಷಿತೆಯಾದಳ್ ॥೧೨೪॥

ಉ॥ ಉಟ್ಟು ದುಕೂಲ ಚೇಲಮನುದಂಚಿತ ಮೌಕ್ತಿಕ ಭೂಷಣಂಗಳಂ ।
ತೊಟ್ಟು ನವೀನ ಚಂದನ ಲಲಾಮಕಮಂ ನೊಸಲೊಳ್ ವಿರಾಜಿಸ ॥
ಲ್ಕಿಟ್ಟು ಸಿತಾಬ್ಜಮಂ ಪಿಡಿದು ಮಲ್ಲಿಗೆಯಂ ಮುಡಿದುದ್ಧ ಶೋಭೆ ನೇ ।
ರ್ಪಟ್ಟಿರೆ ದೇವಿ ಭೂಷಣ ಗೃಹಾಂತರಮಂ ಪೊರಮಟ್ಟಳಲ್ತಿಯಿಂ ॥೧೨೫॥

ಚಂ॥ ಮಿಸುಗುವ ದಂತ ಕಾಂತಿ ಪೊಳೆಪಂ ಬಿಡೆ ಬೀರುವ ಲೋಚನಾಂಶು ರಂ ।
ಜಿಸುವ ಸುಕೋಮಲಾಂಗ ರುಚಿಯುಟ್ಟ ದುಕೂಲ ಲಸನ್ಮರೀಚಿ ರಾ ॥
ಜಿಸೆ ನೆಱೆ ತೊಟ್ಟ ಮೌಕ್ತಿಕ ವಿಭೂಷಣ ರೋಚಿಗಳಿಂದೆ ದೇವಿ ಕ ।
ಣ್ಗೆಸೆದಳಪೂರ್ವ ಚಂದ್ರಕಳೆ ತಾಂ ವನಿತಾಕೃತಿಯಾದುದೆಂಬಿನಂ ॥೧೨೬॥

ಕಂ॥ ಸಿತಕಾಂತಿ ಕೋಶದಧಿದೇ ।
ವತೆಯೋ ತಾನೆಂಬ ತೆರದಿನಾಗಳ್ ವಿಜಯಾ ॥
ವತಿ ದೇವಿ ಮಂಗಳಾಲಂ ।
ಕೃತಿ ತತಿಯಂ ಸುಕೃತ ಮಣಿ ಶಲಾಕೆವೊಲಿರ್ದಳ್ ॥೧೨೭॥

ಮ॥ ಮಿಗೆ ಪೊಣ್ಮುತ್ತಿರೆ ಮಂಗಳಾನಕ ನಿನಾದಂ ಚಾಮರೀ ಕಂಕಣಾ ।
ಳಿಗಳಿಂದುಣ್ಮೆ ಝುಣತ್ಕೃತಂ ಶಿಬಿಕೆಯಂ ಸಂರಂಭದಿಂದೇಱೆ ನೆ ॥
ಟ್ಟಗೆ ಚೇತಃಸಖಿ ಹರ್ಷವರ್ಧನೆ ಸಮೇತಂ ಬೇಗದಿಂದಿಂತು ಯ ।
ಜ್ಞ ಗೃಹಕ್ಕಾ ವಿಜಯಾವತೀ ಸತಿ ಸಮಂತೆಲ್ತಂದಳಾನಂದದಿಂ ॥೧೨೮॥

ಕಂ॥ ಘಟಿಲನೆ ಬಂದ ಶಿಬಿಕೆಯ ।
ಸಿಟಿದಾಗಳೆ ಯಾಗ ನಿಳಯಮಂ ಪೊಕ್ಕು ದಯಾ ॥
ಜಳನಿಧಿ ಸುಧರ್ಮಮುನಿ ಕೋ ।
ಮಳ ಪದಯುಗಕ್ಕೆ ದೇವಿ ವಿನಮಿತೆಯಾದಳ್ ॥೧೨೯॥

1. ವಿಷಯ.

ಕಂ॥ ಪರುಠವಿಸಿರದೆ ಸದಸ್ಯರ।
ಗುರುವೆ [1]ನಲುದ್ಗಾತೃ ಜಟಿಗಳಂ ಋತ್ವಿಜರಂ॥
ವರ ಹೋತೃಗಳಂ ಪರಿವೃತ।
ಪರಮ ವ್ರತಿ ಸಮಿತಿಯೊಳ್ ಸುಧರ್ಮಾಚಾರ್ಯಂ ॥೧೩೦॥

ಮ॥ ಕ್ರಮದಿಂಪಂತವರಂ ನಿಯೋಜಿಸಿ ವಿಧಾನಾನೇಕ ಸದ್ವಸ್ತು ಯೂ।
ಥಮನಲ್ಲಲ್ಲಿಗಿವೆಂದು ಬೇಳ್ಪ ತೆಱನಂ ತಾನೆಲ್ಲಮಂ ತೋಱಿ ಕೊ॥
ಟ್ಟುಮಬೋಧ್ಯಂ ನವ ಕುಂಡ ವೇಷ್ಟಿತ ವಿಭಾಸ್ವದ್ವೇದಿಕಾ ಪೂರ್ವ ಕುಂ।
ಡಮನಂತಾಗಳೆಪೊರ್ದ್ದಿ ಪೂರ್ವಮುಖಮಾಗಿರ್ದಂ ಮುನೀಂದ್ರೋತ್ತಮಂ ॥೧೩೧॥

ಕಂ॥ ಸುತ ದಾಯಕಮಪ್ಪ ಮಹಾ।
ಕ್ರತು ಕ್ರಿಯಾರ್ಥೋಚಿತಾಸನಂ ನ್ಯಾಸಂ ಸಂ॥
ಗತಿ ಮುದ್ರೆಯೆಂಬಿವಂ ತಾ।
ನತಿ ಮುದದಿಂ ನೆಗಟ್ದನಾ ಸುಧರ್ಮಾಚಾರ್ಯಂ ॥೧೩೨॥

ತದನಂತರಮಾ ಮುನೀಶ್ವರಂ ಪ್ರಣವ ಪುರಸ್ಸರಮಾಹವನೀಯ ಗಾರ್ಹಪತ್ಯ ದಕ್ಷಿಣಾನಲರೆಂಬ ತ್ರೇತಾಗ್ನಿಗಳನಾಹ್ವಾನಿಸಿ ಯಥೋಚಿತಾಹುತಿಗಳಂ ನೀಡುತ್ತುಮಿರ್ಪಾಗಳ್—

ಮ॥ ಯತಿ ರಾಜಾಸ್ಯ ಪಯೋಜದಿಂದೊಗೆವ ಭಾಸ್ವದ್ದಿವ್ಯ ಮಂತ್ರಾವಳೀ।
ರುತಿಗಂ ದಕ್ಷಿಣದಿಂದೆ ಮಾರುತ ಸಖಂ ಪ್ರತ್ಯಕ್ಷಮಾಕಾಲ[2]ಮಾಂ॥
ತು ತದೀಯಾಧ್ವರ ಕುಂಡದೊಳ್ ನೆಗೆದು ನೀಡುತ್ತಿರ್ಪ ಸರ್ಪಿರ್ಮಯಾ।
ಹುತಿಯಂ ಕೈಕೊಳುತಿರ್ದನೀಕ್ಷಿಪ ನೃಪಂಗಾಶ್ಚರ್ಯಮಪ್ಪಂದದಿಂ ॥೧೩೩॥

ಮುನಿಯೂಥಂ ಪ್ರಣವಾದ್ಯಮುಚ್ಚರಿಪ ಮಂತ್ರಾನೀಕ ನಿರ್ಘೋಷದಿಂ।
ದನಲೋಚ್ಚಂಡ ಶಿಖಾಕಳಾ ಕಳಿತ ಕುಂಡಾಂತರ್ನಿವಾಪಾಹುತಿ॥
ಧ್ವನಿಯಿಂ ಬಾಜಿಪ ಮಂಗಳ ಪ್ರಕಟ ವಾದ್ಯ ಧ್ವಾನದಿಂ ತಳ್ತು ಯ।
ಜ್ಞ ನಿವಾಸಂ ಸುಕೃತ ಪ್ರಸಾದ ನಿಧಿಯೆಂಬಂತಿರ್ದುದಾಶ್ಚರ್ಯದಿಂ ॥೧೩೪॥

1. ನಿಸಿದ್ವಾರ. 2. ಮಾಗಿ.

ಕಂ॥ ಜನಪನ ನಿಜಾಭಿಮತ ಲತೆ।
ಯ ನಿಮಿರ್ಕೆಗೆ ನೀಲ ರತ್ನ ದಂಡದಡರ್ಪಂ॥
ವನಜಭವನಿಟ್ಟನೆಂಬಂ।
ತೆ ನಭಕ್ಕೊಗೆದತ್ತು ಹೋಮ ಧೂಮೋದ್ದಾಮಂ ॥೧೩೫॥

ಅವಿರಳದಿಂದಿಭ ಶುಂಡಾ।
ಯಮಾನವಾಗಿಂತು ಸುರಿವ ನವಘೃತ ಧಾರಾ॥
ನಿವಹಮನನಾಕುಳಂ ಕೊಳು।
ತುಮಿರ್ದನಧ್ವರದೊಳನಲನಾಂತಾಕೃತಿಯಂ ॥೧೩೬॥

ಯತಿನಾಥನಗ್ನಿ[1]ಗಾಜ್ಯಾ।
ಹುತಿಗಳನವಿರಳದೆ ನೀಡುತಿರೆಯುಂ ಸುರಸಂ॥
ತತಿ ಕೂಡೆ ತಣಿದುದಾ ಸುರ।
ತತಿ[2]ಗಾ ಶಿಖಿಮುಖಮೆನಿಪ್ಪ ನಾಮಮುದುಚಿತಂ ॥೧೩೭॥

ಮ॥ ಅನಿಮೇಷೋತ್ತಮರೆಯ್ದೆ ತನ್ನ ಮುಖದಿಂ ಸಂತುಷ್ಟರಾಗಲ್ಕೆ ತಾ।
ನೆನಸುಂ ತುಷ್ಟಿಯನಪ್ಪುಕೆಯ್ದು ಶಿಖಿ ಸಾಕ್ಷಾನ್ಮೂರ್ತಿಯಿಂದೀ ಮಖಂ॥
ಮನದಿಷ್ಟಾರ್ಥಮನೀಗೆನುತ್ತಿರೆ ತದೀಯೋದ್ಗಾರಮಂ ಕೇಳ್ದು ಪಾ।
ವನ ಪೂರ್ಣಾಹುತಿಗೊಟ್ಟು ಶೇಷಮನದೊಂದಂ ಕೊಂಡನಾ ಪಿಂಡಮಂ ॥೧೩೮॥

ಕಂ॥ ಕರಕಲಿತ ಪಿಂಡನಾಗಳ್।
ಪಿರಿದುಂ ಪರ್ಯಾಪ್ತಯಾಗನಾಗಿರದಾ ವಿ॥
ಷ್ಟರದಿಂ ಸುಧರ್ಮ ಯೋಗೀ।
ಶ್ವರನೆಟ್ದಂ ಮುದದೊಳಖಿಳ ಮುನಿಜನ ಸಹಿತಂ ॥೧೩೯॥

ಮ॥ ಪರಮಾಶೀರ್ವಚನಂಗಳಿಂ ಪರಸುತುಂ ಶ್ರೀಮತ್ಸುಧರ್ಮ ವ್ರತೀ।
ಶ್ವರನಾಗಳ್ ಪಿರಿದೊಲ್ಮೆಯಿಂದೆಲೆ ನೃಪಾಂಭೋಜಾಕ್ಷ ನಿನ್ನಾತ್ಮ ಸೌಂ॥
ದರಿಯಪ್ಪೀ ವಿಜಯಾವತೀ ಸತಿಗಿದಂ ನೀನೀಯೆ ತಾಂ ಪುಟ್ಟುವಂ।
ಸ್ಮರ ರಾಜಾಕೃತಿಯೆಂದುಕೊಟ್ಟ[3]ನುರು ಹರ್ಷೋತ್ಖಂಡಮಂ ಪಿಂಡಮಂ॥೧೪೦॥

1. ಕಾರ್ಯ್ಯಾ. 2. ಶಿಖಿಮುಖರೆಂಬ ನಾಮಧೇಯಮುದುಚಿತಂ.
3. ಪೂರುಷೋವಾಕ್ಖಂಡಮಂ.

ಮ॥ಸ್ರ॥ [1]ನೆಲೆ ಸೊಲ್ ಸತ್ಕ್ರೋನ್ನತ ಶ್ರೀ ಸುದತಿಗೆ ಸದನಂ ಲಕ್ಷಣಶ್ರೀಗೆ ಶುಂಭ।
ತ್ಕುಲ[ಸಸ್ಯಾಯಂ] ಸ್ವಕಾಯಂ ಸ್ಥಿರ ರಮೆಗೆ [2]ನಿಶಾಂತಂ ನಿಜ ಸ್ವಾಂತಮತ್ಯು॥
[3]ಜ್ವಲಿತ ಪ್ರಜ್ಞಾತುಳ ಶ್ರೀಸತಿಗೆ ಜನನ ಸದ್ಮಂ ಮನಃಪದ್ಮಮಾಗಿಂ।
ತಲಘುಃಪ್ರಖ್ಯಾತಿವೆತ್ತಂ ಕೃತಿರತಿ ರಮಣಂ ಸಾಹಸೋದ್ದಾಮ ಭೀಮಂ॥೧೪೧॥

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ಯಜ್ಞ ವರ್ಣನಂ
ಚತುರ್ಥಾಶ್ವಾಸಂ

1. ನೆಲಸಲ್. 2. ನಿತಾಂತಂ. 3. ಜ್ವಲಿಪ.

# ಪಂಚಮಾಶ್ವಾಸಂ

ಕಂ॥ ಶ್ರೀ ರುಚಿರ ಯಶೋನಿಧಿ ಕಾ।
ಶ್ಮೀರ[1]ವಚಶ್ರ್ಯೀ ಪ್ರಸಾದ ಸಂಪನ್ನಿಧಿ ಗಂ॥
ಭೀರ ಪಯೋನಿಧಿ ಸದಮಳ।
ಚಾರಿತ್ರ ಸುಧಾನಿಧಿ ಕ್ಷಿತೀಶ ರತೀಶಂ ॥೧॥

ಆ ನರೇಂದ್ರಂ ನಿಜ ಕರಸ್ಸರೋಜದೊಳ್ ತಳೆದಿರ್ದಾನಂದ ಸಸ್ಯ ಕಂದ ಮೆನಿಪ ಪಿಂಡಮಂ ನೀಡಿದಾಗಳ್—

ಚಂ॥ ಮನಮನುರಾಗಮಂ ತಳೆಯೆ ಕಣ್ಣಲರ್ಗಳ್ ಪಿರಿದುಂ ಮುದಶ್ರು ಮಂ।
ಡನ ಪರಿಶೋಭೆಯಂ ತಳೆಯೆ ಕೋಮಲ ಮಂಗಳ ಗಾತ್ರ [ಮಂದು] ಪಾ॥
ವನ ಪುಳಕಂಗಳಂ ತಳೆಯೆ ತಾನೆನಸುಂ ವಿನಯಂ ಪೊದಟ್ಟು ಭೋಂ।
ಕನೆ ತಳೆದಳ್ ಕರಾಬ್ಜ ತಳದೊಳ್ ವಿಜಯಾವತಿದೇವಿ ಪಿಂಡಮಂ ॥೨॥

ಕಂ॥ ಸುರಭೂಜ ಬೀಜಮಂ ಭಾ।
ಸುರ ಧರಣೀಕಾಂತೆ ಧರಿಯಿಪಂದದಿನಾಗಳ್॥
ಧರಿಯಿಸಿದಳರಸಿ ಪುಣ್ಯೋ।
ತ್ಕರ ಪಿಂಡಮನೆಸೆವ ನಿಜ ವಿಳಾಸೋದರದೊಳ್ ॥೩॥

ವಿಜಯಾವತಿ ನಿಜ ಜಠರಾಂ॥
ಬುಜದೊಳ್ ಪಿಂಡಮನೆ ಧರಿಯಿಸಲ್ ಪದೆಪಿಂ ಭೂ॥
ಭುಜನಾಗಳೆ ಚೇತಸ್ಸರ।
ಸಿಜದೊಳ್ ಧರಿಯಿಸಿದನಧಿಕ ಪರಮೋತ್ಸವಮಂ ॥೪॥

ಆ ಸಮಯದೊಳ್ ಯಥೋಚಿತ ದಾನ ಸನ್ಮಾನ ಪೂಜೆಯಂ ಮಾಡಿ—

1. ವಚಶ್ರಿ.

ಕಂ॥ ಅನಪೇಕ್ಷಿತನಾ[1]ದೊಡನಾ।
ಮುನಿ ಪತಿಗೌಚಿತ್ಯ ಪೂಜೆಯಂ ಕೊಟ್ಟಾಗಳ್॥
ವಿನಯದೆ ಬಿಜಯಂಗೆಯಿಸಿದ।
ನನಘ ಶಿವಂಕರ ವನಕ್ಕೆ ಜನಪ ಮುಕುಂದಂ ॥೫॥

ಮ॥ ಪರಮ ಮಂಗಳ ಶೋಭೆ ಕಣ್ಗೊಳೆ ಕರಂ ಕಯ್ಗೆಯ್ಸಿ ನಾನಾನಕ।
ಸ್ವರಮುಣ್ಮುತ್ತಿರೆ ಸಂಭ್ರಮೋಪಚಿತದಿಂದಾತ್ಮೀಯ ಚಾತುರ್ಬಲಂ॥
ಬೆರಸಾಗಳ್ ವಿಜಯಾವತೀ[2]ಯುವತಿಯುಂ ತಾನುಂ ಸಮಾರೂಢ ಸಿಂ।
ಧುರನಾಗಿಂತು ನರೇಂದ್ರ ಚಕ್ರಿ ಪದೆಪಿಂ ಪೊಕ್ಕಂ ನೃಪಾವಾಸಮಂ ॥೬॥

ಕಂ॥ ಪ್ರಿಯಸತಿ ವಿಜಯಾವತಿ ದೇ।
ವಿಯೊಳವನೀನಾಥ ಚಕ್ರಧರನಂತಾ [3]ಪ್ರ॥
ಶ್ರಯ ಕೇಳೀ ಸೌಖ್ಯ ಸುಧಾ।
ಬ್ಧಿಯೊಳೋಲಾಡುತ್ತುಮತುಳ ಲೀಲೆಯೊಳಿರ್ದಂ ॥೭॥

ಸೊಗಯಿಪ ಲತಾಂತದೊಳ್ ನು।
ಣ್ಪೊಗೆತರೆ ತೆಳ್ವಸಿಱೊಳೆಸೆವ ಸೊಂಪಿನಿತಾನುಂ॥
ನೆಗೆತರೆ ವಿಜಯಾವತಿ ದೇ।
ವಿಗೆ ನೆಲಸಿತು ಗರ್ಭಮನುಪಮೋತ್ಸವ ಗರ್ಭಂ ॥೮॥

ಮ॥ ನೆಲಸಲ್ ದೇವಿಯ ಗರ್ಭ ವಾರಿಜದೊಳುದ್ಯದ್ಗರ್ಭಮಾ ಗರ್ಭದಿಂ।
ವಲಿ ರೇಖಾ ತ್ರಯಮುಂ ತನುತ್ವಮನಣಂ ಪಿಂಗಿತ್ತು ವಕ್ತ್ರಾಬ್ಜ ಮಂ॥
ಡಲದೊಳ್ ಚಾಪಲ ನೇತ್ರದೊಳ್ ಪೊಳೆವ ಬೆಳ್ಪೀರಂತೆ ಪೊಣ್ಮಿತ್ತು ತಾಂ।
ತಲೆದೋಱಿತ್ತೆಳಗಪ್ಪು ಬಾಸೆಯೊಳುದಗ್ರಂ ತತ್ಕುಚಾಗ್ರಂಗಳೊಳ್ ॥೯॥

ಕಂ॥ ಪಿರಿದೆಸೆವ ಕಾಳಿಮ ಪಯೋ।
ಧರ ಮುಖದಿಂ ಪಡೆದ ತೀವ್ರ ಭಾಸುರದಿಂದ॥
ಚ್ಚರಿವಡೆದು ವರ್ಷ ಕಾಲಮ।
ನರಸಿ ಕರಂ ಪೋಲ್ತು ಸೊಗಯಿಸಿದಳೆಳವಸಿಱೊಳ್ ॥೧೦॥

1. ದೊಡಮಾ. 2. ಯುವತಿಯಿಂ. 3. ಪ್ರ॥ ತ್ಯುತ್ಕಯ.

ಕಂ॥ ತಿಳಿಗೊಳದಂತೆಸೆದಿರ್ದುದು ।
ವಳಿ[1]ವ್ಯಪೇತದಿನಕಂಪದಿಂ [2]ಪ್ರತಿಪನ್ನಾ ॥
ಮಳದಿಂದಾ ನೃಪಕಾಂತೆಯು ।
ವಿಳಸದ್ಗರ್ಭಂ ತದೀಯ ಗರ್ಭೋದಯದಿಂ ॥೧೧॥

ಜನಿಯಿಪ ಸುತನತಿ ಸರ್ವೋ ।
ಹನ ರೂಪ ವಿಳಾಸನೆಂದು [3]ಮೆರೆಯಲ್ಕಾಯ್ತೆಂ ॥
[4]ದೆನೆ ತಾನಿಮ್ಮಡಿ[5]ಸಿತತ್ತು ।
ವನಿತೆಗೆ ತದ್ಗರ್ಭದುದಯದಿಂ ಸೌಂದರ್ಯಂ ॥೧೨॥

ಬಸಿಱೊಳ್ ಬಳೆವರ್ಭಕನಂ ।
ಗ ಸಮುದ್ಭವ ಸುಪ್ರಮೋದಮುಣ್ಮಿದುದೆನೆ ನಿ ॥
ಶ್ವಸಿತಂ ತನಿಗಂಪಂ ತಳೆ ।
ದೆಸೆದೊಗೆದತ್ತು ನೃಪಾಂಗನಾಸ್ಯಾಂಬುಜದೊಳ್ ॥೧೩॥

ಸದಮಳ ಬೋಧೇಂದು ಸಮುಂ ।
ಕುದಯಿಸೆ ಬಸಿಱೊಳ್ ತದೀಯ ಸತಿಯಜ್ಞಾನಂ ॥
ಬೆದಱೆ ಪೊಱಮಟ್ಟು ಪೋಗು ।
ತ್ತಿದೆಯೆನೆ ಚೂಚುಕದ [6]ಕಾಳಿಮಂ ಕರಮೆಸೆಗುಂ ॥೧೪॥

ವಿನುತ ನಿಜ ಗರ್ಭದರ್ಭಕ ।
ನನುಪಮ ಸಂಪತ್ತಿ ಸೈರಿಸದೆ ನೂಂಕಿದುದಾ ॥
ತನು ಮಧ್ಯದ ಕಡು ಬಡತನ ।
ಮನದೆನೆ ಕೊಬ್ಬಿದುದು ಗರ್ಭಮಾ ನೃಪ ಸತಿಯಾ ॥೧೫॥

ನವ ಮತಿಯಿಲ್ಲದ ಕುಕವಿಯ ।
ಕವಿತೆಯವೋಲ್ ಮಾಂದ್ಯಮಾಯ್ತು ಪದ ವಿನ್ಯಾಸಂ ॥
ಯುವತಿಗೆ ಮಹಿಮೋನ್ನತಿ ಮೇ ।
ರುವೆನಿಪ್ಪಾ ಗರ್ಭದರ್ಭಕನ ಗೌರವದಿಂ ॥೧೬॥

1. ಜ್ಯಪೇತ. 2. ಪ್ರತಿಮುನಾ. 3. ನೆರೆ. 4. ದೆನಿ. 5. ಸಿತು. 6. ಕಾಳಿಕಂ.

ಚಂ॥ ಉದರದೊಳಿಂಬುವೆತ್ತು ಬಳೆಯುತ್ತೆಸೆದಿರ್ದಪನಲ್ತೆ ಸೂಸುವೆಂ।
ಬುದಿತ ಮಹಾನುರಾಗಮೆನಸುಂ ನೆಲೆಗೊಂಡ ಮನಂ ಒಪಿರ್ದಿನೋ॥
ಪದ ಪದೆಪಿಂದೆ ತಾನವಚರಂ ನೆಜ ತಾಳ್ದಿತೆನಲ್ಕೆ ನಾಡೆ ಚಿ।
ತ್ರದೊಳಲಸಂ ಸಮುದ್ಭವಿಸಿತಾ ಸತಿಗುದ್ಭವಿಸಿರ್ದ ಗರ್ಭಮೊಳ್ ॥೧೭॥

ಕಂ॥ ದೇವಿಯ ಮನದಲಸಮನಟ।
ದಾವಗಮೆಡೆವಿಡದೆ ಹರ್ಷವರ್ಧನೆ ಬಹು ವಿ॥
ದ್ಯಾ ವಿದೆಯರೆನಿಪ ವರ ವನಿ।
ತಾ ವಿತತಿ ಸಮೇತಮಿರ್ಪಳೋಲಗಿಸುತ್ತುಂ ॥೧೮॥

ಮ॥ ರಸವತ್ಕಾವ್ಯ ಕಥಾ ಪ್ರಹೇಳಿಕೆಗಳಂ ಪೇಟುತ್ತುಮಾಶ್ಚರ್ಯ ಭಾ।
ವ ಸಮುತ್ಕೀರ್ಣ ವಿಚಿತ್ರಮಂ ಬರೆದು ತೋಱುತ್ತುಂ [1]ಸ್ವರಾಂಗಂ ವಿರಾ॥
ಜಿಸೆ ಪಾಡುತ್ತುಮನೇಕ ಭಂಗಿಯ ವಿಪಂಚೀ ರಾಜಿಯಂ ಕೂಡೆ ಬಾ।
ಜಿಸುತುಂ ಲೀಲೆಯೊಳೋಲಗಿ[2]ಪ್ಪರವನೀಭೃತ್ಕಾಂತೆಯಂ ಕಾಂತೆಯರ್ ॥೧೯॥

ಕಂ॥ ಪರಿಹಾಸ ವಚನದಿಂ ಬಿ।
ತ್ತರಿಪ ಚಮತ್ಕಾರ ಕಳೆಗಳಿಂ ಕೌತುಕಮ॥
ಪ್ಪುರು ನಾಟಕಾಭಿನಯದಿಂ।
ವರ ವನಿತೆಯರರಸಿಯಂ ಸಮಂತೋಲಗಿಪರ್ ॥೨೦॥

ಚಂ॥ ಪುರುಳಿಯ ಕಂಠ ಕೂಜಿತಮನಂಚೆಯ ಮೆಲ್ನಡೆಯುಂ ಮಯೂರದಾ।
ಸುರುಚಿರ ನೃತ್ಯಮಂ ಶುಕದ [3]ನುಣ್ಣುಡಿಯುಂ ಕಳಕಂಠ [4]ದೊಪ್ಪವಿಂ॥
ಚರಮನುದಂಚಿತಂಬಡೆವಿನಂ ತೆಱಪಿಲ್ಲದೆ ತಂದು ತೋರಿಸು।
ತ್ತರಸಿಯನಾಗಳೋಲಗಿಸುತಿರ್ದುದು ವಾರ ವಧೂ ಕದಂಬಕಂ ॥೨೧॥

ಕಂ॥ ಚಿತ್ತಾಲಸ ಪರಿಹಾರ ನಿ।
ಮಿತ್ತಂ ಬಹುವಿನೋದ ವಿದ್ಯೆಗಳಂ ತೋ॥
ಱುತ್ತುಂ ದೇವಿಯನೋಲಗಿ।
ಸುತ್ತುಂ ಸುದತಿಯರ ವೊತ್ತುಮಿರ್ಪ್ಪುದು ಸುತ್ತಲ್ ॥೨೨॥

1. ಸುರಾಂಗಂ. 2. ಪ್ಪಪವಸೀ. 3. ಸುಳ್ನುಡಿ. 4. ಮೊಪ್ಪವಿಂ.

ಆ ವಿಶ್ವಂಭರ ನರೇಶ್ವರನೋಲಗಂಗೊಟ್ಟಿರ್ಪುದುಮಾಗಳ್—

ಚಂ॥ ಕರಧೃತ ಚೂತ ನೂತನ ಫಲ ಸ್ತಬಕಂ ಪಥ ರೇಣು ಲಿಪ್ತ ಪಿಂ।
ಜರಿತ ಪದದ್ವಯಂ ಕತಿಪಯೋದ್ಗತ ಘರ್ಮ ನವೋದ ಬಿಂದು ಬಂ॥
ಧುರ ನಿಟಿಲಂ ತನು [1]ಸ್ಥಗಿತ ಕಂಚುಕನುತ್ಕಳಿಕೋತ್ತರೀಯನಾ।
ದರದೊಳೆ ಬಂದನೋರ್ವ ವನ ಪಾಲಕನಕ್ಷಕನೆಂಬನಾ ಕ್ಷಣಂ ॥೨೩॥

ಕಂ॥ ಪೊಸ ಪಚ್ಚೆಯ ಮಣಿ ಮಂಜರಿ।
ಯೆಸಕಮನಿಱೆಕೆಯ್ವ ಮಾಮಿಡಿಯ ಕೊಂಚಲನಾ॥
ವಸುಧಾಧಿಪತಿಗೆ ಕಾಣ್ಕೆಯ।
ನೊಸೆದಿತ್ತಾ ಕ್ಷಣದಿನಕ್ಷಕಂ ಪೊಡಮಟ್ಟಂ ॥೨೪॥

ಚಂ॥ ಅರಸಿನ ಚಿತ್ತದೊಳ್ ಮುದಮನಾ ಪೊಸಮಾಮಿಡಿ ಗೊಂಚಲೆಯ್ದೆ ಬಿ।
ತ್ತರಿಸಿದುದೆಂಬಿನಂ ಮುಖ ವಿಕಾಸತೆಯಿಂದಱೆದಾಗಳಂತೆ ಭಾ॥
ಸುರ ಕರಕಂಜ ಕುಟ್ಮಳ ಸಮಾಕಳಿತಾತ್ಮ ಲಲಾಟನಾಗಿ ತಾಂ।
ಪಿರಿದನುರಾಗದಿಂ ಪುದಿದು ಬಿನ್ನವಿಸಲ್ ಬಗೆದಂದನಕ್ಷಕಂ ॥೨೫॥

ಮ॥ಸ್ರ॥ ಪಿಕ ದೂತಂ ತದ್ವಸಂತಾಗಮಮನಱೆಪೆಯುಂ ಮಾಧವೀ ಕುಟ್ಮಲ ವ್ರಾ॥
ತ ಕನದ್ಗ್ರೈವೇಯಕಂ ರಾಜಿಸೆ ಕಿಸಲಯ ಸಂವ್ಯಾನಮಿಂಬಾಗೆ ಚೂತ॥
ಪ್ರಕರೋತ್ಫುಲ್ಲೋತ್ತರೀಯಂ [2]ಮಿಸುಗೆ ನವ ಪರಾಗಾಂಗರಾಗಂ ಪೊದಱೆ್ದೊ।
ಪ್ಪೆ ಕರಂ ಕೈಗೆಯ್ದುಳೀಗಳ್ ವನ ವನಿತೆ ವಿನೂತಾತುಳ ಪ್ರೀತಿಯಿಂದಂ ॥೨೬॥

ಚಂ॥ ವಿಲುಳಿತ ಸಲ್ಲತಾಂಗಿ ಪುಳಿನ ಸ್ಥಳ ಪೀನ ನಿತಂಬೆ ಹಂಸಿಕಾ।
ಸುಲಲಿತ ಯಾನೆ ಚಾರು ಕಲಕಂಠ ನಿನಾದೆ ಪಯೋಜ ವಕ್ತ್ರಮಂ॥
ಡಲೆ ಮಲಯಾನಿಲ ಶ್ವಸಿತೆ ಕೋಕ ಕುಚದ್ವಯೆ ಮತ್ತ ಭೃಂಗ ಕುಂ।
ತಲೆ ಜನಿತ ಪ್ರಸೂನ ವಸನಾಂಚಿತೆ ನಂದನ ಲಕ್ಷ್ಮಿ ರಾಜಿಪಳ್ ॥೨೭॥

ಮ॥ಸ್ರ॥ ಭರದಿಂದಂ ತದ್ವನಸ್ತ್ರೀ ನಿಜ ವನ ಪುರಮಂ ಸಾಡೆ ಕೈಗೆಯ್ಯೆ ಚಂಚ।
ತ್ತರ ಚೂತ ವ್ರಾತದಾ ಕೈಗುಡಿಗಳೆಸೆಯೆ ತೋಂಗಲ್ತಳಿರ್ದೋರಣಂಗಳ್॥
ಪಿರಿದುಂ ಚೆಲ್ವಾಗೆ ಮಾದ್ಯತ್ಪಿಕ ಶುಕ ಪಟಹ ಪ್ರಸ್ಫುಟ ಧ್ವಾನಮುಣ್ಮಾ।
ತ್ತಿರೆ ತಾಂ ಬಂದಂ ವಸಂತಂ ಮದವದಳಿ ಭಟಾಳಾಪ ಸಂರಂಭದಿಂದಂ ॥೨೮॥

---

1. ಸ್ತನಿತ. 2. ಮಿಗೆನವವ.

ಮ॥ಸ್ರ ಕಲಿಕಾ ಘರ್ಮೋದ ಬಿಂದು ಪ್ರತತಿ ನೆಗೆಯಲುದ್ಯತ್ಪ್ರವಾಳಾಸುರಾಗಂ।
ನೆಲೆವೆರ್ಚಲ್ ಕೋಕಿಲಾಳಿ ಸ್ವನ ಕುಹರಣಮುಣ್ಮಲ್ ಪ್ರಸೂನಾಂಬಕಂಗಳ್॥
ಸಲೆ[1]ಬೆಂಡೇಳಲ್ ನವೀನ ಪ್ರಸವ[2]ಮಧು ಮನೋಜ ದ್ರವಂ ಪೊಣ್ಮೆ[3]ನಿಲ್ಲಲ್।
ನಲವಿಂದಂ ಕೂಡಿದಂ ತದ್ವನ ವನಿತೆಯೊಳಾತ್ಮೀಯ ಕಾಂತಂ ವಸಂತಂ ॥೨೯॥

ಕಂ॥ ಕಳಿಕಾ ಕಹಳೆಗಳಂ ಕೋ।
ಕಿಳ ಕುಲಮೂದುತ್ತುಮಲ್ಲಿ ನವ ಮಲ್ಲೀ ಕು॥
ಟ್ಮಳ ಶಂಖಂಗಳ[4]ನೂದು।
ತ್ತಳಿ ಗಣಮಂಗಜನ ಮುಂದೆ ಬಂದುದು ಬನದೊಳ್ ॥೩೦॥

ಮ॥ಸ್ರ॥ ಪರಪುಷ್ಟ ಸ್ಪಷ್ಟ ನಿಸ್ಸಾಳದ ಪಟು ನಿನದಂ ಪೊಣ್ಮೆ [5]ನವ್ಯ ಪ್ರವಾಳೋ।
ದ್ಗುರು ಶಾಖಾ ಕೇತು ದಂಡಂ ನಿಮಿರ್ದೆಸೆಯೆ [6]ಶುಕಶ್ರೇಣಿ ಪೂರ್ಣಾಂಕ ಮಾಲಾ॥
[7]ಕ್ಷರಮಂ[8]ಮುಂದೋದೆ ಚೈತ್ರೋನ್ನತ ರಥಮನದಂ ರಾಗದಿಂದೇಱಿ ತಾಂ ಷ।
ಟ್ಚರಣ ಜ್ಯಾವಲ್ಲಿಯಂ ಜೇವೊಡೆದಲರ್ಗಣೆಯಂ ತೂಗುತುಂ ಕಂತು [ಬಂದಂ
॥೩೧॥

ಚಂ॥ ಎನಗೆ ನಿರಂತರಂ ಸಮನಿಸಿತ್ತೆನಸುಂ ಬಿಡದಾ ಮಹೇಶ್ವರಾ।
ದ್ಯನಿಮಿಷರಿಂದೆ ಬೆಣ್ಣೆನಿಪಗಸ್ತ್ಯನ ಭಾರಮಿದೆಂದು ಸುಯ್ಯೆ ವಾ॥
ಮನ[9]ಕರಿ ತತ್ಕರಾಗ್ರ ಜನಿತಾನಿಳನೆಂದೆನೆ ತೀಡುತಿರ್ದುದಿಂ।
ತನುಪಮ ಮನ್ಮಥಾಗ್ನಿ ಬಳಕಾರಣನಂತಕ ದಿಕ್ಸಮೀರಣಂ ॥೩೨॥

ಮ॥ಸ್ರ॥ ಮಳಯ ಕ್ಷ್ಮಾಭೃಲ್ಲಸಚ್ಚಂದನ ವೃತಕ ಫಣಿವ್ರಾತ ಪೀತಾನಿಲಂ ಕೇ।
ರಳ ಚಾರುಸ್ತ್ರೀ ಮುಖಾಬ್ಜ ಶ್ವಸಿತ ಪವನನಾ ಕುಂಭಜೋದ್ಯತ್ಕರೇಂದೂ॥
ಪಳ ಶಂಭತ್ಕುಂಡಿಕಾಂಬೂದ್ಗತ ಮರುತನೆನಲ್ ಮಾಂದ್ಯ ಸೌರಭ್ಯ ಶೈತ್ಯಾ।
ನಿಳ ರೂಪಂಬೆತ್ತು ಬಂದತ್ತಖಿಳ ಸುರಭಿಸಾರಾಯ[10]ಮಾಣಂ ಸಮೀರಂ ॥೩೩॥

ಚಂ॥ ಅನುನಯದಿಂದೆ ಬಂದ ನಿಜಕಾಂತ ವಸಂತ ನೃಪಾಲಕಂಗೆ ಭೋಂ।
ಕನೆ ವನಲಕ್ಷ್ಮಿ ಲೀಲೆಯೊಳೆ ಸೇಸೆಯನಿಕ್ಕಲೊಡರ್ಚೆ ಶಾಖೆಯೆಂ॥
ಬನುಪಮ ಹಸ್ತದೊಳ್ ತಳೆದ ಕೋಮಲ ಶುಕ್ತಿರುಹಾಕ್ಷತಂಗಳೆಂ।
ದೆನಲದಿರ್ಮುತ್ತೆ ಸಂದಿಸಿ ಮುಗುಳ್ತು ಮನೋಹರಮಾದುದೆತ್ತಲುಂ ॥೩೪॥

---

1. ಚಿಂತೆಳಲ್. 2. ಮುದ. 3. ಗಿಲ್ಮಲ್. 4. ನೋಡು. 5. ಸವ್ಯ. 6. ಸುಖ.
7. ಕರಮಂ. 8. ಮುಂದೊಂದೆ. 9. ಕಲಿ. 10. ಮಾಶಾ.

ಮ॥ ಸೆಳೆಗೊಂಬೆಂಬ ಪತಾಕೆಯುಂ ನೆಗಪಿ ಚಂಚತ್ಪಲ್ಲವೋದ್ಯತ್ಪಟಾಂ।
ಚಳಮುಂ ನಾಡೆ ನಿಮಿರ್ಚಿ ನವ್ಯ ಕುಸುಮಾನೀಕಾಸ್ತ್ರಮುಂ ತೀವಿ ಕೋ॥
ಕಿಳ ಕೀರಾನಕ ನಾದಮುಣ್ಮುತಿರೆ ಚೈತ್ರಂ ಪಣ್ಣಿ ತಂದಂಗಜಂ।
[1]ಗಿಳಿಯೊಳ್ ಸಾರ್ಚಿದ ತದ್ವರೂಥಮೆನೆ ಚೆಲ್ವಾದತ್ತು ಚೂತೋತ್ಕರಂ ॥೩೫॥

ಕಂ॥ ಅಲರೆಸೆವೆಳದಳಿರೆಲೆಯರ।
ಲೆಲೆ ಬಲ್ಮಿಡಿ ಮಿಸುಪ ಪಚ್ಚೆಗೊಂಡಲಮಳಿ ಕ॥
ಜ್ಜಲ ತಿಲಕ[2]ಮಾಗೆ ತೋರ್ಪುದು।
ಸಲೆ ಸೊಗಯಿಸಿ ಬಾಲನಂದದಿಂ ಮಾಕಂದಂ ॥೩೬॥

ಚಂ॥ ಪದೆಪಿನ ಪಲ್ಲವಂಗಳರುಣಾಂಶುಕ[3]ಮುಳ್ಳಲರೋಳಿಯಕ್ಷತಂ।
[4]ಪುದಿದ ಸುಮ ಪ್ರವನ್ಮಧು ಘೃತಾಹುತಿ ಭೃಂಗ ರವಂ ಸುಮಂತ್ರಮಾ॥
ಗೊಡಮಿರೆಯುಂ ವಿಯೋಗಿ ಜನ ಮಾರಣ ಯಜ್ಞಮನೊಲ್ದೊಡರ್ಚಿದಾ।
ಮದನನ ವಿಪ್ರನಂತೆಸೆದುದಿಂತು ಬಸಂತದ ಬಂದ ಮಾಮರಂ ॥೩೭॥

ಕಂ॥ [5]ಉತ್ತರಳನಾಗಿ ಮುಳಿದಾ।
[6]ದೆರ್ತ್ತಿಡೆ ವಿರಹಿಗಳ ಹೃದಯಮಂ ನಟ್ಟುಳಿದಾ।
ಚಿತ್ತಜನ ಕೊಂತದಂತಿರೆ।
ಮುತ್ತದ ಪೂಗುಡಿಗಳೆಸೆದು ಸೊಗಯಿಸಿ ತೋರ್ಕುಂ ॥೩೮॥

ಚಂ॥ ವಿರಹಿ ಮದ ದ್ವಿಪೇಂದ್ರ[7]ವಿದುವಂ ಬಿಡೆ ಪೊಯ್ದುಗಿಯಲ್ ತದೀಯ ವಿ।
ಸ್ಫುರಿತ ನವಾರುಣಾಂಬು ಮಿಗೆ ಪತ್ತಿ ಬಿಗುರ್ತ್ತೆಸೆದಿರ್ಪ ಕಂತು ಕೇ॥
ಸರಿಯ ಸಮುನ್ನಖ ಪ್ರಕರಮೆಂದೆನೆ ಕುಟ್ಮಳ ಕೋಟಿಯಿಂದೆ ಬಿ।
ತ್ತರಿಸಿದುದಲ್ಲಿಗಲ್ಲಿಗೆಸೆ[8]ವಂದದ ಪೆಂಪಿನ ಚಂಪಕೋತ್ಕರಂ ॥೩೯॥

ಕಂ॥ ಕ್ಷಣದೊಳೆ ವಿರಹಿಗಳ ಮನ।
ಸ್ಸೃಣಿ ಕೋಟಿಯ ನೊಣೆಯಲೊಗೆದುದಾ ಸುಮನೋ ಮಾ॥
ರ್ಗಣ ದಾವ ಪಾವಕ ಶಿಖಾ।
ಗಣಮೆನೆ ಕಿಸಲಯದಿನಸುಗೆಯುಸದಳಮೆಸೆಗುಂ ॥೪೦॥

1. ಗಿಳಿ. 2. ಮಾಗಿ. 3. ಮೊಳ್ಳ. 4. ಪಡೆದು ವಿನಯಸ್ಮಸ್ಮದು. 5. ಉತ್ತವಳ.
6. ದೆರ್ತ್ತಿಡೆ. 7. ಬಿದುವಂ. 8. ಗುಂದದ.

ಅಂಗಜ ನೃಪಾಲಕನ ಬಱ।
ವಿಂಗೆನಸುಂ ನಲಿದು ಚೈತ್ರಸೆತ್ತಿದ ಪಲವುಂ॥
ಪೊಂಗೊಡೆಗಳೆನಿಸಿ ಪೂತು ಮ।
ನಂಗೊಳಿಸಿದುವೆಸೆವ ಕರ್ಣಿಕಾರ ಕುಜಂಗಳ್ ॥೪೧॥

ಅನುನಯದಿನೊಂದಿದ ವಸಂ।
ತನ ಸುಖದಿನೊಗೆದ ಪುಳಕಾವಳಿಯೆಂ॥
ದೆನೆ ಕುಸುಮ ಕುಟ್ಮಳಂಗಳ।
ನೆನಿಸುಂ ತಳೆದೆಸೆದುವಲ್ತೆ ಲತೆಗಳ ಬಳಗಂ ॥೪೨॥

ಲಲನೆಯರಿಂದೊದೆವಡೆ[1]ದಾ।
ನಲವಂ ತಳೆದಸುಗೆ ಮಿಸುಪ ತಳಿರಂ ಬಱಿಕಂ॥
ತಲೆಯೊಳ್ ತಳೆದುದೆನುತ್ತುಂ।
ಸಲೆ ನಗುವಂತಲರ್ದುವೆಸೆವ ಪೊಸ ಮಲ್ಲಿಗೆಗಳ್ ॥೪೩॥

ಚಂ॥ ವರ ಕಳಿಕಾ ರಸ ಪ್ರಸರ ಸೇವೆಯ ಸಮ್ಮದದೀ ಪಿಕಕ್ಕೆ ನು।
ಣ್ಚರವೆಡೆಗೊಂಡುದುಳ್ಳಲರ ಕಂಪುಣಿಸಿಂ ಮಧುಪಕ್ಕೆ ಝುಂಕೃತಿ॥
ಸ್ವರವೊದವಿತ್ತು ಸತ್ಫಳ ಸಮಾಜದ ಖಾದನ ಲೀಲೆಯಿಂ ಶುಕ।
ಕ್ಕುರುತರ ಚಾಪಳೋಕ್ತಿ ನೆಱೆ ಬಿತ್ತರಿಸಿತ್ತೆನಸುಂ ವಸಂತದೊಳ್ ॥೪೪॥

ಸದಮಳ ಬೋಧದಿಂದೆಸೆವ ಸಾಧು ಜನಾಶಯದಂತೆ ಪದ್ಮಷಂ।
ಡದ ವರ ವಾರಿ ನಿರ್ಮಲತೆವೆತ್ತುದುದಾತ್ತನ ಚಿತ್ತದಂತೆ ತ॥
ಳ್ತುದು ರಜದಿಂ ಸರೋಜ ನಿಚಯಂ ಭಯಮೆಯ್ದಿದ ಜಾತಿ ವಿಭೀತನಾ।
ಸ್ಯದ ತೆಱನಂತೆ ನುಣ್ಬುಳಿನಮಿರ್ಪ[2]ದು ಜೆಳ್ಪಡರ್ದಾ ಬಸಂತದೊಳ್ ॥೪೫॥

ಉ॥ ರಾಗಮಸೀವ ನುಣ್ಣುಡಿಗಳಿಂ ವನಪಾಲಕನಕ್ಷಕಂ ವಸಂ।
ತಾಗಮಮಂ ಸಮಂತಱಿಯೆ ಬಿನ್ನವಿಸುತ್ತಿರೆ ದತ್ತ ಚಿತ್ತನಿಂ॥
ತಾಗಳಿಳಾಧಿಪಂ ನೆಱೆಯೆ ಕೇಳುತುಮಿರ್ಪುಮವೋಲಗಕ್ಕೆ[3]ತಾಂ।
ಬೇಗದೆ ಹರ್ಷವರ್ಧನೆ ವಿರಾಜಿಸುತುಂ ನಡೆತಂದಳಟ್ಟಿಯಿಂ ॥೪೬॥

1. ಶಾ. 2. ದದಿದುತಾಂ. 3. ತ।ದ್ವೇಗದೆ.

ಕಂ॥ ತೊಳಗುವ ತನ್ನೃಪ ಸಭೆಯಂ ।
ಬೆಳಗುತ್ತುಂ ಭೂಷಣಾಂಶುಗಳ್ ಮುಂಬರಿದಾ ॥
ಗಳೆ ಪುಗುತಿರೆ ಸಮ್ಮೋಹನ ।
ಶಳಾಕೆಯೆನೆ ಬಂದು ಹರ್ಷವರ್ಧನೆ ಪೊಕ್ಕಳ್ ॥೪೭॥

ಫಲ ಭರದಿಂದೆಱಗುವ ಚೂ ।
ತ ಲತಿಕೆಯಂ[1]ತಿರೆ ಕುಚದ್ವಯಂ [2]ಬಳ್ಕಿಸೆ ಕೋ ॥
ಮಲ ತನು ಲತಿಕೆಯನಾಗಳ್ ।
ನೆಲವಿಂದಾ ಲಲನೆ ಭೂಪತಿಗೆ ಪೊಡಮಟ್ಟಳ್ ॥೪೮॥

ಅಂತು ಪೊಡಮಟ್ಟು ಕುಳ್ಳಿರ್ದು ಹರ್ಷವರ್ಧನೆ ಕರ್ಣಾಭ್ಯರ್ಣಮಂ ಸಾರ್ದಿಂತೆಂದಳ್—

ಕಂ॥ ಎಲೆ ನೃಪ ಮುಕುಂದ ಸಂಸ್ಕೃತಿ ।
ಫಲ ಬೀಜಂ ನೆಲಸುವಂತೆ ತಮಗೆ ವಿಳಾಸಂ
ನೆಲಸಲ್ಕೆ ದೇವಿಗೀಗಳ್ ।
ನೆಲಸಿದುದಾನಂದ ಗರ್ಭಮೆನಿಸುವ ಗರ್ಭಂ ॥೪೯॥

ಕಂ॥ ಜನಿಯಿಸಿತೀಗಳ್ ದೇವಿಯ ।
ಮನದೊಳ್ ಪಿರಿದಾಗಿ ದೇವ ಸಂಭವಿಸಿರ್ಕುಂ ॥
ವನ ಕೇಳೀ ದೋಹಳಮೆಂ ।
ದೆನುತುಂ ಬಿನ್ನವಿಸೆ ಹರ್ಷವರ್ಧನೆಯಾಗಳ್ ॥೫೦॥

ಇಂತೆಂಬುದುಮಾಗಳ್—

ಕಂ॥ ಜನಿಯಿಸು[3]ವಂ ತಥ್ಯಂ ಸುತ ।
ನೆನುತುಂ ವಿಶ್ವಂಭರಾವನೀಶ್ವರನುದ್ಭೂ ॥
ತ ನವಾಮಳೋತ್ಸವಾಮೃತ ।
ವನಧಿ ತರಂಗಾವಳೀ ತರಂಗಿತನಾದಂ ॥೫೧॥

ತದನಂತರದೊಳ್—

1. ಕುರು. 2. ಬಳ್ಕಿಸಿ. 3. ವನಿತರ್ಥಂ.

ಚಂ॥ ಪಡೆಪಿನೊಳೀಗ[1]ಳಂತೆ ಸಮೆ ನೀಂ ವನ ಕೇಳಿಗೆ ವಾರಿ ಕೇಳಿಗಾ।
ವುದು ರಚನಾ ವಿಚಿತ್ರತರಮಾವುದು ತತ್ಸಮಯೋಪಭೋಗ್ಯಮಾ॥
ವುದು ವರ ಶೋಭೆಯಪ್ಪ ತೆಜ[2]ಮೆಂಡೆನುತುಂ ಕರೆದಕ್ಷಕಂಗೆ ಬೇ।
ಗದೆ ಬೆಸವೇಳ್ದು ತಾಂ ಕಳಿಪಿದಂ ಮುದದಿಂದೆ ಬನಕ್ಕೆ ಭೂಭುಜಂ ॥೫೨॥

ಮ॥ ಎನಸುಂ ತನ್ನಯ ಚಿತ್ತದೊಳ್[3]ಪುದಿದ ಹರ್ಷೋತ್ಕರ್ಷಮುಬ್ಬೇಱೆ ಭೋಂ।
ಕನೆ ಸಂವೇಷ್ಟಿತ ಜೀವ ಲೋಕವೊಡನತ್ಯುತ್ಸಾಹದಿಂದೇಱೆ ಭೃಂ॥
ಗ ನಿಕಾಯಂ ಪಡೆಪಿಂದೆ ಝೇಂಕರಿಸುತುಂ ಮೇಲೇಱೆ ಕರ್ಪೂರ [4]ಪಾಂ।
ಸು ನಿತಾಂತಂ ಕೆದರೇಱೆ ವಿಷ್ಟರದಿನಿಂಕೆೞ್ದಂ ಧರಾಧೀಶ್ವರಂ ॥೫೩॥

ಚಂ॥ ಮನಕತಿ ಹರ್ಷ [5]ವರ್ಧನ ವಚಃಪ್ರಚಯ ಪ್ರದೆಯಾದ ಹರ್ಷವ।
ರ್ಧನೆಯ ಕರ ಪ್ರಕೋಷ್ಠ ಪುಟಮಂ ಕರ ಪಲ್ಲವದಿಂದೆ ಭೂಷಿಸು॥
ತ್ತನುಪಮ ಲೀಲೆಯಂ ತಳೆದು ಭೂಪ ಜನಾರ್ದನನಾತ್ಮ ಚಿತ್ತ ವೋ।
ಹಿನಿ ವಿಜಯಾವತೀ ಸತಿಯ ಭಾಸ್ವದಗಾರಮನಾಗಳೆಯ್ದಿದಂ ॥೫೪॥

ಆಗಳ್—

ಮ॥ [6]ನೆರೆ ಘೋಷಂ ಪೆರಪಿಂಗಿದಿಂಗಡಲ ಮಧ್ಯಾದಭ್ರ ಶುಭ್ರಾಬ್ಜದೊಳ್।
ವರ ಕಂದರ್ಪನ ಗರ್ಭದಿಂದೆಸೆವ ಲಕ್ಷ್ಮೀಕಾಂತೆಯೆಂಬಂತೆ ಚಂ॥
ಚುರ ಚಂದ್ರೋಪಳದೊಂದು ಸೆಜ್ಜೆವನೆಯೊಳ್ ಕೌಮಾಂಬರಾಚ್ಛಾದ ಬಂ।
ಧುರ ಪರ್ಯಂಕದೊಳಿರ್ದ ಗರ್ಭವತಿಯಂ ಕಂಡಂ ಕ್ಷಮಾ ವಲ್ಲಭಂ ॥೫೫॥

ಕಂ॥ ತರುಣ ಸಿತ ಕಿರಣನಂ ತಳೆ।
ದುರುತರ ಶರದಭ್ರ ಲಕ್ಷ್ಮಿಯಂತೆ ದುಕೂಲಾಂ॥
ಬರ ಶೋಭೆಯಿಂದೆ ಸೊಗಯಿಪ।
ಸುರಚಿರ ಗರ್ಭವತಿ ಸತಿಯನರಸಂ ಕಂಡಂ ॥೫೬॥

ಜನ ನಾಥನುಮಾಗಳ್ ತೊ।
ಟ್ಟನೆ ಕಟ್ಟಿದಿರಲ್ಲಿ ಕಾಣ್ಬುದುಂ ತತ್ಕ್ಷಣದಿಂ॥
ಜನಿಯಿಸಿದುದು ವಿಜಯಾವತಿ।
ಗನೂನಮೆನೆ ಸಾತ್ವಿಕಾಷ್ಟ ಚೇಷ್ಟೆಗಳನಿತುಂ ॥೫೭॥

1. ಳಂತೆ, 2. ದಿಂದೆನುತುಂ, 3. ಪುದಿದು, 4. ಪಾಂಸು, 5. ವರ್ಧನೆ, 6. ತೆರೆ.

ಚಂ॥ ಪೊಡವಿಗಪೂರ್ವಮಾಗೆ [1]ಕುಡುಮಿಂಚಿನ ಪುತ್ರಿಕೆಯಂ ಪಯೋಜಜಂ।
ಪಡೆದನೆನಿಪ್ಪವೆಯ್ವೆಳಗು ಮೆಯ್ವೆಳಗಿಂಗಳವಟ್ಟ ಮುತ್ತಿನೊ॥
ಳ್ದೊಡವು ದುಕೂಲ ಚೇಲಮುಮುಳಂ ದ್ವಿಜ ದೀಪ್ತಿ ನೃಪಂಗೆ ರಾಗಮಂ।
ಕುಡಿಯಿಡೆ ಬೇಗಮೇಳಿಲನು[2]ಗೆಯ್ದಳಿಳಾಧಿಪ ಕಾಂತೆ ಶಯ್ಯೆಯಿಂ ॥೫೮॥

ಕಂ॥ ನೀವಿಯಿನೆಡಗಯ್ಯಿಂದವೆ।
ಸಾವಗಿಸುತ್ತತುಳ ಸಾಧ್ವಸಂ ಬೆರಸೆಟ್ಬ್ವಾ॥
ದೇವಿಯನೇಟಿದಿರೆನುತುಂ।
ಭೂವರನೆತ್ತಿಂದು ಪೊರ್ದ್ದಿ ತಾಂ ಕುಳ್ಳಿರ್ದಂ ॥೫೯॥

ತನು ಸೋಂಕಿಂದಾಗಳಿ ಕಂ।
ತು ನವ ಕ್ರೀಡಾನುಭೂತ ಸುಖಮುಂ ಪಡೆದರ್॥
ಜನಪತಿಯುಂ ಕಾಂತೆಯುಮೆನ।
ಲಿನಿಯ[3]ರ್ಗೆಂತಿರ್ದೊಡಂತೆ ಪುಟ್ಟದೆ ಸೌಖ್ಯಂ ॥೬೦॥

ಚಂ॥ ಸತಿಯ ಮುಖೇಂದು ಚಂದ್ರಿಕೆಯ ಬೆಳ್ಪೆಳಗಿಂ ಪರಿ ತೃಪ್ತ ಲೋಚನ।
ದ್ವಿತಯ ಚಕೋರನಾಗಿ ಪಿರಿದುಂ ನವ ಗರ್ಭದ ಚಿಹ್ನ ವಿಭ್ರಮೋ॥
ನ್ನತಿಯನದಂ ನಿರೀಕ್ಷಿಸಿ ಮಹೋತ್ಸವ ಸಂಗತ ಚಿತ್ತನಾಗಿ ಭೂ।
ಪತಿ ನಲವಿಂದವಿಮ್ಮಡಿಸಿದಂ ಪುಳಕಂ [4]ಗುಡಿಗಟ್ಟಿ ಗಾತ್ರದೊಳ್ ॥೬೧॥

ಆಗಳ್—

ಚಂ॥ ಭುವನ ವಿನೂತ್ನನಪ್ಪ ಮದನ ಪ್ರಿಯನಪ್ಪ ವಸಂತನೀಗಳೊ।
ಪ್ಪುವ ವನ ಲಕ್ಷ್ಮಿಯೊಳ್ ನಲವಿನಿಂ ನೆಱೆದಂ ನೆಱೆ ತಾನೆನುತ್ತುಮು॥
ತ್ಸವದೊಳೆ ದೇವಿ ನಮ್ಮ ವನಪಾಲಕನಕ್ಷಕನೆಂಬನಿಂತು ಬಿ।
ನ್ನವಿಸಿದನೊಂದು ಮಾವಿಡಿಯ ಗುಚ್ಛಮನಿಂದೆನಗಿತ್ತು ಕಾಣ್ಕೆಯಂ ॥೬೨॥

ಕಂ॥ ಅದು ತಾನಿದೆ ನೋಡೆನುತುಂ।
ಮುದದಿಂ ಗರ್ಭಾರ್ಭಕಂಗೆ ಕಾಣ್ಕೆಯನೀವಂ॥
ದದಿನರಸನಾ ನೃಪಾಂಗನೆ।
ಗೊದವಿದ ಮಾಂಗಾಯ ಗುಚ್ಛಮಂ ತಾನಿತ್ತಂ ॥೬೩॥

1. ಕುಡಿಮಿಂಚು. 2. ಗೆಯ್ವ. 3. ಗಿರಂ. 4. ಗುಡಿಕಟ್ಟಿ.

ತಲದೊಳ್ ತಳೆದಾ ಚೂತದ ।
ಫಲ ಗುಚ್ಛಮನಲ್ತಾವಟ್ಟು ವಿಜಯಾವತಿ ಕ ॥
ಣ್ಮಲರಾಜಿ ನೋಡುತಿರ್ದಳ್ ।
ನೆಲಸಿದ ಬಯಕೆಯನೆ ನೆರೆಯೆ ಸೂಚಿಪ ತೆಱದಿಂ ॥೬೪॥

ಎಸೆವೀ ಕೇಸಡಿಗಳ ವಿ ।
ನ್ಯಸನದಿನೆಲೆ ದೇವಿ ವಿಪುಳ ವನಮಂ ಪಡೆದಾ ॥
ವಸುಮತಿಗೆ ರಾಗಮಂ ಪು ॥
ಟ್ಟಿಸೆ ಪುಟ್ಟಪುದೆನ್ನ ಮನಕೆ ರಾಗೋನ್ನತಿಯಂ ॥೬೫॥

ಚಂ॥ ವಿನುತ ಲತಾಂಗಿ ಚೂತ ಕಳಿಕಾ ನಖೆ ಚಂಪಕ ಗಂಧಿ ಪಂಕಜಾ ।
ನನೆ ನವ ಪಲ್ಲವಾಧರೆ ಕುರಂಗ ವಿಲೋಚನೆ ಚಾರು ಕೋಕಿಲ ॥
ಸ್ವನೆ ಕಳಹಂಸ ಯಾನೆ ವಿಜಯಾವತಿ ನೀಂ ಮುದದಿಂದೆ ಬಂದು ತ ।
ದ್ವನ ವಧು ನಿನ್ನನಿಂತು ನೆರೆ ಪೋಲ್ದುದನೀಕ್ಷಿಸವೇಳ್ಪುದೀ ಕ್ಷಣಂ ॥೬೬॥

ಕಂ॥ ಎಲೆ ವಿಜಯಾವತಿ ನಿನ್ನಯ ।
ವಿಲಸನ್ಮುಖ ಪದ್ಮ ಜನಿತ ನವ ನಿಶ್ವಸಿತಾ ॥
ನಿಲನಿಂದಂ ಶೋಭಿಪವೋಲ್ ।
ಸಲೆ [1]ಕಂಪೇಱುಸು ಬನಕ್ಕೆ ಬಂದೊಲವಿಂದಂ ॥೬೭॥

ಉ॥ ಪ್ರೇಯಸಿ ಬಂದು ನಿನ್ನ ಮನವೊಲ್ದಿರಲೋಳಿಗಳಿಂ ವಿಚಿತ್ರ ಶೋ ।
ಭಾಯತ ಭೂಷಣ ಪ್ರಸರಮಂ ಸಮೆದೀ ಭವದೀಯ ಸೌಕುಮಾ ॥
ರ್ಯಾಯತ ಗಾತ್ರಮಂ ಪದೆಪಿನಿಂದಮಲಂಕೃತಿಗೆಯ್ದು ತದ್ವನ ।
ಶ್ರೀಯ ವಿಳಾಸಮಂ ಸಫಲಮಾಗಿಸು ನೀಂ ವಿಜಯಾವತೀ ಸತೀ ॥೬೮॥

ಚಂ॥ ಮನಮೆನಸುಂ ವಸಂತ ವನ ಕೇಳಿಗೆ ಮುಂಬಯಸಿರ್ದೊಡಂತದ ।
ಕ್ಕನುಗತ ವಾಕ್ಪ್ರಸಂಗಮನೆ ಮಾಡಿ ತದೀಯ ವಚಃಕುಲಕ್ಕೆ ಮಾ ॥
ನಿನಿ ಬಗೆದಂದುದಂ ನೆರೆಯೆ ಭಾವದೆ ತಾನಱಿದಾಗಳಂತೆ ತ ।
ಜ್ಜನಪತಿ ಪೊಯ್ಸಿದಂ ವನ ವಿಹಾರ ನಿಮಿತ್ತದ ಹೃದ್ಯ ವಾದ್ಯಮಂ ॥೬೯॥

1. ಕಂಪೇಱುಸು.

ಮ॥ ಪದೆಪಿಂದಂ ವನ ಕೇಳಿಗಿಂದು ಪೊರಮಟ್ಟಂ ರಾಜ ಕಂಜಾಕ್ಷನಂ।
ಜದೆ ನೀವಿರ್ಪುದು ದಿಕ್ಪರೆಂದಭಯ ಘೋಷಂ ಗೆಯ್ಯಲೆಯ್ದಿತ್ತು ಜೇ॥
ಗದೊಳೆಂಬಂತೊಗೆದುದ್ಧ ಮಂಗಳ ಮಹಾನೇಕಾನಕ ಧ್ವಾನಮಂ।
ತದು ತಳ್ವೊಯ್ದುದು ಪೆರ್ಚಿ[1]ದಿಗ್ನಿಚಯಮಂ ತೀವಿತ್ತುರೋದೋಂತಮಂ ॥೭೦॥

ಉ॥ ಚಂದನವಚ್ಚೆ ಬಿತ್ತರಿಸೆ ಮುತ್ತಿನ ಚಾರು ವರತ್ರಿಯೊಪ್ಪೆ ಸಾಂ।
ದ್ರೇಂದುಶಿಲಾ ವಿನಿರ್ಮಿತದ ರೆಂಚೆಯಮಂಚಿತಮಾಗೆ ಚೀನದಿಂ॥
ದಂ ದೊರೆವೆತ್ತು ತೋರ್ಪ್ಪ ಗುಟಿನಿಂತಭಿರಾಜಿಸೆ ತಾರಕಾದ್ರಿಯೆಂ।
ಬಂದದೆ ಪಟ್ಟವರ್ಧನ ಗಜಾಗ್ರಣಿ ಬಂದುದು ಪಣ್ಣಿ ಲೀಲೆಯಿಂ ॥೭೧॥

ಚಂ॥ ಸುರುಚಿರ ತಾರಕಾ ಗಿರಿಯನಾ ಗಿರಿಶಂ ಗಿರಿಜಾ ಸಮೇತಮು।
ತ್ತುರುತರದಿಂದೆ ಲೀಲೆವೆರಸೇಱುವವೋಲ್ ನರನಾಥನಾತ್ಮ ಸೌಂ॥
ದರಿ ವಿಜಯಾವತೀ ಸಹಿತಮೇಱಿದನಾಗಳೆ ಪಣ್ಣಿ ಬಂದ ಸಿಂ।
ಧುರ ಪತಿ ಪಟ್ಟವರ್ಧನಮನುಣ್ಮೆ ಘನಾನಕ ದುಂದುಭಿ ಸ್ವನಂ ॥೭೨॥

ವಿನುತ ವಿನೋದದೊಳ್ ಪುದಿದ ಕಾರ್ಯಕಳಾ ನಿಧಿಯಪ್ಪ ಹರ್ಷವ।
ರ್ಧನೆ ಚಮರೀಜಮಂ ಪಿಡಿದು ರಾಜಿಪ ಚಾಮರಿಯರ್ಕ್ಕಳಿಕ್ಸು ಚಾ॥
ಪನ ಪರಿವಾರ ದೇವತೆಯರಂತೆಸೆದಿರ್ಪ್ಪ ವಿಳಾಸಿನೀ ಜನಂ।
ತನ ತನಗಾಗಳೆಯ್ದೆ ಪಿಡಿಯಾನೆಗಳಂ ಪದೆಪಿಂದಮೇಱಿದರ್ ॥೭೩॥

ಕಂ॥ ವರ ಸಚಿವ ಮುಖ್ಯ ವಸುಧಾ।
ವರ ತತಿ ದಂಡೇಶ ಮಂಡಲಾಧಿಪ ಸಾಮಂ॥
ತರ ತಂಡಂ ಮೆರೆದುದು ಮದ।
ಕರಿ ಸುರುಚಿರ ಹಯ ವರೂಥ[2] ಯೂಥದಿನಾಗಳ್ ॥೭೪॥

ಮ॥ಸ್ರ॥ ಅಕುಲೀನಂ ತಾಂ ಜಡಾತ್ಮಂ ವಿಷ ಸಹಜನಿತಂ ಯುಕ್ತದೋಷಂ ಸದಾ ಪ।
ಕ್ಷಕ [ವೃತ್ತಿ] ಪ್ರಾಪ್ತನೇಕ ಸ್ಥಿತಿಗುಣ ರಹಿತಂ ವಕ್ರರೂಪಂ ಸಮಾವಿ॥
ಷ್ಟ ಕಳಂಕಂ ಚಾರು ಪದ್ಮಾಹತನೆನುತಮೆ ತಾನಿಂದುವಂ ನಿಂದೆಗೆಯ್ದಿಂ।
ತು ಕರಂ ಚೆಲ್ವಾಯ್ತು ವಿಶ್ವಂಭರ ನೃಪನ ನಿಜಾದಭ್ರ ಶುಭ್ರಾತಪತ್ರಂ ॥೭೫॥

1. ದಗ್ನಿ. 2. ಯೂಥಮು.

ಚಂ॥ ನೆಗಪಿದ ಮೇಘ ಡಂಬರದ [1]ಕಿಂಕಿಣಿಯಿಂ ಬಹು ವರ್ಣ ಶೋಭೆಯಿಂ।
ಸೊಗಯಿಸುತಿರ್ಪ ಸತ್ತಿಗೆಯ ಸಂದಣಿಯಿಂ ಚಮರೀಜ ರಾಜಿಯಿಂ॥
ದಗಣಿತಮಪ್ಪ ಝುಲ್ಲರಿಯ ಜಾಲದಿನೊಪ್ಪಿ ನರೇಂದ್ರನಿಂತು ನೆ।
ಟ್ಟಗೆ ನಡೆದಂ ವಿಳಾಸದೆ ಬನಕ್ಕೆ ಬನಂ ನಡೆಗೊಂಡುದೆಂಬಿನಂ ॥೭೬॥

ಉ॥ ಅಂಬರಮಾಗಳಿಂಬುಗಿಡಲೆತ್ತಿಸಿದಾತಪ ವಾರಣಂಗಳೊ।
ತ್ತಂಬದ ತಣ್ಣೆಳಲ್ ಜಲದಮಾಭರಣಾಂಶುಗಳಿಂದ್ರ ಚಾಪಮ॥
ಬ್ಜಾಂಬಕೆಯರ್ಕಳೀಕ್ಷಣ ಮರೀಚಿ ತಟಿಲ್ಲತೆಯಾಗೆ ತದ್ವನ।
ಕ್ಕಂಬುದ ಮಾಳೆ ತಾಂ ನಡೆವವೋಲ್ ನಡೆದಂ ಜಲಕೇಳಿಗಾ ನೃಪಂ ॥೭೭॥

ಕಂ॥ ಕತ್ತಲೆಯುಂ ಬೆಳ್ದಿಂಗಳು।
ಮೊತ್ತಂಬದೆ ಪೋರ್ವ ತೆಱದೆ ಸತ್ತಿಗೆಗಳ ಸಾಂ॥
ಗತ್ಯದ ತಮಮೆಬಿವೆಂಡಿರ।
ಮೊತ್ತದ ಕಣ್ಬೆಳಗು ಪೊಣ್ಮೆ ನಡೆದನಿಳೇಶಂ ॥೭೮॥

ಲಳನಾ ನಿಶ್ವಸಿತದ ಪರಿ।
ಮಳ ಸಾರಕ್ಕಿಭ ಕಪೋಲ ಪುಟ ಮದ ಗಂಧ॥
ಕ್ಕಳಿಗಳ ಬಳಗಂ ತಾಱುಂ।
ಬಱಿಯಿಂ ಬರುತಿರೆ ಬನಕ್ಕೆ ಬಂದನಿಳೇಶಂ ॥೭೯॥

ಚಂ॥ ಪಿರಿದು ಸರಾಗದಿಂದೆ ನಡೆತಂದು ತದೀಯ ವನೋಪಕಂಠ ಬಂ।
ಧುರ ಧರೆಯಲ್ಲಿ ನಿಂದು ಪದೆಪಿಂದಮುದಂಚಿತ ಪಟ್ಟವರ್ಧನ॥
ದ್ವಿರದನಿಯಿಂದಮುಂಡಿೞಿದು ತಾಂ ವನಕೇಳಿಗೆ ಯೋಗ್ಯಮಪ್ಪ ತ।
ತ್ಪರಿಜನದಿಂ ಮಹೀಪತಿ ವನಾಂತರಮಂ ಪುಗುತಂದನಟ್ಟಿಯಿಂ ॥೮೦॥

ಮುದಮೆನಸುಂ ಪೊದಟ್ಟು ವನಲಕ್ಷ್ಮಿ ವಸಂತ ನೃಪಾಲಕಂಗೆ ತಾಂ।
ಪದೆಪಿನೊಳಿಕ್ಕುತಿರ್ಪ ಕುಸುಮ ಸ್ತಬಕೋನ್ನತ ಚಾಮರಾಳಿ ಲೋ॥
ಲದೊಳೊಗೆತರ್ಪ ವಾಯುವೆನೆ ಕಂಪಿನ ಸೊಂಪನೆ ತಾಳ್ದಿ ನಾಡೆ ತೀ।
ಡಿದುದಿದಿರ್ಗೊಂಬವೋಲ್ ವನ ಸಮೀರಣನಂಗಜ ರಾಗ ಕಾರಣಂ ॥೮೧॥

1. ಕಿಂಕಿಣಿಯಂ.

ಕಂ॥ ವಿನುತ ನವ ಪಂಕಜಾನನೆ।
ಯೆನಿಪ ವನಶ್ರೀಯ ಸುಯ್ಯೆಲರ್ ತಾನೆಂಬಂ॥
ತೆನಸುಂ ತನಿಗಂಪಿನ ಸೊಂ।
ಪನೆ ತಳಿದೆಸಗಿತ್ತು ವಿಪುಲ ವನ ಪವಮಾನಂ ॥೮೨॥

ಚಂ॥ ಸುಲಲಿತ ಪಲ್ಲವಾಗ್ರ ಕರಪಲ್ಲವದಿಂದರಲರ್ಘ್ಯ ಪಾದ್ಯಮಂ।
ನಲವಿನೊಳಿತ್ತು ನಮ್ರ ಫಲ ಶಾಖೆಗಳಿಂ ಪೊಡೆವಟ್ಟು ಕೀರ ಕೋ॥
ಕಿಲ ಕಳರಾಗದಿಂ ವಿನಯಮಂ ನುಡಿದಾ ನರನಾಥ ಚಕ್ರಿಯಂ।
ಸಲೆ ವನಲಕ್ಷ್ಮಿ ಮನ್ನಿಸಿದಳೇನುಚಿತಾರ್ಥ ಕೃತ ಪ್ರವೀಣೆಯೋ ॥೮೩॥

ಇಂತೆಸೆವ ವನ ವಿಳಾಸಮಂ ಕಂಡು—

ಮ॥ ಲಲಿತಾನೇಕ ನವ ಪ್ರವಾಳ ಕುಲದಿಂ ವಾರಾಶಿಯಂ ಭಾಸುರೋ।
ತ್ಕಲಿಕಾ ಕೀರ್ಣತೆಯಿಂ ವಿಯೋಗಿಯನುರುಚ್ಛಾಯಾಯುತ ಶ್ಯಾಮದಿಂ॥
ಸಲೆ ವೈವಸ್ವತನಂ ಸಮಗ್ರ ಸುಮನಸ್ಸಂಶೋಭೆಯಿಂ ಶಕ್ರನಂ।
ಗೆಲೆವಂದಿರ್ದುದು ತದ್ವನಂ ಪರಿವೃತ ಶ್ರೀಭಾಮಿನೀ ನಂದನಂ ॥೮೪॥

ಮತ್ತಮಾ ವನಂ ಸಮುನ್ನತ ವಿಶಾಖಮಾಗಿಯುಂ ಕ್ರೌಂಚಾರಾತಿಯಲ್ತು; ಸುಪರ್ಣಕೇತುವಾಗಿಯುಂ ಮಧುವಿರೋಧಿಯಲ್ತು; ಕಮನೀಯ ಕಾಳಕಂಠಮಾಗಿಯುಂ ದಕ್ಷ ವೈರಿಯಲ್ತು; ಸಮುನ್ನದ್ಧ ಬಾಣಾಸನಮಾಗಿಯುಂ ನಿರ್ಮುಕ್ತ ಶಿಲೀಮುಖಮಲ್ತು; ಶೋಭಾಯಮಾನಾಂಶುಕಮಾಗಿಯುಂ ದೃಷ್ಟದಿಗಂಬರಮಲ್ತು; ಮಯೂರೋಪಾಸಿತಮಾಗಿಯುಂ ನಿರೀಕ್ಷಿತ ಪ್ರಭಾಕರ ರೂಪಮಲ್ತು; ವಿದ್ರುಮಲತಾನ್ವಿತಮಾಗಿಯುಂ ಸಂಪ್ರಾಪ್ತ ಕಪಿಭಂಗಮಲ್ತು; ವಿಜೃಂಭಿತ ಬಾಣಮಾಗಿಯುಂ ತ್ಯಕ್ತ ಸುಮನಸ್ಸಮಾಜಮಲ್ತು ಎಂದು ವಿಜಯಾವತಿಗೆ ತೋರುತ್ತೆ ಮೆಚ್ಚುತೆ ಪೋಗೆವೋಗೆ :—

ಮ॥ ಒಗೆದಂತರ್ವ್ವಿರಹ ಜ್ವಲಜ್ಜ್ವಲನ ತಾಪೋದಗ್ರಮಂ ತೂಳ್ದುವು।
ಜ್ಜುಗದಿಂ ಭೋಂಕನೆ ಬಂದು ಮದ್ವಿಟಪಮಂ ಪೊರ್ದಿರ್ಪರಿಪ್ರಾರ್ವ ವಿಯೋ॥
ಗಿಗಳಂ [1]ಪಾರ್ದಿಸು ಪುಷ್ಪ ಬಾಣ ತತಿಯಿಂದೋರಂತೆ ನೀನೆಂದು ಕಂ॥
ತುಗೆ ಕೈಗೊಟ್ಟವೊಲಿರ್ದುದಿಟ್ಟಳದೆ ಕೈವಂದೊಂದು ಚೂತ ದ್ರುಮಂ ॥೮೫॥

1. ಪಾರ್ದೆಸು.

ಚಂ॥ ಎಳೆಗೆಲರ್ವೊಯ್ಲಿನಿಂದೊಸರ್ವ ಪಣ್ಗಳ ಸದ್ರಸ ಬಿಂದು ವೃಂದಮಂ।
ಘಳಿಲನೆ ಪೋಗಿ ಮುಕ್ಕುಳಿಸಿ ತಂದಿದಿರೊಳ್ ನಸು ನೀಡಿ ಗೋಣನಾ॥
ಗಳೆ ನೆಱೆ [1]ಚಂಚುವಂ ತೆರೆದು ಮೆಲ್ಲನೆ ಲಲ್ಲೆಯೊಳಿಂತು ತನ್ನ [2]ಪೆ॥
ಣ್ಗಿಳಿಗೆಱೆಯುತ್ತುಮಿರ್ದುದೆನಸುಂ ನಲವಿಂ ಸುರತೋತ್ಸುಕಂ ಶುಕಂ ॥೮೬॥

ಅದಂ ಹರ್ಷವರ್ಧನೆ ತೋಱು ಮಹೀಶನ ಮೊಗದೊಳ್ ಮುಗುಳ್ನಗೆಯೆತ್ತುತುಂ ಪೋಗೆವೋಗೆ—

ಮ॥ ಸುಮನೋಮಾರ್ಗಣನಿಲ್ಲಿ ನಿರ್ಮಿಸಿದ ಭೃಂಗೀಜ್ಯಾ ಲಸತ್ಪುಷ್ಪ ಚಾ।
ಪಮಿದೆಂಬಂತಳಿನೀ ಮಿಳತ್ಕುಸುಮ ಮಲ್ಲೀ ವಲ್ಲಿ ಪರ್ಬಿರ್ಪ ವಿ॥
ಭ್ರಮದಿಂದಾಮ್ರ ಮಹೀರುಹಂ ಲತಿಕೆಯೆಂಬಾ ಕಾಂತೆಯೊಳ್ ಕೂಡಿದಂ।
ದಮನಾಂತಿರ್ದುದು ತಾಂ ಲತಾವೃತಕಮೆಂಬಾಲಿಂಗನ ಪ್ರೌಢಿಯಿಂ ॥೮೭॥

ಕಂ॥ ಜಗಮಂ ಗೆಲ್ವೆಡೆಯೊಳ್ ಕಂ।
ತುಗೆ ತಾಂ ಸಹಕಾರಮೆಂದು ನೆನೆದೀ ಚೂತ॥
ದ್ರುಗೆ ಸಹಕಾರಾಖ್ಯಮನಾ।
ವಗಮಿತ್ತನದೇಂ ಪ್ರಗಲ್ಭನೋ ಕಮಲಭವಂ ॥೮೮॥

ಚಂ॥ ಕಳಿಕೆಗಳಂ ಪಿಕಾಳಿ ನಲವಿಂ ನಲಿಗರ್ಚುತುಮುನ್ಮದಾಳಿ ಸಂ।
ಕುಳಮಲರ್ಗೊಂಚಲಂ ತುಡುಕುತುಂ ತಸಿವಣ್ಗಳ ಸಾರಮಂ ಶುಕಾ॥
ವಳಿ ಸಲೆ ಪತ್ತಿ ಸೀತ್ಕರಿಸಿ ಕಣ್ಗಳಸಿಂತರೆಮುಚ್ಚಿ ಪೀರುತುಂ।
ವಿಳಸಿತ ಚುಂಬನಾಭಿನಯಮಂ ನೆಱೆ ತೋರ್ಪವೊಲಿರ್ದುದಾಮ್ರದೊಳ್॥೮೯॥

ಅವಂ ನೋಡಿ ಮುಗುಳ್ನಗೆ ಮಿನುಗುತ್ತುಂ ಪೋಗೆವೋಗೆ—

ಕಂ॥ ಮನವೊಸೆದಾ ಚೈತ್ರಂ ವಿರ।
ಚನೆಗೆಯ್ದ ವಿಚಿತ್ರಮಪ್ಪ ವನಲಕ್ಷ್ಮಿಯ ಮು॥
ಕ್ತಿನ ತಲೆದೊಡವಿದು ತಾನೆಂ।
ಡೆನೆ ತಳ್ತತಿಮುಕ್ತಕಂ ಮುಗುಳ್ತುದು ಬನದೊಳ್ ॥೯೦॥

1. ಚಂಚುವಿಂ. 2. ಪೆಣ್ಗಿಳಿಗೆ.

ಇಂತು ನುಡಿದ ಹರ್ಷವರ್ಧನೆಯ ಸದೃಶೋಕ್ತಿಗೆ ಮೆಚ್ಚುತುಂ ಪೋಗೆ ವೋಗೆ—

ಕಂ॥ ಅನತ ವಿಯೋಗಿ ಜನಾಚಲ।
ಘನ [1]ಧೃತಿ ಶಿಖರಮನೆ ಬಿಡದೆ ಪೊಡೆವತನು ಸುರೇಂ॥
ದ್ರನ ಕುಲಿಶಾಯುಧ ಕುಲವೆನಿ।
ಪನಂತ ಪೃಥು ಫಳದಿನೆಸೆದುದೆನಸುಂ ಪನಸಂ ॥೯೧॥

ಅದಂ ನೋಡಿ ಪೋಗೆವೋಗೆ—

ಕಂ॥ ಉರವಣೆಯಿಂ ವಿರಹಿ ಮೃಗೋ।
ತ್ಕರಮಂ ವಿದಳಿಸಿದ ಮದನ ಶಾರ್ದೂಲದ ಭೀ॥
ಕರ ರದನ ಸಮಿತಿಯೆನೆ ಸುರು।
ಚಿರ ಚಂಪಕ ಕುಟ್ಮಳೌಘವೆಸೆದುದು ನಿಸದಂ ॥೯೨॥

ಮುಂದೊಂದೆಡೆಯೊಳ್—

ಕಂ॥ ವನಿತಾ ಪದ ಪಾತದಿನಾ।
ದನುರಾಗಂ ತನ್ನೊಳೊದವೆ ಸಾಸಿರ್ಮಡಿಯಾ॥
ದನಿತಂ ಸೂಚಿಸುತಿರ್ದುದು।
ಬನದೊಳ್ ಮಿಸುಪಸುಗೆ ಮಿಸುಪ ಕೆಂದಳಿರ್ವೊಱೆಯಿಂ ॥೯೩॥

ಸುದತಿಯ ಮುಖಾಬ್ಜ ಪೂರಣ।
ಮದಿರಾ ಸೇಚನದ ಸುಖದಿನುಣ್ಮಿದ ರೋಮಾಂ॥
ಚದ ಸಿರಿಯನಿಂತು ನೆಱೆ ತೋ।
ಱಿದುದೀ ಬಕುಳಂ ಬನಕ್ಕೆ ಮುಗುಳ್ಗಳ ನೆವದಿಂ ॥೯೪॥

ಲಲನಾ ಕಟಾಕ್ಷ ಪಾತಂ।
ಸಲೆ ಸಮನಿಸೆ ತನಗೆ ಪುದಿದ ಮುದಮಂ ತೋಱೆ॥
ತ್ತಲರ್ದಲರ ಸೊಂಪಿನಿಂ ಸ।
ಲ್ಲಲಿತ ವನಶ್ರೀಗೆ ತಿಲಕಮೆನಿಸುವ ತಿಲಕಂ ॥೯೫॥

1. ದೃತ.

ಕಂ॥ ವರವನಿತಾ ಪೀನ ಪಯೋ।
ಧರ ಸಂಗಂ ತನಗೆ ಸಮನಿಸಿತ್ತೆಂಬಿನಿತಂ॥
ಕುರವಕಮಱಿಪುತ್ತಿರ್ದುದು।
ಸುರುಚಿರ ಶಾಖೆಗಳ ತಳಿರ ಸುಚ್ಛವಿಯಿಂದಂ ॥೯೬॥

ಆ ಕುಜಂಗಳ ದೋಹಳಂಗಳಂ ತೋಱಿ ನುಡಿದು ವಿಜಯಾವತಿಗೆ ವಿಸ್ಮಯ ಮನುದ್ಭವಿಸುತ್ತುಂ ಪೋಗೆ ಮುಂದೊಂದೆಡೆಯೊಳ್—

ಕಂ॥ ವನ ಲಕ್ಷ್ಮೀಕಾಂತೆ ವಸಂ।
ತನೊಳೊಲವಿಂ ನೆರೆವಲಂಪಿನಿಂದಿಕ್ಕಿದ ನೂ॥
ತನ ಹಂಸ ತೂಳ ತಳ್ಪಮಿ।
ದೆನೆ ಸೊಗಯಿಸುತಿರ್ದುದಲ್ಲಿ ತಣ್ಬುೞಿಲ ತಳಂ ॥೯೭॥

ಆ ಪುಳಿನ ತಳದೊಳ್ ರಂಭಾಸ್ತಂಭಂಗಳಿಂ ಮಲ್ಲಿಕಾ ಮಾಲಿಕೆಗಳಿಂ ಚಂಪಕದ ಚಿತ್ರ ಲತೆಗಳಿಂ ಕೇಸರದ ಕಕ್ಷಪಟ್ಟಿಕೆಗಳಿಂ [1]ನೀರೇಜದ ನಿಟ್ಟೆಸಳ ಹಸೆಗಳಿಂದೆಸೆಯೆ ವಿರಚಿಸಿದ ಲತಾ ಮಂಟಪಮಂ ಕಂಡು—

ಚಂ॥ ಒಗೆದಬಳಾಂಘ್ರಿ ನೂಪುರದ ಝುಂಕೃತಿ ಮಾರ್ದನಿಯಿಟ್ಟು ನಾಡೆಯುಂ।
ಪುಗೆ ಕುಜ ಕೋಟರಂಗಳನನೂನ ಪಿಕಧ್ವನಿ ಕರ್ಣ ರಂಧ್ರಮಂ॥
ಪುಗೆ ವಿಜಯಾವತೀ ಹೃದಯಮಂ ವನ ಕೇಳಿಯಿನುಣ್ಮಿದುತ್ಸವಂ।
ಪುಗೆ ಪುಗುತಂದನಾಗಳರಸಂ ಕಮನೀಯ ಲತಾ ನಿವಾಸಮಂ ॥೯೮॥

ಆ ಮಂಟಪದಲರ್ವಸೆಯೊಳರಸಿಯುಂ ತಾನುಂ ಕುಳ್ಳಿರ್ದು ಮಹೀಶಂ ವಿಳಾಸಿನೀ ಜನಮಂ ಪುಷ್ಪಾಪಚಯಕ್ಕೆ ಕಳಿಪಿದಾಗಳ್—

ಚಂ॥ ಸ್ತನ ಕಲಶಂ ಕದಕ್ಕದಿಸೆ ಸೋರ್ಮುಡಿ ಪೂವಲಿಗೆಯ್ಯೆ ಕಾಂಚಿ ನು।
ಣ್ದನಿವಿಡೆ ನೂಪುರಂ ಪೊಡರೆ ನೀವಿ ಜಗುಳ್ತಿರೆ ನೀಳ್ದು ಕಣ್ಮಲರ್॥
ತನಿವೆಳಗಂ ಕಡಲ್ವಱಿಸೆ ಮೆಲ್ಲನೆ ಪಲ್ಲವ [2]ಲೀಲೆಯಿಂ ವನಾ।
ವನಿಗೆನಸುಂ ಪುದುಂಗೊಳಿಸೆ ತಾಂ ತಳರ್ದತ್ತು ವಿಲಾಸಿನೀ ಜನಂ ॥೯೯॥

1. ನಿಜದ. 2. ಲೀಲೆಯಿಂ.

ಅನ್ನೆಗಮಿತ್ತಲ್—

ಕಂ॥ ಪ್ರಿಯಸತಿ ವಿಜಯಾವತಿ ದೇ।
ವಿಯ ಕಣ್ಣಱಿದಾಗಳಾ ಲತಾಮಂಟಪ ಶೋ॥
ಭೆಯನಾಂ ತೋಱುವೆನೆಂದಮ।
ಳಯಶಂ ನೃಪಚಕ್ರಿ ತಡೆಯದಲ್ಲಿಂದೆಟ್ಟಿಂ ॥೧೦೦॥

ಉ॥ ಇವು ನವ ಮಾಧವೀ ಕುಸುಮ ಮಂಜರಿ ರಂಜಿತ ವೇದಿಕಾಳಿಯಿಂ।
ತಿವು ಕಮನೀಯ ಗೋಸ್ತನಿಯ ವಿಶ್ರುತ ಗೋಷ್ಠಿ ನಿಕೇತನಂಗಳಿಂ॥
ತಿವು ಸುರಪರ್ಣಿಕಾ ಪ್ರಸವ ಭಾಸುರ ಗರ್ಭಗೃಹಂಗಳೆಂದು ತೋ।
ಱುವ ನೆವದಿಂ ನೃಪಂ ಪಡೆದನಂಗಜ ಕೇಳಿಯನಾತ್ಮ ಕಾಂತೆಯೊಳ್ ॥೧೦೧॥

ಇಂತು ಕ್ರೀಡಿಸುತ್ತುಮಿರ್ಪಿನಮಿತ್ತಲ್—

ಚಂ॥ ಪ್ರತಿವನದಲ್ಲಿ ಮೆಯ್ಗರೆದನೀಕ್ಷಿಪೆನೆಂದು ಪುಗುತ್ತುಮಿರ್ದಳೋ।
ರತಿ ರತಿರಾಗದಿಂದೆ ಪಲವಾಕೃತಿಯಂ ತಳೆದೀಗಳೆಂಬಿನಂ॥
ಲತೆಲತೆಯೊಳ್ ಮಹೀರುಹದೊಳೊಳ್ಪುಗುತಿರ್ದು[ದು ಬೇಗ]ದಂಗನಾ।
ತತಿ ನಲವಿಂದೆ ತದ್ವನದೊಳಾ ಕುಸುಮಾಪಚಯೋತ್ಸುಕತ್ವದಿಂ ॥೧೦೨॥

ಇನಿಯರಗಲ್ಕೆಯೊಳ್ ಕಡುಪಿನಿಂ ಕೊಱಚಾಡಿದನೆಂದು ಕಂತುವಂ।
ತನತನಗೆಯ್ದೆ ಮೂದಲಿಸಿ ಬಗ್ಗಿಸಲಿಂತು ಪುಗುತ್ತುಮಿರ್ದುದೆಂ॥
ಬಿನಮತಿ ಬೇಗದಿಂ ಲತೆಯ ಜೊಂಪದೊಳಗ್ರದೊಳೊಪ್ಪವೆತ್ತ ಚಂ।
ದನದೊಳಶೋಕದೊಳ್ ಬಕುಳದೊಳ್ ಪುಗುತಿರ್ದುದು ಕಾಮಿನೀಜನಂ॥೧೦೩॥

ಮ॥ ಕಳಿಕಾ ಮಾತ್ರಮನಿಲ್ಲಿ ಮುಟ್ಟದಿರಿದಂಗೋದ್ಭೂತನಾವಾಸಮೆಂ।
ದೊಳಱುತ್ತುಂ ಪಱಿತರ್ಪ ಕಾಪಿನ ಭಟರ್ ತಾಮೆಂಬಿನಂ ಕೋರಕಾ॥
ವಳಿಯಂ ಕೊಯ್ಯಲಡುರ್ತು ಬಂದಬಲೆಯಾಸ್ಯಾಂಭೋಜ ಗಂಧಕ್ಕೆ ಸಾ।
ರ್ದಳಿಗಳ್ ಝೇಂಕರಿಸುತ್ತುಮೆಯ್ದೆ ಮುಸುಱುತ್ತಂದೊಂದು ಮಾಕಂದ
[ದೊಳ್ ॥೧೦೪॥

ಕಂ॥ ಪೊಳೆವಧರ ರಾಗಮಂ ಮಱು ।
ಗಿಳಿ ದಾಡಿಮಮೆಂದು ಕರ್ದುಕ[1]ಲವ್ವಳಿಸಿ ಕರಂ ॥
ಪೆಳಱೆ[3] [2]ಪೊಱಿಸಾರ್ದಳಳಿಯೆಂ ।
ಕಳಿಕೆಗಳಿವು ಚೇತನಂಗಳೆನುತುಮದೊರ್ಬಳ್ ॥೧೦೫॥

ತಳಮಿವು ತಳಿರಿವು ಬೆರಲಿವು ।
ಕಳಿಕೆಗಳಿವು ನಖಮಿವಲರಿವೆಂದಱಿಯದೆ ಕೋ ॥
ಮಳೆ [3]ಪೂಗೊಯ್ವೆಡೆಯೊಳ್ ಪೊಱಿ ।
ಬಳಸಿದಳತಿ ಮುಗ್ಧೆ ಮಾವಿನೊಳ್ ಮತ್ತೊರ್ವಳ್ ॥೧೦೬॥

ಚಂ॥ ದೂರದೆ ಕಂಡು ಚಂಪಕದ ಕುಟ್ಮಳಮಂ ಕೊಳಲಟ್ಟುವಟ್ಟವಳ್ ।
ಸಾರೆ ವರತ್ತುಮೀಕ್ಷಿಸೆ ವಿಲೋಲ ವಿಲೋಚನ ಕಾಂತಿ ಚಂದ್ರಿಕಾ ॥
ಪೂರದಿನೆಯ್ದೆ ಬೆಳ್ಪಮರ್ದೊಡಿಂತಿದು ಮಲ್ಲಿಗೆಯೆಂದು ವಿಸ್ಮಯ ।
ಸ್ಮೇರ ಮನಸ್ಕೆಯಾಗಿ ಧವಳೇಕ್ಷಣೆ ತತ್ಕುಜದಿಂದೆ ಪಿಂಗಿದಳ್ ॥೧೦೭॥

ಕಂ॥ ಲಲಿತಾಂಗ ಲತೆಯನೀಕ್ಷಿಸಿ ।
ತಲೆದೂಗುವ ತೆಱದಿನೆಸೆವ ಮಲಯಾನಿಲನಿಂ ॥
ದೊಲೆವ ನವ ಲತೆಯ ಜೊಂಪಮ ।
ನಲಘುಸ್ತನೆ ಪೊಕ್ಕು ಸೊಗಯಿಪಲರ್ಗಳನಾಯ್ದಳ್ ॥೧೦೮॥

ಚಂ॥ ನಿಮಿರ್ದ ಕರಾಗ್ರದಿಂ ಪಿಡಿದು ಕೊಂಡಲಗೊಂಚಲನೆತ್ತುವಾ ಲತಾಂ ।
ಗಮನೆನಸುಂ ಘನ ಸ್ತನಯುಗಂ ಕೆಲಕಣ್ಮೆರದೊತ್ತೆ ನಿಂದು ಪು ॥
ಷ್ಪಮ[4]ನವಳೆಯ್ದೆ ಕೊಯ್ದು ಬಳಿಕಂ ಜಲಜಾನನೆ ಮೆಚ್ಚಿದಳ್ ಗುರು ।
ತ್ವಮನಬಲಾ ಕುಚಕ್ಕೆ ಪಡೆದಂಬುಜ ಗರ್ಭನ ಸಪ್ರಗಲ್ಭಮಂ ॥೧೦೯॥

ಕಂ॥ ಮುಡಿಯಲರ ಪರಿಮಳಕ್ಕೆಡೆ ।
ವಿಡದಳಿಗಳ್ ಬಳಸಿ ಮೇಲೆ ಬರೆ ಪೀಲಿಯ ನು ॥
ಣ್ಗೊಡೆವಿಡಿದು ನಡೆವ ತೆಱದಿಂ ।
ನಡೆದಳ್ ಪೂಗೊಯ್ಯಲಲ್ಲಿ ಮಲ್ಲಿಗೆಗೊರ್ವಳ್ ॥೧೧೦॥

1. ಲವ್ವಳಿಸೆ. 2. ಪೊಱಿಸಾರ್ದವಳಿಕುಜ. 3. ಪೂಗೊಯ್ವೆಡೆಯೊಳ್.
4. ನವನೆಯ್ದೆ.

ಉ॥ ನೀಡಿ ಕರಾಗ್ರದೊಂದಳವಿಗೊಯ್ಯನೆ ಬಾರದೆ ಪೂದುಱುಂಗಲಿಂ।
ನಾಡೆ ವಿರಾಜಿಸಿರ್ಪ ಸೆಳೆಗೊಂಬೆಲರಿಂ ತೊನೆದೆೞ್ದು ತೞ್ಗ ತೂ॥
ಗಾಡಿದೊಡಂತದಂ ಪಿಡಿದು ಕೋಂಡಲರಂ ನೆಱೆ ಕೊಯ್ದು ಕಾಂತೆ ಕೈ।
ಗೂಡಿಸಿತೆನ್ನ ವಾಂಛಿತಮನೀ ಮಳಯಾನಿಳನೆಂದು ಪೇರ್ಚಿದಳ್ ॥೧೧೧॥

ಚಂ॥ ವಿರಹದೊಳಿನ್ನನಂದುಱದದಿಪ್ಪ್ರಿದ ಕಂತುಗೆ ತಾನುದಗ್ರ ನಿ।
ಷ್ಠುರತರಮಪ್ಪ ಕೂರಲಗಿದಾಯ್ತ್ತದಱಿಂ ಪಗೆ ಸಿಲ್ಕಿತೀಗಳೆ॥
ನ್ನುರುತರ ವೇಣಿಯೊಳ್ ಮಿಡುಕದಂದದಿನಿಂ ಸೆಱೆಗೆಯ್ವೆನೆಂದು ಸುಂ।
ದರಿ ನೆಱೆ ಕೊಂಡಳಾ ಕ್ಷಣದೆ ಕೇದಗೆಯುಳ್ಳೆಸಳೋಳಿಯೆಲ್ಲಮಂ ॥೧೧೨॥

ಕಂ॥ ಸಲೆ ಕೊಯ್ದು ಮಾಧವೀ ಲತೆ।
ಯಲರ್ಗಳನಂತಲ್ಲಿ ಪುದಿದ ಕಣ್ಬೆಳಗಂ ತಾ॥
ನಲಘು ಕುಚೆ ತುಡುಕುತಿರ್ದಳ್।
ಸುಲಲಿತ ಕುಸುಮಾಳಿ ಮತ್ತೆ ಮೂಡಿದುವೆನುತುಂ ॥೧೧೩॥

ಚಂ॥ ಪೊಳೆವ ನವ ಪ್ರಸೂನಮನಭೀಕ್ಷಿಪ ಭಂಗಿಯೊಳಬ್ಜನೇತ್ರೆ ಪ।
ಜ್ಜಳಿಪ ಕಟಾಕ್ಷ ರೋಚಿಯ ಪಸಾಯಮನಿತ್ತಲರ್ಗೊಯ್ದಳೞ್ತಿಯಿಂ॥
ತಿಳಕದೊಳೇಱಿಕೊಳ್ವ ನೆವದಿಂ ಮೊಲೆ ಸೋಂಕಿನ ಸೌಖ್ಯವಿತ್ತು ಕೋ।
ಮಳೆ ಮಿಗೆ ಕೊಯ್ದಳಾ ಕುರವಕ ದ್ರುಮದೊಪ್ಪುವ ಪುಷ್ಪಮೆಲ್ಲಮಂ ॥೧೧೪॥

ಕಂ॥ ಇದಱಿಂತೆ ಮಧುಪ ತತಿ ಮು।
ಟ್ಟದೆ ಪುದಿದ ಸುಗಂಧ ಸಾರಮಭಿ[1]ಸಾರಿತಮಾ॥
ಗದ ಪೂಗಳಾವುವೆನುತುಂ।
ಪಡೆದೊರ್ಬಳ್ ಕೊಯ್ದಳೆಯ್ದೆ ಚಂಪಕದಲರಂ ॥೧೧೫॥

ಮಿಸುಪಧರ ರಾಗದಿಂ ದ್ವಿಗು।
ಣಿಸುತುಂ ತನಿಗೆಂಪನದಱ ಪಲ್ಲವ ತತಿಯೊಳ್॥
ಬಿಸಜ ಮುಖಿ ಕೊಯ್ದಳಸದಳ।
ಮೆಸೆ[2]ವಸುಗೆಯ ಕುಸುಮ ವಿಸರಮಂ ಸರಭಸದಿಂ ॥೧೧೬॥

---

1. ಸಾರತ. 2. ಪಸುಕೆ.

ಚಂ॥ ಬಕುಳ ಲವಂಗ ಲುಂಗ ಸುರಪರ್ಣಿ ಶಿರೀಷ ಪಲಾಶ ಚೂತ ಚಂ।
ಪಕ ಚಯ ಮಾಲತೀ ಮಧು ಜಪಾರ್ಜುನ ಪಾಟಲ ಕಿಂಕಿರಾತ ಕೇ॥
ತಕಿ ತಿಳಕಾತಿಮುಕ್ತಕ ಸುಮಾಧವಿ ಮಾಧವಿ ನಾಗ ಕೇಸರ।
ಪ್ರಕರದ ಪೂಗಳಂ ನೆಱೆಯೆ ಕೊಯ್ದುದು ತದ್ವನದೊಳ್ ವಧೂಜನಂ ॥೧೧೭॥

ಇಂತು ಕಂತುವಿನ ತೂಣೀರ ಕಾಂಡ ಮಂಡಲಮಂ ಸೂಱೆಗೊಂಡಂತಿರೆಳವೆಂಡಿರ ತಂಡಂ ಸ್ವೀಕೃತ ನವೀನ ಪ್ರಸೂನ ಸಂತಾನ[1]ವಾಗಿ—

ಮ॥ಸ್ರ॥ ಕಲಭೃಂಗೀ ರಾವಮಂ ನೂಪುರತತಿ ರುತಿಯಿಂ ಕೊರ್ಬಿಸುತ್ತುಂ ತವೋೀಮಂ।
ಡಲಮಂ ಚಂಚಚ್ಚಲಾಕ್ಷಿ ಪ್ರಚಯ ರುಚಿಗಳಿಂ ಬೆರ್ಚಿಸುತ್ತುಂ ವಿಭಾಸ್ವ॥
ಚ್ಚಲನ ಪ್ರದ್ಯೋತದಿಂ ತದ್ವಿಪುಳಮಹ ಮಹೀಭಾಗದೊಳ್ ರಾಗಮಂ ಸಂ।
ಗಳಿಸುತ್ತುಂ ಬಂದುದೆತ್ತಂ ಧೃತ ಬಹು ಕುಸುಮ ವ್ಯೂಹಮಾ ಸ್ತ್ರೀಸಮೂಹಂ
[॥೧೧೮॥

ಕಂ॥ ವನತರು ಲತಾ ಲತಾಂತವು।
ನಸಿತಂ ತವೆ ಕೊಂಡಿರೆಂದು ಪುಯ್ಯಲ್ಚುವವೋಲ್॥
ಜಿನುಗುತ್ತುಮಳಿಗಣಂ ಬಱಿ।
ಯನೆ ಬರೆ ಬಂದುದು ವಿಳಾಸಿನೀ ಜನಮಾಗಳ್ ॥೧೧೯॥

ಬಂದು ವಿಳಾಸಿನಿಯರ್ ಪದೆ।
ಪಿಂದಂ ವನಲಕ್ಷ್ಮಿ ಕೊಟ್ಟ ಕಾಣ್ಕೆಯನಸಿತಂ॥
ತಂದೀವಂತಿರೆ ದೇವಿಯ।
ಮುಂದಿಟ್ಟಿಪಿದರಖಿಳ ಕುಸುಮ ಕಳಿಕಾವಳಿಯಂ ॥೧೨೦॥

ಆಗಳವರ ನಿಜ ನಯನ ಧವಳಾಂಶುವಿಂದಭಿಷೇಚಿಪಂತೆ ನೋೞ್ಪ ಭಾವದಿಂ ದೇವಿ ಕುಸುಮ ವನಕ್ಕೆ ಮನಂದಂದಳೆಂದಱಿದು—

ಕಂ॥ ಆ ಕುಸುಮ ಕಳಿಕೆಗಳನವ।
ನೀಕಾಂತಂ ತಾನೆ ಕೊಂಡು ಕೌತುಕ ತರ ಶೋ॥
ಭಾ ಕೀರ್ಣಮಾಗೆ ಭೂಷಾ।
ನೀಕಮನೊಲ್ದಸಿತನೊಲವಿನಿಂ ವಿರಚಿಸಿದಂ ॥೧೨೧॥

1. ರಾಗಿ.

ಚಂ॥ ಉರವಣೆಯಿಂದೆ ಪುಂಬರಿದು ತನ್ನಯ ನೇತ್ರ ಮರೀಚಿ ನೀಳ್ದಲಂ ।
[1]ಕರಿಸೆ ತದೀಯ ಕೋಮಲ ಲತಾಂಗಮನಾಗಳೆ ತಾಂ ಸಮಂತಲಂ ॥
ಕರಿಸಿದನುಲ್ಲಸತ್ಕುಸುಮ [2]ಮಂಡಲ ಮಂಡನದಿಂ ವಿಳಾಸಮ ।
ಚ್ಚರಿವಡೆವಂತೆ ಕಾಂತೆ ವಿಜಯಾವತಿ ದೇವಿಯನಾ ಮಹೀವರಂ ॥೧೨೨॥

ಆ ಸಮಯದೊಳ್—

ಕಂ॥ ಅಸಮಾಸ್ತ್ರನ ಕುಸುಮಾಸ್ತ್ರ ।
ಪ್ರಸರಮಿದೆಂಬಂತೆ ವಾರ ನಾರೀ ನಿವಹಂ ॥
ಮಿಸುಗಿದುದು ತಳೆದು ತಮತಮ ।
ಗೆಸೆವ ಲಸತ್ಪ್ರ[3]ಸವ ತತಿಯ ಪೊಸ ಪಸದನಮಂ ॥೧೨೩॥

ಅಂತುಮಲ್ಲದೆಯುಂ—

ಚಂ॥ ನಿಮಿರ್ದಲರ್ಗಣ್ಣ ನುಣ್ಬೆಳಗಡರ್ಪಿಪ ಕೂರಲಗಾ ಸುಕೋಮಲಾಂ ।
ಗಮೆ [4]ಶರಯಷ್ಟಿ ತೊಟ್ಟಲರ ಪಚ್ಚಮೆ ಬೆಳ್ಗಱಿಯಾಗೆ ಕಾಮಿನೀ ॥
ಸಮಿತಿ ವಿರಾಜಿಸಿರ್ದುದು ಮನೋಭವ ಭೂಪತಿಗೀವೆನೆಂದು ತಾಂ ।
ಕಮಲಜನೊಲ್ದು ನಿರ್ಮಿಸಿದ ಮೋಹನ ಬಾಣದ ಮೊತ್ತಮೆಂಬಿನಂ ॥೧೨೪॥

ಆ ಸಮಯದೊಳ್ ವನ ಮಹತ್ತರನಕ್ಷಕಂ ನಿಂದಿರ್ದು ದೇವ ಬಿನ್ನಪಮಿದು ಜಲಕೇಳಿಗವಸರಮೆಂದು ನುಡಿದುದಂ ಮನದೆ ಕೊಂಡಲ್ಲಿಂ ತಳರ್ದು—

ಚಂ॥ ಇದು ಒಱಸಂದು ಬಂದ ವನ ದೇವತೆಯರ್ಕಳ ಮೊತ್ತಮೋ ವಿಳಾ ।
ಸದೆ ನಡೆಗೊಂಡ ನಂದನ ಲತಾವಳಿಯೋ ದಿಟಮೆಂಬಿನಂ ನಿಜಾಂ ॥
ಗದ ಮಿಸುಪಚ್ಚ ಪೂದೊಡವು ರಾಜಿಪ ವಾರ ವಿಳಾಸಿನೀ ಸಮಾ ।
ಜದ ಪದೆಪಿಂದಮಿಂತು ನಡೆದಂ ನೃಪನಾ ಜಲಕೇಳಿ ಲೀಲೆಯಿಂ ॥೧೨೫॥

ಕಂ॥ ಬಳಸಿ ವಿಳಾಸಿನಿಯರ್ ಬರೆ ।
ಜಳಕೇಳಿಗೆ ತನ್ಮಹೀಶ್ವರಂ ತಾಂ ವರಟಾ ॥
ವಳಿವೆರಸು ಕೊಳಕ್ಕೆಯ್ದುವ ।
ವಿಳಸತ್ಕಳಹಂಸ ಮಿಥುನಮಂ ನೆನೆಯಿಸಿದಂ ॥೧೨೬॥

---

1. ಕರಿಸಿ. 2. ಮಂಡನ ಮಂಡಲ. 3. ಸರ. 4. ಸರ.

ಚಂ॥ ಕಮಲಭವಂ ಲಸತ್ಪರಿಮಳೋತ್ಕರದಿಂ ಕರುವಿಟ್ಟು ಮಾಡಿದಂ॥
ಗಮಿದೆನೆ ತಣ್ಪುವೆತ್ತ ವಿಜಯಾವತಿ ದೇವಿಯ ಮೆಯ್ಗೆ ಸುಯ್ಗೆ ಸಂ।
ಭ್ರಮದೊಳೆ ಬರ್ಪ ಷಟ್ಪದ ಸಮಾಜದ ಝಂಕೃತ ಮಂಗಳಾನಕ।
ಪ್ರಮುದಿತ ನಾದಮಾಗಿರೆ ಕೊಳಕ್ಕೊಲವಿಂ ನಡೆದಂ ನರೇಶ್ವರಂ ॥೧೨೭॥

ಇಂತು ಬಂದು ವನಲಕ್ಷ್ಮಿಯ ಮುಗುಳ್ನಗೆಯ ಬಗರಗೆಯಂತೆ ಬೆಳ್ಪೆಳಗನುಗುಳ್ವ ಶಶಿಕಾಂತದೆಸೆವ ಸೋಪಾನಂಗಳಿಂ ಮಲಯಜ ಮಿಳಿತಮಪ್ಪ ಸಕಲ ಕುಸುಮ ನಿಕರ ಮಕರಂದ ವಾರಿ ಪೂರದಿಂ ಸುತ್ತಲುಂ ಬಿತ್ತರಿಪ ಮೃಗಮದ ವಾರಿ ಪೂರಮಪ್ಪ ಹರಿನೀಲದ ಕೀಲ್ಗಳಿಂ ಕುಂಕುಮ ವಾರಿ ಪೂರಮಪ್ಪ ಕನಕ ಕಟಾಹಂಗಳಿಂ ಚಂದನ ವಾರಿ ಪೂರಮಪ್ಪ ರಜತದ ರಂಜಣಿಗೆಗಳಿಂ ಮುತ್ತಿನ ಮಾಣಿಕದ ಪಳುಕಿನ ಪವಳದ ಕನಕದ ಕರ್ಕೇತನದ ಪರಿಪರಿಯ ಜಲಯಂತ್ರದ ಜಾಲದಿಂ ಕಣ್ಗೊಳಿಸಿ ನಯನ ಪುತ್ರಿಕೆಯ ಪರಮೋತ್ಸಾಹ ಗೇಹಮುಂ ಶೈತ್ಯ ಲಕ್ಷ್ಮಿಯ ನೃತ್ಯ ನಿಳಯಮುಂ ಪರಿಮಳ ಪುಂಜದ ಮಂಜೂಷಮುಮೆನಿಪ ವಾರಿಕೇಳಿ ಕಾಸಾರಮಂ ಕಂಡು—

ಕಂ॥ ತನುವಿಂ ಮುನ್ನಮೆ ತಾಮಿರ।
ದೆನಸುಂ ಜಲಕೇಳಿಯಂ ನಿಮಿಚ್ಚುವವೋಲ್ ಭೋಂ॥
ಕನೆ ವಿಜಯಾವತಿಯ ವಿಲೋ।
ಚನ ಯುಗಮೆಯ್ದಿದುದು ಸುರಭಿ [1]ಶರಮಂ ಸರಮಂ ॥೧೨೮॥

ದೇವಿಯ ನಯನದ ಬಟಾಯನೆ।
ತಾವೆಯ್ದಿದುವನು ವಸತ್ವಮಂ ಸೂಚಿಪವೋಲ್॥
ಭೂವರನ ವಿಲೋಚನ ರಾ॥
ಜೀವಂಗಳ್ ತದ್ವಿಶಾಲ ಕೇಳೀ ಸರದೊಳ್ ॥೧೨೯॥

ಮ॥ ಬಟಾಯೊಳ್ ಭೋಂಕನೆ ಬಂದು ನಿಂದು ನಡೆ ನೋಟ್ಪಾ ವಾರನಾರೀಜನೋ।
ಜ್ಜ್ವಳ ನೇತ್ರ ಪ್ರತಿಬಿಂಬದಿಂ ಝಷಮಯಂ ವಕ್ತ್ರ ಪ್ರತಿಚ್ಛಾಯೆಯಿಂ॥
ಜಳಜ ವ್ರಾತಮಯಂ ಕುಚಪ್ರತಿಕೃತಿ [2]ಪ್ರತ್ಯುಕ್ತದಿಂ [3]ಕೋಕ ಸಂ।
ಕುಳ ಶೋಭಾಮಯಮಾಗಿ ತೋಱಿತೆನಸುಂ ತದ್ವಾರಿ ಕೇಳೀ ಸರಂ ॥೧೩೦॥

1. ಸರ. 2. ಪ್ರತ್ಯಕ್ಷ. 3. ಕೋಪ.

ಆಗಳ್—

ಚಂ॥ ಇದು ಮದನಾಸ್ತ್ರ ಪುಂಜಮೆನಿಸಂತಲರ್ವಚ್ಚದಿನಾದವೊಪ್ಪುವಾ।
ಸುದತಿಯರಂ ಸಮಂತು ಪೆಸರ್ಗೊಂ[1]ಡೆಸಿತುಂ ಕರೆದಾಗಳಂತೆ ನೀ॥
ಲದ ನವ ರೂಪ್ಯದುಜ್ಜ್ವಳಿಪ ಶಂಖದ ಪಚ್ಚೆಯ ಪದ್ಮರಾಗ ರ।
ತ್ನದ ಪೊಸವೊನ್ನ ಡೊಕ್ಕರಿಗಳಂ ನೆಱೆ ಕೊಟ್ಟನಿಳೇಶ ಕೇಶವಂ ॥೧೩೧॥

ಕಂ॥ ಜಳ ರೂಪಮಲ್ಲದಾ ಕೃತ।
ಕಳಂಕಮಲ್ಲದ ಸುಧಾಂಶು ಕಳೆಗಳಿವೆನೆ ಪ॥
ಜ್ಜಳಿಪಿಂದು ಶಿಲೆಯ ಡೊಕ್ಕರಿ।
ಗಳನಾಗಳೆ [2]ಕೊಂಡರಾಗಳಾ ಮಾನಿನಿಯರ್ ॥೧೩೨॥

ಮ॥ ಜನ ನಾಥಂಗೆ ಕೃತ ಪ್ರಬೋಧ ಸಲಿಲ ಕ್ರೀಡಾಕುಳ ಸ್ಥಾನ[3]ಮಾ।
ದಿನಿತೊಂದುತ್ಸವದಿಂದಮುಬ್ಬರಿಸವೋಲ್ ವಾರಾಂಗನಾ ಪೀವರ॥
ಸ್ತನ ಸಂಸ್ಪರ್ಶನ ಕಾಂಕ್ಷೆಯಿಂದಮೆನಸುಂ ಮೇಲ್ವಾಯ್ವವೋಲ್ ತಜ್ಜಳಂ।
ತನಿವೆರ್ಚುತ್ತಿರೆ ಪೊಕ್ಕನಾಗಳರಸಂ ತತ್ಕಾಮಿನೀ ಸಂಯುತಂ ॥೧೩೩॥

ಚಂ॥ ಪವಣಿಸಿ ನಾಭಿ ಮಂಡಲ ಸಮಾನದೆ ತೀವಿದೊಡಂ ತದಂಗನಾ।
ನಿವಹ ಕುಚಾಗ್ರಮಂ ಕುಸುಕುತಿರ್ದುದು ಕಾಮುಕನಂದದಿಂದಮಾ॥
ನವ ಸರಸೀ ಸುಗಂಧ ಸಲಿಲೋತ್ಕರಮೆಂ[4]ದೆನೆ ವಾರಿ ಕೇಳಿಗು।
ತ್ಸವದೊಳಿಳಾಧಿನಾಥನೊಡವೊಕ್ಕಬಲಾ ಜನಮೇನಗಣ್ಯಮೋ ॥೧೩೪॥

ಸರಭಸದಿಂದಮಭ್ರಮುಪಮರ್ತ್ಯ ಕರೀಂದ್ರಮುಮಾ ಸುರಾಪಗಾಂ।
ತರದೊಳುದಗ್ರ ಪುಷ್ಕರ ಪುಟಂಗಳನೂಡಿ ನವಾಂಬು ಕೇಳಿಯಂ॥
ವಿರಚಿಸುವಂತೆ ಡೊಕ್ಕರಿಗಳಿಂ ಮೊಗೆದೊರ್ಬರೊಳೊರ್ಬರಾಗಳ।
ಚ್ಚರಿ ನೆಲೆವೆರ್ಚೆ ಪೊಯ್ದರೊಲವಿಂ ವಿಜಯಾವತಿಯುಂ ನರೇಂದ್ರನುಂ ॥೧೩೫॥

ಕಂ॥ ಮೊಗೆಮೊಗೆದು ಮುಲಯರುಹ ವಾ।
ರಿಗಳಂ ದರಹಾಸ ದೀಪ್ತಿವೆರಸೋರಂತಾ॥
ಮೃಗನಯನೆ ಪೊಯ್ದು ಪಿರಿದುಂ।
ದ್ವಿಗುಣಿಸಿದಳ್ ತಾರ ಹಾರಮಂ ನೃಪನುರದೊಳ್ ॥೧೩೬॥

---

1. ಡನಿತುಂ. 2. ಕೊಂಡು ತಾನುಮಾ ಮಾನಿನಿಯುಂ. 3. ಮುಡಿ. 4. ತೆನೆ.

ಇರದಾಗಳೆ ದೇವಿಯ ನಿಱಿ |
ಗುರುಳೋಳಿಗೆ ಮುತ್ತಿನೆಸೆವ ಮಂಜರಿಯಂ ಬಿ ॥
ತ್ತರಿಸುವ ತೆಱದಿಂದೊತ್ತಿದ |
ನರಸಂ ಜೀರ್ಕೊಳವೆಯಿಂಪೆ ಚಂದನ ಜಲಮಂ ॥೧೩೭॥

ಉ॥ ಚೆಲ್ಲುತುಮಾಸ್ಯದಿಂ ಮಿಗೆ ಮುಗುಳ್ನಗೆಯಂ ಚಪಳೇಕ್ಷಣಂಗಳಿಂ |
ಚೆಲ್ಲುತುಮೆಯ್ದೆ ನುಣ್ಬೆಳಗನಂಗದ ಭಂಗಿಗಳಿಂ ವಿಳಾಸಮಂ ॥
ಚೆಲ್ಲುತುಮುಲ್ಲಸತ್ಸರಸಿಯೊಳ್ ಮೊಗೆದುಜ್ಜ್ವಲ ಚಂದನಾಂಬುವಂ |
ಚೆಲ್ಲಿದಳಾಗಳಂತೆ ವಿಜಯಾವತಿ ಭೂಪನ ಮೇಲೆ ಲೀಲೆಯಿಂ ॥೧೩೮॥

ಕಂ॥ ಜನನಾಥ ಚಕ್ರಿಯು ವಿಳೋ |
ಚನ ಪಲ್ಲವ [1]ಸಂಜ್ಞೆಯಱಿದು ಸಂಭ್ರಮದಿಂ ಭೋಂ ॥
ಕನೆ ತುಮುಳ ವಾರಿ ಕೇಳಿಯ |
ನೆನಸುಂ ನೆಗಟ್ಟುದು ವಿಳಾಸಿನೀ ಜನಮನಿತುಂ ॥೧೩೯॥

ಮಳಯ ರುಹ ಸಲಿಲಮಂ ಜೀ |
ರ್ಕೊಳವಿಗಳಿಂದೊತ್ತಿ ರಮಣಿಯರ್ ತಮತಮಗಾ ॥
ದಳವಿಂ ಸೂಸೆ ತುಷಾರಾ |
ವಳಿ ಮುಸಗಿದ ತುಹಿನ ಗಿರಿಗೆ ನೃಪನೆಣೆಯಾದಂ ॥೧೪೦॥

ಮೃಗಮದ ವಾರಿಯನರಸಂ |
ಮೊಗೆಮೊಗೆದೆಡೆವಿಡದೆ ಪೊಯ್ವುದುಂ ತಾನೆನಸುಂ ॥
ಸೊಗಯಿಸಿದಳರಸಿ ರಸೆಯಿಂ |
ದೊಗೆದಸಿತಾಕಾರದವನಿ ಕಾಂತೆಯ ತೆಱದಿಂ ॥೧೪೧॥

ಸಂದಿಸಿ ತನ್ಮೃಗಮದಮಂ |
ಕುಂದದೆಯಾ ದೇವಿ ಪೊಯ್ಯುತಿರೆ ನರನಾಥಂ ॥
ಕಂದರ್ಪನ ಪಿತನೆಂಬುದ |
ಸಿಂಡಱಿಪುವ ತೆಱದಿನೆಸೆವನಸಿತಚ್ಛವಿಯಿಂ ॥೧೪೨॥

---

1. ಸೊಗೆ.

ಘನ ಕುಂಕುಮಾಂಬುವಂ ನೃಪ |
ವನಜಾಕ್ಷಂ ಪೊಯ್ಯೆ ರಯ್ಯಮಪ್ಪುದರದ ನಂ ||
ದನನ ನಿಜತೇಜಮುಳ್ಕಿದು |
ದೆನೆ ದೇವಿಯ ಗಾತ್ರಮೆಸೆದುದತಿ ಶೋಣತೆಯಿಂ ||೧೪೩||

ಬೞಯೊಳೆ ತಾನುಂ ಕುಂಕುಮ |
ಜಳಮಂ ಬಿಡದರಸಿ ಪೊಯ್ಯೆ ನೃಪನಂಗಂ ಕ ||
ಣ್ಗೊಳಿಸಿದುದರುಣತೆಯಿಂ ತ |
ಜ್ಜಳ ಕೇಳಿಯೊಳೊಗೆದ ರಾಗಮುಣ್ಮಿದ ತೆಱದಿಂ ||೧೪೪||

ಅರಸಿಯ ಘನಸ್ತನ ದ್ವಯ |
ಗಿರಿ ಶಿಖರಕ್ಕೊದವಿದಮಳ ನಿರ್ಝರ ಧಾರಾ ||
ಪರಿಕರಮಂ ಪಡೆದನಿಳಾ |
ವರನಾಗಳೆ ಮೊಗೆದು ಪೊಯ್ವ ಮಳಯಜದಿಂದಂ ||೧೪೫||

ಮ|| ಪರಮಸ್ನೇಹ ರಸೌಘದಿಂ ಮಿ[1]ಸಿಸುವಂತುತ್ಕರ್ಷ ಹರ್ಷಾಮೃತೋ |
ತ್ಕರದಿಂ ಸೇಚಿಸುವಂತೆ ಸಾತ್ವಕಿತನಾತ್ಮ [2]ಪ್ರೇಮ ಪೀಯೂಷದಿಂ ||
ಪಿರಿದುಂ ನಾಂದಿಸುವಂತೆ ಮಾಣ [ದೊಲವಿಂದಾ ದೇವಿ] ಪೊಯ್ದಳ್ ಮಹೀ |
ವರ ಶೋಭಾಂಗದ ಮೇಲೆ ಲೀಲೆಯೊದವಿಂ ಕರ್ಪೂರ ಪೂರಾಂಬುವಂ ||೧೪೬||

ಆ ಸಮಯದೊಳ್—

ಕಂ|| ಜಳ ನಯನ ಪ್ರತಿಬಿಂಬಂ |
ಗಳನವನೆಳ ಮೀಂಗಳೆಯ್ದೆ ಬಳಸಿದುವೆಂದಾ ||
ಗಳೆ ಬೆದಱ ಕರಂ ಕೋಮಳೆ |
ಕೊಳನಂ ಪೊಱಮಟ್ಟು ಕೆಲದೊಳಿರ್ದಳದೊರ್ಬಳ್ ||೧೪೭||

ಬೞವಿಡದೆ ಮುಸುಱುವಳಿಗಳ |
ಬಳಗಕ್ಕೇವೈಸಿ ಮುಗುದೆ ಕೆಳೆಯಳ್ ಸರದೊಳ್ ||
ಮುೞುಗಿರ್ದು ನೆಗೆದುವಂ ಕಂ |
ಡೆಳೆಯಳ್ ಮಗುೞ್ದಲ್ಲಿ ಮುೞುಗುತಿರ್ದಳದೊರ್ಬಳ್ ||೧೪೮||

---

1. ಗಿಸುವಂ. 2. ಪ್ರಿಯಾ.

ಜಳಕೇಳಿಯೊಳಾಗಳ್ ಸು।
ತ್ರುೞಿದ ಬಳಲ್ಮುಡಿಯು ಪೊಳೆಪನಸಿತೋರಗನೀ॥
ಸ್ಥಳದೊಳಿದೆಯೆಂದು ಭಯದಿಂ।
ಕೆಳದಿಯು ಕಂಧರಮನಪ್ಪಿದಳ್ ಜೇಱೊರ್ವಳ್ ॥೧೪೯॥

ಗುರುಕುಚ ಯುಗಳಂ ಪೊಳೆಯು।
ತ್ತಿರೆ ಜಲದೊಳ್ ಜಕ್ಕವಕ್ಕಿ ಮುೞುಗಿರ್ದಪುವೀ॥
ಸರಸೀ ಸಲಿಲದೊಳೆನುತುಂ।
ತರಳೇಕ್ಷಣೆಯೊಲ್ದು ನೋಡುತಿರ್ದಳದೊರ್ವಳ್ ॥೧೫೦॥

ಬಿಡುಮುಡಿ ವಿರಾಜಿಸುವ ತ।
ನ್ನಡು ಮೊಗಮದು ಪೊಳೆಯೆ ರಾಹು ಶಶಿ ಮಂಡಲಮಂ॥
ಪಿಡಿದು ರಸೆಗಿೞಿಯುತಿದೆಯೆಂ।
ದೆಡೆವಿಡದಾ ಸರಸಿಯೊಳ್ ನಿರೀಕ್ಷಿಪಳೊರ್ವಳ್ ॥೧೫೧॥

ಸುಳಿಗುರುಳ್ಗಳಿನೊಪ್ಪುವ ಮುಖ।
ನಳಿನಂ ಮಾರ್ಪೊಳೆಯೆ ಜಳದೊಳೆಱಗಿದ ಮಧುಪಾ॥
ವಳಿ[1]ವೆರಸೆೞ್ದಾ ವಿದಳಿತ।
ಜಳಜಮಿದೆಂದಬಲೆಯೊರ್ವಳೀಕ್ಷಿಸುತಿರ್ದಳ್ ॥೧೫೨॥

ಕಂ॥ ಕೊಳನೊಳಗೆ ಪೊಳೆವ ನಿಜ ಕೋ।
ಮಳತರ ತನುವಂ ನವೀನ ಲತೆಯೆಂದು ಸಮು॥
ಜ್ಜ್ವಳ ನಯನಂಗಳನಲರ್ಗಳ।
ಗಳಿವೆನುತುಂ ನೋಡುತಿರ್ದಳೊಲವಿಂದೊರ್ವಳ್ ॥೧೫೩॥

ಆಗಳವಂದಿರ ಮುಗ್ಧ ಭಾವಮಂ ವಿಜಯಾವತಿಗೆ ತೋಱಿ ಮುಗುಳ್ನಗೆ ನಗುತ್ತುಂ ಮಳಯಜಾಂಬುವಂ ಮೊಗೆದು ಕೊಂಡು—

ಕಂ॥ ಇದೆ [2]ಪುಟ್ಟಿದ ಬಿಸವಿಂತೀ।
ಯುದರದೊಳುದ್ಭವಿಸಿ ಬಳೆವ ತನಯಂಗೆಂಬಂ॥

1. ಕೆಸಱೆೞ್ದಾ. 2. ಪಟ್ಟಿದ ಬಿಸವಂತಿ.

ದದೆ ಪೊಯ್ದ ನರಸನರಸಿಯ ।
ಪದನಳಿನೋದರದ ಮೇಲೆ ಮಲಯಜ ಜಲಮಂ ॥೧೫೪॥

ಚಂ॥ ಸ್ಮರ ಕರವಾಳ ಮೂಲಮೆನಿಸಾ ನಳಿತೋಳ ಮೊದಲ್ ತುಳುಂಕೆಯುಂ ।
ನಿರುಪಮಮಪ್ಪ ನುಣ್ಬೊಗರನಾ ನಖಮುಜ್ಜ್ವಲ ಕಾಂತಿಯಂ ಕಡ ॥
ಲ್ವರಿಯಿಸಲಾನನಂ ತೊಳಪ ಕೆಂಬೆಳಗಂ ಕೆದಱುತ್ತಿರಲ್ಕೆ ತಾಂ ।
ತ್ವರಿತದೆ ಪೊಯ್ದಳಾ ನೃಪನ ಮೇಲೆ ನೃಪಾಂಗನೆ ಚಂದನಾಂಬುವಂ ॥೧೫೫॥

ಇಂತಾಗವಿರ್ಬರುಮೊರ್ವರೊಳೊರ್ಬರ್ ಸ್ನೇಹಾಮೃತಾಸಾರಮಂ ಸೂಸುವಂತೆ ಮಳಯಜಾಂಬುವಂ ಸೂಸಿಯುಂ ಮನೋ ಜನಿತಾನುರಾಗಮಂ ಚೆಲ್ಲುವಂತೆ ಕುಂಕುಮ ಜಲಮಂ ಚೆಲ್ಲಿಯುಂ ಮದ ವಶೀಕರಣ ಶೃಂಗಾರ ರಸಮಂ ಪೊಯ್ವಂತೆ ಕಸ್ತೂರಿ ವಾರಿಯಂ ಪೊಯ್ದುಂ ಪಯಃಕ್ರೀಡಾ ಪರಿತೃಪ್ತಚೇತನಾಗಿ ತದೀಯ ಕೇಳೀ ಸರಸಿಯಂ ವಿಳಾಸಿನೀಜನ ಸಮನ್ವಿತಂ ಪೊಱಮಟ್ಟು—

ಕಂ॥ ತತ್ಸರಸಿಯೆಸೆವ ತಟದು ।
ದ್ಯತ್ಸಿತಕರ ಕಾಂತ ಪಟ್ಟಶಿಲೆಯೊಳ್ ವಸುಧಾ ॥
ಭೃತ್ಸೇವ್ಯನಿರ್ದನಾ ಯೋ ।
ಷಿತ್ಸಮಿತಿ ಸಮೇತಮಲ್ಲಿ ಮಾಪೊರ್ಳೆಯುತ್ತುಂ ॥೧೫೬॥

ಉ॥ ಶ್ರೀ ವಿಜಯಾವತೀ ಸತಿಯ ಕಂಟಕಿತಾಮಳ ಗಾತ್ರಯಷ್ಟಿ ರಾ ।
ಗಾವಿಳ ಲೋಚನಂ ವಿಲುಳಿತಾಳಕ ಲಗ್ನ ಕಪೋಲ ಭಿತ್ತಿ ಶು ॥
ಭ್ರಾವಹ ವಿಭ್ರಮಾಧರ ಪುಟಂ ಪರಿಧೌತ ಸುಪತ್ರ ವಲ್ಲಿಯ ।
ಪ್ಪಾ ವಿಳಸತ್ಕುಚಂ ಮನಮನಿರ್ಕುಳಿಗೊಂಡುದಿಳಾಧಿನಾಥನಂ ॥೧೫೭॥

ಮ॥ಸ್ರ॥ ವಿನುತಂ ಚಿತ್ರಂ ಸರಶ್ರೀಸುದತಿ ಬೆಸಲೆಯಾದಂಗನಾನೀಕಮೋ ತಾ ।
ನೆನೆ ಲಾವಣ್ಯಾಮೃತಂ ಮಿಕ್ಕೊಸರ್ವ ತೆಱದೆ ವಸ್ತ್ರಾಂತದಿಂ ಬಿಂದುಗಳ್ ತ ॥
ಳ್ತಿನಿತಾನುಂ ಬೀೞ[3] ಶೃಂಗಾರದ ಸುಧೆ ಸುರಿಸುವಂ[1]ತಾ ಕುಚಾಗ್ರಂಗಳಿಂ ನು ।
ಣ್ಣನಿದಂದಲ್ ಸೋರೆ ನಿಂದಿರ್ದುದು ಹಿಮ ವೃತ ಕಾಯಂ ವರ[2]ಸ್ತ್ರೀ
[ನಿಕಾಯಂ ॥೧೫೮॥

1. ತಕ್ಕು. 2. ಶ್ರೀ.

ಕಂ॥ ಪುಳಿಗರ್ಚಿದಂಗಜಾಸ್ತ್ರಂ ।
ಗಳ ಬಳಗಮಿದೆಂಬ ತೆಱದಿನಾರ್ದ್ರತೆವಡೆದು ॥
ಜ್ಜ್ವಳಿಪಂ[1]ಗಾವಳಿಯಿಂ ಕ ।
ಣ್ಗೊಳಿಸಿರ್ದುದು ಬಳಸಿ ವಾರನಾರೀ ನಿವಹಂ ॥೧೫೯॥

ಸಮಸಂದಾ ಮಲಯಜ ಕುಂ ।
ಕುಮ ಕಸ್ತೂರೀ ಜಲಾರ್ದ್ರ ತನು ತತಿಯಿಂ ತ ॥
ತ್ಪ್ರಮದಾಜನಮೆಸೆದುದು ರತಿ ।
ರಮಣನ ಪೊಗರೆಬ್ಬಿ ಕುಸುಮಶರ ಸಮಿತಿಯವೋಲ್ ॥೧೬೦॥

ಜಳ ಪರಿಮಳಕ್ಕೆ ಜಿನುಗು ।
ತ್ತಳಿ ಗಣಮಿರೆ ವನಿತೆಯರ್ ಕಲಂಕಿದರೆನ್ನಂ ॥
ವಿಳಸದುರುತರ ಕುಚೋನ್ನತಿ ।
ಕಳಶಂಗಳಿನೆನುತೆ ಮುನಿದ ತೆಱನಾಯ್ತು ಕೊಳಂ ॥೧೬೧॥

ಆಗಳ್ ಸಮಸ್ತ ವಸ್ತ್ರ ಪೀಠಾವಳಿಯಂ ತೆಗೆಯಿಸಿ—

ಚಂ॥ ಎರಡಣಮಿಲ್ಲದೊಲ್ಮೆಯನೆ ಕನ್ನಡಿಪಂತಿರೆ ದೇವಿಯಂ ಮನೋ ।
ಹರಮಯವಾಗಲಂ[2]ಕರಿಸಿ ತಾನುಮಳಂಕೃತನಾಗಿ ಮತ್ತಮಾ ॥
ವರ ವನಿತಾ ಜನಕ್ಕೆ ಬಗೆಯೊಳ್ ಬಯಸಿರ್ಪ ವಿಚಿತ್ರ ವಸ್ತ್ರಮಂ ।
ಪಿರಿದೊಲವಿಂದೆ ಬೇಱ್ಪನಿತನಿತ್ತನುದಾತ್ತ ಮನಂ ಜನಾಧಿಪಂ ॥೧೬೨॥

ತದನಂತರದೊಳ್—

ಮ॥ ಇದು ಮಾವಿಂಗಿದು ಮಾಧವೀ ತತಿಗಿದುದ್ಯತ್ಫುಲ್ಲ ಮಲ್ಲೀ ಕುಳ ।
ಕ್ಕಿದು ಚಂಚಲ್ಲತಿಕಾ ಗೃಹಕ್ಕಿದು ವಿಭಾಸ್ವದ್ವಾರಿ ಕೇಳೀ ಸರ ॥
ಕ್ಕಿದೆನುತ್ತಾಗಳೆ ಬೇಱೆವೇಱೆ ಪೆಸರ್ಗೊಂಡಿತ್ತಂ ಪಸಾಯಂಗಳಂ ।
ಪಡೆಪಿಂದಕ್ಷಕ ನಾಮಧೇಯ ವನಪಾಲಂಗುರ್ವರಾ ಪಾಲಕಂ ॥೧೬೩॥

ಚಪಳೋದ್ಯನ್ನಯನಾಂಶುವಿಂದೆ ಚಪಳಾಳಿ ಶ್ರೀಯನಂತಾ ವನೋ ॥
ಚ್ಚ ಪಯೋದಕ್ಕೆ ಸಮಂತು ಸಂಗಳಿಸುತುಂ ಕಾಂತಾ ಸಮಾಜಂ ಬರ ॥

1. ಗಂ ನಿಳಯಂ. 2. ಕುರಿಸಿ.

ಲ್ಕೆ ಪೊದಟ್ಟಾದ್ಯಾತ್ಮ ಸತೀ ಕಪೋಲ ಪುಟ ದತ್ತಾಪಾಂಗನುರ್ವೀವರಂ ।
ವಿಪುಳೋದ್ಯಾನಮನಾಗಳಂತೆ ಪೊಱಮಟ್ಟಂ [1]ಬದ್ಧ ಚಿತ್ತೋತ್ಸವಂ ॥೧೬೪॥

ಜನತಾನಂದಾಸ್ಪದಂ ಸಂಪದಮಖಿಳ ಬುಧವ್ರಾತ ರಕ್ಷಾರ್ಥಮರ್ಥಂ ।
ಘನ ರಾಜ್ಯಂ ಲೋಕಪೂಜ್ಯಂ ಸಕಲ ಸುಕೃತ ಪಾತ್ರಂ ಚರಿತ್ರಂ ಜಿತೋಗ್ರಾ ।
ರಿ ನಿಕಾಯೋದ್ಯದ್ಬಳಂ ದೋರ್ವಳಮುಪಚಿತ ಸತ್ತ್ವಂ ಸುಚಿತ್ತಂ ಸಮಂತಾ ।
ಗೆ ನಿತಾಂತಂ ಶೋಭಿಸಿಪ್ಪಂ ಕೃತಿರತಿ ರಮಣಂ ಸಾಹಸೋದ್ಧಾಮ ಭೀಮಂ ॥೧೬೫॥

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ವಿಜಯಾವತೀ ಗರ್ಭವಿಭ್ರಮ
ವರ್ಣನಂ ವಾರಿಕೇಳೀ ವರ್ಣನಂ
ಪಂಚಮಾಶ್ವಾಸಂ
ಸಮಾಪ್ತಂ

1. ಬಲ್ದ.

# ಷಷ್ಠಾಶ್ವಾಸಂ

ಕಂ॥ ಶ್ರೀನಾಥಂ ಸೂನೃತ ವಾ ।
ಕ್ಶ್ರೀನಾಥಂ ಮಹಿಮೆವೆತ್ತ ಸಹವಾಸಿ ಕುಲ ॥
ಶ್ರೀನಾಥಂ ಸನ್ಮಾರ್ಗ ।
ಶ್ರೀನಾಥಂ ನೆಗಟ್ದಿಳಾಧಿಪತಿ ರತಿನಾಥಂ ॥೧॥

ಅಂತು ವಿಪುಳೋದ್ಯಾನಮಂ ಪೊಱಮಟ್ಟು ಪಟ್ಟ ಗಜೇಂದ್ರಾರೂಢನಾಗಿ—

ಮ॥ ಜಲ ಕೇಳಿ ಜನಿತ ಪ್ರವೇಶದೊದವಿಂ ವಿಶ್ವಂಭರೋರ್ವೀಶನು ।
ಜ್ಜ್ವಲ ಚಿತ್ತಂ ವಿಜಯಾವತೀ ಸತಿಯ ಚಿತ್ತಂ ಲೀಲೆವೆತ್ತಿರ್ದುಪೀ ॥
ಗಳೆನುತ್ತಂ ಘನಮಾರ್ಗ ಲಕ್ಷ್ಮಿಗೆನಸುಂ ಪೇಟಲ್ಕೆ ನೀಳ್ದಂತೆ ಮಂ ॥
ಗಳ ನಾನಾನಕ ರಾವಮೆಯ್ದಿತು ನಭೋಂತರ್ಭಾಗಮಂ ಬೇಗದಿಂ ॥೨॥

ಚಂ॥ ಪರಿವೃತಮಾಗಿ ಬರ್ಪ್ಪ ಬಲಯಾನ ಸಮುದ್ಭವ ರೇಣು ಜಾಲಮು ।
ದ್ಗುರು ಮದ ಸಿಂಧುರೋತ್ಕರ ತುರಂಗಮ ಸಂಕುಳ ಸಂಭ್ರಮ ಸ್ವರಂ ॥
ಬೆರಸು ದಿಶಾ ಗುಹೋದರಮನೆಯ್ದಿ ಪುಗುತ್ತಿರೆಯಂಚಿತಾಳಕಾ ।
ಪುರಿಯೆನೆ ಪೆಂಪುವೆತ್ತ ವಿಮಳಾಪುರಿಯಂ ಪುಗುತಂದನಾ ನೃಪಂ ॥೩॥

ಕಂ॥ ಸುರ ಪುರಿಯಂ ಶಕ್ರಂ ಶಚಿ ।
ವೆರಸುರು ಮುದದಿಂದೆ [1]ಪುಗುವ ತೆಱದಿಂ ವಿಮಳಾ ॥
ಪುರಿಯಂ ವಿಮಳಾವತಿವೆರ ।
ಸರಸಂ ಪೊಕ್ಕಧಿಕ ಮುದಮನಾಂತಿರುತಿರ್ದ್ದಂ ॥೪॥

ಚಂ॥ [2]ಮನಕೆ ಲವಾಲಸಂ ತೊಡರದಂತೆ ವಿಚಿತ್ರ ವಿನೋದ ಕೋಟಿಯಂ ।
ವಿನಯದಿನೊರ್ಮೆಯಿಂ ನೆಗೞುತುಂ ವರ ಗರ್ಭ ಸುರಕ್ಷಣಾರ್ಥಮು ॥
ಪ್ಪನಿತು ವಿಧಾನಮಂ ವಿರಚಿಸುತ್ತುಮೆ ದೇವಿಯನಿಂತು ಹರ್ಷವ ।
ರ್ಧನೆ ವರ ಕಾಂತೆಯರ್ ಸಹಿತಮೋಲಗಿಸುತ್ತಿರೆ ಸುತ್ತಿ ಲೀಲೆಯಿಂ ॥೫॥

1. ಪೋಗುವಂತಿರೆ. 2. ಮನಕಲೆ.

ಕಂ॥ ರಗಣಮನೆ ಪೋಲ್ತು ಪಿರಿದುಂ।
ಸೊಗಯಿಪ ದೇವಿಯ ತದೀಯ ತನ್ಮಧ್ಯಮುದಾ॥
ಜಗಣಮನೆ ಪೋಲ್ತು ಪಿರಿದುಂ।
ಸೊಗಯಿಸಿದುದು ಗರ್ಭದರ್ಭಕನ ಕೊರ್ಬುಗೆಯಿಂ ॥೬॥

ಮತ್ತಮಡಿಯಾಡುವ ಮುಡಿಯಿಕ್ಕುವ ತಿಲಕವಿಡುವ ತೊಡಂದುಡಿಸುವ ನಿಱುವಿಡಿದು ನೀಡುವ ನೆಲನನುಗ್ಘಡಿಸುವ ಮುಕುರಮಂ ತೋಱುವ ಮಕರಿಕಾ ಪತ್ರಮಂ ಚಿತ್ರಿಸುವ ಪಾವುಗೆಯಂ ಸಾರ್ಚುವ ಪಟವಾಸಮಂ ಸೂಸುವ ಪುಷ್ಪ [1]ವ್ಯಜನಮಂ ಬೀಸುವ ಹಡಪಮಂ ಪಿಡಿವ ಡವಕೆಯಂ ನೀಡುವ ನಿಖಿಳ ಪರಿಚಾ[2]ರಿಣೀ ಜನಂ ನಿಜನಿಯೋಗ [3]ನಿಷ್ಠಾ ಪರತೆಯಿಂ ನಿರಂತರಮೋಲಗಿಸುತೊಪ್ಪುತಿರೆಯಿರೆ—

ಮ॥ಸ್ರ॥ ತವೆ ಪೀರುತ್ತರ್ಕ ತಾಪೋತ್ಕಟಮನಲಱುಸುತ್ತುಂ ಪೊದಟ್ಟೊ[4]ಪಟು ಗ್ರೀ।
ಷ್ಮ ವಿಳಾಸ ಶ್ರೀಯನುತ್ಪಾ[5]ಟಿಸುತುಮುರು ದವಾಗ್ನಿ ಜ್ವಲಜ್ಜ್ವಾಲಿಕಾ ವೈ॥
ಭವಮಂ ತಣ್ಪೇಱುಸುತ್ತುರ್ವಿಯನೆಸೆವ ಕೊನರ್ವೆರ್ಚಿಸುತ್ತುಂ ಕದಂಬ।
ದ್ರುವನಂದಿಂತಾದಮೆಟ್ಟಿಂದುದು ಜಲಧರ ಕಾಲಂ ಶಿಖಿಶ್ರೇಣಿ ಲೋಲಂ ॥೭॥

ಅತುಳೋನ್ಮತ್ತಾಂಗ ಶೋಭಾಯತ ಕರಮುಖ ಫೂತ್ಕಾರ ಬೋಧ್ಯಂ ಮರುತ್ಸಂ।
ಗತಿಯಿಂ ಕೊರ್ಬೇಱು ತದ್ವಾರುಣ ಜಲನಿಧಿ ಜಾತ ಸ್ಫುರಚ್ಛೀಕರಾಲಿಂ॥
ಗಿತದಿಂ ತಣ್ಪೇಱುಯಸ್ತಾಚಲ ತಟ[6]ವಿಕಚತ್ಕುಂದ ಸಂದೋಹ ಗಂಧಾ।
ವೃತದಿಂ ಕಂಪೇಱು ತೀಡಿತ್ತಿರದವಿರಳದಿಂ ಪಶ್ಚಿಮಾಶಾ ಸಮೀರಂ ॥೮॥

ದ್ಯುನದೀ ಕಂಜಾಳಿಗೆಟ್ಟಿರ್ಪಳಿ ಸಮುದಯಮೋ[7]ತತ್ತಟೋತ್ಕೀರ್ಣ ರಂಭಾ।
ವನಮೋ ತೀವ್ರಾಂಶು ತಾಪಕ್ಕಗಿದಿಱುವ ನಭಶ್ಶ್ಯಾಮ ಸಂದೋಹಮೋ ತಿ॥
ಗ್ಮ ನಿದಾಘೋರ್ವೀಜಮಂ ತೂಳ್ದಿಸಲನಿಲ ಪಥಶ್ರೀ ಪೆಱುತ್ತಿರ್ಪ ಭಾನೀ।
ಕಿನಿಯೋ ಪೇೞ್ಬಿಂಬಿನಂ ಪೊಣ್ಮಿದುದೆಸೆವಸಿತೋತ್ತಾನ ಮೇಘ ಪ್ರತಾನಂ ॥೯॥

ಪದೆಪಿಂ ಪ್ರಾವೃಡ್ಭುಜಂಗಂ ಬರೆ ನೆರೆವ ರತಾರಂಭದಿಂ ಬಿರ್ಚಿದಭ್ರೋ।
ನ್ಮದಿರಾಕ್ಷೀಕಾಳ ವೇಣೀ ವಿಸರಮೊ ಕುಸುಮಾಸ್ತ್ರಂ ವಿಯೋಗಿವ್ರಜ ಸ್ವಾಂ॥

1. ಬೀಜನ. 2. ರಕೀ. 3. ವಿಸ್ಥಾ. 4. ಪುಟ. 5. ದಿಸುತು. 6. ಚದನ.
7. ತತ್ತದೋ.

ತದ ಧೈರ್ಯೋಚ್ಚಾಟನಕ್ಕಿಕ್ಕಿದ ಕಿಸುರ ಮಹಾ ಧೂಮ ಸಂತಾನವೋ ತಾ।
ನಿದೆನಲ್ ಮೇಘ ಪ್ರತಾನಂ ನೆಗೆದುದು ನಭದೊಳ್ ಶ್ಯಾಮಳೋದ್ದಾಮ
ದಿಂದಂ ॥೧೦॥

ಮ॥ ನಿಸದಂ ನೃತ್ಯ ವಿನೋದ ಲಕ್ಷ್ಮಿಯೆನೆ ಕೇಕಿ ಸ್ವಾಂತರಂ[1]ಗೋರ್ವಿಗೇ।
ಱಸುತುಂ ಹಂಸೆಯ [2]ಪಿಂಡನಂಡಲೆದು ಮತ್ತಾ ಮಾನಸಾಬ್ಜಾಳಿಗೇ।
ಱಸುತುಂ ಪ್ರೋದ್ಧತ ಹೃದ್ವಿಯೋಗಿ ಜನ ಜೀವಶ್ರೇಣಿಯಂ ನೆತ್ತಿಗೇ।
ಱಸುತುಂ ನೀಟ್ಟು [3]ಕಱಂಗಲೇಱದುದು ಮೇಘಂ ತಳ್ತು ಮೇಘಾಧ್ವ
ದೊಳ್ ॥೧೧॥

ಕಂ॥ ನೆರೆದುದು ವಿರಹಿ [4]ಮನಸ್ತೃಣ।
ಶರಣದೊಳಂಗೋದ್ಭವಾಗ್ನಿಯಂ ನೆಱಪುತ್ತುಂ॥
ನೆರೆದಭ್ರಂ ಕೊರ್ವಿದುದ।
ಚ್ಚರಿಯಿಂ [5]ಚಾದಗೆಯ ಗರ್ಭಮಂ ಕೊರ್ಬಿಸುತುಂ ॥೧೨॥

ಚಂ॥ ಕಡವಲರ್ವೊತ್ತು ಮೊಲ್ಲೆ ಮುಗುಳ್ವೆತ್ತು ಪೊದಟ್ಟು ಪೊಲಂ ಪಸುರ್ತು ವಾ।
ಸಡಿ ಕುಡಿಯೇಱ ಮುತ್ತೆ ನನೆದೋಱ ತಳಿರ್ಗಳ ನಾಡೆ ಪೇಱಯಾ॥
ಕೊಡಸಿಗೆ ಕೊರ್ಬಿ ಕಾಂಡ ಲತೆ ಪರ್ಬಿ ಸುಕೇತಕಿಯುರ್ಬಿ ಶೋಭಿಸು।
ತ್ತಿಡವಿಡದೆತ್ತ [ಮಗ್ಗಳಿಸಿ ನಾಡೆ ವಿ] ಗುರ್ವಿಸುವಬ್ದ ಕಾಲದೊಳ್ ॥೧೩॥

ಮ॥ ವಿಯದಂಭೋಧಿಯ ರತ್ನ ರತ್ನ ಚಯ ರೋಚಿರ್ಮಿಶ್ರ ಶೈವಾಳ ಮಾ।
ಲೆಯೊ ಮೇಣಂಬರ ಲಕ್ಷ್ಮಿ ನೀರದ ನೃಪಂ ಬಂದಂ ದಲೆಂಬುತ್ಸವೋ॥
ದಯದಿಂದಿಕ್ಕಿದ ಕರ್ಣಪೂರ ಲತೆಯೋ ತಾನೆಂಬಿನಂ ಚಿತ್ರ ಕಾಂ।
ತಿಯನಾಂತುಣ್ಮೆ ಸುರೇಂದ್ರ ಚಾಪಮೆನಸುಂ ವಿಭ್ರಾಜಿಸಿತ್ತಭ್ರದೊಳ್ ॥೧೪॥

ಒಗೆದಂಭೋ[6]ಧರಕ್ಕಳಮರ್ತ್ಯಪತಿ ಬೀಸುತ್ತಿರ್ಪ ಮುಕ್ತಾ ವರ।
ತ್ರಿಗಳೋ ಪೊಣ್ಮಿದಿರಮ್ಮದಾನಲ ಶಿಖಾ ಧಾಮಂಗಳೋ ತಾಂ ವಿಯೋ॥
ಗಿ ಗಣಕ್ಕುರ್ಚುವ ಮೇಘ ಮನ್ಮಥನ ತೂಣೀರೋದ್ಗತ ಜ್ವಾಲೆಯಂ।
ಬುಗಳೋ ಪೇಱ[3]ನೆ ಮಿಂಚುಗಳ್ ನಿಮಿರ್ದುವಾ ಜೀಮೂತ.ಯೂಥಾಗ್ರದೊಳ್
॥೧೫॥

---

1. ಗೊರ್ಬಿ. 2. ಹಿಂಡನಂ. 3. ಕಱಂಗುವೇ. 4. ಮನಶ್ರುಣು.
5. ಪೋದಗಿಯ. 6. ನಿಧಿಗಕ್ಕ.

ಮ॥ಸ್ರ॥ ಘನಮಾರ್ಗ ಶ್ರೀಯ ಮೇಘಾಗಮ ವರನ ವಿವಾಹೋತ್ಸವೋದ್ಭೂತ ವಾದಿ।
ತ್ರ ನವೀನ ಧ್ವಾನಮೋ ವಾರಿದ ಕರಟ ಘಟೋಗ್ರೋಲ್ಲಸಡ್ಡಿಂಡಿಮಾನೀ॥
ಕ[1]ನಿಘೃಷ್ಟಾರಾವಮೋ ಕಾಮುಕ ಮೃಗ ಮೃಗಯಾ ಕ್ರೀಡೆಗೆಟ್ಟಿರ್ಪ[2]ನಂ।
ಗನ ಭೇರೀಘೋಷಮೋ ತಾನೆನಲೊಗೆದುದು ಸಂರಂಭದಂಭೋದ ನಾದಂ
॥೧೬॥

ಕಂ॥ ಮದಮಂ ಮಯೂರ ರುತಿವೆರ।
ಸೊದವಿಸುತಂತೊ[3]ದಗಿದಬ್ದ ರುತಿ ವಿರಹಿ ಸಮಾ॥
ಜದ ಬಾಷ್ಪ ಬಿಂದುಗಳ್ವೆರ।
ಸುದಿರ್ದುವು ಘನ ತೋಯಂಬಿಂದುಗಳ್ಮುಂಗಾರೊಳ್ ॥೧೭॥

ಬರೆ ವರ್ಷಾಗಮ ವಿಟನಂ।
ಪರಿರಂಭಿಪ ಸಂಭ್ರಮಕ್ಕೆ ಪಱಿದುಗುವ ನಭ॥
ಸ್ತರುಣಿಯ ಕುಚ ಹಾರದ ಬಿ।
ತ್ತರಿಸುವ ಮುತ್ತುಗಳ ತೆಱದೆ ಸುರಿದುವು ಪನಿಗಳ್ ॥೧೮॥

ಮ॥ ಅನಿಲೋಗ್ರಾಹತಿಯಿಂ ಕಟಲ್ದುಗುವ ಗಂಗಾತೀರ ಜಾತೋಲ್ಲಸ।
ದ್ವನ ಪುಷ್ಪಾವಳಿಯೋ ತದೀಯ ತರು ಶಾಖಾನೀಕ ಸಂಘಟ್ಟನ॥
ಭೋಮಂಡಲದಿಂದೆ ಬಿಟ್ಟ ಬಹು ತಾರಾ ಜಾಲಮೋ ತಾಮಿದೆಂ।
ದೆನೆ ದಲ್ ಸೋರ್ದುವು ಭೋರನೊಂದಿ ಪನಿಗಳ್ ಮುಂಗಾರ ಮೇಘಂಗಳಿಂ
॥೧೯॥

ಚಂ॥ ಎಳಲ್ವ ಪತತ್ರಮೊತ್ತಿ ನಸು ನೀಡಿದ ಗೋಣ್ ತೆಱ[3]ದುದ್ಧ ಚಂಚು ಮಂ।
ಡಳಮರೆ ಮುಚ್ಚಿದಕ್ಷಿ ಮಿಡುಕಾಡುವ ತಾಳುಗೆ ತತ್ಸುಖಾಶ್ರು ಸಂ॥
ಮಿಳಿತ [4]ಕನೀನಿಕಾ ಯುಗಳಮೊಪ್ಪೆ ನವಾಂಬುದ ಬಿಂದು ವೃಂದಮಂ
ಗಳಗಳನೀಂಟುತಿರ್ಪುದು ಮನಂ ತಣಿವಂತಿರೆ ಚಾತಕೋತ್ಕರಂ ॥೨೦॥

ಕಂ॥ ಥಳಥಳನೆ ಸುರಿವ ಮುಂಬನಿ।
ಗಳ ಬಳಗಂ ಚಾತಕ ಕ್ಷುಧಾಗ್ನಿಯನಱಿದಾ॥
ಗಳೆ ವಿರಹಿ ಜನ ಮನೋಜಾ।
ನಳನುರಿಯಂ ಕೊರ್ವಿಸಿತ್ತಿದೇಂ ಚಿತ್ರತರಂ ॥೨೧॥

1. ನಕ್ಕಷ್ಟಾರಾವ. 2. ನಾನಕ. 3. ಗೆದದ. 4. ವಿನೀಳಿಕಾ.

ಉ|| ವಾರಿಯನಬ್ದಮಾಲೆ ಮೊಗೆದಂಬುಧಿಯಿಂ ತರಲಲ್ಲಿ ಕೂಡೆ ಬಂ।
ದಾ ರಮಣೀಯಮುಪ್ಪ ಮಱಿಮಿಾನ್ಗಳೆ [1]ಮುನ್ನುಗುತಿರ್ಪವೋಲ್ ಚಲ॥
ಚ್ಚಾರು ತಟಿತ್ಪ್ರಭಾ ತತಿಯ ಸಂಗತಿಯಿಂ ಪೊಳೆಯುತ್ತು[2]ಮಿರ್ಪ ಮುಂ।
ಗಾರ ಮುಗಿಲ್ಗಳಿಂ ತುಱುಗಿ ಸೋರ್ದುವು ಭೋರನೆ ವಾರಿ ಬಿಂದುಗಳ್ ॥೨೨॥

ಚಂ|| ನೆರೆದ ಪಯೋದ ಮಾಲೆ ತಪನೋತ್ಕಟ ತಾಪಮನೆಯ್ದೆ [3]ಪೀರ್ದುದಿಂ।
ಚರಿಯಿಪೊಡಾಯ್ತು ತಣ್ಪು ನಮಗೆಂಮಱಿ ಕೈ ನಿಱಿದಾಡುವಾ ವಿಯ॥
ಚ್ಚರಿಯರ ತತ್ಕರಾಭರಣ ವಿದ್ರುಮ ರತ್ನದ ರಾಜಿ ಸೂಸಿದಂ।
ತಿರೆ ಪರಿರಂಜಿಸಿತ್ತು ಪಿರಿದುಂ ಸುರಗೋಪ ಕಳಾಪಮುರ್ವಿಯೊಳ್ ॥೨೩॥

ಮ|| ಸುರಗೋಪಚ್ಛಲದಿಂ ಧರಾ ರಮಣಿ ರಾಗಂಬೆತ್ತು ಮಾದ್ಯನ್ಮನೋ।
ಹರ ಕೇಳೀ ವಿಷದಿಂದೆ ನರ್ತಿಸುತುಮಿರ್ದಳ್ ತಾಂ ಸಮಂತಾಂ ಬರು॥
ತ್ತಿರೆ ಕಂಡಂದು ಪಸಾಯಮಂ ಜಲಧರಂ ಕೂರ್ತೀವ ಮುಕ್ತಾಳಿವೋಲ್।
ಕರಕಂಗಳ್ ಪಿರಿದುಂ ಧರಾ ತಳದೊಳಿಂತಲ್ಲೊಕ್ಕವೆತ್ತಿತ್ತಲುಂ ॥೨೪॥

ಚಂ|| ತರಳ ತಟಿದ್ವಿಲೋಚನೆ ಸಮುದ್ಗತ ವಜ್ರ ನಿನಾದ ಸಾದೆ ವಿ।
ಸ್ಫುರಿತ ಬೃಹತ್ಪಯೋಧರ ಪಯೋಧರೆ ತತ್ಕರಕೋರು ಹಾರೆ ಕ॥
ರ್ಬುರ ಘನಕಾಂತಿ ಕಾಂತ ಕಬರೀ [4]ಭರೆ ಮಾರುತ ಯಾನ ಯಾನೆ ಭಾ।
ಸುರ ಸುರಚಾಪ ಚಿತ್ರವಸನಾವೃತೆ ನೀರದ ಲಕ್ಷ್ಮಿ ರಾಜಿಪಳ್ ॥೨೫॥

ಕಂ|| ಪನಿತುವು ಮುಂಗಾರೊಳ್ [5]ಬ।
ಲ್ವನಿಗಳ್ ಬಿಱುವನಿಗಳೊಂದೆವನಿಗಳ್ ತಂದ॥
ಲ್ವನಿಗಳ್ ಬಿಡುವನಿಗಳ್ ಸರಿ॥
ವನಿಗಳ್ ಪಿಸಿಪಿಸಿಪಿಸಿ ತೀಡುತುಂ ಮುಂಬನಿಗಳ್ ॥೨೬॥

ಚಂ|| ಘುಡುಘುಡಿಸುತ್ತೆ ಗರ್ಜಿಸಿ ಪೊವಟ್ಟು ಪಿಡಿಲ್ದನಿ[6]ವೊಯ್ಲ್ದನಿಂ ಪುಗಿ।
ಲ್ವಿಡದೊಡೆದತ್ತು [7]ತಳ್ತ ಘನ ಮಂಡಲಮೆಂದೆನೆ ವಾರಿ ಧಾರೆಗಳ್॥
ಗಡಣಿಸಿ ಭೋರೆನುತ್ತಮಿರಳಾಕೃತಿಯಿಂ ಸುರಿಯುತ್ತುಮಿರ್ದುದಿಂ।
ತೆಡೆವಿಡದಾಗಳಂತೆ ವಸುಧಾ ತಳಮರ್ಣವ ರೂಪಮುಪ್ಪಿನಂ ॥೨೭॥

1. ಮುನ್ನಗು. 2. ಮಿಂತು. 3. ಪೀರ್ದುದೇಂ. 4. ಭರಮಾರತ. 5. ಬಲುವನಿ.
6. ವೊಯ್ಲ್ದನಿಂಪುನಿ. 7. ತಳ್ತು.

ಮ॥ಸ್ರ॥ ಜಳಭೃಜ್ಜ್ಯಾತೋಗ್ರ ವಜ್ರಧ್ವನಿಮಯಮೆನಸುಂ ಲೋಕಮಾಲೋಕ ದಿಕ್ಸಂ।
ಕುಳ ಶಂಕಾದತ್ತ ಶಂಪಾ ನಿವಹಮಯಮಣಂ ಮೇಘಮಾ ಮೇಘ ಮಾಲಾ॥
ಗಳಿತೋದಗ್ರಾಂಬುಧಾರಾಸಮುದಯಮಯಮೂರ್ಧ್ವಾಂತರಾಳಂ ತದೀಯಾ।
[1]ಕುಳ ತೋಯಾಸಾರದುರ್ಬಿಂ ಬುದು ಬುದು ಭರಿತಾಂಭೋಮಯಂ ಭೂಮಿ
[ಯೆಲ್ಲಂ ॥೨೮॥

ಕಂ॥ ಘೋರನೆ ತಳ್ಪೊಯ್ದು ಪಯೋ।
ಧಾರಾ ರುತಿಯಿಂ ಪೊದಟ್ಟು ಬೀಸುವ ಜಂಝೂ॥
ಮಾರುತ ರುತಿಯಿಂ ಭುವನಮು।
ದೋರಂತಿರೆ ಕಿವುಡುವಟ್ಟುದಾ ಸರಿವಱಿಯೊಳ್ ॥೨೯॥

ಮ॥ಸ್ರ॥ ಜಳವಲ್ಲೀ ಜಾಳದಿಂ ಕೀಲಿಸಿದ ಭುವನಮೋ ತಾಸಿದೆಂಬಂತೆ ಮೇಘಾ।
ವಳಿಯಿಂದೋರಂದದಿಂ ಘೋರನೆ ಸುರಿವ ನಿರಸ್ತೋಚ್ಚಳದ್ವಾರಿ ಧಾರಾ॥
ವಳಿ ಸೋರ್ವಾ ವಾರಿಧಾರಾವಳಿಯಿನಿರದೆ ಮುಂಬಾಯ್ವ ವಾರಿ ಪ್ರವಾಹಾ।
ವಳಿಯಾ ವಾರಿಪ್ರವಾಹಾವಳಿಯಿನಿಳೆ ಪಯೋರೂಪಮಾದತ್ತದೆತ್ತಂ ॥೩೦॥

ಚಂ॥ ಪರಿವ ಜಲ ಪ್ರವಾಹ ಕುಲದಿಂ ನೆಱೆದಚ್ಚರಿಯಾಗೆ ಭೂಧರೋ।
ತ್ಕರಮಿರದೆಯ್ದೆ ಬೇರ್ಕೊರೆದಡಂಗೆಡೆಯುತ್ತಿರೆ ಪೆರ್ಮರಂಗಳು॥
ರ್ವರೆಯಘಮರ್ಷಣ ಕ್ರಿಯೆಯನಾಂತುದು ನಾಡೆಯುಮೆಂಬಿನಂ ಕರಂ।
ಸುರಿದುದು ಘೋರೆನುತ್ತೊಗೆದ ಕಾರ ಮುಗಿಲ್ ಮಱಿಯಂ ನಿರಂತರಂ ॥೩೧॥

ಕಂ॥ ಇಳೆಯಂ ಕೊಂಡಸುರಂ ಬಱಿ।
ನಿಳಯಕ್ಕಿೞಿದಂದಿನಂದಮಂ ನೆನೆಯಿಸಿದ॥
ತ್ತೆಳಗಾರ ಮುಗಿಲ್ ಕಱಿದಾ॥
ಮಱೆವೊನಲುರ್ಬಿದ [2]ವಿಗುರ್ವಿನಿಂ ಭೂಭುವನಂ ॥೩೨॥

ಆ ಮೇಘಕಾಲಮುಂ ಭಾಸುರ ವಿಜಯ ರಣಾಂಗಣದಂತೆ ನೀಲಕಂಠ ತಾಂಡವಾಡಂಬರಮುಂ ಲೋಪಾ[3]ಮುದ್ರಾ [ವಿವಾಹ ಗೇಹ] ದಂತೆ ಕುಟಜ ಪ್ರಭಾವೋಪಚಿತ ವಿಭ್ರಾಜಿತಮುಂ ನವ ಗರ್ಭಾಂಗನಾ ವಿಭ್ರಮದಂತೆ ಕಾಳಿಮ ಪಯೋಧರಾಸ್ಯ ರಮಣೀಯಮುಂ ಸಂಚಾರಿಭಾವ ಸಮಿತಿಯಂತೆ ಸಮುಪೇತ ಜಡ ವೃತ್ತಿಯುಂ ಸತ್ತ್ವಮಯ ಸ್ವಾಂತನಂತೆ ಸಮುತ್ಸಾರಿತ ರಜೋವೃತ್ತಿಯುಂ

1. ತಳ. 2. ವಿಗುರ್ವಿನಂ. 3. ಮುದ್ರ.

ಶತಮಖಾಶನಿ ದಂಡದಂತೆ ನಿರಂತರ ಧಾರಾಭಿರಂಜಿತಮುಂ [1]ಶೈವಿ ಪ್ರಕರದಂತೆ ಕರಕ ಶೋಭಾಕರಮುಂ ನೀರೇಜನಾಭನಂತಭಿವರ್ಧಿತಾರ್ಜುನಮುಂ ವಿಶಸನಾವಳಿಯಂತೆ ವಿಜೃಂಭಿತ ವಾಹಿನೀಕಮುಂ ತೂಣೀರ ತುಂಡದಂತೆ ಶರೋತ್ಕೀರ್ಣಮುಮಾಗಿರ್ಪುದಂತುಮಲ್ಲದೆಯುಂ—

ಕಂ॥ ಕಮನ ಪ್ರಸನ್ನ ಕೃತ ಕಕು।
ಭಮಿದೆನಿಸಿಯುಮಪ್ರಸನ್ನ ಕೃತ ಕಕುಭಂ ತಾಂ ॥
[2]ಕಮಲಾಭಿವೃದ್ಧಿವೆತ್ತುಂ।
ಕಮಲೋತ್ಸವ ಕಾರಿಯಲ್ತು ಜಲಧರ ಕಾಲಂ ॥೩೩॥

ಚಂ॥ ತೊಡರ್ದ ತಟತ್ಪ್ರಭಾ ಹತಿಗೆ ಕಪ್ಪೞಿದತ್ತೆನೆ ಮೇಘ ಮಾಲೆ ಬೆ।
ಳ್ಪಡರ್ದುದು ತಾಂ ಕ್ಷಣಾಂಶುವೆನಿಸಿರ್ಪುದು ತಪ್ಪದೆನಲ್ಕೆ ಮಿಂಚು ಮೆ ॥
ಯ್ಯಡಗಿದುದವ್ಯವಸ್ಥನ ಮನಃಪ್ರಿಯದಂತಿರೆ ಪೋದುದಾಗಳಂ।
ತೆಡೆವಿಡದಿರ್ದ ಶಕ್ರಧನುವಾ ಬಡಹಂ ಬರೆ ಮೇಘ ಕಾಲದೊಳ್ ॥೩೪॥

ಮ॥ಸ್ರ॥ ಬಡಹಂಕೈಕೊಂಡುದುರ್ವೀತಳಮದುನೆಱುಜೋಗಿರ್ದುವೆಟ್ಟಲ್ಕೆಬಲ್ಪೊಂ।
ದೆಡೆಯಿಲ್ಲೆಂಬಂತೆ [3]ಪಂಕಂ ಮಸಗೆ ನೆನೆದು ನೀರ್ವಾಯುತುಂನಾಡೆಯುಂ ಬೇ ॥
ಗೆಡೆದತ್ತಂ ಬೆಟ್ಟುಗಳ್ ಕುಕ್ಕುರಿಸೆ ತಳರದಲ್ಲಲ್ಲಿ [4]ತಮ್ಮುಳ್ಳಕಾಲಿಂ।
ಬಿಡೆ ಕೀಳಲ್ಕಾಱದಿರ್ದಂತಿರೆ ಮೃಗನಿಕರಂಕೋಡುತುಂಕೂಡೆಕಾಡೊಳ್ ॥೩೫॥

ಚಂ॥ ಎಲೆಗಳೞುಂಬಿನೊಳ್ ಮರದ ತೂಱಲುಗೊಂಬಿನ ನೀಡ ನೀಡದೊಳ್।
ತೊಲಗದೆ ನಿಂದಣಂ ನಡುಗುತುಂ ತನು ಕೂಡೆ ಕುನುಂಗೆ ಕಂಠ ಕಂ।
ದಲ ಭರ[5]ಮಟ್ಟಿವೋಲ್ ಕುಸಿದು ಪಕ್ಷಿಗಳರ್ದುವೆಱಂಕೆ[6]ಯುಗ್ರದಿಂ।
ಜಲ ಲವ ಬಿಂದುಗಳ್ ಸುರಿಯೆ ಬೇರ್ಪಡಪಂಬಿಡೆ ಸೋರ್ವಗುರ್ವಿನೊಳ್ ॥೩೬॥

ಜನವನಿತುಂ ವಿಶೀರ್ಣ ವದನೋತ್ಕರಮಾಗಿ ನವಾರ್ದ್ರ ವಸ್ತ್ರ ವೇ।
ಷ್ಟನದಿನುಪೇತ ಕಂಪನದಿನುದ್ಗತ ರೋಮ ವಿಕಾರ ಗಾತ್ರದಿಂ ॥
ಜನಿತ ಮನೋನಿರೋಧದಿನನುದ್ಯಮದಿಂ ಮರವಟ್ಟಿರಲ್ಕೆ ಸೀ।
ರ್ಪನಿವಡಪಂ ಪೊದಬ್ದಿ ಮಸಗಿತ್ತು ತುಷಾರದ ತುಂತುಱುಂಬಿನಂ ॥೩೭॥

1. ಶೈವಿ. 2. ಕಮಲಾನಿ. 3. ಕಂಪಲ್ಮಸಗೆ. 4. ತಂಮುಳ ಕಾಲಂ. 5. ದಬ್ಬಿ.
6. ಯುಗ್ರ.

ಚಂ॥ ತನಿವಡಹಕ್ಕೆ ಕೋಡಿ ತನುವೊರ್ಬುಳಿವಂದು ಕೊರಲ್ ಕುನುಂಗಿ ಮೇ।
ಪಿನ ಪುದಿದಿಚ್ಛೆಯಚ್ಚುಱಿದು ಕರ್ಣಮೆಟಲ್ದು ಕರಂ [1]ಬಟಲ್ದು ಕಂ॥
ಪನಮೆಡೆಗೊಂಡು ಕಿಟ್ಟಿಸಿಱ ನೀಳ್ದ ನವಿರ್ಗೊನೆಯಿಂದೆ ತಳ್ತು[2]ಕ।
ಣ್ಬನಿವಿಡುತುಂ ಮೃಗ ಪ್ರಕರಮಿರ್ದುದು ಕಾನನದೊಂದು ನಾನಲೊಳ್ ॥೩೮॥

ಮ॥ಸ್ರ॥ ನಲವಿಂದಂ ಮೇದು ಮೇಲ್ವುಲ್ಗಳನೊದವಿ ಕಡಲ್ವಾಯ್ವಪಾರಾಂಬುವಂ[3]ಪ।
ಲ್ವಲಮಂ ಪೊಕ್ಕೀಂಟಿ ಮೆಯ್ಯಿಂದಿೞಿದು[4]ಪುದಿದಿರಲ್ ಪಿಣ್ಣೆನಲ್ ಕೊರ್ಬಿಪಾಲ್ಗೆ॥
ಚ್ಚಲಬಿಣ್ಪಿಂಪಾಯ್ದು ಮೆಲ್ಕೊತ್ತುತುಮಿಳೆಯ ಪೊನಲ್ಗೆಯ್ದೆ ರೋಮಂಥಫೇನಾ।
ವಳಿ ಗಂಗಾಶ್ರೀಯ ಸೊಂಪಂ ಕುಡುತಿರೆ ಮಹಿಷೀವೃಂದಮಿರ್ದತ್ತದೆತ್ತಂ ॥೩೯॥

ಕಂ॥ ಪಗಲಿರುಳ್ಗಳ ಭೇದಂ ನೆ।
ಟ್ಟಗೆ ಕಟ್ಟತೀ ಭುವನ ಗರ್ಭ ಕುಹರಂ ತಾನಾ॥
ವಗಮಿಡಿದಡಸಿದ ತುಂತುಱ।
ಹಗವಮಿಪೆಸಿಸಿದುದು ಬಿಡದ ಬಡಹದ [5]ಕೊಬ್ಬಿಂ ॥೪೦॥

ಮ॥ ಜಳವಾಗುಳ್ಳವಮಿಲ್ಲೆನಲ್ಕೆಱೆ[3]ದು ಮೇಘಶ್ರೇಣಿ ಮತ್ತಂ ಪಯಃ।
ಕುಳಮಂ ವಾರಿಧಿಯೊಳ್ ತರಲ್ ತಡೆಯದಾದಂ ಪೋದುದೆಂಬಂದದಿಂ॥
ಮಳೆಗಾಲಂ ಪೆಱಪಿಂಗೆ ಬಂದುದು ಶರತ್ಕಾಲಂ ಲಸತ್ಕುಟ್ಮಲಾ।
ಕುಳ ರೋಮಾಂಚದ ಸಾಲಸೆತ್ತುತುಮುದಂಚನ್ಮಾ[6]ಲತೀ ಗಾತ್ರದೊಳ್ ॥೪೧॥

ಬರೆ ವಿಖ್ಯಾತ ಶರದ್ಭುಜಂಗನವನೊಳ್ ತಾಂ ಕೂಡುವೌತ್ಸುಕ್ಯದಿಂ।
ಪರಿಮುಕ್ತಾಂಬುದ ವಸ್ತ್ರೆಯಾದಳೊ ಧರಾಳೀ ವಕ್ತ್ರಮಂ ವೀಕ್ಷಿಪಾ॥
ತುರದಿಂ ವೇಷ್ಟಿತ ಕಂದ ಕಾಂಡಪಟಮಂ ನೂಂಕಿರ್ದಳೋ ವ್ಯೋಮ ಸೌಂ।
ದರಿಯೆಂಬಂತೆ ಪಳಚ್ಚನಾಯ್ತು ಗಗನಂ ಮೇಘವ್ರಜಂ ಪೋಗೆಯುಂ ॥೪೨॥

ಕಂ॥ ಇರದೆ [7]ಪರುಷಾಬ್ದ ಕುಲವೋ।
ಸರಿಸಲ್ಕಣ್ಬಡೆದವೋಲ್ ಕರಂ ಕಂಡೆಯ್ತಂ॥
ದು ರಥಾಂಗವೊಂದಿತಾ ಸುರ।
ತ ರಸದ ಬಿಂದುದ್ವಯಂ ಪಳಂಚಿದ ತೆಱದಿಂ ॥೪೩॥

---

1. ಗಳಲ್ದು. 2. ತಣ್ಬನಿ. 3. ತಂಮ್ಮಲಹಿಂ. 4. ಪುದಿವೆರಳ್ಪೆಣ್ಣೆನಲ್.
5. ತಬ್ಬಿಂ. 6. ತಲೀ. 7. ವರುಷಾ.

ಚಂ॥ ವಿಲಸಿತಮಪ್ಪಲಂಕರಣ ಶಾಸ್ತ್ರದವೋಲ್ ದೆಸೆಗಳ್ ಪ್ರಸನ್ನಮಂ।
ತಳೆದು ಪೊದಟ್ಟುದಾ ರುಚಕ ಭೂಷೆಯವೋಲ್ ನೆಗೆಗೊಂಡು ಕಂಠದೊಳ್॥
ಪೊಳೆವ ಪಯಃ ಪ್ರವಾಹಮಯಮಾಯ್ತು ನದೀ ತತಿ ಸತ್ಕವೀಂದ್ರನು।
ಜ್ಜ್ವಳ ಕವಿತಾಳಿವೋಲ್ ಮೃದುಪದ ನ್ಯಸನೋಚಿತಮಾಯ್ತಿಳಾತಳಂ ॥೪೪॥

ಕಂ॥ ವರ ಚಂದನ ಚರ್ಚಾ ಪರಿ।
ಕರಮಪ್ಪ ಮನೋಜ ಕುಂಭಿ [ಕುಂಭಂ]ಗಳವೋಲ್॥
ನೆರೆವೆಳ್ಪಿಂ ಪುದಿದು ಮನೋ।
ಹರವಾಯ್ತುವು ತೆಱೆದು ನದಿಯ ಪುಳಿನ[1]ತಲಂಗಳ್ ॥೪೫॥

ವನರುಹ ಷಂಡದ ವಾರಿಯ।
ತನಿಗೊರ್ಬುಗೆ ತೊಲಗಿ ತಿಳಿಯೆ ತತ್ಪದದೊಳ್ ತಾ॥
ಮಿನ ಮುಖ ವೀಕ್ಷಾ[2]ತುರತೆಯಿ।
ನೆನಸುಂ ನಿಮಿರ್ದಂತೆ ತೋಱದುವು ಜಲಜಂಗಳ್ ॥೪೬॥

ಉ॥ ಜಾತಿ ವಿಳಾಸವೊಪ್ಪೆ ನಡೆತಂದನುದಗ್ರ ಶರನ್ಮಹೀಶನೆಂ।
ದಾತತ ಲೀಲೆಯಿಂ ಗಗನ ಲಕ್ಷ್ಮಿಗೆ ಪೇಟಿಲಡುರ್ತು ನೀಳ್ದುದಾ॥
ಖ್ಯಾತಿಯ ದುಗ್ಧವಾರಿನಿಧಿಯೆಂಬಿನಮುಂಬರಮಂ ಪೊದಟ್ಟು ಶು।
ಭ್ರಾತುಳ ಶೋಭೆಯಿಂದೊಗೆದುದಾಗಳೆ ಶಾರದ ನೀರದೋತ್ಕರಂ ॥೪೭॥

ಶಾ॥ ಹೇಮಂತಂ [3]ಬರಲಿರ್ದನೆಂಬ ಭಯದಿಂದೆಟ್ಟಾದ [4]ಶರನ್ನೀರದ।
ಸ್ತೋಮಮಂ ಪೋ ಬರುತಿರ್ದುದೀಗಳೆನಲುದ್ಯನ್ಮಾನಸ ಸ್ಥಾನದಿಂ॥
ಶಾವೆಟ್ಟಿಂದು ಮರಾಳ ಜಾಲಮೆನಸುಂ ಪೊರ್ದಿತ್ತು ಪುಂಡ್ರಾಂಬುಜೋ।
ದ್ದಾಮ ಶ್ರೀಯ ವಿಳಾಸಮಂ ದ್ವಿಗುಣಿಸುತ್ತಬ್ಜಾಕರ ಶ್ರೇಣಿಯೊಳ್ ॥೪೮॥

ಕಂ॥ ತಾರೆಗಳ ಬಳಗವವನಿಗೆ।
ಬೇರಿಟ್ಟಯುತ್ತಿರ್ದುದೆಂಬಿನಂ ಬೆಳ್ಸರಿಗಳ್॥
ಭೋರೆನೆ ಸುರಿದುವು ಶಾರದ॥
ನೀರದದಿಂ ತಿರುಗಿ ತೆಱ ತೆಱಂಬೊಳೆಯುತ್ತುಂ ॥೪೯॥

1. ಕರಂಗಳ್. 2. ತುರತೆಯ 3. ಬರಮಿರ್ದು. 4. ಸರಂ ನೀ.

ಮಿಸುಪಾಗಸವೆಂಬರ್ಣವ ।
ದಸದಳದೌರ್ವಾನಳ ಪ್ರಭಾ[1]ವಿಳ ಪಾಳೀ ॥
ನ ಸಮಾಜಮಿದೆನೆ ಮಿಗೆ ಸೊಗ ।
ಯಿಸಿತು ಶರತ್ಸಮಯದೆಸೆವ ಬಿಸಿಲುಂ ಮಱೆಯುಂ ॥೫೦॥

ಮ॥ ವಿಳಸನ್ಮೌಕ್ತಿಕ ಯುಕ್ತದಿಂ ಮೊಗೆದು ಮುನ್ನಂ ವಾರ್ಧಿಯೊಳ್ ತಂದ [2]ತ ।
ಜ್ಜಳಮಂ ತಾಂ ನೆಱೆ ಧಾತ್ರಿಯೊಳ್ ಕಱೆದು ಮತ್ತಂ ತತ್ಪಯೋದವ್ರಜಂ ।
ಬಳಿಯೊಳ್ ಕಂಗೊಳಿಪಂದದಿಂದೆ ಕಱೆಯುತ್ತಿರ್ದಪ್ಪುದಾ [3]ಶುಕ್ತಿಜಂ ॥
ಗಳನೆಂಬಂತೆ ಸಮಂತುಸೋರ್ದುವುಪೊದಱ್ದೋರಂತೆವಾರ್ಬಿಂದುಗಳ್ ॥೫೧॥

ಕಂ॥ ಶರದಭ್ರಮೆಂಬ ಶುಭ್ರಾಂ ।
ಬುರುಹ ಮೃಣಾಳಂಗಳೆನಿಸಿ ಕಣ್ಗೊಳಿಸುತ್ತಂ ॥
ಸುರಿದುವು ನಿರಂತರಂ ಬೆ ।
ಳ್ಸರಿಗಳ್ ಸಂಗಳಿಸಿ ವಿಪುಳ ವಿಪುಳಾಂತರದೊಳ್ ॥೫೨॥

ಇಂತೆಸೆವ ಶರತ್ಸಮಯಾನಂತರದೊಳ್ ವಿಜಯಾವತಿ ಮಹಾದೇವಿ ಪರಿಪೂರ್ಣ ಗರ್ಭಿಣಿಯಾಗಿರ್ಪುದುಮಾಗಳ್—

ಕಂ॥ ಉದಯಿಪ ನೃಪ ತನಯಂ ತಾಂ ।
ಸದಮಳ ಹೃದಯಂ ದಲೆಂದು ನೆಱೆ ಸೂಚಿಸುವಂ ॥
ದದಿನುತ್ಸಾರಿತಮಾದುದು ।
[4]ಪುದಿದ ಸರೋಜಂ ಸರೋ ನಿಕಾಯದ ತೋಯಂ ॥೫೩॥

ಜನಿಯಿಪ ತದೀಯ ನೃಪ ತನ ।
ಯನ ತೇಜಮಿದೆನಗೆ ಮಿಗಿಲೆನುತ್ತಂ ಬಲವ ॥
ರ್ಪಿನಿತನಭಿನಯಿಸುವಂದದಿ ।
ನನಲಂ ಬಲಸುಬೞದು ನೆಗೆದುದೆಲ್ಲೆಡೆಗಳೊಳಂ ॥೫೪॥

ಅನುಪಮ ಬಾಹಾಬಲ ಭೀ ।
ಮನೆ ಪುಟ್ಟುವನಾತ[5]ನೆಂತುಮನ್ಯತ್ಸುತನೆಂ ॥

1. ವಳಿ. 2. ಕ॥ಜ್ಜಳ. 3. ಸೂಕ್ತಿ. 4. ಪುರದ. 5. ನೆಂದು ಮನ್ಮತ್ಸುತ.

ಬ ನವೋತ್ಸವ ಭರಮಾದಂ।
ತನಿಲಂ ತೀಡಿದುದು ನಾಡೆ ಮಂದತೆಯಿಂದಂ ॥೫೫॥

ಎಸೆವ ದರಹಾಸ ಲಕ್ಷ್ಮೀ।
ಲಸಿತಾಸ್ಪದಮುದಯಿಸಿರ್ಪ ಕಾನನಮೆಂದೀ॥
ವಸುಧೆಗಱಿಪುವವೊಲೆನಸುಂ।
ಪ್ರಸನ್ನಮಾದುದು ಪೊದಟ್ದು ದಿಙ್ಮುಖ ನಿಕರಂ ॥೫೬॥

ಘನ ಸತ್ತ್ವನಲ್ತೆ ಸಂಭವಿ।
ಪ ನೃಪಾತ್ಮಜನಾತನೀ ಧರಿತ್ರಿಗೆ ಪತಿಯ॥
ಪ್ಪನೆನುತುಮುಡಗಿತು ರಜವೆಂ।
ದೆನಲಪಗತ ರೇಣು ಜಾಲವಾಯ್ತವನಿ ತಳಂ ॥೫೭॥

ಸಂದಯೆಮಲ್ತುದಯಿಪ ನೃಪ।
ನಂದನ[ನೀ ಕು]ವಲಯಾಧಿನಾಥಂ ಕಮಲಾ॥
ನಂದಕರನೆಂದು ಸೂಚಿಸು।
ವಂದದಿನಲರ್ದತ್ತು ನೈದಿಲುಂ ನೀರಜಮುಂ ॥೫೮॥

ಕಂ॥ ಎನೆ ತಾಮಾಗಳದೊರ್ಮ್ಮೆಯೆ।
ಜನಿಯಿಸಿದುದು [ನಾಡೆ] ಕೂಡೆಯುಂ ನಿಖಿಳ ಸುಹೃ॥
ಜ್ಜನದ ಪರಿಜನದ ಪುರಜನ।
ದ ನಿಜಾಂತರ್ಮುಖದೊಳತುಳ ಹರ್ಷೋತ್ಕರ್ಷಂ ॥೫೯॥

ಚಂ॥ ರವಿ ನವ ರಾಗದಿಂದಗುಣಮಾದ ನಭೋತ್ಕರಮುತ್ಕರೋಗ್ರಮಾ।
ಯ್ತವಿರಳ ಹರ್ಷದಿಂ ಹರಿಗಣಂ ಗುಡಿಗಟ್ಟಿದುದಾಸ್ಪದಂಗಳೊ॥
ಪ್ಪುವ ಮಣಿದೀಪಿಕಾಳಿ ಕುಡಿಯಿಟ್ಟುದನಾಹತದಿಂ ಸಮಂತು ಸಂ॥
ಭವಿಸಿದುದೆಯ್ದೆ ದೇವ ಭವನಂಗಳ ಮಂಗಳ ವಾದ್ಯ ನಿಸ್ಸ್ವನಂ ॥೬೦॥

ಮ॥ ಎನಿತಾನುಂ ಶುಭಚಿಹ್ನ ಕೋಟಿ ವಿದಿತಂಬೆತ್ತೆಯ್ದೆ ಪುಟ್ಟುತ್ತುಮಿ।
ರ್ಪ್ಪಿನಮೆಲ್ಲಾ ಗ್ರಹಮುಂ ಶುಭಸ್ಥಿತಿಯೊಳೋರಂತಿರ್ಪ್ಪ ತತ್ಕಾಲ ಸಂ।

ಜನಿತೋತ್ಕೃಷ್ಟ ಮುಹೂರ್ತದೊಳ್ [1]ಬೆಸಲೆಯಾದಳ್ ದೇವಿ [ಶೋಭಾವಿನೂ ।
ತನನಂ ನಾಡೆ] ಜಗತ್ಪ್ರಮೋದ ಲತಿಕಾ ಸತ್ಕಂದನಂ ಕಂದನಂ ॥೬೧॥

ಉ॥ ಉತ್ತಮ ಮಪ್ಪುದಂಚಿತ ಮುಹೂರ್ತದ ದುಂದುಭಿ ವಾದ್ಯ ನಾದಮು ।
ಣ್ಮುತ್ತಿರೆ ತನ್ಮುಹೂರ್ತಿಕರ ಮಂಗಳ ನಿಸ್ವನಮತ್ಯುದಗ್ರಮಾ ॥
ಗುತ್ತಿರೆ ಸುಪ್ರಮೋದದೊದವಿಂ ಕುಲವೃದ್ಧ ವಧೂಟಿಯರ್ಕಳಾ ।
ಡುತ್ತಿರೆ ಪೆತ್ತ[ಳಾಗ]ಳಭಿನೂತನ ಭಾನುವೆನಿಪ್ಪ ಸೂನುವಂ ॥೬೨॥

ಆಗಳ್ ನಿಜ ರಾಜಲಕ್ಷ್ಮೀ ನಿಲಯಕ್ಕೆ ಮಂಗಳ ಮಣಿದೀಪ ಕಳಿಕೆ [ಯಂ ಪಡೆದಂತೆ]ಯುಂ ಸಕಲ ಸಾಮ್ರಾಜ್ಯ ರಮ್ಯ ಹರ್ಮ್ಯಕ್ಕೆ ರತ್ನಕಲಶಮಂ ಪಡೆದಂತೆಯುಂ ಮಹದೈಶ್ವರ್ಯ [2]ಕಮಲಕ್ಕೆ ದಿವಸಕರ ತೇಜಮಂ ಪಡೆದಂತೆಯುಂ ಪ್ರಬಲ ಜ್ಞಾನ ಲತೆಗೆ ಲಲಿ[3]ತ ಕುಸುಮಮಂ ಪಡದಂತೆಯುಂ ಶುಭ ಲಕ್ಷಣ ವ್ರಜಕೆ ಬೀಡುದಾಣಮಂ ಪಡೆದಂತೆಯುಂ ಸತ್ಕಳಾ [4]ನಿವಹಕ್ಕೆ ನಿಕೇತನಮಂ ಪಡೆದಂತೆಯುಂ ಕುಮಾರನಂ ಪಡೆವುದುಂ ಹರ್ಷವರ್ಧನೆಯಾಗಳ್ ಲೀಲೆಯಿಂದೋಲಗಂಗೊಟ್ಟಿರ್ದ ನರೇಂದ್ರ ಮುಕುಂದಂಗೆ ಪೋಗಿ ಪೊಡವಟ್ಟು—

ಮ॥ ಎಲೆ ಭೂಪಾಲಕ ಚಕ್ರಿ ದೇವಿ ಪಡೆದಳ್ ಭೂಭಾನುವಂ ಸೂನುವಂ ।
ಲಲಿತಾಗಣ್ಯ ವರೇಣ್ಯ ಲಕ್ಷಣ ಮಣಿವ್ರಾತೌಕನಂ ತೋಕನಂ ॥
ಜಲಧಿ ವ್ಯಾವೃತ ಕಾಶ್ಯಪೀ ಜನ ಮನೋಜ್ಞಾನಂದನಂ ಕಂದನಂ ।
ವಿಲಸನ್ಮೋಹನ ರೂಪ ವೈಭವ ಜಿತ ಶ್ರೀಪುತ್ರನಂ ಪುತ್ರನಂ ॥೬೩॥

ಮ॥ ತನಯಂ ಪುಟ್ಟಿದನೆಂಬ ದೂತಿಯ ವಚಃಪೀಯೂಷ ಪೂರಂ ನರೇಂ ।
ದ್ರನ ಕರ್ಣದ್ವಯ ನಾಳಮಂ ಪುಗಲೊಡಂ ಚಿತ್ತೋತ್ತಮ ಕ್ಷೋಣಿಯೊಳ್ ।
ಕೊನರೆಟ್ಟುರ್ಬಿ ಪೊದಟ್ಟ ಹರ್ಷ ಲತಿಕೋದ್ಯತ್ಕೋರಕಾನೀಕಮೆಂ ।
ದೆನೆ ತಳ್ತಿರ್ದ್ದು ವಿರಾಜಿಸಿತ್ತು ನೆಗೆದಾ ರೋಮೋದ್ಗಮಂ ಗಾತ್ರದೊಳ್ ॥೬೪॥

ಕಂ॥ ತನಿವೆರ್ಚಿದುತ್ಸವಾಮೃತ ।
ವನಧಿಯೊಳೋಲಾಡುತಿರ್ದ ನೃಪಚಕ್ರಿ ಮನೋ ॥
ಜನಿತ ಹರುಷಾಶ್ರುಮಯ ಲೋ ।
ಚನದಿಂದಾಜ್ಞಾಬಳಾಸ್ಯಮಂ ವೀಕ್ಷಿಸಿದಂ ॥೬೫॥

1. ಪ್ರಸವೆ. 2. ವರಿಯುತರ. 3. ತಾಲಕುಮಾರನಂ. 4. ಸಿನದ.

ಪೊಡವೀಶನಿಂದೆ ಸಾಸಿ।
ರ್ಮಡಿ ಮುದನಾಗಿಯೆ ನಿಜೋತ್ತರೀಯದ ಸೆಱಗಿಂ॥
ಗುಡಿಗಟ್ಟೆ ನಲಿಯುತಿರ್ದಂ।
ಒಡವಂ ಸಿಧಿವಡೆದ ತೆಱದಿನಾ ಮಂತ್ರಿವರಂ ॥೬೬॥

ಇಂತು ನವೀನ ಮಂತ್ರಿವೆರಸು ನರೇಂದ್ರ ಮುಕುಂದಂ ನಂದನ ಮುಖದರ್ಶನೋತ್ಸುಕತೆಯಿಂ ತಳರಲುಜ್ಜುಗಿಸಿದಾ ಸಮಯದೊಳ್

ಮ॥ ಪದೆಪಿಂ ಬಂದೆಲೆ ದೇವ ದೇವಿಗೆ ಕುಮಾರಂ ಪುಟ್ಟಿದುದ್ಯನ್ಮಹೊ।
ರ್ತ್ರದೋಳಿಗಳ್ ಭವದೀಯ ಮಂತ್ರಿ ಮುಕುರ ಪ್ರಜ್ಞಾಬಲಂಗಗ್ರ ಪ॥
ತ್ನಿ ದಲಪ್ಪಗ್ಗದ ಸುಪ್ರಭಾವತಿಗೆ ಪುತ್ರಂ ಪುಟ್ಟಿದಂ ತಾನೆನು।
ತ್ತುದಿತಾನಂದದಿನಿಂತು ಬಿನ್ನವಿಸಿದಂ ಭೂಪಂಗೆ ಚಾರ ದ್ವಿಜಂ ॥೬೭॥

ಉ॥ ಆ ಸತಿ ಸುಪ್ರಭಾವತಿಗೆ ಪುಟ್ಟಿದನುತ್ತಮ ಪುತ್ರನೆಂಬುದಂ।
ಭೂಸುರ ಚಾರನಿಂ ನೆಱೆಯೆ ಕೇಳ್ದರಸಂ ನಿಜ ಪಾರ್ಶ್ವ ವರ್ತಿಯಾ॥
ದಾ ಸಚಿವಾಗ್ರಗಣ್ಯನ ಮುಖಾಬ್ಜಮನೀಕ್ಷಿಸುತುಂ ತನೂಜ ರು॥
ಗ್ಭಾಸುರರಿರ್ವರಾವರೆನಗೆಂಬನುರಾಗಮನಾಗಳೆಯ್ದಿದಂ ॥೬೮॥

ಇಂತು ದ್ವಿಗುಣೀಭೂತ ಮನೋರಾಗನಾಗಿ ಚಾರ ದ್ವಿಜಂಗೆ ಪಸಾಯಮನಿತ್ತು ಪುತ್ರ ಮುಖಾವಲೋಕನದಿಂ ಪ್ರಧಾನಂಬೆರಸೋಲಗದಿಂ ತಳರ್ದು—

ಉ॥ ಇಂದು ಸನಾಥಮಾಯ್ತು ಸಕಳೋರ್ವರೆಯಿಂದು ಮದೀಯ ರಾಜ್ಯವಾ।
ದಂದೊರೆವೆತ್ತು[1]ದಿಂದಖಿಳ ವೈಭವವಲ್ಲಿ ಫಲಾಳಿ ಶೋಭೆಯಿಂ॥
ದೊಂದಿದು[2]ದಿಂತು ಸಂಜನಿಸೆ ಪುತ್ರನನೆಂಡೆನುತುಂ ಸಮುದ್ಭವಾ।
ನಂದದೆ ಸೂತಿಕಾ ನಿವಸನಕ್ಕೆ ನೃಪಂ ನಡೆತಂದನಾ ಕ್ಷಣಂ ॥೬೯॥

ಮ॥ ನಲವಿಂ ನರ್ತಿಪ ವೃದ್ಧಕಾಂತೆಯರುಮಂ ಬಂದೊರ್ಬಿಯೊಳ್ ಕೂಡೆ ಪೂ।
ವಲಿಯಂ ಬಿತ್ತರಿಪಂಗನಾ ತತಿಯುಮಂ ತನ್ಮಂಗಳ ದ್ರ[ವ್ಯ ಸಂ॥
ಕುಲ] ದತ್ತಾತುರ ಯಾನ ವಾಮೆಯರುಮಂ ನೋಡುತ್ತುಮಾನಂದದಿಂ।
ನೆಲೆವೆರ್ಚುತ್ತುಮಿಳೇಶನಿಂತು ಪುಗುತಂದಂ ಸೂತಿಕಾ ಸದ್ಮಮಂ ॥೭೦॥

1. ದಿಂತಖಿಳ. 2. ದಿಂದು ಸಂಭವಿಸಿ.

ಚಂ॥ ಮೊಱಗುವ ಮಂಗಳಾನಕ ನಿನಾದದೆ ತತ್ಸಮಯೋಚಿತ ಕ್ರಿಯಾ ।
ಕಳಿತ ಕುಲಾಂಗನಾ ಕಳಕಳಧ್ವನಿಯಿಂ ವಿಳಸನ್ಮುಹೂರ್ತಿಕಾ ॥
ವಳಿ ಶುಭವಾಕ್ಯಮೋದುವ ಮೃದು ಸ್ವರದಿಂ [1]ವರ ವಾದ್ಯ ವಿಪ್ರ ಸಂ ।
ಕುಳ ವರ ವೇದಮಂತ್ರ ರವದಿಂದೆಸೆದಿರ್ದುದು ಸೂತಿಕಾ ಗೃಹಂ ॥೭೧॥

ಕಂ॥ ಸ್ಮರನುದ್ಭವಿಸಿದಾತನ ।
ಪರಿಜನಮಾಮೆಂದು ಮಹಿಗೆ ಪೇೞ್ವಂತಳಿಗಳ್ ॥
ಮೊರೆದೆಱಗು[2]ತ್ತಿರ್ದುವು ತ ।
ಚ್ಛರಣಾ ಜೀವರ ಬಲಿ ಪ್ರಸೂನಾವಳಿಯೊಳ್ ॥೭೨॥

ಪರಿಯುಕ್ತ ವಜ್ರಿಯಿಂ ಸುರ ।
ಪುರದಂತೆ ವಿಭೂತಿ ಶೋಭೆಯಿಂದಾ ದಿವಿಜೇ ॥
ಶ್ವರನಂತೆ ಕಣ್ಗೆವಂದ ।
ಚ್ಚರಿವೆತ್ತುದು ಸೂತಿಕಾ ನಿವಾಸ ದ್ವಾರಂ ॥೭೩॥

ಕಂದರ್ಪನೆ ಸಂಭವಿಸಿದ ।
ನೆಂದನುಬಂಧಮನೆ ಮೆರೆಯಲಾ ಸಹಕಾರಂ ॥
ಬಂದಿರ್ದುದು ಬಾಗಿಲೊಳೆನೆ ।
ಮಾಂದಳಿರ್ಗಳ ತೋರಣಂ ವಿರಾಜಿಸಿತೆನಸುಂ ॥೭೪॥

ಜನಯಿಸಿದ ಕುಮಾರನ ಜಯ ।
ವನಿತೆಯ ಕಣ್ಬೆಳಗಿದೆನಿಸಿ ತತ್ಪ್ರಸವ ನಿಕೇ ॥
ತನಮಂ ಬಳಸಿರ್ದುದು ಕಾ ।
ಪಿನ ಸುಭಟೋತ್ಖಾತ ಖಡ್ಗಧಾರಾ ದ್ಯುತಿಗಳ್ ॥೭೫॥

ಎನಸುಂ ತದೀಯ ಬಾಲನ ।
ಘನ [3]ತೇಜದಿನೊಡನೆ ತಾನುಮಂಕುರಿಸಿದುದೆಂ ॥
ದೆನೆ ತಂತ್ರ ತೈಲಮಯ ದೀ ।
ಪ ನಿಕಾಯಂ ಕಣ್ಗೆವಂದುದಾ ಮಂದಿರದೊಳ್ ॥೭೬॥

---

1. ಪರಮಾ. 2. ತ್ತಿರ್ದೊಡೆ. 3. ತೇಜಮ.

ಚಂ॥ ಉದಯಿಸಿದೀ ಕುಮಾರನಖಿಳೋರ್ವಿಗದೊರ್ವನೆ ವಲ್ಲಭಂ ಪ್ರತಾ।
ಪದೆ ಪೆಱನಿಲ್ಲೆನುತ್ತೆ ನೆಱೆ ಪೂಣ್ದು ವಿರಾಜಿಪ ರಾಜ್ಯಲಕ್ಷ್ಮಿ ರಾ॥
ಗದೆ ಬೆರಲೆತ್ತಿದಂತೆ ನಿಮಿರ್ದುನ್ನತಿವೆತ್ತ ನವೀನ ಚೀನ ಚೇ।
ಲದ ಗುಡಿ ಕಣ್ಗೆವಂದುದು ತದೀಯ ಗೃಹೋತ್ತಮ ಭೂಮಿಕಾಗ್ರದೊಳ್ ॥೭೭॥

ನಿಱಿಯ ಸೆಱಂಗನೆತ್ತಿ ನಿಜ ನೀವಿಯೊಳುಯ್ದು ತೊಡರ್ಚೆ ಕೆನ್ನೆಯೊಳ್।
ಮಿಱುಪಳಕಾಳಿಯಂ ಸಲೆ ಕೊಡಂಕೆಗೆ ಸಾರ್ಚೆಯುಮೇಱೆ ನೂಂಕಿಯುಂ॥
ನೆಱೆ ಮಣಿ ಕಂಕಣ ದ್ವಿತಯಮಂ ಕರ ಪಲ್ಲವದಿಂದೆ ಮಾಡಿದರ್।
ಮೊಱೆವಿನಮೊಲ್ದು ಬಾಳವತಿಗಂದಭಿಷೇಕಮನಿಂತು ಕಾಂತೆಯರ್ ॥೭೮॥

ಮಿಸುಗುವ ತಮ್ಮ ನುಣ್ದೊಡೆಗಳುಜ್ಜ್ವಲ ಮಜ್ಜನ ಪೀಠಮಾಗಿ ರಾ।
ಜಿಸೆ ಚತುರಂಬುರಾಶಿ ಪರಿವಿಷ್ಟ ಧರಾಧಿಪ ರಾಜ್ಯ ಮಂಗಳಾ॥
ಭಿಷವನ ಮಿಂತಿದೆಂದು ನೆಗಳ್ವಂದದಿನಂದನಿತುಂ ಸಮಂತು ಸಂ।
ತಸದೊಳೆ ಬಾಲಕಂಗೆ ನೆಗಳ್ದರ್ [1]ಜಲ ಸೇಕಮನಿಂತು ಕಾಂತೆಯರ್ ॥೭೯॥

ಕಂ॥ ಉದಯಿಸಿದ ಸುತನೆ ಮನ್ಮಥ।
ನಿದುವೆ ತದೀಯಾಂಗ ಕಾಂತಿ ಕುಲಮೆನೆ ತದ್ಗೇ॥
ಹದೊಳೊದವಿದತ್ತು ರಕ್ಷಾ।
ವಿದಿತ ವಿಧಾನದ ಸುಧೂಪ ಧೂಮ ಶ್ಯಾಮಂ ॥೮೦॥

ಮ॥ ನುತ ಮಂತ್ರೋಪಚಿತಾಖಿಳೌಷಧಿ [2]ಮಿಳದ್ಧಾನ್ಯಾಮ್ಲ ಸಂಸೇಚನೋ।
ತ್ಥಿತ ಕಾಂತಾ ಕರಕಂಕಣಾಳಿಯ ಝುಣತ್ಕಾರಂಗಳಿಂ ಕಾಮಿನೀ॥
ತತಿ ಸಂರಂಭದೆ ಸುತ್ತಿ ಸೂಸುವ ಲಸತ್ಕರ್ಪೂರ [3]ಪಿಷ್ಟಾತಕಾ।
ವೃತದಿಂ ಕಣ್ಗೊಳಿಸುತ್ತುಮಿರ್ದುದು ಕರಂ ತತ್ಸೂತಿಕಾ ಮಂದಿರಂ ॥೮೧॥

ಕಂ॥ ಪದೆಪಿಂ ವಿಜಯಾವತಿಯೊಡ।
ನದು ಪರಿಕರ ಕಾಂತೆಯರ್ಕಳಂ ಪಡೆವಂತಿ॥
ರ್ದುದು ಸುದತಿ ಪ್ರತಿಬಿಂಬಂ।
ಪುದಿದಾಗಳ್ ಮಿಸುಪ ಸೂತಿಕಾ ಮಣಿಭವನಂ ॥೮೨॥

1. ಭಿಷೇ. 2. ಮಿಳದ್ಧಾನಾಮ್ಲ. 3. ಶಿಷ್ಟಾತ.

ಇಂತು ಕಣ್ಗೊಳಿಸಿರ್ದ [ಮಂದ] [1]ಮಂಗಳಾಸ್ಪದಮಾಗಿರ್ದ ಸೂತಿಕಾಗಾರ ದ್ವಾರಕ್ಕೆ ಬಂದು ತದ್ಬಹಿರ್ಭಾಗದೊಳ್ ಭೂವರಂ ವಾರಿತ ಪರಿವಾರಿತನಾದ ಸಮಯದೊಳ್—

ಕಂ ತ್ವರಿತದೊಳೆ ಹರ್ಷವರ್ಧನೆ ।
ಸುರುಚಿರ ಪಿಚುಮಂದ ಪಲ್ಲವೋಪಚಿತದೆ ಬಿ ॥
ತ್ತರಿಪಾರನಾಳ ಜಲದಿಂ ।
ನರನಾಥನ ಚರಣ ಕಮಲಮಂ ಪೂಜಿಸಿದಳ್ ॥೮೩॥

ಚಂ॥ [2]ಹರಿ ಶಿಶು ರಾವ ಪೂರಿತ ಹಿಮಾದ್ರಿ ಗುಹೋದರಮಂ ಸಮಂತು ಕೇ ।
ಸರಿ ಪುಗುತರ್ಪವೋಲೊಗೆದ ಬಾಲಕ ರೋದನ ನಾದಮಾದಮಾ ॥
ವರಿಸಿ ವಿರಾಜಿಸಿಪ್ಪ ಶಶಿಕಾಂತದ ನೂತನ ಸೂತಿಕಾ ಗೃಹೋ ।
ದರಮನೆ ಪೊಕ್ಕನಾಗಳರಸಂ ಸಚಿವಂ ಬೆರಸುಣ್ಮಿದಟ್ಟೆಯಿಂ ॥೮೪॥

ಮ॥ [3]ಅನುರಾಗೋದ್ಭವ ಸಸ್ಯದಂತೆ ವಿಳಸತ್ಸಾಮ್ರಾಜ್ಯ ಲಕ್ಷ್ಮೀ ವಿನೂ ।
ತನ ತೇಜೋಂಕುರದಂತೆ ದೇವಿಯ ವಿಭಾಸ್ವತ್ಪಾರ್ಶ್ವದಲ್ಲಿರ್ದ ಶೋ ॥
ಣ ನವಾಂಶು ಸ್ಥಗಿತಾಂಗ ಬಾಲಕನನಾ ಹರ್ಷಾಶ್ರು ಸಂಮಿಶ್ರ ಲೋ ।
ಚನದಿಂ ಭೋಂಕನೆ ಕಂಡನಾಗಳಿದಿರೊಳ್ ವಿಶ್ವಂಭರೋರ್ವೀಶ್ವರಂ ॥೮೫॥

ಕಂ॥ ಒದವಿದುರು ರಾಜ್ಯಲಕ್ಷ್ಮೀ ।
ಸದನದೊಳುದಯಿಸಿದ ವಿಮಲ ಮಣಿ ದೀಪದವೋಲ್ ॥
ಪುದಿದರುಣ ಕಿರಣಮಯ ಗಾ ।
ತ್ರದ ಬಾಲಕನಂ ನೃಪಾಲಕಾಗ್ರಣಿ ಕಂಡಂ ॥೮೬॥

ಮಿಸುಗುವ ಬೆಳ್ಮುಗಿಲೊಳಗುದ
ಯಿಸುವಿನ ಬಿಂಬದವೊಲೆಸೆವ ದುಗುಲದ ಸೆಜ಼ಗಿಂ ॥
ಮುಸುಕಿದ ಶೋಣಚ್ಛವಿ ರಂ ।
ಜಿಸು[4]ವಂಗದ ಬಾಲನಂ ನೃಪಾಲಂ ಕಂಡಂ ॥೮೭॥

ಮ॥ ಮನಮಾನಂದ ಪಯಃಪಯೋಧಿಯೊಳೆ ತೇಂಕಾಡುತ್ತಿರಲ್ ಸಾಡೆಯುಂ ।
ತನು ಚಂಚತ್ಪುಳಕಾಳಿ ಭಾರದೊಳೆ [ತಾಂ] ತೂಗುತ್ತಿರಲ್ ಚಾರು ಲೋ ॥

1. ಮಂಗಳಮಾಗಿರ್ದ. 2. ಪರಿ. 3. ಅನುರಾಗಂ ಸಸ್ಯಂ. 4. ವಂಗಡ.

ಚನ ಮತ್ಯುತ್ಸವ ಬಾಷ್ಪದೊಳ್ ನೆಱೆ ಕುಳಿರ್ಕೋಡುತ್ತಿರಲ್ ನೋಡುತಿ ।
ರ್ದನಿಳಾವಲ್ಲಭ ಚಕ್ರಿ ಪಾಟಳಿತ ಶೋಭಾ ಗಾತ್ರನಂ ಪುತ್ರನಂ ॥೮೮॥

ಉ॥ ಆ ವಿಳಸತ್ಸಹಸ್ರ ಕರನಂ ಪಡೆದೊಪ್ಪುವ ತತ್ಸುರೇಂದ್ರ ದಿ ।
ಗ್ದೇವತೆಯಂತೆ ಮಂಗಳ ವಿಳಾಸಮನಾಂತರುಣಾಂಶುವಿಂದೆ ಶೋ ॥
ಭಾವಹ ಗಾತ್ರನಂದನ ಸಮನ್ವಿತೆಯಂ ವಿಜಯಾವತೀ ಮಹಾ ।
ದೇವಿಯನಾಗಳೀಕ್ಷಿಸಿದನಾ ನೃಪನಾತ್ತ ಮುದಶ್ರು ನೇತ್ರದಿಂ ॥೮೯॥

ಮ॥ ಜನಿತಾಪೂರ್ವ ಸುಧಾಂಬುವಿಂದಭಿಷವಂಗೆಯ್ವಂತೆಯುಂ ನವ್ಯ ಚಂ ।
ದನದಿಂ ಚರ್ಚಿಸುವಂತೆಯುಂ ದುಗುಲದಂಚಚ್ಚೇಲದಿಂದಾದವಿಂ ॥
ಬಿನೊಳಾಚ್ಛಾದಿಸುವಂತೆಯುಂ ನಯನ ಕಾಂತಿ ಶ್ರೀಯ ತಳ್ಪೊಯ್ಯುತಿ ।
ರ್ಪಿನವಾ ದೇವಿಯುಮಂ ತನೂಭವನುಮಂ ನೋಡುತ್ತುಮಿರ್ದಂ ನೃಪಂ ॥೯೦॥

ಕಂ॥ ನೃಪ ಕಾಂತೆಯ ಕೆಲದೊಳ್ ಶೋ ।
ಭಿಪ ಸುತನಂ ರೂಪ ವಿಜಿತ ಕಮಲಾ ಸುತನಂ ॥
ವಿಪುಳ ಮತಿ ಪ್ರಜ್ಞಾ ಬಲ ।
ನಪರಿಮಿತಾನಂದದಿಂದಮೀಕ್ಷಿಸುತಿರ್ದಂ ॥೯೧॥

ದಿನನಾಥನುದಯಮಂ ನಂ ।
ದನನುದಯುಮುಮೊಂದಿ ನೆಗಟಲಾ ರುಚಿ ಲೋಕ ॥
ಕ್ಕಿನನೀತನೆಂದು ಸಾರ್ದ ।
ತ್ತೆನೆ ತನು ಶೋಣತೆಯಿನೊಪ್ಪಿದುದು ಬಾಲಕನಾ ॥೯೨॥

ಉದನಿಧಿ ಪರೀತ ವಸುಧಾ ।
ಸುದತೀ ಪತಿಯೀತನೆಂದು ನೆಱೆ [1]ಪೇಟ್ವಂತಾ ॥
ದುದು ಸೂತಿಕಾ ಗೃಹಂ ಚೆ ।
ಲ್ವೊದವಿದ ಬಾಲಕ ಗಭೀರ ರೋದನ[2]ದಿಂದಂ ॥೯೩॥

ಅಸಮ ಪ್ರತಾಪವೊಳಗೊಗೆ ।
ದೆಸಕದೆ ತಲೆದೋಱುತಿರ್ಪುದೆನೆ ಮಣಿ ದೀಪಂ ॥

1. ಪೇಳ್ದಂ. 2. ನಾದಂ.

ಮಿಸುಗಿ ಮಿಗೆ ಮಾರ್ಪೊಳೆಯೆ ರಂ ॥
ಜಿಸಿದುದು ಬಾಲಕನ ಗಾತ್ರಮತಿ ವಿಮಳತೆಯಿಂ ॥೯೪॥

ವರ ರಕ್ತಾಚ್ಛಲದಿನಲಂ ।
ಕರಿಸಿದ ಕಜ್ಜಳದ ತಿಲಕಮುಂತಂದು ಕರಂ ॥
ಕುಱುಪಾಗಿರೆ [1]ಕಳೆಯಿಂ ನೆರೆ ।
ದುರುತರ ರಾಕೆಯ ಸುಧಾಂಶುವಂ ಶಿಶು ಪೋಲ್ತಂ ॥೯೫॥

ತನುವಿನರುಣಾಂಶು ನಿವಹದೊ ।
ಳನುಪಮ ನಿಜ ನಯನ ಕಾಂತಿ ಪುದಿದಿರಲಾಗಳ್ ॥
ನೆನೆಯಿಸಿದನೆಸೆದು ಬಾಲಕ ।
ನೆನಸುಂ ಕುಡಿ ಮಿಂಚು ನಿಮಿರ್ದ ಕೆಮ್ಮುಗಿಲಿರವಂ ॥೯೬॥

ಚಕ್ರಧರನೀತನುರ್ವೀ ।
ಚಕ್ರಾಧಿಪನೀತನೆಂದು ಸೂಚಿಪ ತೆಱದಿಂ ॥
ಚಕ್ರಾದಿ ಚಿಹ್ನ[2]ವೊಗೆದ ಕ ।
ರ ಕ್ರಮ ಕಮಲಂಗಳೆಸೆದುವಾ ಬಾಲಕನಾ ॥೯೭॥

ಕಂ॥ ಅತನುವೆನಿಪತನು ಸಲೆ ತ ।
ನ್ನತನುತೆಯಂ ಬಿಟ್ಟು ಪುಟ್ಟಿದಂ ಕಮನೀಯಾ ॥
[3]ಕೃತಿಯಿಂದೆನೆ [ತನುಜನ] ಸ ।
ನ್ನುತಿವೆತ್ತ ಸುರೂಪ ವಿಭವಮೇನತಿಶಯಮೋ ॥೯೮॥

ಉ॥ ಇಂತಭಿವರ್ಣಿಸುತ್ತುಮೆನಸುಂ ಮುದದಿಂ ಪದೆದೀಕ್ಷಿಸುತ್ತುಮೋ ।
ರಂತಿರುತಿರ್ದ ಮಂತ್ರಿಮುಕುರಂ ಬೞಿಕಂ ನೆಱೆ ನಿರ್ನಿಮೇಷ ದೃ ॥
ಕ್ಕಾಂತ ಸರೋಜನಾಗಿ ಸುತನಂ ನೆಱೆ ನೋಡುತುಮಿರ್ಪ ತನ್ಮಹೀ ।
ಕಾಂತ ವರಂಗೆ ಬಿನ್ನವಿಸಿದಂ ಸಮಯೋಚಿತ ಸದ್ವಚಂಗಳಿಂ ॥೯೯॥

ಕಂ॥ ದೇವ ಮುನೀಂದ್ರನ ದಯೆಯಿಂ ।
ದೇವಾನಕಮೊಗೆಯೆ ತನಯನೊಗೆದಂತಿರೆ ಭೂ ॥

1. ಕಳೆಯಂ. 2. ಮೊಗೆದು. 3. ಕೃತಿಯಿನೆ.

ದೇವರ್ಗೆ ಹರ್ಷವೊಗೆಯಲ್ ।
ದೇವರೊಡರ್ಚುವುದು ನಾಮಕರಣೋತ್ಸವಮಂ ॥೧೦೦॥

ಎಂದಿಂತು ಮಂತ್ರಿವರನಾ ।
ನಂದದೆ ಬಿನ್ನವಿಸೆ ಕೇಳ್ದದಂ ಬಗೆಗೊಂಡಾ ॥
ಮಂದಿರದ ಚಂದ್ರ ಶಾಲೆಗೆ ।
ಬಂದಂ ಪದೆಪಿಂದಮಾ ನರೇಂದ್ರ ಮುಕುಂದಂ ॥೧೦೧॥

ಪರಮೋತ್ಸವ ಲಕ್ಷ್ಮಿ ಮನೋಂ ।
ಬುರುಹಾಸನ ಮಸ್ತಕಾಗ್ರ ಮಣಿ ತಾನಾಗು ॥
ತ್ರಿರೆಯುಂ ನೃಪ ಹರಿ ಹೇಮ ।
ಸ್ಫುರಿತಾಸನ ಮಸ್ತಕಾಗ್ರ ಮಣಿ ತಾನಾದಂ ॥೧೦೨॥

ಪುರಮಂ ನಿರುಪಮ ಶೋಭಾ ।
ಕರಮೆನೆ ವಿರಚಿಸುವುದೆಂದು ನಿರವಿಸಿ ತದನಂ ॥
ತರದೊಳ್ ಸುತ ಜನ್ಮೋತ್ಸವ ।
ಸುರಚಿರ ಗಂಭೀರ ಭೇರಿಯಂ ಪೊಡೆಯಿಸಿದಂ ॥೧೦೩॥

ಉ॥ ಇಂದು ನೃಪಂಗೆ ಸಂಭವಿಸಿದಂ ಭುಜಶಕ್ತಿ ಸಮೀರ ನಂದನಂ ।
ನಂದನನೆಂದು [1]ಪೇೞ್ದು ದಿಗಧೀಶ್ವರರಂ ಪರಮಾನುರಾಗದಿಂ ॥
ದೊಂದಿಸ[2]ಲೆಯ್ದಿದತ್ತೆನೆ ದಿಶಾವಳಿಯಂ [3]ಪೞಿದೆಯ್ದಿ ತಳ್ತುದಾ ।
ನಂದದೆ ಪೊಯ್ಯೆ ಪುಟ್ಟದುರು ಭೇರಿಯ ಭೂರಿ ಗಭೀರ ನಿಸ್ವನಂ ॥೧೦೪॥

ಕಂ॥ ಸತಿ ವಿಜಯಾವತಿ ಪಡೆದಾ ।
ಸುತ ಶಶಿ ದರ್ಶನದೆ ಪುರ ಸುಧಾರ್ಣವಮೊದವಲ್ ॥
ಸತತಂ ಪೊಣ್ಮಿದ ವೀಚೀ ।
ತತಿಯೆನೆ ತಳ್ತುವು ದುಕೂಲ ಚೇಲದ ಗುಡಿಗಳ್ ॥೧೦೫॥

ಚಂ॥ ಸುತನನುದಗ್ರ ದೋರ್ಬಳ ಮರುತ್ಸುತನಂ ವಿಜಯಾವತೀ ಮಹಾ ।
ಸತಿ ಪಡೆದಳ್ ಸಮಂತಿರದೆ ಬರ್ಪುದು ಬಾಯನಕೆಂದು ದಿಗ್ವಧೂ ॥

1. ಪೇಳು. 2. ಲೆಂದಿದಲ್ತೆನೆ. 3. ಪಱಿದೆಯ್ದು.

ತತಿಯನೆ ಪೌರಲಕ್ಷ್ಮಿ ಕರ ಪಲ್ಲವದಿಂ ಕರೆವಂದವಾಯ್ತು ಮಾ।
ರುತ ವಿಚಲದ್ಧ್ವಜಾಗ್ರ ವಸನಾಂಚಲ ಸಂಚಯ ಚಾರು ನರ್ತನಂ ॥೧೦೬॥

ಉ॥ ಮಾನಿನಿ [1]ಪೆತ್ತಳಿಂದು ವಿಜಯಾವತಿ ದೋರ್ಬಳ ವಾಯು ಸೂನುವಂ।
ಸೂನುವನೆಂದು ಪೆರ್ಚ್ಚಿದೊಲವಿಂ ವಿಳಸದ್ವಿಮಲಾಪುರೀ ವರ॥
ಶ್ರೀ ನಟಿ ನರ್ತಿಸುತ್ತುಮಿರೆ ತತ್ಕರ ವಿಭ್ರಮದಂದವಾಯ್ತು ಮಂ।
ದಾನಿಳ ಸಂಚಳಲ್ಲುಳಿತ ಚೀನದ ಪೆರ್ಬ್ಬಳಿ ವೀಧಿ ವೀಧಿಯೊಳ್ ॥೧೦೭॥

ಮುನ್ನಮೆ ತತ್ಕುಮಾರ ಜನನೋತ್ಸವ[2]ದಾ ಘನಮಂ ನೆಱೆ[3] ಪಾರ್ದಿರುತ್ತುಮಿ।
ರ್ಪ್ಪನ್ನೆಗಮಾಗಳಾ ಸುತ ಸಮುದ್ಭವ ಸೂಚನ ದುಂದುಭಿ ಪ್ರಣಾ॥
ದಂ ನಿಮಿರಲ್ಕೆ ಕೇಳ್ದು ಜಲದ ಧ್ವನಿಗೇಳ್ದ ಮಯೂರದಂತೆ ಲೀ।
ಲೋನ್ನತಿವೆತ್ತು ಬಂದುದಖಿಳ ಶ್ರುತಿ ಭಾಸುರ ಭೂಸುರ ವ್ರಜಂ ॥೧೦೮॥

ದೋರ್ಬಳ ವಾಯುನಂದನನೆ ಪುಟ್ಟದ ನಂದನನೆಂದು ನೋಡಿಯಾ।
ನಿರ್ವಚನಂಗಳಿಂ ಪರಸಲಂಬುಜ ಗರ್ಭನನಂತ ರೂಪದಿಂ॥
ದುರ್ವಿಗೆ ಬಂದವೋಲ್ ಸಕಲ ವೇದ ಪುರಾಣ ವಿದರ್ಕಳಪ್ಪ ವಿ।
ಪ್ರರ್ಬಗೆಗಿಂತಳುಂಬಮೆನೆ ಬಂದುದು ತನ್ಮಯಮಾಗೆ ಭೂತಳಂ ॥೧೦೯॥

ಮ॥ ವರ ವಿಪ್ರಾದ್ಯಖಿಳಾರ್ಥಿಗಳ್ಗೆ ಮನದಾರ್ತಂ ಮುಟ್ಟೆ ವನ್ನಂ ವಿಭಾ।
ಸುರ ಹೇಮೋತ್ಕರಮಂ ಸುಧೇನು ಕುಳಮಂ ವಸ್ತ್ರಾಳಿಯಂ ಮಂಗಳಾ॥
ಭರಣ ವ್ರಾತಮನುದ್ಘ ರತ್ನ ಚಯಮುಂ ಮಾತಂಗ ಸಂಘಾತಮಂ।
ತುರಗ ಸ್ತೋಮಮನಿತ್ತನಿಟ್ಟು ನಿಮಿರಲ್ ವಿಶ್ವಂಭರೋರ್ವೀಶ್ವರಂ ॥೧೧೦॥

ಕಂ॥ ದಾನವಪತಿ ಮುಖ್ಯ ಮಹಾ।
ದಾನಿಗಳಿಂ [3]ತಣಿವನೆಯ್ದದಾ ಯಾಚಕ ಸಂ॥
ತಾನದ ಮನಮನಿತುಂ ಪಿರಿ।
ದಾನುಂ ತಣಿವನ್ನಮಿಟ್ಟಿಯಿಂ ನೃಪನಿತ್ತಂ ॥೧೧೧॥

ಕಂ॥ ಪುರ ಜನಕಂ ಪರಿ ಜನಕಂ।
[4]ಪರಮಾಪ್ತ ಜನಕ್ಕಮಾತ್ಮ ಬಂಧು ಜನಕ್ಕಂ॥

1. ಪೆತ್ತಳೆಂದು. 2. ದಿಂ ಮನಮುಂ. 3. ದಣಿವ. 4. ಪರಮಾತ್ಮ.

ನರನಾಥ ಚಕ್ರಿ ಪಿರಿದುಂ।
ಪರಿತೃಪ್ತಿಯನೆಯ್ದಲೀಪ್ಸಿತಾರ್ಥಮನಿತ್ತಂ ॥೧೧೨॥

ಚಂ॥ ಕ್ಷಿತಿಪತಿಯಾಗಳಂತೆ ಸಚಿವಂಬೆರಸುತ್ಸವದಿಂದೆ ಸುಪ್ರಭಾ।
ವತಿಯ ಗೃಹಕ್ಕೆ ಬಂದು ಸುತ ವಕ್ತ್ರಮನೀಕ್ಷಿಸಿ ತತ್ಪ್ರಮೋದ ಸಂ॥
ಗತ ಹೃದಯಾಬ್ಜನಾಗಿ ವಿಹಿತೋತ್ತಮ ದಾನ ವಿತಾನದಿಂ ಪೊದ।
ಱ್ದತಿಶಯ ಜಾತಕರ್ಮಮದು ನೂರ್ಮಡಿ ಮೇಲೆನಿಪಂತು ಮಾಡಿದಂ ॥೧೧೩॥

ಕಂ॥ ಇನಿತೊಂದತಿಶಯದಿಂ ನಂ।
ದನ ಜನನೋತ್ಸವಮನವನಿಪತಿ ನೆಗೞ್ದದಱಿಂ॥
ದನುಪಮಮೆನಲಾ ದ್ವಾದಶ।
ದಿನದೊಳ್ ತಾಂ [1]ನೆಗೞ್ದ ನಾಮ ಕರಣೋತ್ಸವಮಂ ॥೧೧೪॥

ಮ॥ ಅಸಮಾಸ್ತ್ರೋಪಮ ರೂಪದಿಂದೆ ಸಿನಗೊರ್ಬಂ ಪುಟ್ಟುವಂ ಪುತ್ರನೆಂ।
ದೊಸೆದಾ ಸುಪ್ರಭ ಯೋಗಿ [2]ಮುನ್ನುಸಿರ್ದವೋಲಾಕಾರದಿಂದನ್ನನಾ॥
ಗಿ ಸಮುಂತುದ್ಭವಿಸಿರ್ದನೀ ಸುತನ ಸೌಂದರ್ಯಕ್ಕೆ ತಕ್ಕಂದದಿಂ।
ಪೆಸರಿತ್ತಪ್ಪೆನೆನುತ್ತುಮಿತ್ತನರಸಂ ಕಂದರ್ಪ ದೇವಾಖ್ಯಮಂ ॥೧೧೫॥

ಕಂ॥ ಬಳೆದ ಹೃದಯಾನುರಾಗದಿ।
ನಿಳೇಶನಾಗಳ್ ನಿಜಪ್ರಧಾನಂ ಪ್ರಜ್ಞಾ॥
ಬಳನ ತನಯಂಗೆ ಮೇಧಾ।
ವಿಳನೆಂಬುಚಿತಾಭಿಧಾನಮಂ ತಾನಿತ್ತಂ ॥೧೧೬॥

ಉ॥ [3]ಸಾರ್ಥಕ ನಾಮಧೇಯ ಮಣಿ ಮಂಡನಮಂ ನಿಜ ಸೂನುಗಿತ್ತು ಕಾ।
ಮ್ಯಾರ್ಥ ಸಮೃದ್ಧಿ ಸಿದ್ಧಿಸಿದುದಾ ಮುನಿಪಾಗ್ರಣಿಯಿಂದಮೆಂದು ಲೀ॥
ಲಾರ್ಥಮನಪ್ಪುಕೆಯ್ದು ವಿಜಯಾವತಿಯುಂ ನೃಪನುಂ ಕುಮಾರ ರ।
ಕ್ಷಾರ್ಥಮೆನಿಪ್ಪ ಕಾರ್ಯದ ವಿನೋದದಿನಿಂತಿರುತಿರ್ದ[4]ರೊಲ್ಮೆಯಿಂ ॥೧೧೭॥

ಕಂ॥ ಜನ ನಾಥನ ವಿಜಯಾವತಿ।
ಯ ನಿಜಾಂತರ್ಹರ್ಷ ಜನಿತ ಲತಿಕೆಗಳೊಡನಿಂ॥

1. ನೆಗೞ್ದ ನಾಮ ಕರಣೋತ್ಸವದಿಂ. 2. ಮನ್ನಿಸಿದ. 3. ಸಾರ್ಥನ.
4. ರೊಮ್ಮೆಯುಂ.

ತೆನಿತಾನುಂ ಬೆಳಗುತ್ತಿ।
ರ್ದನುದಂಚಿತ ರೂಪ ವಿಭವ ಪಾತ್ರಂ ಪುತ್ರಂ ॥೧೧೮॥

ಕಂ॥ ಸಿತಪಕ್ಷ ಪ್ರತಿಪತ್ಸಂ।
ಗತಿವೆತ್ತ ಮೃಗಾಂಕನಂತೆ ಕುವಲಯ ಲೀಲೋ॥
ನ್ನತಿಯಂ ಬಳೆಯಿಸುತುವಿಳಾ।
ಪತಿ ಸುತನುಂ ಕಾಂತಿವೆರಸು ಬಳೆಯುತ್ತಿರ್ದಂ ॥೧೧೯॥

ಅತಿಮೃದು ಸುಸ್ನಿಗ್ಧಂ ಸೂ।
ಕ್ಷ್ಮತರಂ ನೃಪಸುತನ ಮನಮದೆಂದಱಿವುವವೋಲ್ ॥
ಅತಿಮೃದು ಸುಸ್ನಿಗ್ಧಂ ಸೂ।
ಕ್ಷ್ಮತರಂ ಬಿಡ[1]ದೆಸೆದುದಾ ಶಿರೋಜ ಸಮಾಜಂ ॥೧೨೦॥

ಪುದಿದಿರ್ಪ ಸಕಲ ಸಾಮ್ರಾ।
ಜ್ಯದ ಪಟ್ಟ ಸ್ಥಿತಿಗೆ ಪದೆಪಿನಿಂ ಮುನ್ನಮೆ ತಾ॥
ನದು ತೆಱಪುಗೊಟ್ಟುದೆನಲೆಸೆ।
ದುದು ಬಾಲನ ಭಾಳಮಾ ವಿಶಾಲತೆಯಿಂದಂ ॥೧೨೧॥

ಚಂ॥ ಮಿಸುಕದೆ ನಿಮ್ಮನಿಮ್ಮ ನಿಜ ರಾಜಿತ ರಾಜ್ಯ ವಿಲಾಸದಲ್ಲಿ ಸಂ।
ತಸದೊಳೆಯಿರ್ಪುದೆಂದೊಸೆದು ಮುನ್ನಮೆ ತಾಂ ನಯನಾವಲೋಕನ॥
ಪ್ರಸರದೆ ನವ್ಯ ಭೂಪ ತತಿಗಿಂತು ನಿರೂಪಿಸುತಿರ್ದನೆಂಬವೋ।
ಲೆಸೆದುದು ಬಾಲಕಂ ಬಳಸಿ ನೋಡುವ ನೋಟದ [ನವ್ಯ] ವಿಭ್ರಮಂ ॥೧೨೨॥

ಅಗಲದೆ ನೋಡಿ ನೋಡಿ ನಲವೇಱುವ ದೇವಿಯ ಭೂಪ ಚಕ್ರಿಯಾ।
ಸೊಗಯಿಪ ದೃಕ್ಚಕೋರ ಚಯ ಸೇವೆಗೆ ಮೆಚ್ಚಿ ಮುಖೇಂದು ಮಂಡಲಂ॥
ಮಿಗೆ ಮುದದಿಂದೆ ಜೊನ್ನದ ಪಸಾಯಮನಿತ್ತಪುದೆಂಬವೋಲ್ ಮುಗು।
ಳ್ನಗೆ ಪದೆಪಿಂ ಪೊದಟ್ದುದು ಕುಮಾರನ ಕೋಮಳ ವಕ್ತ್ರಬಿಂಬದೊಳ್ ॥೧೨೩॥

ಕಂ॥ ವಿತರಣ ವೀರ ಜಯ ಶ್ರೀ।
ತ್ರಿತಯಾಧಿಪನೆಂದು ಕಮಲಜಂ ಮುಂ ಬರೆದಂ॥

1. ದಾಸುಧಾ.

ತತಿಶಯ ರೇಖಾತ್ರಿತಯಾಂ।
ಕಿತ ಕಂಬು ಗ್ರೀವಮೆಸೆವುದಾ ಬಾಲಕನಾ ॥೧೨೪॥

ಭೂ ಸತಿಯಂ ವರ ವಿಜಯ।
ಶ್ರೀ ಸತಿಯಂ ತಳೆವ ತವಕದಿಂ ಪೆರ್ಚುವವೋಲ್ ॥
ಭಾಸುರಮಾಗಿರ್ದುದು ನೆಗ।
ೞ್ದಾ ಸೊಗಯಿಪ ಸುತನ ಚಾರು ಬಾಹುದ್ವಿತಯಂ ॥೧೨೫॥

ಕಂ॥ ಕಮನೀಯ ನಿಜಾಂಗ[1]ಸುರ।
ದ್ರುಮದೆರಡುಂ ಕೆಲದೊಳೊಗೆದ [2]ಬೀೞಲ್ಗಳೆನಲ್ ॥
ನಿಮಿರ್ದೆಸೆದುವು ಜಾನು ದ್ವಿತ।
ಯಮನೆನಸುಂ ಮಿಕ್ಕು ಬಾಲಕನ ನಿಡುದೋಳ್ಗಳ್ ॥೧೨೬॥

ಚಂ॥ ಲವ ಧೃತಿಯಿಲ್ಲದೊರ್ಮೆಯುಮರಾತಿ ಭಯಕ್ಕೆ ಬಿಗುರ್ತುದಕ್ಕೆ [3]ಪಾ।
ಱುವ ನೃಪಯೂಥ ವಕ್ಷದೊಳಿರಲ್ಕಣವೊಲ್ಲದೆಯಿಾಕುಮಾರನು ॥
ಧ್ರುವಮದೆ ಪಾಱುತಿರ್ದ್ದತುಳ ಲಕ್ಷ್ಮಿಗಿರಲ್ ವಿಪುಳಾಸ್ಪದಂ ದಲಾ।
ದವೊಲಭಿರಾಜಿಸಿರ್ದುದು ಸಮಂತು ವಿಶಾಲತೆವೆತ್ತುರ ಸ್ಥಳಂ ॥೧೨೭॥

ಕಂ॥ ಈ ಮಧ್ಯಮಿದನುಪಮ ಶೋ।
ಭಾ ಮಧ್ಯಮಿದೆನುತುಮುಂಟೆದಂ ಬೆರಲಿಂದಂ ॥
ತಾಮರಸೋದ್ಭವನೆನಲಭಿ।
ರಾಮಂಬೆತ್ತುದು ಕುಮಾರಕನ ನಾಭಿ ಮುಖಂ ॥೧೨೮॥

ಛಂದೋಲಂಕಾರ ದ್ವಯ।
ದಂದದಿನೆನಸುಂ ಸುವೃತ್ತ ಶೋಭಾವೃತದಿಂ ॥
ಸೌಂದರ್ಯ ಕಾಂತಿ ಸಂಯುತ।
ದಿಂದೆಸೆದತ್ತಾ ಕುಮಾರನೂರು ದ್ವಿತಯಂ ॥೧೨೯॥

ವಿನತರ್ಗನುರಾಗಮನೊ।
ಲ್ದನಿತುಮನಿತ್ತೆಸೆವ ಜಸಮನಾಂ[4]ತೆವು ನಾವೆಂ ॥

1. ಮರ. 2. ಬಿೞಲ್ಗಳೆನಲ್. 3. ದಾ. 4. ತವೆವೆಂ ನಂ.

ಬನುರಾಗದಿನಿ[1]ರ್ದುವು ತಾ ।
ವೆನೆ ಮಿಗೆ ಮಿಸುಗಿದುವು ಬಾಲಕನ ಕೇಸಡಿಗಳ್ ॥೧೩೦॥

ತಳತಳಿಸಿ ನಿಟಲ ತಟದೊಳ್ ।
ತೊಳಗುವ ತನ್ಮಣಿ ಕಪರ್ದಿಕಾವಳಿಯಿಂ ಕ ॥
ಣ್ಗೊಳಿಸಿದನಾ ನೃಪ ನಂದನ ।
ನಿಳೆಗವತಸಿರ್ದ ತರುಣ ಫಣಿಪನ ತೆಱದಿಂ ॥೧೩೧॥

ಚಂ॥ ಅನುಪಮ ವೀರಶಕ್ತಿ [2]ಧೃತ ದೋರ್ಬಲನಗ್ರಿಮ ಪದ್ಮರಾಗ ನೊ ।
ತನ ಕಲಶಂಗಳಲ್ತು ನೆಱೆ[3] ಮುನ್ನವೆ ತೂಳ್ದುವಿವುನ್ಮದಾಹಿತಾ ॥
ವನಿಪರನೆಂದು ಪೇಳ್ವ ಬಗೆಯಿಂದಿರದೆಯ್ದಿದಾ ಕುಮಾ ।
ರನ ಘನ ತೇಜದೊಂದಮಳ್ಗಳೆಂದೆನಿಕುಂ ಮಣಿ ಕುಂಡಲ ದ್ವಯಂ ॥೧೩೨॥

ಕಂ॥ ಪಿರಿದೆಸೆವ ವದನ ವಿಧುವಿನ ।
ಪರಿವೇಷವಿದೆಂಬ ತೆಱದೆ ಬಹು ರುಚಿಗಳ್ ಬಿ ॥
ತ್ತರಿಪ ನವರತ್ನ ಕಂಠಿಕೆ ।
ಕರಮೆಸೆದತ್ತಾ ಕುಮಾರಕನ ಕಂಧರದೊಳ್ ॥೧೩೩॥

ಸುರುಚಿರ ಚಮೂರು ನಖವದು ।
ವರ ವಕ್ಷದೊಳೆಸೆಯುತಿರೆ ಕರಂ ಶ್ರೀವತ್ಸಂ ॥
ಬೆರಸುದಯಿಸಿರ್ದ್ದ ಕೃಷ್ಣನ ।
[3]ಪರಿಜನುಮಾ ನೃಪ ನೂಭವಂ ನೆನೆಯಿಸಿದಂ ॥೧೩೪॥

ಜಯಲಕ್ಷ್ಮೀ ಧರಣೀ ಕಾಂ ।
ತೆಯು ಪರಿ[4]ಣಿಯಕೆಂದು ತಳೆದ ಮಂಗಳ ಸೂತ್ರ ॥
ದ್ವಯಮೆನೆ ಮಿಸುಗಿರ್ದುವು ಮಣಿ ।
ಮಯ ಕಂಕಣ ಯುಗಳಮಾ ಕುಮಾರ[5]ನ ಕರದೊಳ್ ॥೧೩೫॥

ಪುರುಷಾಕೃತಿಯಿಂ ತಾನವ ।
ತರಿಸಿದ ಶಶಿಯೆಂದು ಬಂದು ಬಳಸಿದ ತಾರಾ ॥

---

1. ನಿರ್ದ್ದ. 2. ದ್ರುತದೋದ್ಭವ. 3. ಪರಿಜನ. 4. ಣಯನಕ್ಕೆಂದು.
5. ಕನ ಕರಯುಗದೊಳ್.

ಪರಿಕರವೆನೆ ಕಣ್ಗೆಸೆದುದು ।
ಪಿರಿದುಂ ಬಾಲಕನ ಮೌಕ್ತಿಕದ ಕಟಿಸೂತ್ರಂ ॥೧೩೬॥

ಮದನಂ ಮೂಡಿಗೆಯಂ ತುಡಿ ।
ಸಿದ ಬಹು ವಿಧ ವರ್ಣವಳಯದಂತಿರೆ ನವ ರ ॥
ತ್ನದ ಕಟಕಂಗಳ್ ಕಣ್ಗೊಳಿ ।
ಸಿದುದಾ ನೃಪಸುತನ ಚರಣ ಕಾಂಡ ದ್ವಯದೊಳ್ ॥೧೩೭॥

ಚರಣ ಸರಸಿಜ ಪರಾಗಂ ।
ಬೊರೆದಳಿಮಾಲಿಕೆಗಳಂತೆ ಝುಂಕೃತಿ ರವಮು ॥
ಬ್ಬರಿಪ ಮಣಿ ನೂಪುರಂಗಳ್ ।
ಪರಿರಂಜಿಪುವಾ ನೃಪಾಲ ಸುತನಂಘ್ರಿಗಳೊಳ್ ॥೧೩೮॥

ಭರಿತೇಂದು ಮಂಡಳಮನಾ ।
ವರಿಸಿರ್ಪಾ [1]ಲಕ್ಷ್ಮ ಲೇಖೆಯಂದದಿನವನೀ ॥
ವರ ಸುತನ ವಿಮಳ ಗಾತ್ರಾಂ ।
ತರದೊಳ್ ಪರಿಕರಿಸಿದಂಜನಂ ರಂಜಿಸುಗುಂ ॥೧೩೯॥

ಚಂ॥ ಸ್ತನ ತಟ ಹಾರ ಮೌಕ್ತಿಕ ನಿಕಾಯದೊಳಂ ಪೊಲೆಯುತ್ತುಮಿರ್ಪ್ಪ ತ ।
ನ್ನನುಪಮ ರೂಪನೀಕ್ಷಿಸಿ ಕುಚಾಮೃತ ಸೇವೆಯನೊಲ್ಲದಾ ಬೆರ ॥
ಲ್ಗೊನೆಗಳೊಳೊಯ್ಯನಂಟುವ ತುಡುಂಕುವಭೋಂಕನೆ ಸಾರ್ದು ನೋಟ್ಟ ನಂ ।
ದನನ ನವೀನ ಮುಗ್ಧತೆ ಮುಗುಳ್ನಗೆಯಂ ಪಡೆದತ್ತು ದೇವಿಯೊಳ್ ॥೧೪೦॥

ಪಳಿಕಿನ ತೊಟ್ಟಲಿಕ್ಕೆಲದ [2]ಶತ್ಪಲಕಾ ಯುಗದಲ್ಲಿ ತನ್ನ ಮಾ ।
ರ್ಪೊಳೆವ ವಿನೂತನಾಕೃತಿಯನೀಕ್ಷಿಸಿ ನುಣ್ಬೆರಲಿಂ ಬೆರಂಟುತುಂ ॥
ತೊಳಗುವ ಲಂಬ ರತ್ನ ಫಲ ಮಂಜರಿಯಂ ಕರದಿಂ ತುಡುಂಕಲ ।
ಮ್ವಳಿಸುತುಮಿರ್ಪ ಬಾಲಕನ ಮುಗ್ಧತೆ ಮೋಹಿಸಿದತ್ತು ದೇವಿಯಂ ॥೧೪೧॥

ಜನನಿಯ ಪೀವರ ಸ್ತನ ಪಯಃಪರಿ ಸೇವನೆಯಿಂ ವಿಳಾಸಿನೀ ।
ಜನಮನುರಾಗದಿಂ ಬಿಡದೆ ತೂಗುತುಮೊಕ್ಕೊರಲೆಂಬ ಸಂದೆಗಂ ॥

---

1. ಲಕ್ಷ್ಮಿ. 2. ತಳ್ಪಲಕಾ.

ಜನಿಯಿಸಿ ಕೂಡೆ ಪಾಡುವ ಸುಗೇಯ ಸುಧಾರಸ ಸೇವೆಯಿಂದೆ ವ ।
ರ್ಧನತೆಯನೆಯ್ದುತಿರ್ಪನನಿಶಂ ನಿಜ ಶೈಶವದೊಳ್ ಕುಮಾರಕಂ ॥೧೪೨॥

ಮ॥ ಇನಿತೋರಂತೆ ಕರಂ ಕಡಲ್ವಱುವಿನಂ ಪಾಡುತ್ತುಮಿರ್ಪಂಗನಾ ।
ಜನ ಗೇಯಧ್ವನಿಗಲ್ಲಿ ತಾಂ ನಸು ನಗುತ್ತುಂ ಮತ್ತಮಾ [1]ಲಲ್ಲೆಯಿಂ ॥
ತೊನೆಯುತ್ತಿರ್ದ ನಿಜಾಂಗದಿಂದಮೊಲೆಯುತ್ತುಂ ತೊಟ್ಟಿಲಂ ತತ್ಕುಮಾ ।
ರನಿಳಾಧೀಶನ ಚಿತ್ತ[2]ಮುತ್ಸವದೊಳಂ ತೂಗಾಡೆ ತೂಗಾಡುವಂ ॥೧೪೩॥

ಕಂ॥ ನೆಗೆಯಿಂ ಮುಗಳ್ನಗೆ ಮಿಗೆ ಮಿಗೆ ।
ಸೊಗಯಿಪ ಮುಗ್ಧಾವಲೋಕನ ಪ್ರಭೆಯಿಂ ತಾಂ ॥
ನೆಗೆಯಿಸುವಂ ಪುಳಕ ಶ್ರೀ ।
ಣಿಗಳಂ ಪಿತೃ ಮಾತೃ ಗಾತ್ರದೊಳ್ ನೃಪಪುತ್ರಂ ॥೧೪೪॥

ಬಾಲಕನಶ್ರುತನಾಗಿಯು ।
ಮಾಲಿಪನಱುವಂತೆ ಕಾವ್ಯ ನವ್ಯೋಕ್ತಿಯನೊ ॥
ಲ್ದಾಲಿಸೆ [3]ಶಾರದೆಯಿಂ ತಾ ।
ನಾಲಬ್ಧ ವರ ಪ್ರಸಾದನೆಂದಱುಪುವವೋಲ್ ॥೧೪೫॥

ಹರಿ ಶಿಶುಗೆ ಮಿಸುಪ ದಂಷ್ಟ್ರಾಂ ।
ಕುರಮುದಯಿಸುವಂತೆ ಕುಂದ ಕುಟ್ಮಳಮಂ ತಾಂ ॥
ಪರಿಭವಿಸುವಮಳ ರದನೋ ।
ತ್ಕರಮುದಯಿಸಿದುದು ಕುಮಾರ ವದನಾಂತರದೊಳ್ ॥೧೪೬॥

ಚಂ॥ ರಸನೆಗೆ ಬಪ್ಪಳಿನ್ನಿರದೆ ವಾಕ್ಸತಿಯೆಂದು ವಿನೂತನಾಕ್ಷರ ।
ಪ್ರಸರಮೆ [4]ಪಙ್ಕ್ತಿವೆತ್ತುದಯಿಸಿತ್ತೆನೆ ತನ್ಮಹಿಭೃತ್ತನೂಜನಾ ॥
ಮಿಸುಪ ಮುಖಾಂಬುಜಾಂತರದೊಳುಜ್ಜ್ವಲಿಪಾ ದ್ವಿಜಪಙ್ಕ್ತಿ ಪುಟ್ಟಿ ರಾ ।
ಜಿಸುದುದು ವಕ್ತ್ರಜಾತ ದರಹಾಸದ ಬೀಜ ಸಮಾಜಮೆಂಬಿನಂ ॥೧೪೭॥

ಪಿಡಿದು ರಸಾತಳಕ್ಕಸುರನುಯ್ದುದಱಿಂ ಶ್ಲಥಮಾಗಿ ಕಂಪನಂ ।
ಬಿಡದ ಧರಿತ್ರಿಗಾತ್ಮಪದ ವಿನ್ಯಸನಚ್ಛಲದಿಂ ಧೃಡತ್ವಮಂ ॥

1. ಲಲ್ಲೆಯುಂ. 2. ಮುತ್ಸವದೊಳೊಳ್ತೂಗಾಡೆ. 3. ಶಾರದ ದೇವಿಯ. 4. ಪಂಕ್ತಿ.

ಪಡೆದಪನೀ ಶಿಶುತ್ವದೊಳೆ ತಾನೆನೆ ರನ್ನದ ಬದ್ಧ ಭೂಮಿಯೊಳ್ ।
ತಡೆಯದೆ ನಿಂದಿರಲ್ಕೆ ನೆಱೆ ಕಲ್ತು ವಿರಾಜಿಸುವಂ ಕುಮಾರಕಂ ॥೧೪೮॥

ಕಂ॥ ನಿನಗಧಿಪನಾನೆ ಪೆಱಗಿ ।
ಲ್ಲೆನುತಿಳಿಗಱಿಂಪುತ್ತುಮಿರ್ದನೆನೆ ಝುಣ್ಕಾರ ॥
ಧ್ವನಿ ನೆಗೆಯೆ ನೂಪುರದಿನೊ ।
ಯ್ಯನೆ ದಟ್ಟಡಿಯಿಡುವನೆಸೆವ ಶಿಶು ಕಂದರ್ಪಂ ॥೧೪೯॥

ಚಂ॥ ಕುಡಿಯಿಡುವಂಘ್ರಿ ಮಂಗಳ ನಖ ದ್ಯುತಿ ದುಗ್ಧಮೆ[1]ನುತ್ತೆ ಸುತ್ತಲುಂ ।
ಬಿಡದಿರುತಿರ್ಪ ಬಾಲಕ ಮರಾಳ ಕುಲಂ ನಡೆಯಂ ಕಲಲ್ಕೆಯಿಂ ॥
ನಡೆಯನೆ ಕಲ್ತನಾ ನೃಪಸುತಂ ಶಶಿಕಾಂತ ನಿಬದ್ಧ ಭೂಮಿ ಕೆಂ ।
ಪಡರ್ದು ಬೆಡಂಗುವೆತ್ತೆಸೆಯೆ ತತ್ಪದ ಪಲ್ಲವ ಕಾಂತ ಕಾಂತಿಯಿಂ ॥೧೫೦॥

ಸುಲಲಿತಮಪ್ಪ [2]ಬೀಣೆಗೆ ಕಳಾ ಲವ ಕಾಷ್ಠಮದೊಂದು ಸಂಗತ ।
ಚ್ಛಲದೊಳೆ ಸುಸ್ವರಂ ಜನಯಿಪಂತೆ ತೊದಳ್ನುಡಿಗೇಳ್ವಲಂಪಿನಿಂ ॥
ದಲಘು ಮುದಾತ್ಮರಾಗೆ ವಿಜಯಾವತಿ ದೇವಿಯುಮಾ ನರೇಂದ್ರನುಂ ।
ಸಲೆ ನುಡಿಸುತ್ತುಮಿರ್ಪ ನೆವದಿಂ ನುಡಿಗಲ್ತನಿಳೇಶ ನಂದನಂ ॥೧೫೧॥

ಕಂ॥ ಸುಕೃತಾಕಾರಂ ತದ್ಭೂ ।
ಪ ಕುಮಾರಂ ಶ್ರುತಿ ಪುರಾಣ ಶೈವಾಗಮ ನಾ ॥
ಟಕ ಮುಖ್ಯ ನಿಖಿಳ ಶಾಸ್ತ್ರ ।
ಪ್ರಕರಾಕರ್ಣನದಿನಿಂತು ನೆಱೆ ನುಡಿಗಲ್ತಂ ॥೧೫೨॥

ಜನನಿಯ ಜನನಾಥನ ಕಿವಿ ।
ಗಿನಿದಂ ಮನಕಧಿಕ ಲೀಲೆಯಂ ತನುಗೆ ವಿನೂ ॥
ತನ ಪುಳಕಂಗಳನಾ ನೃಪ ।
ತನಯನ ಮುಗ್ಧೋಕ್ತಿ ಸಮಿತಿ ಕುಡುವುದು ಸತತಂ ॥೧೫೩॥

ಕಂ॥ ಮೃದು ಪದ ವಿನ್ಯಾಸ ವಿಳಾ ।
ಸದಿನೆಸಕದ ಸುಕವಿಯಂತೆ ಪಾಂಸು ಕ್ರೀಡಾ ॥

---

1. ಗೆತ್ತು. 2. ಬಿಣ್ಪುಗೆ.

ಮುದದಿಂ ಮುದವದ್ಗಜದಂ।
ತುದಾತ್ತನೆಸೆವಂ ಕುಮಾರನಾ ಕಂದರ್ಪಂ ॥೧೫೪॥

ಚಂ॥ ಧೃತಿ ಲವಮಿಲ್ಲದಿರ್ಪ ದುರಿತಾತ್ಮಕರಪ್ಪ ನೃಪಾಲ ಸಂ।
ಗತಿ ಪೆಱಪಿಂಗಿತಾದಮೆನಗೀತನಧೀಶ್ವರನುದ್ಧ ಧೈರ್ಯನುಂ।
ನತ ಸುಚರಿತ್ರನೆಂದವನಿ ತಾನೊಸೆದಪ್ಪಿದಳೆಂಬಿನಂ ಕುಭೃ।
ತ್ಸುತನ ಶರೀರ ಲಿಪ್ತ ರಜಮೇನೆಸೆದಿರ್ದುದೊ ಪಾಂಸು ಕೇಳಿಯೊಳ್ ॥೧೫೫॥

ಪಳುಕಿನ ಭಿತ್ತಿಭಿತ್ತಿಗಳೊಳಿಂದುಶಿಲಾ ಮಣಿಬದ್ಧ ಭೂಮಿಯೊಳ್।
ಪೊಳೆವ ನಿಜಾಮಳಾಕೃತಿಗಳಂ ಪಡೆದೀಕ್ಷಿಸಿ ಪಾಂಸು ಕೇಳಿಯೊಳ್॥
ಕೆಳೆಯರೆನುತ್ತುಮಾತ್ಮ ಕರ ಪಲ್ಲವದಿಂ [1]ಕರವೊಂದು ಮೌಗ್ಧ್ಯಮ।
ಗ್ಗಳಿಸೆ ಕುಮಾರನಿಂತು ಪಡೆದಂ ಮುದಮುಂ ಪಿತೃ ಮಾತೃ ಚಿತ್ತದೊಳ್ ॥೧೫೬॥

ಮ॥ ತನುವಂ ಕೋಮಲ ಕಾಂತಿಲಕ್ಷ್ಮಿ ಲಲಿತ ಪ್ರತ್ಯಂಗ ಸಂಘಾತಮುಂ।
ಘನ ಸೌಂದರ್ಯ ವರೇಣ್ಯ ಲಕ್ಷ್ಮಿ ಮನಮುಂ ಪ್ರಜ್ಞಾ ಲಸಲಕ್ಷ್ಮಿ ಲೋ॥
ಚನಮುಂ ಮೋಹನ ಲಕ್ಷ್ಮಿ ಚಾರು ಮುಖಮುಂ ಚಂಚತ್ಪ್ರಹಾಸೋರು ಲ।
ಕ್ಷ್ಮಿ ನಿತಾಂತಂ ನೆಱೆ ಪೊರ್ದಿ ಪೆಂಪುವಡೆದತ್ತಾಲೀಲನಂ ಬಾಲನಂ ॥೧೫೭॥

ಸುತ ಕಂದರ್ಪನ ಬಾಲ ಕೇಳಿಗಳನಾದಂ ವೀಕ್ಷಿಸುತ್ತುಂ ಸಿತ।
ದ್ಯುತಿಯಂ ವೀಕ್ಷಿಸಿದಬ್ಧಿಯಂತಮರ್ದು ನಿಚ್ಚಂ ನಿಚ್ಚವಾನಂದ ಸಂ॥
ಗತಿಯಿಂದಂ ನೆಲೆವೆರ್ಚುತಿರ್ದರೆನಸುಂ ಹರ್ಷಾಂಬು ಮಿಶ್ರಾಂಬಕ।
ದ್ವಿತಯ ಶ್ರೀವಿಜಯಾವತೀ ಯುವತಿಯುಂ ವಿಶ್ವಂಭರೋರ್ವೀಶನುಂ ॥೧೫೮॥

ಕಂ॥ ವಿದಿತಂ ವಿಜಯಾವತಿಗಿಂ।
ತುದಯಿಸಿದರ್ ತನಯರಮಳರೆಂಬವೊಲೋರಂ॥
ದದಿನೊಡವಳೆವರ್ ಕಂದ।
ರ್ಪ ದೇವನುಂ ಸಚಿವಸೂನು ಮೇಧಾವಿಳನುಂ ॥೧೫೯॥

ಬಳ ಕೃಷ್ಣರ ತೆಱದಿಂದೊಡ।
ವಳೆವರ್ ಕಂದರ್ಪ ದೇವನುಂ ತನ್ಮೇಧಾ॥

1. ಕರಮೊಂದು.

ವಿಳಸುಂ ವಿಳಸನ್ಮತಿ ಧೃತಿ।
ಬಳ ಶೀಲ ಸುರೂಪ ವೈಭವಾಭೇದತೆಯಿಂ ॥೧೬೦॥

ಆ ರೂಪಜಿತ ಕಂದರ್ಪನಪ್ಪ ಕಂದರ್ಪದೇವಂ ಸಿತ ಪಕ್ಷ ಪ್ರತಿಪತ್ಸುಧಾಸೂತಿಯಂತೆ ಪ್ರತಿ ದಿನ ಪ್ರವರ್ಧಮಾನನುಂ ವರ್ಧನೀಕೃತ ಗುರುಜನ ಮನಃಪಯೋನಿಧಾನನುಂ ಉದಯಾದ್ರಿ ವಿನ್ಯಸ್ತ ಗಭಸ್ತಿ [1]ಹಸ್ತನುಂ ಉತ್ತರೋತ್ತರ ಸಮುನ್ಮೀಳಿತ ಮಹಾ ತೇಜನುಂ ಪ್ರಕಾಶೀಕೃತ ಪಿತೃ ಮಾತೃ ಚೇತಸ್ಸರೋಜಾತನುಮಾಗಿ ಬಳೆಯುತಿರ್ದನಂತುಮಲ್ಲದೆಯುಂ—

ಕಂ॥ ಖಳ ವಿರಹಿಗೆ ಸಾಧ್ವಸಮಂ।
ಬಳೆಯಿಸುತುಂ ವಿಬುಧ ತತಿಗೆ ವಿಪುಳೋತ್ಸವಮಂ॥
ಬಳೆಯಿಸುತುಂ ಕಂದರ್ಪಂ।
ಬಳೆವನಣಂ ಮಿಸುಪ ತರುಣ ಸಿತ ಕಿರಣನೆನಲ್ ॥೧೬೧॥

ಮ॥ಸ್ರ॥ ಕುಲಜಾತ ಖ್ಯಾತ ವೃದ್ಧರ್ಕಳ ಸಮುಪಗತಾನೇಕ ಸನ್ಮಂತ್ರಿ ವರ್ಗಂ।
ಗಳ ನಾನಾ ಸೇವಕೋರ್ವೀವರರ ಸಕಳ ಸಾಮಂತ ದಂಡಾಧಿನಾಥ॥
ರ್ಕಳ ಹರ್ಷೋದ್ಯಲ್ಲತಾ[2]ನೀಕಮನೆ ಬಳೆಯಿಸುತ್ತುಂ ಲಸಲ್ಲೀಲೆಯಿಂದಂ।
ಬಳೆಯುತ್ತಿರ್ದಂ ಪೊದಲ್ದೀಕೃತಿರತಿರಮಣಂ ಸಾಹಸೋದ್ದಾಮಭೀಮಂ ॥೧೬೨॥

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ವರ್ಷಕಾಲ ವರ್ಣನಂ
ಕುಮಾರೋದಯ ವರ್ಣನಂ
ಷ ಷ್ಠಾ ಶ್ವಾ ಸಂ.

---

1. ಹಸ್ತನಂತೆ. 2. ನೀಕ.

# ಸಪ್ತಮಾಶ್ವಾಸಂ

ಕಂ॥ ಶ್ರೀಗವಿಚಳ ಕುಟಿ ವಿಜಯ।
ಶ್ರೀಗಪ್ರತಿಹತ ನಿವಾಸಮತುಳ ವಿಳಾಸ॥
ಶ್ರೀಗುದ್ಭವ ಗುಣಮೆನೆ ತೇ।
ಜೋ ಗುಣ ನಿಧಿ ಭೂಪಕಂತು ಬಳೆಯುತ್ತಿರ್ದ್ದಂ ॥೧॥

ಇಂತು ಕಂದರ್ಪದೇವನ ಕಮನೀಯಮಪ್ಪ ಶೈಶವದ ಬಳವಿಗೆಯೊಳ್ ಸಮುಂಬೆತ್ತು ಬೆಳೆವ ಹರ್ಷಾಮರದ್ರುಮ ಸಸ್ಯೋದ್ಭವ ಸ್ವಾಂತ ಭೂಮಿಗಳಾಗಿ ದೇವಿಯುಂ ಭೂವರನುಮಿಂತವಿರತಮಿರುತ್ತಿರೆ—

ಚಂ॥ ವಿದಳಿತ ಮಾಲತೀ ಕುಸುಮ ರೇಣುವ ಧೂಳಿಯನೆತ್ತಿ ಸೂಸುತುಂ।
ಪುದಿದ [1]ವನೇಜ ರಾಜಿಯ ದಳಂಗಳನುಚ್ಚಳಿಕೊಳುತ್ತುಮಾ ನದೀ॥
ನದ ನಿಕರಾಮಳೋದಕದೊಳಟ್ಟಿ ಕೊಳುತ್ತುಮೆ ಬಂದು[2]ದುನ್ಮದೇ।
ಭದ ತೆಱದಿಂ ಹಿಮೋದಿತ ಮಹಾರುತ[3]ಸೈಂದ್ರಿಯದೊಂದು ಮಾರುತಂ ॥೨॥

ಉ॥ ಮಾಳತಿಯಲ್ಲ[4]ದನ್ಯ ತರು ಸುಪ್ರಸವಾಳಿಯ ಬಂಬಲಂ ಸಮು।
ನ್ಮೂಳಿಸುತುಂ ಲತಾಕುಳದ ಪೂಗಳನುದ್ಧ ಹಿಮೋಗ್ರ ಖಡ್ಗಮಂ॥
ಚಾಳಿಸುತುಂ ಸುರಾಧಿಪ ದಿಶಾನಿಳ ವಾಹಮನೇಱಿ ಬಂದುದಾ।
ಭೀಳತೆವೆತ್ತು ಮಾಗೆ ತುಹಿನೋರು ಕಳೇವರಮಾಗಿ ಬೇಗದಿಂ ॥೩॥

ಚಂ॥ ಅನುಪಮ ನಾಳಿಕೇರ ಫಲ ಸಂಕುಳಮೊಳ್ಪಿಳನೀರನಾಂತುದಿಂ।
ಪಿನ ರಸದುರ್ಬ್ಬನಾಳ್ದು ನಯಮೇಱಿದುದಿಕ್ಷು ನಿಕಾಯಮೆಯ್ದೆ ಭೋಂ॥
ಕನೆ ನವ ಸಿಂಧುವಾರ ತರು ಕುಟ್ಮಳ ಕೋಟಿಯನಪ್ಪುಕೆಯ್ದುದೊ।
ಯ್ಯನೆ ಬದರ ದ್ರುಮಕ್ಕೆ ಫಲಮುಣ್ಮಿದುದುಣ್ಮಿ ಪೊದಟ್ಟಿ ಮಾಗೆಯೊಳ್ ॥೪॥

ಕಂ॥ ಭೂ ಮಹಿಳೆಯೊಳೊಂದಿದ ವಿಟ।
ಹೇಮಂತನಿನಾಗಳಾದ ನವ ನಖ ರೇಖಾ॥

---

1. ವನೀಜ. 2. ಮನ್ಮದೇ. 3. ನೇಂದ್ರಿಯ. 4. ದೆವುದಿತರ ಪ್ರಸವಾವಳಿ.

ಸ್ತೋಮಮದೆನೆ ಬೀಡೆಗಳು।
ದ್ದಾಮಂಬೆತ್ತೊಗೆದುಮೆಱೆಯು ಕೆಯ್ಗೞೊಳಾಗಳ್ ॥೫॥

ಕಂ॥ ಪೆಸರ್ವೆತ್ತ ಧಾತ್ರಿ ಮಿಗೆ ನೀ।
ರಸಮಾದುದು ನೋಡೆ ನಾಡೆ ಧಾತ್ರೀ[1]ಫಳಮುಂ॥
[2]ರಸ ಪೂರಮಾದುದೆನೆ ಮಾ।
ಗೆ ಸಮಂತೇಂ ಹರಣ ಭರಣ ಕಾರ್ಯ ಕ್ಷಮನೋ ॥೬॥

ಉ॥ ಕುಂದುವ ಪೆರ್ಚುವೊಂದು ತೆಱದಿಂ ಶಶಿ ಬಿಂಬಮಿದಾವಗಂ ಸುವೃ।
ತ್ತಂ ದೊರೆವೆತ್ತು ತೋರ್ಪುದಱಿನಾ ರವಿ ಬಿಂಬಮಿದೆಂಬ ಭಾವಮಾ॥
ದಂ ದಿಟಮಾದುದಲ್ಲದೆ ಹಿಮಾಹಿಮ ಭೇದಮದೞ್ಗಿ ಪೋಯ್ತು ತಾ।
ನೆಂದೊಡೆ ಬಂದ ಮಾಗೆಯು ಪೊದೞ್ದ ತುಷಾರಮಿದೇನಪಾರಮೋ ॥೭॥

ಕಂ॥ ಇದು ಬಿಸಿಲಿದು ಪೊಸ ಚಂದ್ರಿಕೆ।
ಯಿದು ದೀಪಿಕೆಯಿದು ನವೀನ ಮಣಿ ದೀಪಿಕೆಯಂ॥
ಬುದೆ ತೋಱಿದು ತಾನೆನೆ ಪೇ।
ೞೊಡವಿದ ಮಾಗೆಯ ಹಿಮೌಘಮೇನದ್ಭುತಮೋ ॥೮॥

ಚಂ॥ ಮುಕುಳಿತ ವೃತ್ತಿಯಾಯ್ತು ಸತತಂ ಶತಪತ್ರ ಸಮಾಜಮಾವಗಂ।
ವಿಕಸಿತ ರೂಪಮಾಯ್ತು ಕುಮುದಾವಳಿ ಕೋಕ ಕುಳಂ ವಿಯೋಗ ಪಾ॥
ವಕ [3]ಪರಿ ಯುಕ್ತಮಾಯ್ತುನಿಶಮೆಯ್ದೆ ಚಕೋರ ಚಯಂ ನಿರಂತರಾ।
ಧಿಕ ಮುದಮಾಯ್ತೆನಲ್ಕೆ ತುಹಿನೋತ್ಕಟಮೆಂತುಟೊ ಮಾಗೆಯೇೞ್ಗೆಯೊಳ್
॥೯॥

ಕಂ॥ ಕೞಿವ ಹಿಮ ವರ್ಷ ಪಾಕದಿ।
ನೆಱಂಕೆ ನಾಂದಳಿ[ಗಳಿ]ರ್ದುವೆತ್ತಂ ಪಾಱಲ್॥
ನೆಱಿಯದೆ ಪಾಡೞಿದಂಬುಜ।
ದಿಱುಂಬಿನೊಳ್ ಮಿಡುಕದಲ್ಲಿ ಮಾಗೆಯೊಳೆಲ್ಲಂ ॥೧೦॥

ಚಂ॥ ಜಲಧಿಪ[4]ನೌರ್ವ ವಹ್ನಿಯನೆ ಸಾರ್ದನಿನಂ ಸಲೆ ದಕ್ಷಿಣಾಯನ।
ಚ್ಛಲದೊಳೆ ಪೊರ್ದಿದಂ ಶಿಖಿಯನಾಗಳೆ ಹಾರ ಫಣೀಶನೀಶ್ವರಾ॥

1. ಫಳಮಂ. 2. ದಸ. 3. ಪಡಿ. 4. ನೊಬರ್ಗ.

ಕುಳ ನಿಟಿಲಾಂಬಕಾನಲನ ಸಾರ್ದಿರದೆಯ್ದಿದನೆಂದೊಡಾವನ।
ಸ್ಖಲಿತದಿನಿರ್ಪನಿಂತೊಗೆದ ಮಾಗೆಯ ವಿಶ್ರುತ ಶೀತ ಪಾತದೊಳ್ ॥೧೧॥

ಕಂ॥ ಒಗೆದಳುರ್ವ ಮಾಗೆಯ ಹಿಮ।
ಕ್ಕಗಿದಾಗಳೆ ಶಶಿಯನಮರ ನದಿಯಂ ಬಿಟ್ಟಾ॥
ನಗಜಾತೆಯ ತನುವಂ ತಾಂ।
ಬಿಗಿಯಪ್ಪಿರ್ದರ್ಧ ನಾರಿಯಾದನುಮೇಶಂ ॥೧೨॥

ಮ॥ ಪಱದಾಗಳ್ ಪನಿ ಪುಲ್ಲ ಬಿಂದುಗಳ ತಂದಲ್ ರೋಮ ರೋಮಂಗಳಿಂ।
ನೆಱೆ ಸಾರುತ್ತಿರೆ ಜಾನು ಮಧ್ಯಗತ [1]ಮೂರ್ಧ ಪ್ರಾಂತಮಾಗಿಂತು ಪ॥
ಲ್ಪಱೆಗುಟ್ಟುತ್ತುಮೆ ವಾನರಾಳಿ ನಡುಗುತ್ತಿರ್ದತ್ತು ಶಾಖಾಗ್ರದೊಳ್।
ಸೆಱೆಗೆಯ್ದಂದದೆ ಮುಂಬಗಲ್ವರಮದೆತ್ತಂ ಪೋಗದಾ ಮಾಗೆಯೊಳ್ ॥೧೩॥

ಚಂ॥ ಪುದಿದ ಹಿಮಂ ನವಿರ್ಗೆದಱೆ ಮೆಯ್ ಮಿಗೆ ಕೋಡೆ ಕಪಿವ್ರಜಂ ನಿಜಾ।
ಸ್ಪದ [2]ಗಿರಿಯಾ ನಿತಂಬದೊಳೆ ಕೆಂಬೆಳಗಂ ಕೆದಱುತ್ತುಮಿರ್ಪ್ಪ ರ॥
ತ್ನದ ಪಿರಿದೊಂದು ಪಾಸಱೆ ದವಾಗ್ನಿಯ ದಳ್ಳುರಿಯೆಂದು ಪತ್ತೆ ಸಾ।
ರ್ವುದು ತಳಮಂ ನಿಮಿರ್ಚುತೆನೆ ಮಾಗಿಯ ಶೀತಮದೇಂ ಪ್ರಭೂತಮೋ ॥೧೪॥

ಉ॥ ಪಕ್ಕದಿಱುಂಬಿನೊಳ್ ಮಱಯನಿಟ್ಟು ಕುಲಾಯಮನೊತ್ತಿಗೊಂಡು ಮೆ।
ಯ್ಯಿಕ್ಕಿ ಕೊರಲ್ ಕುನುಂಗಿ ನವಿರಗ್ರದೊಳಂ ಪನಿ ಪುಲ್ಲ ಬಿಂದುಗಳ್॥
ತೆಕ್ಕನೆ [3]ತೀವೆ ಮುತ್ತಿನ ವಿಹಂಗಮದಂತೆ ವಿಹಂಗ ಮಂಡಲಂ।
ಮೊಕ್ಕಳಮಾಗಿ ಮಾಗೆಯೊಳಗಿರ್ದುದು ಪಾರದೆ ಮುಂಬಗಲ್ವರಂ ॥೧೫॥

ಕಂ॥ ಹಿಮವನಮರ್ದು ನಡುಗುತುಂ ಮೃಗ।
[4]ಸಮುದಯಮುಂ ಶ್ವಾಸ ಮಾರುತೋಷ್ಣದ ಲೋಭಂ॥
ನಿಮಿರ್ದಲ್ಲಿ ಮುಂಬಗಲ್ವರ।
ಮಮರ್ದಿರ್ಪುದು ಮೊತ್ತಮಾಗೆ ಮಾಗೆಯೊಳೆಲ್ಲಂ ॥೧೬॥

ಚಂ॥ ಸಮುದಿತ ಶೀತ ಪಾತ ಪರಿಕಂಪ ಕಳೇವರಮಾಗಿ ಕಾನನೇ।
ಭಮದಿರೆ ಕಂಡು ಕಾಯ್ಪೊದವಿ ಪಾಯಲೊಡರ್ಚೆ ನಿಜಾಂಗ ಸಂಧಿ ಬಂ॥

---

1. ಮೂರ್ಧ ಭಾಂತ. 2. ಶಿಖರೀ. 3. ತೀವಿ. 4. ಸಮುದಯಮಂ.

ಥಮ[1]ನಿನಿತಂ ನಿಮಿರ್ಚಲಣಮಾಱದೆ ಗರ್ಜಿಸುತಿರ್ದುದಲ್ಲಿ ಸಂ।
ಕ್ರಮಿಸಿದ ಮಾಗೆಯೊಂದು ತುಹಿನೋತ್ಕಟ ಸಂಕಟದಿಂ ಮೃಗಾಧಿಪಂ ॥೧೭॥

ಸಲೆ ನೆಲೆದೋಱದಾ ನದಿಯ ಕರ್ಮಡುವಂ ಪೊಱಮಟ್ಟು [2]ಕೋಪಮ।
ಗ್ಗಲಿಸಿ ಬಿಸಿಲ್ಗೆ ಮೆಯ್ಯನಡೆಯೊಡ್ಡಿ ತದೀಯ ತಟಂಗಳಲ್ಲಿ[3]ಯಿ॥
ಚಲ ಕಡೆಗೊಂಬುಗಳ್ ತುಱುಗಿ ಬಿರ್ದ್ದವೊಲಿರ್ದುವು ಮುಂಬಗಲ್ವರಂ।
ತೊಲಗದನಾಕುಳಂ ಮೊಸಳೆಗಳ್ ನೆಱೆ[3]ದೊತ್ತರವಾಗಿ ಮಾಗೆಯೊಳ್ ॥೧೮॥

ಕಂ॥ ಕಡುದಣ್ಣನಾಯ್ತು ದವ ಶಿಖಿ।
ಕಡಲೊಳ್ ಪೊಡಕರಿಸಿದೌರ್ವ ಶಿಖಿ ಮುಟ್ಗಿದುದಾ॥
ಪ್ಪುಡನ ನಿಟಲಾಕ್ಷ ಶಿಖಿ ಮೆ।
ಯ್ಯುಡುಗಿದುದೇನೆಂಬೆನಮಮ ಮಾಗೆಯ ಹಿಮಮಂ ॥೧೯॥

ಚಂ॥ ಗಗನದೊಳಿಂತು ಮತ್ಸರಿಸೆ ತಾಂ ನೆಱೆ[3] ಪೆತ್ತುದು [4]ವಿಸ್ತೃತೋರುತಾ।
ರೆಗಳನೆನಲ್ಕೆ ತತ್ತುಹಿನಜೋರು ಪಯಃಕಣ ಜಾಲದಿಂದೆ ನೆ॥
ಟ್ಟಗೆ ವಿಮಳಾಪುರೀ ವಿಳಸದಿಂದುಶಿಲಾ ಮಣಿ ಸದ್ಮ ಸಂಚಯಂ।
ಮಿಗೆ ಮಿಸುಗುತ್ತುಮಿರ್ದುದು ಪೊದಟ್ದು ವಿರಾಜಿತಮಾಗಿ ಮಾಗೆಯೊಳ್ ॥೨೦॥

ಮುಳಿದು ವಿಯುಕ್ತ ವಲ್ಲಭ ಜನಂ ತಳುವಿಲ್ಲದೆ ತಟ್ಕೆಗೊಂಡುದ।
ಸ್ಖಲಿತ [5]ಕೃಷಿಕ್ರಮಾಗತ ಜನಂ ಮರವಟ್ಟಿರುತಿರ್ದುದಾ [6]ಕರಂ॥
ಗಳನೊಳಕೆಯ್ದು ಕಾರ್ಯಧೃತ ಯಾನ ಜನಂ ಮುಸುಕಿಟ್ಟು ನಿಂದುದೇ।
ನಳವಿಗಳುಂಬವೋ ಪುದಿದ ಮಾಗೆಯ ಶೀತ ವಿಜೃಂಭ ಪಾತನಂ ॥೨೧॥

ಪ್ರಿಯ ವನಿತಾ ಘನಸ್ತನದಿಱುಂಬಿನೊಳುಚ್ಚ ಕಟೀತಟಂಗಳಾ।
ಶ್ರಯದೊಳುದಗ್ರಮಪ್ಪ ನಳಿ ತೋಳ್ಗಳ ತಟ್ಕುನೊಳೊಪ್ಪುವೆತ್ತ ಬಾ॥
ಸೆಯ ಬಱಯೊಳ್ ನವೋಷ್ಠ ಪುಟ ಪಲ್ಲವದೊಳ್ ಮಿಸುಪಾ ಗಭೀರ ನಾ।
ಭಿಯೊಳೊಳವೊಕ್ಕು ಕಾಮುಕ ಜನಂ ಬರ್ದುಕಿರ್ದುದು ಬಂದ ಮಾಗೆಯೊಳ್ ॥೨೨॥

1. ನಿನಿತರೊ. 2. ಕೋಟಿ. 3. ಯಿಂ. 4. ನಿಸ್ತಳೋರು. 5. ಕೃಷೀಕುತೂಹಲ. 6. ತುರಂ.

ನಸು ಬಿಸಿಯಪ್ಪ ನಲ್ಲುಣಿಸಿನಿಂ [1]ಘುಸೃಣಾರ್ದ್ರ ವಿಲೇಪದಿಂ ವಿರಾ।
ಜಿಸುವ ಕದಂಬದಂಬುಲದಿನಂಚಿತ ಕಾಂಚನ ಭೂಷಣಂಗಳಿಂ॥
ದೆಸಕದ ಶೋಣ ವರ್ಣ ವಸನಾವೃತದಿಂ ಜನಮಾಗಳಿಂತು ಜೀ।
ವಿಸಿತಿನಿತಲ್ಲದಂಮುಳಿವುದೇ ಹಿಮದಾಗರಮಾದ ಮಾಗೆಯೊಳ್ ॥೨೩॥

ಇಂತು ಭುವನಮೆಲ್ಲಂ ಹಿಮ ಭವನ [2]ಮಾಗೆ ವರ್ತಿಸಿದ ಮಾಗೆಯ ಪೋಗಿನೊಳ್—

ಕಂ॥ ಅನುದಿನವೆನಸುಂ ಕಂದ।
ರ್ಪನ ಸೊಗಯಿಪ ಬಾಲ ಕೇಳಿಗಳನೀಕ್ಷಿಸುವಾ॥
ಬಿನದದೊಳೆ ಪೊೞ್ತುಗಳೆಯು।
[3]ತ್ತಿ ನರೇಂದ್ರ ಮುಕುಂದನಿರ್ದನಿರ್ದೊಂದು ದಿನಂ ॥೨೪॥

ಮ॥ ಜನನೀ ಸ್ತನ್ಯ ಪಯಃಪ್ರಸೇವೆಯನದೆಂತುಂ ಪಿಂಗಿದಂ ಪತ್ತುವಿ।
ಟ್ಟನಣಂ ಶೈಶವಮುಂ ಸಮುಜ್ವಳನ ವಿದ್ಯಾ ಹೃದ್ಯ ಪೀಯೂಷ ಸೇ॥
ವನೆಗೀಗಳ್ ನೆಱೆ ಯೋಗ್ಯಮಾದನೆಸೆವೀ ಕಂದರ್ಪ ದೇವಂ ದಲೆಂ।
ದೆನುತುಂ ತನ್ನಯ ಚಿತ್ತದೊಳ್ ಬಗೆದನಾ ವಿಶ್ವಂಭರೋರ್ವೀಶ್ವರಂ ॥೨೫॥

ಇಂತು ಬಗೆದಂದು ನೃಪ ಮುಕುಂದಂ ವನಿತಾಶಾ ನಿರ್ಜಿತ ನಿರ್ಜಿತಾಚಾರ್ಯನಪ್ಪ ಶ್ರುತಸಾಗರೋಪಾಧ್ಯಾಯನಂ ಬರಿಸಿ ನಮ್ಮಾತನಂ ನೂತನ ಶ್ರುತ ಸಾಗರನಪ್ಪಂತು ಮಾಡಿಮೆಂದು ಕಂದರ್ಪ ದೇವನಂ ತದೀಯ ಮೇಧಾವಿಳನಂ ಸಮರ್ಪಿಸಿದಾಗಳ್—

ಕಂ॥ ಶ್ರುತದೇವಿಯ ದರಹಾಸ।
ದ್ಯುತಿ ಸಮಿತಿಯೆ ಸದನಮಾದುದಿಂದೆನೆ ದಿಕ್ಸಂ॥
ತತಿಯಂ ಬೆಳಪಿಂದೊಪಳ।
ವೃತಮಪ್ಪಧ್ಯಯನ ಶಾಲೆಯದು ಸೊಗಯಿಸುಗುಂ ॥೨೬॥

ಮ॥ ಇಸಿತಾಶ್ಚರ್ಯದಿನೊಪ್ಪುವಧ್ಯಯನ ಸದ್ಮಕ್ಕಾಗಳೆಯ್ತಂದು ಪಾ।
ವನ ವಿದ್ಯಾತುಳ ತಾರೆ ತಳ್ತಿಸೆವ ತನ್ಮೌಹೂರ್ತದೊಳ್ ತಾಂ [4]ಸುರಾ॥

1. ಘುಸೃಣಾರ್ಥ. 2. ಮಾಗಿ. 3. ತ್ತ. 4. ಸುತಾ.

ರ್ಜನೆಗೆಯ್ದಾ ಶ್ರುತಸಾಗರಾಹ್ವಯನುಪಾಧ್ಯಾಯಂ ಕುಮಾರಂಗೆ ಕೂ।
ರ್ತೆನಸುಂ ಪೇಳ್ವುದನಾಗಳುಜ್ಜುಗಿಸಿದಂ ಶಬ್ದಾದಿ ಶಾಸ್ತ್ರಂಗಳಂ ॥೨೭॥

ಉ॥ ಆಯತಿವೆತ್ತ ಶಬ್ದ ಭರತಾಗಮ ತರ್ಕ ಮಹಾವಿಧಾನ ವಾ।
ತ್ಸ್ಯಾಯನ ನಾಟಕಾವ್ಯಖಿಳ ಶಾಸ್ತ್ರ ಸಮಾಜಮನೋಜೆಯಿಂದುಪಾ॥
ಧ್ಯಾಯನತಿ ಪ್ರಸನ್ನ ಹೃದಯಂ ಸಲೆ ಪೇಟುತಿರಲ್ಕೆ ತಾಂ ಸಹಾ।
ಧ್ಯಾಯಿ ದಲೆಂಬಿನಂ ನೃಪಸುತಂ ನೆಱೆ ಕೇಳ್ವ[1]ನದೇಂ ಮನಸ್ವಿಯೋ ॥೨೮॥

ಮ॥ ವರ ವಾಣೀ ವಿಪುಳ ಪ್ರಸಾದ ವಿಭವಂಬೆತ್ತಿರ್ಪುದೀಯನ್ವಯೋ।
ತ್ಕರಮೆಂದೆಂಬುದನೀತನೊಳ್ ಪ್ರಕಟಮಂ ಮಾಳ್ಪೆಂ ದಲಾನೆಂದು ಬಂ॥
ಧುರ ವಾಕ್ಶ್ರೀವಧು ತಾನೆ ಬಂದು ರಸನಾ[2]ಗ್ರಾಸೀನೆಯಾದಳ್ ಸಿರಂ।
ತರಮೆಂಬಚ್ಚರಿ ಪುಟ್ಟುವಂತಿರಱಿವಂ ಶಬ್ದಾದಿ ಶಾಸ್ತ್ರಂಗಳಂ ॥೨೯॥

ಕಂ॥ ಎನಸುಂ ಪೇಳ್ವುದಱಿಂ ಗುರು।
ವೆನಿಪನುಪಾಧ್ಯಾಯನೊಲ್ದು ಕೇಳ್ವುದಱಿಂ ಶಿ॥
ಷ್ಯನೆನಿಪ್ಪನಾ ಕುಮಾರಕ।
ನಿನಿತಲ್ಲದೆ ಮತಿ ವಿಶೇಷದೊಳ್ ಸಮ ಭಾಗಂ ॥೩೦॥

ಚಂ॥ [3]ಅವಿದಿತಮಪ್ರತೀತಮತಿ ಗೂಢಮೆನಿಪ್ಪ ಸಮಗ್ರ ಶಬ್ದ ಯೂ।
ಥವನೆನಸುಂ ತದರ್ಥ[4]ತತಿಯಿಂ ನೆಱೆ ಭೇದಿಪ ಶಕ್ತಿಯಿಂ ಶ್ರುತಾ॥
ರ್ಣವನ ಮತಿ ಪ್ರಭಾವದೆಸಕಕ್ಕೆ ವಿಚಾರಿಪೊಡಾ ನರೇಂದ್ರ ಸೂ।
ನುವಿನ ಮತಿ ಪ್ರಭಾವಮದು ತಾಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ
॥೩೧॥

ಕಂ॥ ಶ್ರುತ ದೇವಿಯ ದೊರೆಯಪ್ಪಾ।
ಶ್ರುತಸಾಗರ ಭೂಸುರೋತ್ತಮಂ ತನ್ನತುಳ॥
ಪ್ರತಿಭೆಗೆ [5]ಮಿಗಿಲಾಯ್ತಾ ನೃಪ।
ಸುತನ ಲಸನ್ಮತಿಯೆನುತ್ತೆ ವಿಸ್ಮಿತನಾದಂ ॥೩೨॥

1. ನಿದಂ. 2. ಗ್ರಸ್ಥಾಯಿ. 3. ಅವಿದಿತಮಪ್ಪ. 4. ತತಿಯಂ.
5. ಮಿಗಿಲಾಯ್ತು.

ಕಂ॥ ಎಂತುಟೊ ರೂಪ ವಿಲಾಸಮು।
ದಂತುಟೆ ಕಂದರ್ಪದೇವನಮಳಿನ ಮತಿಯೆಂ॥
ದಿಂತಿನಿತಾನುಂ ವಿಸ್ಮಯ।
ಮಂ ತಳೆದಂ ತಾಂ ಶ್ರುತಾರ್ಣವೋಪಾಧ್ಯಾಯಂ ॥೩೩॥

ಉ॥ [1]ಆಕಸ್ಮಿಕ್ಯ ಸರಸ್ವತೀವರ [2]ಪರಿಖ್ಯಾತಾನ್ವಯೋದ್ಭೂತನ।
ಪ್ಪೀ ಕಂದರ್ಪಕುಮಾರ[3]ಕಂಗದಱೀನೀತಂಗೋದನಾಂ ಪೇೞ್ದ ವಿ॥
ದ್ಯಾಕೀರ್ಣಾತ್ಮಕನಾಗೆ ಮಾಡುವೆನೆನುತ್ತುಂ [4]ಪೂಣ್ದೆನಾ ಪೂಣ್ದುದ।
ಸ್ತೋಕಾಹಂಕೃತಿಯೆಂದನಂತಿರದುಪಾಧ್ಯಾಯಂ ನಿಜ ಸ್ವಾಂತದೊಳ್ ॥೩೪॥

ಕಂ॥ ಇಂತು ಮಹಾಶ್ಚರ್ಯಮಯ।
ಸ್ವಾಂತನುಮುತ್ಕರ್ಷ ಹರ್ಷಮಯ ಚೇತನು ಮಾ॥
ದಂ ತಾಂ ಶ್ರುತಸಾಗರನೋ।
ರಂತಮಳಿನ ಬಹುಳ ಮತಿಗೆ ಮಹಿಭೃತ್ಸುತನಾ ॥೩೫॥

ಸದಮಳ ಮೇಧಾವಿಳನ।
ಪ್ಪುದನಾ ಮೇಧಾವಿಳಂ ಸಮಂತಱೀಪುವವೋಲ್॥
ವಿದಿತಾಖಿಳ ಶಾಸ್ತ್ರ ಕಳಾ।
ವಿದನಾದಂ ತನ್ಮಹೀಶ ತನಯನ ತೆಱದಿಂ ॥೩೬॥

ಮ॥ಸ್ರ॥ ಜನನಾಥಾಪತ್ಯನೀತಂ ಸಚಿವ ವರ ತನೂಜಾತನಿಂತೀತನೆಂಬೊಂ।
ದಿನಿತಾನುಂ ಭೇದಮಾಯ್ತಲ್ಲದೆ ವಿಪುಳತರ ಪ್ರಜ್ಞೆಯಿಂ ಬೇದಮಿಲ್ಲೆಂ॥
ದೆನುತುಂ ಮೆಯ್ವೆರ್ಚಿ ಮೇಧಾವಿಳನ ವಿಮಳ ಮೇಧಾಪ್ರಭಾವಕ್ಕೆ ಮೆಚ್ಚು।
ತ್ತನಘಸ್ವಾಂತಂಸಮಂತಿರ್ಮಡಿಮುದಮನುಪಾಧ್ಯಾಯನಂತಾಗಳಾಂತಂ ॥೩೭॥

ಕಂ॥ ಜನಪಾಗ್ರಣಿಗಾ ಕಂದ।
ರ್ಪನ ಮೇಧಾವಿಳನ ಶಾಸ್ತ್ರ ಪರಿಣತಿಯಂ ತೋ॥
ಱಿ ನಿತಾಂತಂ ಮೆಚ್ಚಿಪೆನಾ।
ನೆನುತುಂ ಶ್ರುತ ಸಾಗರಾರ್ಯನಿರ್ಪುದುಮಾಗಳ್ ॥೩೮॥

---

1. ಆಕಸ್ಮಿಕ. 2. ಪರಿಜ್ಞಾತಾ. 3. ಸಂತಪಱ. 4. ಪೂಣ್ದನಾ.

ಕರಕಲಿತ ವೇತ್ರನತಿ ಪಾಂ।
ಡುರ ಕೂರ್ಚ ಶ್ಮಶ್ರು ಬಹು ಸಿರಾಕೀರ್ಣ ಕಳೇ॥
ವರನಾವೃತಾಂಗ ಕಂಚುಕ।
ವಿರಾಜಿತಂ ಬಂದನಂದು ಕಂಚುಕಿಯೊರ್ವಂ ॥೩೯॥

ಕಂ॥ ಬಂದಾಗಳೆ ವಿನಯದಿನಭಿ।
ವಂದಿಸಿ ನಿಂದಿರ್ದ ವೃದ್ಧ ಕಂಚುಕಿ ವಿಪುಳಾ॥
ನಂದಾತ್ಮ ನುಪಾಧ್ಯಾಯಂ।
ಗಂದೆನಸುಂ ಸಮುಚಿತೋಕ್ತಿಯಿಂದಿಂತೆಂದಂ ॥೪೦॥

ಚಂ॥ ಶ್ರುತ ವಿದ್ಯಾ ಪ್ರಚಯ ಪ್ರಭಾವಮೆನಸುಂ ಕಂದರ್ಪದೇವಂಗೆ ಸಂ।
ಗತಿಯೆಂತಾಯ್ತೆನೆ ತಾನದೆಂಬಿನಿತನೀಗಳ್ ನೋಡುವೊಂದಿಚ್ಛೆ ಪೆ॥
ರ್ಚಿ ತರಲ್ವೇೞ್ದನಿಳಾಧಿಪಾಗ್ರಣಿ ಕುಮಾರೋಪೇತಮಾಗಲ್ಕೆ ವಿ।
ದ್ರುತದಿಂದೆಂದನಡುರ್ತು ಕಂಚುಕಿಯುಪಾಧ್ಯಾಯಂಗತಿ ಪ್ರೀತಿಯಿಂ ॥೪೧॥

ಇಂತು ನುಡಿದ ಕಂಚುಕಿಯ ವಚನಮಂ ಕೇಳ್ದು—

ಉ॥ ಮುನ್ನಮೆ ಪೋಗಿ ರಾಗದೆ ಕುಮಾರನ ಶಾಸ್ತ್ರಕಳಾ ಪ್ರಗಲ್ಭದೊ।
ಳ್ಪನ್ನೆಱೆ ತೋಱೆ ಮೆಚ್ಚಿಪೆನಿಳೇಶನ ಚಿತ್ತಮನೆಂದೆನುತ್ತುಮಿ॥
[1]ರ್ಪನ್ನಮೆ ತಾನೆ ಕೂರ್ತು ಬರವೇೞ್ದರದಟ್ಟಿದನೆಂದೊಡೆಮ್ಮಭೀ।
ಪ್ಸೋನ್ನತಿಯಾದುದೆಂದು ನುಡಿದಂ ಶ್ರುತಸಾಗರ ಭೂಸುರೋತ್ತಮಂ ॥೪೨॥

ಕಂ॥ ತಡಮಿಲ್ಲದೆ ತತ್ಕಂಚುಕಿ।
ಯೊಡನೆತ್ತಂದಂ ಕುಮಾರಕರ್ವೆಱಸಾಗಳ್॥
ಪೊಡವೀಶ್ವರನೊಡ್ಡೋಲಗ।
ದೆಡೆಗಾ ಶ್ರುತಸಾಗರಾಹ್ವಯೋಪಾಧ್ಯಾಯಂ ॥೪೩॥

ಮ॥ಸ್ರ॥ ಶ್ರುತ ವಿದ್ಯಾಭ್ಯಾಸದಿಂದಂ ತನು ತನುತರಮುಂ ತಾಳ್ದಿ ತನ್ಮಂಗಳಾಂಗ।
ದ್ಯುತಿ ಕೊರ್ಬಂ ಪೆತ್ತು ಸೌಂದರ್ಯಮನವಯವದೊಳ್ ಪೊಣ್ಮಿಸುತ್ತುಂ
ವಿಚಿತ್ರೋ॥

1. ರ್ಪನ್ನೆಗ.

ನ್ನತಿಯಂ ಬೀಱುತ್ತಿರಲ್ ಕೇಸರಿಶಿಶು ನಡೆತರ್ಪಂದದಿಂ ಬಂದನತ್ಯಾ।
ಯತನೇತ್ರ ಜ್ಯೋತಿಯಿಂದಾ ಸಭೆಯನೆ ಬೆಳಗುತ್ತಂದು ಕಂದರ್ಪದೇವಂ
॥೪೪॥

ಬಗೆಗೊಂಡುದ್ಗ್ರೀವರಾಗೀಕ್ಷಿಸುವ ಸಕಲ ರಾಜನ್ಯಕಾನೀಕ ಲೀಲಾ।
ಕ್ಷಿಗಳಾಗಳ್ ಗಾತ್ರದೊಳ್ ಮಾರ್ಪೊಳೆಯೆ ಸಿತ ಸರೋಜಾಕರ ಶ್ರೀಯ
ಚೆಲ್ವಂ॥
ನಗುತುಂ ಶಕ್ರಾಂಗ ಸಂಶೋಭೆಯನೆ ಸಲೆ ಮಿಗುತ್ತುಂ ಕರಂ ರಾಜಿಸುತ್ತುಂ।
ಪುಗುತಂದಂ ತತ್ಸಭಾಭ್ಯಂತರಮನಮಳ ಸನ್ಮೂರ್ತಿ ಕಂದರ್ಪದೇವಂ ॥೪೫॥

ಕಂ॥ ಅರಸನನಿಮೇಷ ನೇತ್ರಾಂ।
ಬುರುಹಂ ಕಂದರ್ಪದೇವನಂ ನೆಱೆ ನೋಡು॥
ತ್ತಿರೆಯಿರೆ ತಾಮುಂ ನೋಟ್ಪಂ।
ತಿರೆ ತಲೆದೋಱಿದುವು ತನುವಿನೊಳ್ ಪುಳಕಂಗಳ್ ॥೪೬॥

ಚಂ॥ ಚರಣ ನಖಾಂಶು ಚಂದ್ರಿಕೆಗೆ ಭೋಂಕನೆ ಸಾರ್ವ ಚಕೋರನಂತೆ ಸಾ।
ದರದೊಳೆ ಸಾರ್ಗೆ ವಂದೆಱಗುವಾತ್ಮಜನಂ ಪೊರೆವಯ್ಯ ಬಾಯೆನು॥
ತ್ತುರುತರ ಲೀಲೆಯಿಂದಮುಮದಪ್ಪಿ ಕದಂಪನೆ ಚುಂಬಿಸುತ್ತೆ ಬಿ।
ತ್ತರದೊಳೆ ಸೈತು ಕುಳ್ಳಿರಿಸಿದಂ ನೃಪಚಕ್ರಿ ನಿಜಾಂಕ ಪೀಠದೊಳ್ ॥೪೭॥

ಕಂ॥ ಬಱಿಯೊಳೆ ಬಂದೆಱಗಿದ ಸದ।
ಮಳ ಮೇಧಾವಿಳನೆನಿಪ್ಪ ಮೇಧಾವಿಳನಂ॥
ಘಱಿಲನೆ ತೆಗೆದಪ್ಪಿಕೊಳು।
ತ್ತಿಳೇಶನುತ್ಸಂಗ ಪಾರ್ಶ್ವ ತಟದೊಳ್ ತಳೆದಂ ॥೪೮॥

ಶ್ರುತಿ ಮಂತ್ರಾಶೀರ್ವಾದಮು।
ನತಿ ಮುದದಿಂ ಮಾಡಿದಾ ಬಹು ಶ್ರುತ ಗುರುವಂ॥
ಶ್ರುತಸಾಗರಾರ್ಯನಂ ಸಮು।
ಚಿತ ವಿಷ್ಟರವಿತ್ತು ನೃಪವರಂ ಮನ್ನಿಸಿದಂ ॥೪೯॥

ಮತಿಯೆಸಕಮೋದುವನುರಾ।
ಗಿತೆ ಕಂದರ್ಪಂಗಿದುಂಟೆ ಪೇಱಿಮೆನುತ್ತುಂ॥

ಕ್ಷಿತಿನಾಥಂ ಬೆಸಗೊಂಡಂ।
ಶ್ರುತಸಾಗರ ಭೂಸುರಾರ್ಯನಂ ತತ್ಕ್ಷಣದಿಂ ॥೫೦॥

ಆಗಳ್—

ಮ॥ ವಸುಧಾಧೀಶನ ತತ್ಸಭಾ ಜನದ ಚಿತ್ತಕ್ಕಾಗಳಾಶ್ಚರ್ಯವಾ।
ಗೆ ಸಮಂತಾ ಶ್ರುತಸಾಗರ ದ್ವಿಜವರಂ ಕಂದರ್ಪದೇವಂಗೆ ತಾ॥
ನೊಸೆದಂದೋದಿಸಿ ಬಂದನೇಕ ವಿಧ ಶಾಸ್ತ್ರ ಪ್ರೌಢಿಯಂ ನಾಡೆ ತೋ।
ಱಿಸುತಿರ್ದಂ ನೆಱೆ ತತ್ಕುಮಾರ ಮುಖದಿಂ ಪ್ರವ್ಯಕ್ತಮಪ್ಪಂದದಿಂ ॥೫೧॥

ಕಂ॥ ಪ್ರಕರಾಂದೋಳ ಕಿರೀಟ।
ಪ್ರಕರಂ ಚೋದೀಕೃತಾಂಗುಳೀ ಮುಖ ಮಾಗಿಂ॥
ತು ಕರಂ ಮೆಚ್ಚುತ್ತಿರ್ದುದು।
ಸಕಲ ಸಭಾಜನಮದಾ ಕುಮಾರನ ಮತಿಯಂ ॥೫೨॥

ಕಂದರ್ಪ ದೇವನುದಯಿಸಿ।
ದೊಂದು ಮುಹೂರ್ತದೊಳೆ ಪುಟ್ಟಿದುದು ನಿಶ್ಚಯಮೆಂ॥
ದೆಂದು ಸಭಾಜನಮೋರೊಂ।
ದಂದದೆ ಮೆಚ್ಚಿದುದು ಮತಿಗೆ[1]ಮೇಧಾವಿಳನಾ ॥೫೩॥

ಮ॥ ಅಸಿತಂ ಶಾಸ್ತ್ರಕಳಾ ಪ್ರವೀಣತೆಯನಾದಂ ತೋರ್ಪ ಕಂದರ್ಪ ದೇ।
ವನ ಮೇಧಾವಿಳನಾ ವಿನೂತನ ವರ ಪ್ರಜ್ಞಾ ಪ್ರಭಾವಕ್ಕೆ ತಾ॥
ನೆನಸುಂ ಚಿತ್ತದೊಳುತ್ಸವೋನ್ನತಿಯನೋರಂತೆಯ್ದಿ ತನ್ಮಂತ್ರಿ ಮು॥
ಖ್ಯನ ವಕ್ತ್ರಾಂಬುಜಮಂ ನಿರೀಕ್ಷಿಸಿದನುರ್ವೀನಾಥ ಚಕ್ರಾಯುಧಂ ॥೫೪॥

ಇಂತು ನೋಡಿದಾಗಳ್—

ಮ॥ ವಿನುತಾನೇಕ ನವೀನ ಶಾಸ್ತ್ರವಿದನಾದಂ ದೇವ ಕಂದರ್ಪದೇ।
ವನೆನುತ್ತುಂ ಸಚಿ[2]ವಾದ್ಯರುತ್ಸವದೊಳಾದಂ ಬಿನ್ನಪಂ ಗೆಯ್ವುದ॥
ಕ್ಕೆರ್ದ ನರೇಂದ್ರಂ ಮುದ[3]ಮಾನಸದಾ ಖಣವಿಷಂ ನಿರ್ಶ್ಯೇಷಮಪ್ಪಂತಿರೆ।
ತ್ತನುದಾತ್ತಂ ಶ್ರುತಸಾಗರ ದ್ವಿಜವರಂಗಿಷ್ಟಾರ್ಥ ಸಾರ್ಥಂಗಳಂ ॥೫೫॥

---

1. ಮೇಧಾವಿಳನಂ. 2. ವಾದ್ಯನು. 3. ಮಾಗೆ ದಾರುಣ.

ಕಂ॥ ಶಾಸ್ತ್ರಾಭ್ಯಾಸದೊಳೆಂತುಂ।
ವಿಸ್ತೃತಮತಿಯಾದನಾದನೀ ಕಂದರ್ಪಂ॥
ಶಸ್ತ್ರಾಭ್ಯಾಸದೊ[1]ಳಂತುಂ।
ವಿಸ್ತೃತ ಮತಿಯಾಗಲಿದುವೆ ಪದನೆಂದು ನೃಪಂ ॥೫೬॥

ಬಗೆದಿಂತುಟಾಗಳಂತೋ।
ಲಗದೊಳ್ ಕುಳ್ಳಿರ್ದ [2]ಹೃದ್ಯ ಭೃಗು ವಿದ್ಯಾ ಪಾ॥
ರಗನಪ್ಪ ಭದ್ರಚಂಡನ।
ಮೊಗಮನಭೀಕ್ಷಿಸಿದನಾ ನರೇಂದ್ರ ಮುಕುಂದಂ ॥೫೭॥

ಮ॥ ನೃಪನಾಗಳ್ ಮೊಗಮಂ ನಿರೀಕ್ಷಿಸಲೊಡಂ ತಾನೆಟ್ದು ನಿಂದಿರ್ದು ಬಿ।
ನ್ನಪವಿನಾಗಳ್ ನರನಾಥ ನೀಂ ಬಗೆದವೋಲ್ ಕಂದರ್ಪದೇವಂಗೆ ತೋ॥
ಱಪೆನೋರಂತಿರೆ ನೋದಿಪೆಂ ಸಕಲ ಶಸ್ತ್ರಾಭ್ಯಾಸಮಂ ದೇವ ನಿ।
ಮ್ಮ ಪಸಾಯಂಬಡೆವಂದದೆಂದು ನುಡಿದಂ ತದ್ಭದ್ರಚಂಡಾಹ್ವಯಂ ॥೫೮॥

ಇಂತು ನುಡಿದಾಗಳೆ ಕಂದರ್ಪದೇವಂಬೆಱಸು ಕತಿಪಯ ಪರಿಜನಾವೃತನಾಗಿ ಭದ್ರಚಂಡನಾ ಪುರದ ಪೊರೆವೊಟಲ ಖಳೂರಿಕಾ ನಿಕಾಯಕ್ಕೆ ಬಂದು—

ಕಂ॥ ಪ್ರವಿದಿತ ವಿಶಾಲಮಸ್ತಂ।
ಭ ವಿರಾಜಿತ ಗರ್ಭಮನುಳ ಚಂದ್ರೋಪಳ ಭಿ॥
ತ್ತಿ ವಿಭಾಗಮಾಗಿ ಕಣ್ಗು।
ತ್ಸವಮಂ ಬೀಱುತ್ತುಮಿರ್ದುದಭ್ಯಾಸ ಗೃಹಂ ॥೫೯॥

ಸಿಕತಾಕೃತಿಯಾದುದೊ ತಾಂ।
ಪ್ರಕಟದೆ ಭೃಗು ದೇವತಾ ಪ್ರಹಾಸ ಮರೀಚಿ॥
ಪ್ರಕರ[3]ಮೆನೆ ಬೆಳ್ಮಟಲ್ ಪುದಿ।
ದು ಕರಂ ಕಣ್ಗೆಸೆದುದಸದಳಂ ಶ್ರಮ [4]ಕುಟಿಯೊಳ್ ॥೬೦॥

ಉ॥ ಆ ಸಕಲಾಯುಧಾವಳಿಗೆ ತಾನಧಿದೇವತೆಯಪ್ಪ ದೋರ್ಬಳೋ।
ದ್ಭಾಸುರ ದುರ್ಗೆಯಂ ಪದೆದು ಪೂಜಿಸಿ ರಾಜಿಪ ರಾಜಚಕ್ರಿ ಚಂ॥

1. ಳೆಂತುಂ. 2. ವೈದ್ಯ. 3. ಮನೆಬೆಳುವವೋಲ್. 4. ಮಟ.

ಡಾಸಿ ಗದಾದಿ ಶಸ್ತ್ರ ಸಮುದಾಯಮನರ್ಚಿಸಿ ಭದ್ರಚಂಡನ।
ಭ್ಯಾಸಮನೀಯಲುಜ್ಜುಗಿಸಿದಂ ನೃಪಸೂನುಗೆ ಸಾನುರಾಗದಿಂ ॥೬೧॥

ಕಂ॥ ನಿಲವಿವು ಗತಿಗಳಿವಾಸನ।
ಕುಲಮಿವು ಚಾರಿಗಳಿವೆಂದು ತಾನಭಿನಯಿಸು॥
ತ್ತೊಲವಿಂದೆ ಭದ್ರಚಂಡಂ।
ಪಲವಂದದೆ ನೃಪಸುತಂಗೆ ತೋಱುತ್ತಿರ್ದಂ ॥೬೨॥

ಎನಿತಾಯುಧವೊಳವನಿತ।
ರ್ಕನುಗತಮೆನಿಸಿರ್ಪ ತದ್ವಿಧಾಭ್ಯಾಸಮನಂ॥
ದೆನಸುಂ ತೋಱುತ್ತಿರ್ದಂ।
ಜನನಾಥಸುತಂಗೆ ಭದ್ರಚಂಡಂ ಭರದಿಂ ॥೬೩॥

ಮತ್ತಮಾ ನಿಲವಿನ ನಿರ್ವಾಹಮಂ ಗತಿಯ ಗೌರವಮಂ ಚಾರಿಗಳ [1]ಚೆಂದಮಂ ಕರಣಂಗಳ ಕೌತುಕಮಂ ವಳನದ ವಿಳಾಸಮಂ ವಿವಿಧಾಸನಂಗಳ [2]ವಿವರಣಮಂ ಮೆಯ್ವಸದ ಮಾಸರಮಂ ಪಿಡಿವ ಪಾಂಗಂ ಚಿತ್ರ ವಚನ ಚಮತ್ಕಾರಮಂ ಬಳಬಳಿಕೆಯ ಚಂಚುರತೆಯಂ ಹಸ್ತ ಚಾರಣದ ವಿಸ್ತಾರಮಂ ವಿಶ್ರುತಾಶ್ಚರ್ಯಮಪ್ಪಂತು ಭೃಗುವಿದ್ಯಾ ವಿಶಾರದಂ ಭದ್ರಚಂಡಂ ಕಂದರ್ಪದೇವಂಗೆ ತೋಱುತ್ತುಮಿರೆ—

ಮ॥ಸ್ರ॥ ಗಮಕಂ ಕೊಂಕಾಂಕೆ ಝಂಕಾಳತೆ ವಳಿ ಲುಳಿ ಲಾಗಾವ್ರು ಕೊರ್ಪಾಂತ ಬಿಂಕಂ।
ಭ್ರಮರೀ ಜ್ಯಾಲೀಢಮಾಕೀರ್ಣತೆ ಬಗೆ ಬಿಗಿಪಾರ್ಶ್ವಿಕೆ [3]ಮೇಲ್ಗಾಣ್ಕೆ ಚಾರಿ॥
ಕ್ರಮಮಾವೇಕಂ ಬೆಡಂಗೆಂದೆನಿಪನಿತರ ವೈಚಿತ್ರ್ಯದಿಂ ತಾನೆ ಶಸ್ತ್ರಾ।
ಗಮ ಶಿಕ್ಷಾಚಾರ್ಯನೆಂಬೊಂದೆಸಕದಿನೆಸೆದಂ ನಾಡೆ ಕಂದರ್ಪದೇವಂ ॥೬೪॥

ಚಂ॥ ವಿವಿಧ ವಿಚಿತ್ರದೇಸು ವೆಸದೊಳ್ ಪಿರಿದುಂ ಪರಿಭಾವಿಸಲ್ಕೆ ಭಾ।
ರ್ಗವನೆಣೆ ರಾಘವಂ ಪಡಿ ಘಟೋದ್ಭವನೋಱಗೆ ಸವ್ಯಸಾಚಿ ಪಾ।
ಟ ವಲಮೆನಿಪ್ಪಿನಂ ನೆಱೆಯೆ ಕಲ್ತನುದಂಚಿತ ಚಾಪ ವಿದ್ಯೆಯಂ॥
ಭುವನ ಜನಕ್ಕೆ ವಿಸ್ಮಯಮನುದ್ಭವಿಸುತ್ತುಮಿಳೇಶ ನಂದನಂ ॥೬೫॥

1. ಛಂದಮಂ, 2. ವಿವಂದಮಂ, 3. ಮೇಲ್ಗಾಣ್ಕೆ.

ಕಂ॥ ಭುಜಬಲ ಪವನಜನೆಂಬೀ।
ನಿಜ ನಾಮಮನಿಂತು ಸಾರ್ಥಕಂ ಮಾಡುವವೋಲ್॥
ಸುಜನ ನುತಂ ಕಂದರ್ಪಂ।
ವಿಜಿತ ಗದಾಭ್ಯಾಸನಾದನಬ್ಧಿ ನಿನಾದಂ ॥೬೬॥

ತನತೊಪ್ಪುವ ಖಂಡೆಯ ರಾ।
ಯನೆನಿಪ್ಪಭಿಧಾನಮಂ ದಿಟಂ ಪ್ರಕಟಿಪವೋಲ್॥
ಜನತಾಧಿಪ ತನಯಂ ಭೋಂ।
ಕನೆ ಖಡ್ಗಾಭ್ಯಾಸದೊಳ್ ವಿಭಾಸುರನಾದಂ ॥೬೭॥

ಪರಚಕ್ರಮನಾಕ್ರಮಿಸುವ।
ಪರಮಾಜ್ಞಾ ಚಕ್ರದೊಡನೆ ಶಿಕ್ಷಾಚಕ್ರಂ॥
ನಿರವಿಸಲೆ ವೇಳ್ಕುಮೆಂಬಂ।
ತಿರೆ ಚಕ್ರಾಭ್ಯಾಸಮಂ ಕುಮಾರಂ ತಳೆದಂ ॥೬೮॥

ಚಕ್ರಾಸಿ ಗದಾ ಕಾರ್ಮುಕ।
ಚಕ್ರ ಧರಂ ಚಕ್ರಿ ಮುನ್ನಮಭ್ಯಾಸದೊಳಾ॥
ಚಕ್ರಾಸಿ ಗದಾ ಕಾರ್ಮುಕ।
ಚಕ್ರಧರಂ ತಾನೆನಿಪ್ಪನಾ ಕಂದರ್ಪಂ ॥೬೯॥

ಇಱಿವಿಡುವ ಬಿಡುವ ಪೊಡೆವೀ।
ತೆಱನ ಚತುರ್ವಿಧ ಮಹಾಯುಧಾಭ್ಯಾಸಮುಮಂ॥
ನೆಱೆ ಕಲ್ತಂ ತನಗೆ ಸಮಂ॥
ಪೆಱನಿಲ್ಲೆನಿಪಂದದಿಂದಮಾ ಕಂದರ್ಪಂ ॥೭೦॥

ಮ॥ ಸಲೆ, ನಾನಾ ವಿಧಮಾಗೆ ವರ್ತಿಸುವ ಶಸ್ತ್ರಾಭ್ಯಾಸ ಸಂದೋಹಮಂ।
ನಲವಿಂ ತೋಱುವ ಭದ್ರಚಂಡನ ಮನಕ್ಕಾಶ್ಚರ್ಯಮಂ [1]ಬೀಱುತುಂ॥
ನಿಲಸಲ್ ನೂರ್ಮಡಿವೆತ್ತು ತಾಂ ನೆಲಸಿದತ್ತೋರಂತೆ ಕಂದರ್ಪನು।
ಜ್ಜ್ವಲ ಚಿತ್ತಾಸ್ಪದದೊಳ್ ವಿಚಿತ್ರ ಭೃಗುವಿದ್ಯಾಲಕ್ಷ್ಮಿ ವಿಸ್ತಾರದಿಂ ॥೭೧॥

---

1. ಬೀಕರಂ॥ ನೆಲನಿಲ್.

ಕಂ॥ ಕಂದರ್ಪದೇವನೊಳ್ ಸಮ।
ಸಂದ ಸಮಸ್ತಾಯುಧಂಗಳಭ್ಯಾಸಮನೋ॥
ರಂದದೆ ಮೇಧಾವಿಳನೊಲ।
ವಿಂದಂ ನೆಱೆ ಮಾಡೆ ನಾಡೆಯುಂ ರಾಜಿಸಿದಂ ॥೭೨॥

ಪ್ರತಿದಿನಮಭ್ಯಾಸ ಚಮ।
ತ್ಕೃತಿಯಂ ತದ್ಭದ್ರಚಂಡನಚ್ಚರಿವಡೆವಂ॥
ತತಿ ಮುದದಿಂ ವಿವಿಧಾಯುಧ।
ತತಿಯಂ ಮಾಡುತ್ತುಮಿರ್ಪನಾ ಕಂದರ್ಪಂ ॥೭೩॥

ಅದಲ್ಲದೆಯುಂ—

ಮ॥ಸ್ರ॥ ನೆಗಟ್ದಂ ಚಂಡಾಂಕುಶಾ ಘಾತಮನೆಸಗದೆಯಂಗುಷ್ಠ ಲಗ್ನೋಲ್ಲಸತ್ಸಂ।
ಜ್ಞೆಗಳಿಂದೋರಂತೆ ಬಂಬಲ್ವಱಿಯಿಸುವ ಸಿಲಲ್ಪೇಡಿದಾ ತಾಣದೊಳ್ ನೆ॥
ಟ್ಟಗೆ ಲೀಲಾಮಾತ್ರದಿಂದಲ್ಲಿಯೆ ನಿಱಿಸುವ ಪಾಂಗಿಂದೆ ಕಂದರ್ಪದೇವಂ।
ಭಗದತ್ತಂಗಗ್ಗಳಂ ತಾನೆನಿಸಿದನೆನಸುಂ ವಾರಣಾರೂಢಿಯಿಂದಂ ॥೭೪॥

ಹಯಶಿಕ್ಷಾ ಕ್ರೀಡೆಯಂ ತೋಱುವ ಹರಿಸುತನೋ ತಾನೆನಿಪ್ಪಂದದಿಂ ಪ।
ನ್ನಿಯಸೋಂಕುಂಬಿಂಕಮುಂಬೈಸಿಕೆಯನಿಱುಗೆಯುಂನಿಶ್ಚಲತ್ರಾಣಮುಂ[1]ವಾ॥
ಗೆಯ ಬಾಗುಂ ಗಾಢಮುಂ ನೂಂಕುವ ಬಿಡುವ ಪೊಡರ್ಪುಂ ಪೊದಟ್ದಿ
ಪ್ಪಿರಲ್ ನಾ।
ಡೆಯುಮಾ ಕಂದರ್ಪದೇವಂ ಸುರುಚಿರ ತುರಗಾರೂಢಿಯೊಳ್ ಪ್ರೌಢ
ನಾದಂ ॥೭೫॥

ಇಂತೆಸೆವ ಹಯಾರೂಢಿಯ ಪ್ರೌಢಿಯಂ ತಮ್ಮೊಳೋರೊರ್ಬರ್ಗೆರ್ ತೋಱ
ಲೆಂದು [ಕಂದರ್ಪಂ] ಮೇಧಾವಿಳ ದ್ವಿತೀಯನಾಗಿ ವಿಪುಳೋದ್ಯಾನಕ್ಕೆ ಪೋಗಿ—

ಕಂ॥ ಅತುಳ ನಿಜಾಭ್ಯಾಸ ವಿಚಿ।
ತ್ರತೆಯಂ ತೋಱುತ್ತುಮಲ್ಲಿ ಮೇಧಾವಿಳನು॥
ನ್ನತಿವೆತ್ತಭ್ಯಾಸ ವಿಚಿ।
ತ್ರತೆಯಂ ನೋಡುತ್ತುಮಿರ್ದನಾ ಕಂದರ್ಪಂ ॥೭೬॥

1. ರಾ॥ ಗೆಯ.

ಕಮಲಭವಂ ಮಾಡಿದನಿಂ।
ದು ಮರೀಚಿ ಕಳಾಪದಿಂದಮಿದನೆನೆ ಪೊಳೆಯು॥
ತ್ತುಮೆ ಪೊಱಮಟ್ಟುದು ತೊಟ್ಟನೆ।
ಚಮರೀಮೃಗಶಾಬಮಾ ವನಾಂತರದಿಂದಂ ॥೭೭॥

ಅದಂ ಕಂಡು—

ಚಂ॥ ಭಾವಿಸು ದೇವದೇವ ಚಮರೀಮೃಗ ಶಾಬಮು [1]ನೆಂದು ನಿಂದು ನೋ।
ಧಾವಿಳನಂತದಂ ತಡೆಯದಾಗಳೆ ತೋಱೆ ಸಮಂತು ಕಂಡು ಚಿ॥
ತ್ರಾವಹಮಿಂತಿದಂ [2]ವಿಗತ ಜೀವನಮಾಗದ ಮಾಟ್ಕೆಯಿಂದೆ ತಂ।
ದೋವುವೆನೆಂಬುದಂ ಬಗೆದನಂದವನೀಶ ಮುಕುಂದ ನಂದನಂ ॥೭೮॥

ಕಂ॥ ಬಿಡು ಹಯಮಂ ಮೇಧಾವಿಳ।
ತಡೆಯದೆ ಬೆಂಬತ್ತು ಪೋಗಲೀಯದಿರೆನುತುಂ॥
ಪೊಡವೀಶ ಸುತಂ ತಾನೆಡೆ।
ವಿಡದೆಯ್ದಿದನಿರದೆ ತರುಣ ಚಮರೀ ಮೃಗಮಂ ॥೭೯॥

ಚಂ॥ ಪಿಡಿವ ತಳಕ್ಕೆ ಸಿಲ್ಕು [3]ತುಮುಮರ್ಚಿದೊಡಂ ನುಸುಳುತ್ತುಮಟ್ಟೆ ಕಾ।
ಲೆಡೆಗಳೊಳಾವಗಂ ಪೊಳೆಯುತುಂ ಚಮರೀಮೃಗ ಶಾಬಮಿಂತು ಸಂ॥
[4]ಗಡಿಯೊಳೆ ಪೋಗೆವೋಗೆ ಬಱಯಂ ಬಿಡದೈದುತುಮಿರ್ದನಲ್ತೊ ನೂ।
ರ್ಮಡಿಸೆ ಕರಂ [5]ಪ್ರಧಾನ ತನಯಂ ಬೆರಸಾ ನರನಾಥ ನಂದನಂ ॥೮೦॥

ಕಂ॥ [6]ಎಂತೆಂತು ಪೋಗೆ ತನ್ಮೃಗ।
ಮಂತಂತೆ ಮನಕ್ಕದೊಂದು ಪಿರಿದಾಗ್ರಹಮೋ॥
ರಂತೆ ನಿಲೆವೆಚ್ಚುತಿರೆ ಬಱ।
ಯಂ ತರಿಸಂದೆಯ್ದುತಿರ್ದನಾ ಕಂದರ್ಪಂ ॥೮೧॥

ಚಂ॥ ಪಿಡಿದಪೆನೆಂಬ ಚಿತ್ತದ ದುರಾಗ್ರಹದಿಂ ತೆಱಪಾಗದೆಲ್ಲಿಯುಂ।
ಬಿಡದೆ ನೃಪಾತ್ಮಜಂ ಕಿಱಿದು ಯೋಜನಮಂ ಬಱಸಂದು ಪೋಗಲಾ॥

---

1. ನಿಂದು. 2. ವಿಗಡ. 3. ವಮರ್ಚಿ. 4. ಕಡಿ. 5. ಪ್ರಧಾನಿ.
6. ಇಂತೆಂದು.

ನೆಡೆಯ[1] ತುಸ್ಸುಂ ಕರುತ್ತಡಗದಾ ಚಮರೀಮೃಗ ಶಾಬಮೆಯ್ದಿ ತಾಂ।
ತಡೆಯದೆ ಪೋಗಿ ಪೊಕ್ಕುದಮ ಜಾಂಬುಕಮೆಂಬ ವನಾಂತರಾಳಮಂ ॥೮೨॥

ಕಂ॥ ಎಳವೆಱ[3] ತುಱುಗಿದ ಜಲದಾ।
[2]ವಳಿಯುಂ ಪುಗುವಂತೆ ಪೊಳಿವ ಚಮರೀಮೃಗಮಾ ॥
ಗಳೆ ಪೊಕ್ಕುದು ತರುಗಳ ಗೊಂ।
ಪಳದಿಂ [3]ಕಟ್ಟಲಿಸುತಿರ್ದ ಜಾಂಬುಕ ವನಮಂ ॥೮೩॥

ಮೃಗಮದು ಜಾಂಬುಕ ವನಮಂ।
ಪುಗೆ ನಿಂದಾ ವನದ ಚೆಲ್ವನದನೀಕ್ಷಿಸಿ ನೆ ॥
ಟ್ಟಗೆ ಕಂಡುಂ [ಕಂದರ್ಪಂ]।
ನೆಗೆದಾಗ್ರಹಮಂ ಬಳಲ್ಕೆಯುಂ ನೆಱೆ [4]ಮರೆದಂ ॥೮೪॥

ಮ॥ ಸರಸೀಜಾತ ಪಯಃಕಣ [5]ಪ್ರತತಿಯಿಂ ತಣ್ಣೇಱಿ ನವ್ಯ ಪ್ರಸೂ।
ನ ರಸೋದ್ಯತ್ಪರಿರಂಭದಿಂದೆ ಪಿರಿದುಂ ಕಂಪೇಱಿ ನಾನಾ ವಿಹಂ॥
ಗ ರತೋದ್ಭೂತ ವಿನೂತನ ಶ್ವಸಿತದಿಂದಾದಂ ಪೊಡರ್ಪೇಱಿ ಬಿ।
ತ್ತರದಿಂ ತೀಡಿದುದಿಂತು ಜಾಂಬುಕ ವನೋದ್ಭೃಂಗೀರುತಂ ಮಾರುತಂ ॥೮೫॥

ಆ ವನ ಪವನನಿಂ ವಿಗತ ಶ್ರಮನಾಗಿ ಮೇಧಾವಿಳನ ಪೊಗಮಂ ನೋಡಿ—

ಕಂ॥ ಚಮರೀಮೃಗ ಶಿಶು ತಂದುದು।
ನಮಗಿದು ಸಾಫಲ್ಯಮಾಯ್ತು ಮೇಧಾವಿಳನೋ ॥
[6]ಡಮಮ ಬನದೊಪ್ಪಮನೆನು।
ತ್ತುಮೆ ಪೊಕ್ಕನಿಳೇಶ ಸೂನು ಜಾಂಬುಕ ವನಮಂ ॥೮೬॥

ಮ॥ಸ್ರ॥ ನವಮುಕ್ತಾ ರತ್ನಜಾಲಂ ಮುಗುಳೆ ಸಲಿಲಮಾಯ್ತೋ ಶರಚ್ಚಂದ್ರಿಕಾ ಪುಂ।
ಜವದಂಭೋರೂಪಮಾಯ್ತೋ ದಶವದನ ಭುಜೋತ್ಖಾತಕುಳ್ಳಿಕ್ಕಿ ರೂಪ್ಯಾ ॥
ದ್ರಿ ವಿಭಾಸ್ಫತ್ತಾರಮಾಯ್ತೋ ಮಿಸುಪ ರಸಮೆಪಾನೀಯಮಾಯ್ತೋಸಮಂತೆಂ।
ಬವೊಲಿಂತಚ್ಛಾಂಬುವಿಂದಂದೆಸೆಮುದಪದಳಂ ಪುಂಡ್ರ ಪಂಕೇಜ ಷಂಡಂ ॥೮೭॥

1. ಕುಸುಂಕುರು. 2. ವಳಯುಂ. 3. ಕತ್ತರಿಸು. 4. ಮೊರೆದಂ.
5. ಪ್ರತತಿಯಂ. 6. ಡುವವಿ.

ಕಂ॥ ಕಮಲಾಭಿ ಶೋಭೆಯಿಂದಂ।
ಕಮನೀಯ [ಸುಚಕ್ರ]ದಿಂದನಂತ ವಿಹಂಗೋ॥
ತ್ತಮ ರಮ್ಯದಿಂದೆ ನೆನೆಯಿಪು।
ದಮರಾರಿ ಧ್ವಂಸಿಯಂ ಸರೋರುಹ ಷಂಡಂ ॥೮೮॥

ಆ ಸರಸಿಯಂ ಕಂಡು ತುರಂಗಮನಿೞಿದು ಪರಿತೃಪ್ತ ಜಲಾಹಾರಂಗಳಂ ಮಾಡಿ ತರುಮೂಲದೊಳ್ [1]ವಿಶ್ರಮಿಸಿ ತಾವಿರ್ವರುಂ ತದೀಯ ಸ್ವಚ್ಛಾಂಬು ಸೇವಾ ಸಂತುಷ್ಟ ಮಾನಸರಾಗಿ ಬನದ ಭಾಸುರತೆಯಂ ಭಾವಿಸುತಿರ್ಪಾಗಳ್—

ಮ॥ಸ್ರ॥ ವನಮಂ ದೇಹಾಂಶು ಜಾಳಂ ಬೆಳಗುತಿರೆ ಶಿವಜ್ಞಾನ ದೀಪ್ತಿ ಸ್ವಕೀಯಾ।
ನನದಿಂ ತಾನುಣ್ಮುವಂತುಜ್ಜ್ವಲ ದಶನ ಮಯೂಖಾಳಿ ನೀಳ್ದಾವಗಂ ಪೊ॥
ಣ್ಮೆ ನಿಜ ವ್ಯಾವೇಷ್ಟಿ ಶಿಷ್ಯವ್ರತಿ ಸಮಿತಿಗೆ ಸದ್ಧರ್ಮಶಾಸ್ತ್ರಂಗಳಂ ಭೋ೦।
ಕನೆ ಪೇೞುತ್ತಿರ್ದ ತತ್ಕೌಶಿಕ ಮುನಿವರನಂ ಕಂಡನಾ ರಾಜಪುತ್ರಂ ॥೮೯॥

ಚಂ॥ ನಿನಗಭಿವಾಂಛೆ ಸಿದ್ಧಿಸುವುದೀಗಳೆ ಬಾಯೆನುತುಯ್ದುವೋಲ್ ವಿಲೊ।
ಚನ ಯುಗಮಲ್ಲಿ ಮುಂಬಱಿಯೆ ತಾಂ ಬೞಿಯಂ ಬಿಡದೆಯ್ದಿ ಪರ್ಬಿ ಭೋ೦॥
ಕನೆ ಪದೆಪಿಂದೆ ಬಂದು ಮುನಿವೃಂದ ಸಮಾವೃತ ಕೌಶಿಕ ವ್ರತೀ।
ಶನ ಪದ ಪಂಕಜಕ್ಕೆಱಗಿದಂ ನರನಾಥ ಮುಕುಂದ ನಂದನಂ ॥೯೦॥

ಕಂ॥ ತರುಣಂ ತಾನೀತಂ ಮ।
ಚ್ಚರಣಾನತನಾದನಾವನೆಂದೀಕ್ಷಿಸಿ ಚೆ॥
ಚ್ಚರವೞಿದಂ ಕೌಶಿಕ ಮುನಿ।
ವರನೆಲೆ ಕಂದರ್ಪದೇವನೆನುತುಂ ಮನದೊಳ್ ॥೯೧॥

ಚಂ॥ ಪರಸಿ ಕುಮಾರನಂ ಪರಮ ಹರ್ಷದೊಳಾಗಳೆ ಕೌಶಿಕ ವ್ರತೀ।
ಶ್ವರನಿರದಿತ್ತ ಬಾಯೆನುತುಮಾತ್ಮ ಪದಾಂಬುಜ ಮೂಲದಲ್ಲಿ ಕು॥
ಳ್ಳಿರಿಸಿ ಕರಾಗ್ರದಿಂ ಕದಪನೊಯ್ಯನೆ ನೇವರಿಸುತ್ತುಮಿರ್ದನಾ।
ತರುಣತೆಯೊಳ್ ಸಮುದ್ಭವಿಸಿದಾತನ ಭಕ್ತಿಗೆ ತಾನೆ ಮೆಚ್ಚುತುಂ ॥೯೨॥

ಕಂ॥ ಕಂದರ್ಪದೇವನೊಡನೆ।
ಟ್ಟಿಂದೆಱಗಿದ ತತ್ಪ್ರಧಾನ ಸೂನುವನತ್ಯಾ॥

1. ನಿಯಮಿಸಿ.

ನಂದದೆ ಪರಸಿದನಾ ಮುನಿ।
ವೃಂದಾರಕನಪ್ಪ ಕೌಶಿಕ ವ್ರತಿನಾಥಂ ॥೯೩॥

ಇನಿತೇಂ ಕಾರ್ಯಮೊ ನೀನೊ।
ರ್ವನೆ ನೃಪಸುತ ಬಂದೆ ಬಂದ ತೆಜನಾವುದು ಪೇ॥
ೞೆನುತುಂ ಪ್ರಿಯದಿಂ ಕೌಶಿಕ।
ಮುನಿಪಂ ಕಂದರ್ಪದೇವನಂ ಬೆಸಗೊಂಡಂ ॥೯೪॥

ಚಂ॥ ಪೆಱತಣಮಿಲ್ಲ ಸನ್ಮುನಿಪ ಬಿನ್ನಪಮಾಂ ಪಿಡಿದುಯ್ದು ಪಾಲಿಪೊಂ।
ದೆಱಕದೊ[1]ಳಿಂದು ಕಂಡ ಚಮರೀಮೃಗ ಶಾಬದ ಬೆನ್ನನಾಂತು ಬೇ॥
ಸಱದೆ ಬರಲ್ಕೆ[2]ಯೊವನದೆಯೊಗಳಡಂಗಿತದರ್ಕ್ಕೆ ದೇವ ಮೇ।
ಣಱಕೆಯ ಸಿದ್ಧಿಯಾಯ್ತೆನಗದೆಂತೆನೆ ನಿಮ್ಮ ಪದಾಬ್ಜ ದರ್ಶನಂ ॥೯೫॥

ಇಂತು ಬಿನ್ನವಿಸಿದ ನೃಪನ ಸಮುಚಿತೋಕ್ತಿಗೆ ಮುನೀಶ್ವರಂ ಹರ್ಷ ಹೃದಯನಾಗಿ—

ಉ॥ ಪೂದರಲೆಂದು ಪೋಪ ಮುನಿಬಾಲರ ಬೆಂಬೞಯಲ್ಲಿ[3]ಮೆಚ್ಚಿನಿಂ।
ಪೋದುದು ತಪ್ಪಿ ನಿಂದುದಿರ[4]ದಿಲ್ಲಿಗೆ ಬಂದುದು ತಾನದೆಮ್ಮದೆಂ॥
ತಾದೊಡಮೇಂ ನರೇಂದ್ರ ಸುತ ಕೊಳ್ಳೆಮಗೇವುದೆನುತ್ತುಮಿತ್ತನ।
ತ್ಯಾದರದಿಂ ತದೀಯ ಮೃಗ ಶಾಬಮನಾದರದಿಂ ಮುನೀಶ್ವರಂ ॥೯೬॥

ಕಂ॥ ಇದು ದೇವ ನಿಮ್ಮಡಿಗೆ[5]ಸೇ।
ರಿದುದಾದೊಡಮೊಲ್ಲೆನೊಲ್ಲೆನಿರಲಿಮೆನಲ್ ಮಾ॥
ಣದೆ ಚಮರೀಮೃಗ ಶಿಶುವಂ।
ಪಡೆದಿತ್ತಂ ನೃಪಸುತಂಗೆ ಕೌಶಿಕ ಮುನಿಪಂ ॥೯೭॥

ಮತ್ತಮಾಗಳೆಲೆ ನರೇಂದ್ರನಂದನ ಮಧ್ಯಾಹ್ನ ಸಮಯಮಾಯ್ತು ನೀನಿಲ್ಲಿಯೇ ಸ್ವೀಕೃತಾಹಾರನಾಗೆಂದು ನೇಮಿಸಿ ವಿಸರ್ಜಿತಾಧ್ಯಯನನಾದ ಕೌಶಿಕ ಮುನೀಶ್ವರಂ ನಿಜ ನಿಖಿಳ ನಿಯಮಂಗಳಂ ನಿರ್ವರ್ತಿಸಿ ತದನಂತರದೊಳ್—

1. ೞಂದು ಕಂಡು. 2. ಮಾವನರಿಮಾ. 3. ಮೆಚ್ಚನೀಂ. 4. ದೆಲ್ಲಿಗೆ.
5. ಸೇ। ದಿವದಡಾ.

ಚಂ॥ ಪ್ರಿಯದೊದವಿಂದೆ ತಂದು ಕದಳೀದಳ ಪಾತ್ರಮನಿಟ್ಟು ತಾನೆ ತ।
ನ್ನಯ ಕರದಿಂದ [1]ಮಿಕ್ಕುವ ತದೀಯ ಮುನೀಶ್ವರನಾದರಾಮೃತ ॥
ಪ್ರಯುತದಿನಿಂಪು ನೂರ್ಮಡಿಸಿತಾ ರಸವತ್ಫಲ ಕಂದ ಮೂಲ ಸಂ।
[2]ಚಯದೆ ಸಖಾನ್ವಿತಂ ನೃಪಸುತಂ ಪರಿತೃಪ್ತಿಯನಾಗಳೆಯ್ದಿದಂ ॥೯೮॥

ಕಂ॥ ಘೆಳಿಲನೆ ತಾಮುಂ ಶಿಷ್ಯಾ।
ವಳಿ ಸಹಿತಂ ಕಂದ ಮೂಲ ಫಲ ಭಿಕ್ಷೆಯನಾ ॥
ಗಳಿ ಮಾಡೆ ಮುನೀಶ್ವರನು।
ಜ್ಜ್ವಳಿಪ ನಿಜಾಸನ ಕುಶಸ್ಥಳ ಸ್ಥಿತನಾದಂ ॥೯೯॥

ಆ ಸಮಯದೊಳಂಘ್ರಿ ಮೂಲೋರ್ವಿಯೊಳುಚಿತಾಸನಾಸೀನನಾದ ಧರೇಂದ್ರ ಸೂನುವಂ ನೋಡಿ—

ಕಂ॥ ಸರಸಾನ್ನ ಸೇವಿಗಳ್ಗೀ।
ತರು ಫಲ ಮೂಲಂ ರಸಾನ್ನಮಲ್ತಾದೊ[3]ಡಿದಂ ॥
ಪರಿಹರಿಸದೆ ಮನ್ನಿಸಿದಂ।
ಪಿರಿದುಂ ಮದ್ವಚನಮುಂ ಮಹೀಶತನೂಜಾ ॥೧೦೦॥

ಆರಿನಿತಂ ಪಡೆವರ್ ಜಗ।
ದಾರಾಧ್ಯರೆನಿಪ್ಪ ನಿಮ್ಮ ಕರುಣಮನೆನ್ನಂ ॥
ತಾರೆಯಲೀ ಫಲ ಮೂಲದ।
ಚಾರು [4]ಸ್ವಾದುತೆ ವಿಚಿತ್ರಮೆನಗೆ ಮುನಿಂದ್ರಾ ॥೧೦೧॥

ಇಂತು ನುಡಿದ ಕುಮಾರನ ವಚನದಿಂ ಮುದಿತನಾಗಿ ಮುನೀಂದ್ರ ನಿಂತೆಂದಂ—

ಕಂ॥ ನಾವ[5]ಧ್ವರದೊಳ್ಮುಂ ಪಡೆ।
ದಾ ವಿವಿಧ ಮಹಾಯುಧಂಗಳಂ ತನ್ನಿಮೆನು ॥
ತ್ತಾವೇಗದೆ ತಮ್ಮಯ ಶಿ।
ಷ್ಯಾವಳಿಯಿಂ ತರಿಸಿದಂ ಮುನೀಶ್ವರನಾಗಳ್ ॥೧೦೨॥

1. ಮಿಕ್ಕುತ ತದೀಯ. 2. ಚಯದಿ. 3. ಡದಂ. 4. ಸ್ವಾದತೆ.
5. ದ್ವಂದ್ವದೊಳು.

ಎಮಗಭ್ಯಾಗತನೈ ನೀಂ।
ಕುಮಾರ ನಿನಗೀವುದಿಲ್ಲ ಮಣಿ ಭೂಷಣ ವ॥
ಸ್ತ್ರ[1]ಮನಾದೊಡಮಿರ್ದುವನೀ।
ವಮೆನುತ್ತಾ ಮುನಿಪನಿತ್ತನಾಯುಧ ತತಿಯಂ ॥೧೦೩॥

ಮ॥ ಇವು ದಿವ್ಯಾಯುಧವಿಾ ಧನುಶ್ಶರ ಗದಾ ಕುಂತೋಗ್ರ ಖಡ್ಗಂಗಳಿಂ।
ತಿವು ನೀಂ ಮಂತ್ರ ವಿಧಾನದಿಂ ನೆನೆದೊಡಂ ತದ್ವೇಗದಿಂ ಬರ್ಪುವಾ॥
ಹವದೊಳ್ ಕೊಲ್ವುವು ದುರ್ಮದಾರಿಗನಿಶಂ ಶಂಕಾಸ್ಪದಂ ತಾಮಿವೆಂ।
ದವನಿತ್ತಂ ಮುನಿನಾಥನಾಗಳೆ ಮಹೀಭೃತ್ಸೂನುಗುತ್ಸಾಹದಿಂ ॥೧೦೪॥

ಇಂತು ಬೆಸಸೆ ಮಹಾಪ್ರಸಾದವೆಂದು ಕಂದರ್ಪದೇವಂ ಕೌಶಿಕ ಮುನೀಂದ್ರನಂ ಬೀಳ್ಕೊಂಡು ಚಮರೀಮೃಗ ಸಮೇತಂ ಮೇಧಾವಿಳ ದ್ವಿತಯ ನಾಗಿ ಬಂದು ನಿಜಾಭ್ಯಾಸ ವಾಸಮಂ ಪೊಕ್ಕು—

ಕಂ॥ ಅಱಯಂ [2]ಗಣಿಸಲಣಂ ಮು।
ನ್ನಱಕೆಯ ಕಮಲಜನೆನಲ್ಕೆ ಕಂದರ್ಪಂ ತಾ॥
ನೆಱಕದಿನಱವಂ ಕಲ್ತಂ।
ನೆಱ[3] ನಾನಾ ತೆಱದ ಹೃದ್ಯ ವಿದ್ಯಾವಳಿಯಂ ॥೧೦೫॥

ಮ॥ಸ್ರ॥ ಮೊದಲೊಳ್ ವಿದ್ಯಾತುಳಶ್ರೀ ಸಲೆ ಮತಿಯಂ ಸಾರ್ಪುದುಂ ಮಚ್ಚರಂ ಪೆ।
ರ್ಚಿದವೋಲಾ ಭಾಸುರಶ್ರೀ ಸುದತಿ ವಪುವನಾಶ್ಚರ್ಯ ಸಮ್ಮೋಹನಶ್ರೀ॥
ಸುದತಿ ಸ್ನಿಗ್ಧಾಯತಾಕ್ಷಿ ದ್ವಯಮುನಖಿಳ ಸೌಂದರ್ಯ ವರ್ಯೋನ್ನತಶ್ರೀ।
ಪದೆಪಿಂ ಪ್ರತ್ಯಂಗಮಂ ಪೊರ್ದಿಯುಮೆಸೆದನಿಳಾನಂದ ಕಂದರ್ಪದೇವಂ ॥೧೦೬॥

ಕಂ॥ ಆ ಕಂದರ್ಪಂ ನೋಡಿ ನಿ।
ರಾಕೃತಿಯೆಂದೊಲ್ಲದುಟಿದು ಸಮ್ಮೋಹನ ಲ॥
ಕ್ಷ್ಮೀಕಾಂತೆ ಬಂದು ಪೊರ್ದಿದ।
ಳೀ ಕಂದರ್ಪನ [3]ಸುಕೋಮಳಾಮಳ ತನುವಂ ॥೧೦೭॥

ಮ॥ ಎನಗಾರುಂ ಸರಿಯಿಲ್ಲ ಮೂಜಗದೆ ತಾಳ್ವಾಕಾರ ಸೌಂದರ್ಯದಿಂ।
ದೆನುತುಂ ಪೊಂಗುವ ಕಂತುವೀತನ [4]ಸುರೂಪಾಶ್ಚರ್ಯಮಂ ಕಂಡು ನಾ॥

1. ಮವಾದೊಡ. 2. ಗುಣಿಸ. 3. ಸಕೋಮಳಾ. 4. ಸರೂಪಾ.

ಣ್ಚೆ ನಿರಾಕಾರಮನಾಂತನೆಂದೊಡೆ ನವೀನಂಬೆತ್ತ ಕಂದರ್ಪದೇ।
ವನ ಸಮ್ಮೋಹನ ಮೂರ್ತಿ ವಿಭ್ರಮಮನಿನ್ನೇವಣ್ಣಿ ಪೆಂ ಬಣ್ಣಿ ಪೆಂ ॥೧೦೮॥

ಚಂ॥ ವದನ ಸುಧಾಮರೀಚಿಯೊಳಣಂ ಪೊಳಪೇಱೆ ವಿಲೋಚನಂಗಳೊಳ್।
ಪುದಿದ ವಿಳಾಸವೇಱೆ ತನುಯಷ್ಟಿಯೊಳಂಶುವ ಪುಷ್ಟಿಯೇಱೆ ಚಿ॥
ತ್ತದೊಳಮರ್ದಪ್ಪುದಾರ ಮುದವೇಱೆ ನಿಜಾವಯವ ಪ್ರತಾನದೊಳ್।
ಪದೆಪಿನ ಚೆಲ್ವ[1]ದೇಱೆ ನವ ಯೌವನವೇಱಿದುದಾ ಕುಮಾರನೊಳ್ ॥೧೦೯॥

ಕಂ॥ ಮಿಸುಪಾಶ್ರಯದಿಂ ರತ್ನಮು।
ದೆಸಕಂಬಡೆವಂದದಿಂದೆ ಕಂದರ್ಪನ ಮೋ॥
ಹಿಸುವಮಳಾಕೃತಿಯಂ ಸಾ॥
ರ್ದಸದಳಮೆಸೆದುದು ನವೀನ ಯೌವನ ವಿಭವಂ ॥೧೧೦॥

ಮ॥ಸ॥ ಸ್ಮರನೀಶಾಭೀಳ ಭಾಳಾಂಬಕ ಶಿಖಿ ಮುಖದೊಳ್ ಮಱ್ಗಿದಂ ಮುನ್ನ ಮೆಂದಂ।
ಬುರುಹೋದ್ಭೂತಂ ಕರಂ ಕೌತುಕಮೆನಿಸುವ ಸಲ್ಲಕ್ಷಣಾನೀಕ ಶೋಭಾ॥
ಕರ ಭದ್ರಾಕಾರನಂ ತಾಂ ಪಡೆದನೆಲೆ ಜಗಕ್ಕೊರ್ಬ ಕಂದರ್ಪನಂ ಬಿ।
ತ್ತರದಿಂದೆಂಬಂತೆ ಸಂಮೋಹಿಸುವನೆಸೆವ ರೂಪಿಂದೆ ಕಂದರ್ಪದೇವಂ ॥೧೧೧॥

ಮ॥ ಉಪಲಂಗೀ ನಿನಗೇವುದೀ ನಿರುಪಮ[2]ಸ್ನಿಗ್ಧಾಸಿತ ದ್ಯೋತಮೆಂ।
ದು ಪಯೋಜಾಸನನಿಂದ್ರನೀಲ ರುಚಿಯಂ ತಾನೀಟ್ಟುಕೊಂಡಾ ವಿರಾ॥
ಜಿಪ ರುಗ್ಮಂಜರಿಯಿಂ [3]ಪ್ರಸಾಧನೆಯ ಗೆಯ್ದಂತೊಪ್ಪವಿಟ್ಟಂದದಿಂ।
ನೃಪ ಕಂದರ್ಪನ ಕೇಶ ಪಾಶಮಸೆಗುಂ ನೀಲಪ್ರಜಾ ಜಾಲದಿಂ ॥೧೧೨॥

ಕಂ॥ ಕುಂದದ ಕಳೆಗಳನೆಱೆದ[4]ಪೆ।
ನೆಂದು ಮುಖೇಂದುವನೆ ಸಾರ್ದನರ್ಧೇಂದುವೆನಿ॥
ಪ್ಪಂದದಿನೊಪ್ಪಿದುದೆನಸುಂ।
ಕಂದರ್ಪನ [5]ವಿಮಳ ರುಚಿ ವಿಶಾಲಂ ಬಾಳಂ ॥೧೧೩॥

ಮನುಗಳ ದೊರೆ ಚರಿತದೊಳೀ।
ತನೆನುತ್ತಿರ್ಕೈಗಳಿಂ ವಿರಿಂಚಿಯು ಬರೆದೇ॥

---

1. ನೇಱೆ. 2. ಸ್ನಿಗ್ಧಂಸಿತ. 3. ಪ್ರಸಂದಿನ ನಯಂದಂ. 4.ದಪ್ಪೆ. 5. ವಿಪುಳ.

ಟನೆಯೆರಡು ಲೆಕ್ಕಮೆನೆ ನೃಪ।
ಮನೋಭವ ಭ್ರೂಲತಾಯುಗಂ ಸೊಗಯಿಸುಗುಂ ॥೧೧೪॥

ಮ॥ ಕಮಲಂ ತದ್ದ್ವಿಜರಾಜ ವೈರಿ ಸತತಂ ಚಂಡಾಳನೀ ಪೀತ ಶೇ।
ಷ ಮಧುವ್ರಾತದ ಭಾಜನಂ ಕುವಲಯಂ ದೋಷಾನುಬದ್ಧ ಪ್ರಭಾ॥
ವಮಿನಾರಾತಿಯೆನುತ್ತವಂ ಪಱಿದು ರಾಗಂಬೆತ್ತವೋಲ್ ಕೆಂಬೆಳ।
ರ್ಪಮದಿರ್ಂತೊಪ್ಪಿದುವಾಯತಾಕ್ಷಿಗಳಿಳಾ ಚಕ್ರೇಶ ಕಂದರ್ಪನಾ ॥೧೧೫॥

ಕಂ॥ ಕಮನೀಯ ಭ್ರೂಲತಿಕಾ।
ಯಮಳೋದ್ಭವ ಮೂಲ ದಂಡಮೆಂಬೀ ನವ ವಿ॥
ಭ್ರಮಮಂ ಬೀಱುವುದೋ ಭ್ರೂ।
ರಮಣ ಮನೋಭವನ ಮಿಸುಪ ನಾಸಿಕೆ ಮೊಗದೊಳ್ ॥೧೧೬॥

ದರಹಾಸ ದೀಪ್ತಿಯಂ ಮಾಂ।
ಕರಿಸುವ ಮುಖಚಂದ್ರ ಕಳೆಯ ಫಲಕಾ ಯುಗದಂ॥
ತಿರೆ ತೋರ್ಪುವೆಸೆದು ವಸುಧಾ।
ವರ ಕಂದರ್ಪನ ಲಸತ್ಕಪೋಲ ಪುಟಂಗಳ್ ॥೧೧೭॥

ಪರಮಾಕ್ಷರ ಮಂಜರಿಯೆನಿ।
ಪುರುತರ [1]ಕರ್ಣಾವತಂಸ ಶೋಭೆಗೆ ಶೋಭಾ॥
ಕರಮಂ ಕುಡುತಿರ್ಪುವು ಸುರು।
ಚಿರ ಕರ್ಣಂಗಳ್ ಮಹೀಶ ಮಕರಧ್ವಜನಾ ॥೧೧೮॥

ಪುದಿದ ನವ ಯೌವನ ಮದೇ।
ಭದ ಮದ ಲೇಖೆಗಳಿವೆನಿಸಿ ಕಂದರ್ಪನ ಚೆ॥
ಲ್ವೊದವಿರ್ಪ ವದನದೊಳ್ ಪೊ।
ಣ್ಮಿದುದು ನವಶ್ಮಶ್ರು ಸೂಕ್ಷ್ಮ ಲೋಮ ಸ್ತೋಮಂ ॥೧೧೯॥

ಚಿತ್ತಮನಾವರಿಸುವ ಪದೆ।
ಪೊತ್ತರಿಸಿರೆ ಹೃದಯಮಂ ಪುಗಲ್ ಸಮಯಂಬಾ॥

---

1. ಕಾರಾವತಂಸ.

ರುತ್ತಿರ್ಪ ರಾಗಮೆನೆ ರೂ।
ಪೋತ್ತಮು ಕಂದರ್ಪನಧರ ಮಣಿ ಕಣ್ಗೊಳಿಕುಂ ॥೧೨೦॥

ಮ॥ ಘನ ಸೌಂದರ್ಯ ವಿಲಾಸನೀತನೆ ವಿನೂತೋನ್ಮಥ್ಯ ಹಾಸತ್ವನೀ।
ತನೆ ಬಾಹಾಬಲ ಭೀಮನೀತನೆ ವಲಂ ತ್ರೈಲೋಕ್ಯದೊಳ್ ತಾನೆನು॥
ತ್ತನಿತಂ ಸೂಚಿಸುವಂತಜಂ ಬಱೆದ ಮೂಱುಕ್ಕುಂ ರೇಖೆಗಳ್ ತಾವಿದೆಂ।
ದೆನೆ ಕಂದರ್ಪನ ಕಂಬು ಕಂಠಮೆಸೆಗುಂ ಸಾಶ್ಚರ್ಯ ಸೌಂದರ್ಯದಿಂ ॥೧೨೧॥

ಕಂ॥ ಜನನಾಥ ವೃಷಭನಿಂತೀ।
ತನೆ ಧಾತ್ರಿಯೊಳೆಂದು ಸೂಚಿಪಂತಿರೆ ಸರ್ವೋ॥
ಹನ ಮೂರ್ತಿಯಪ್ಪ ಕಂದ।
ರ್ಪನ [1]ರುಂದ್ರಗವೇಂದ್ರ ಕಂಧರಂ ಕರಮೆಸಗುಂ ॥೧೨೨॥

ವಸುಮತಿಯೊಳನುಪ[2]ಮಿತಮಾ।
ನ ಸುವರ್ಣ ಗಿರೀಂದ್ರನಪ್ಪ ಕಂದರ್ಪನ ರಾ॥
ಜಿಸುವ ಭುಜಶಿಖರ ಯುಗಳಮ।
[3]ವೆಸೆದುವು ತತ್ಪಾರ್ಶ್ವ ತುಂಗ ಶೃಂಗಂಗಳವೋಲ್ ॥೧೨೩॥

ಮ॥ ಇಳೆಯುಂ ಮುಂ ತಳೆದಿರ್ದ ಶೇಷನೆನಿತಾನುಂ ವೃದ್ಧನಾಯ್ತೆಂದು ತಾಂ।
ಜಳಜಾವಾಸನಹೀಂದ್ರ ಯುಗ್ಮಮನೆ ಬಾಹಾವ್ಯಾಜದಿಂ ಮಾಡಿದಂ॥
ಗಳಮೆಂಬಂತೆ ತಳಂ ಫಣಂ ನಖ ಚಯಂ ರತ್ನೌಘಮಾಗಿಂತು ಕ।
ಣ್ಗೊಳಿಸುತ್ತಿರ್ಪುವು ತದ್ಭುಜಾ ಲತಿಕೆಗಳ್ ಭೂಕಾಂತ ಕಂದರ್ಪನಾ ॥೧೨೪॥

ಕಂ॥ ಕ್ಷಿತಿಯನಿಱಿಕೆಯ್ದು ತಾನ।
ಪ್ರತಿಹತ ವಿಪುಳತೆಯಿನುದ್ಘ ನಿಷ್ಕಂಪತೆಯಿಂ॥
ದತಿಶೋಭಿಸುತಿರ್ಪುದು ಭೂ।
ಪತಿಕಂದರ್ಪನ ವಿಶಾಲ ವಕ್ಷೋರಂಗಂ ॥೧೨೫॥

ತನುಮಧ್ಯಂ ನಿರುಪಮ ರೂ।
ಪನ ವಿನಯ ವಿಳಾಸ ನಿಧಿಯ ತನುಮಧ್ಯಂ ಮೋ॥

1. ರುದ್ರ. 2. ಹತ. 3. ನೆಸೆದುವು.

ಹನ ರೋಚಿಸ್ತನು ಮಧ್ಯವಿ।
ದೆನಿಪುದು ಕಂದರ್ಪನೊಪ್ಪುವಾ ತನುಮಧ್ಯಂ ॥೧೨೬॥

ತನು ಸೌಂದರ್ಯ ಸುಧಾ ರಸ।
ಮನುದಿನಮುಣ್ಮುತ್ತಮಿರ್ಪ ವಾಪಿಯೆ ತಾನೆಂ॥
ದೆನೆ ವಸುಧಾಧಿಪ ಕಂದ।
ರ್ಪನ ಘನ ಗಂಭೀರ ನಾಭಿ ಶೋಭಿಸಿತೆನಸುಂ ॥೧೨೭॥

ಮ॥ ಕರಿ ಕುಂಭೋಪಮೆಯಂ ನಿರಾಕರಿಸುತುಂ ಕಂಠೀರವೋತ್ಕೃಷ್ಟ ವಿ।
ಷ್ಟರ ವಿನ್ಯಸ್ತ ವಿಳಾಸಮುಳ್ಳುದಜನತ್ಯಾಶ್ಚರ್ಯ ಸೌಂದರ್ಯ ಬಂ॥
ಧುರ ಪಿಂಡದ್ವಯಮೆಂಬ ವರ್ಣನೆಗಣಂ ಪಕ್ಕಾಗಿ ವೃತ್ತೋನ್ನತ।
ಸ್ಫುರಿತಂಬೆತ್ತುದು ತತ್ಕಟೀಯುಗಳಮಾ ಭೂಕಾಂತ ಕಂದರ್ಪನಾ ॥೧೨೮॥

ಕಂ॥ ಛಂದೋಲಂಕಾರದ ತೆಱ।
ದಿಂದುರುತರ ವೃತ್ತ ಶೋಭೆ ಸತ್ಕಾಂತಿ ವಿಳಾ॥
ಸಂ ದೊರೆವೆತ್ತೆಸೆದುವು ನೃಪ।
ಕಂದರ್ಪನ ನಿರುಪಮೋರು ಕಾಂಡ ಯುಗಂಗಳ್ ॥೧೨೯॥

ಹರ ನಯನಾನಲ ಹತಿಯಿಂ॥
ದರೆವೊತ್ತಿದ ಕುಸುಮ ಶರ ನಿಷಂಗೋಪಮೆಯಂ।
ಪರಿಭವಿಪುವು ಕಂದರ್ಪನ।
ಸುರುಚಿರ ಜಂಘೆಗಳನೂನ ವಿಮಳಚ್ಛವಿಯಿಂ ॥೧೩೦॥

ಕಡುಗೊರ್ಬಿ ಕಾಯ ದೀಧಿತಿ।
ಕುಡಿಯಿಟ್ಟುದು ಕೋಮಲಾಂಗುಲಿ ವ್ರಜ ಮುಖದಿಂ॥
ಗಡಮೆಂಬ ತೆಱದಿನೆಸಕಂ।
ಬಡೆದುದು ಕಂದರ್ಪನಂಘ್ರಿ ನಖ ರುಚಿ ನಿಕರಂ ॥೧೩೧॥

ವಿನತಾರಿ ನೃಪ ನಿಕಾಯ।
ಕ್ಕನುರಾಗಮಸೀವ ರಾಗಮಂ ತಾಳ್ದಿದುವೆಂ॥
ಬಿನಮೊಸೆದುವಲ್ತೆ ಕಂದ।
ರ್ಪನ ಚರಣ ತಳಂಗಳರುಣ ಕಿರಣೋತ್ಕರದಿಂ ॥೧೩೨॥

ಕಂದರ್ಪನ ಪಶ್ಚಿಮ ಗಾ।
ತ್ರಂ ದೊರೆವೆತ್ತಿರ್ಪ ಸಕಲ ಸೌಂದರ್ಯ ಕಳಾ॥
ವೃಂದಕ್ಕೆ ತಾನೆ ಪೂರ್ವಮಿ।
ದೆಂದೆನಿಸಿದುದೇನಪೂರ್ವ ಚಿತ್ರವೊ ರೂಪಂ ॥೧೩೩॥

ಮತ್ತಮಾ ಕಂದರ್ಪದೇವಂ ರೂಪ ಕಮನೀಯಪ್ರಾಯ ಚಿತ್ರಕಾಯನಾಗಿಯುಂ ಮೃಗ ನಯನಾತಿ ಭೀತಿಪ್ರದ ಪ್ರಭಾವನಲ್ಲು ವಿಶ್ವಂಭರ ಸಂಭೂತನಾಗಿಯುಂ ಮಧುಪಾವಳಿ ಪರೀತನಲ್ಲು ಸೌಂದರ್ಯ ಸಂಪತ್ಕಳಾಧಿನಾಥನಾಗಿಯುಂ ಮಿತ್ರವ್ಯಪೇತ ಪ್ರವರ್ತನನಲ್ಲು ತೇಜಃಪ್ರಭಾವ ತಿಗ್ಮಾಂಶುವಾಗಿಯುಂ ಕುವಲಯಾರಾತಿಯಲ್ಲು ಪ್ರಶಂಸಲ್ಲಕ್ಷ್ಮೀ ಜನಕಾಸ್ಯ ರಾಜೀವನಾಗಿಯುಂ ರಜೋಮಯನಲ್ಲು ಧರೋದ್ಧರಣ ಭೂರಿ ಭುಜಗೇಂದ್ರನಾಗಿಯುಂ ತಾರ್ಕ್ಷ್ಯಾಹಿತನಲ್ಲು ನಕ್ಷತ್ರ ಮಾಲಾ ಕಲಿತ ವಕ್ಷೋಂಬರನಾಗಿಯುಂ ದೂರೋತ್ಸಾರಿತ ಧರಾ ಮಂಡಲನಲ್ಲು ವಿಶಾಲ ಕಟಿತಟ ತನುಮಧ್ಯ ಮೃಗೇಂದ್ರನಾಗಿಯುಂ ಸಾಮಜ ಸ್ವರಾಕರ್ಣನ ಕುಪಿತ ಚೇತನನಲ್ಲು ಲಲಿತ ಲೀಲಾಯಾನ ಮಹಾ ಮತಂಗಜೇಂದ್ರನಾಗಿಯುಂ ಮದಾ ಕಲಿತ ಮಾಂದ್ಯ ಭಾವನಲ್ಲು ಅಂತುಮಲ್ಲದೆಯುಂ—

ಮಂದಾನಿಲ

ರಗಳೆ॥ ಪೊಳಪನೊಳ್[1]ಕೆಯ್ದ ರಾಕೇಂದು ಮಂಡಲದಂತೆ।
ಕಳಿಕಾ[2]ವಳಿ ವಿಳಾಸನೊಗೆದಾಮ್ರ ಕುಳದಂತೆ।
ಪರಿಮಳದ ಸಿರಿ ಪುದಿದ ಮಲ್ಲಿಕಾ ತತಿಯಂತೆ।
ಶರದಮೊಂದಿದ ಸಾಂದ್ರ ಚಂದ್ರಿಕಾಕೃತಿಯಂತೆ।
ತಳಿರ ತೊಡವಂ ಪಡೆದ ಮಲಯಜದ ಕುಲದಂತೆ।
ವಿಳಸತ್ಪ್ರತಾಪಮಂ ಪಡೆದ ಪಂಕಜದಂತೆ।
ಮಧುಮಾಸದೊಸಗೆ [3]ಸಮನಿಸಿದ ತಂಬೆಲರಂತೆ।
ಮಧು ವಿನೋದವನಾಂತ ಮಧು ಸಮಯದಲರಂತೆ।
ಸೊಗಯಿಸಿದನೆಸೆವ ಯೌವನದ ಸಿರಿ ಸಂಗಳಿಸಿ।
ಮಿಗೆ ಮಿಸುಪ ಕಾಂತಿ ಮಿಗೆ ನೆಲೆವೆರ್ಚಿತನುಗೊಳಿಸಿ
ತೊಳಪ ತನಿಗರ್ಪು ಕೇಶಾವಳಿಯೊಳೊತ್ತರಿಸಿ।
ಪೊಳೆವ ಪಜ್ಜಳಿಕೆ ನಿಡುಗಣ್ಗಳೊಳ್ ಬಿತ್ತರಿಸಿ।
ಭ್ರೂ ಲತೆಯೊಳಮಳ ವಿಭ್ರಮ ಲಕ್ಷ್ಮಿ ತಲೆದೋಱೆ।
ಲಾಲಿತಾಸ್ಯದೊಳಗೊಗೆದ ಪೊಂಪುಱೆ ಪೊಡರ್ಪೇಱೆ।

1. ಕೆಯ್ವ. 2. ವಿಳ. 3. ಸಮನಿಸದ.

ಥಳಥಳಿಸಿ ತೋಳ ಮೊದಲುಜ್ಜ್ವಳಿಕೆ ಕುಡಿಯಿಟ್ಟು ।
ಪೊಳೆವಂಗ ಭಂಗಿಯೊಳೆ ಹಳಹಳಿಕೆ ಪೊಱಮಟ್ಟು ।
ಪೇರುರದ ಪೊಳೆಪು ಮಣಿಹಾರ ರುಚಿಯಂ ಪೆರ್ಚೆ ।
ಚಾರುತರ ಚರಣ ನಖ ತತಿಯ ತನಿವೆಳಗುರ್ಚೆ ।
ಮಿಸುಪ ನವ ಸೌಂದರ್ಯದೆಸಕಮನೆ ಕೈಕೊಂಡು ॥
ಕುಸುಮ ಕಾಂಡನ ರೂಪ ಕಳೆಯನೆಳಗುಡಿಗೊಂಡು ।
ಭುವನ ಸಂಮೋಹನ ಶಲಾಕೆಯಿದೆ ಎಂದೆನಿಸಿ ।
ಯುವತಿಯರ ಕರುಣ ಪುಣ್ಯದ ಪಂಚಿಕೆಯಿದೆನಿಸಿ ।
ಪಿರಿದುಂ ಪೊದಟ್ದ ಚೆಲ್ವಿನ ಕಡಾರಮಿದೆನಿಸಿ ।
ನಿರವಧಿ ವಿಳಾಸ ಗೋಮಿನಿಯಗಾರಮಿದೆನಿಸಿ ।
ಕಮಲ ಭವನೆಸೆದು ನಿರ್ಮಿಸಿದ [1]ಕೌತುಕ ಸೃಷ್ಟಿ ।
ಸಮುಚಿತ ಸಮಸ್ತ ಶುಭ ಲಕ್ಷಣ ಕಳಾ ಯಷ್ಟಿ ।
ಎನಿಪ ತನ್ಮೂರ್ತಿ ವರ ಶೋಭೆಯಿಂ ಥಳಥಳಿಸಿ ।
ತನಿಗೊರ್ಬಿದವಯವದ ಸೊಂಪು ಸಲೆ ಪಜ್ಜಳಿಸಿ ।
ನಳ ಕೂಬರಾಕಾರದೊಪ್ಪಮಂ ಪಟಾಕೆಯ್ದು ।
ಕುಳಿಸಿಯ ಜಯಂತನ ವಿಳಾಸಮುಮನಿಟಾಕೆಯ್ದು ।
ಅತನುವೆಂದಂಗಜನ ಭಂಗಿಯಂ ಕೊಱಚಾಡಿ ।
[2]ಧೃತ ವಿಕೃತಿಯಿಂದೆ ಹರಿರೂಪಮಂ ಕೀೞ್ಮಾಡಿ ।
ಕಮನೀಯಮಪ್ಪ ನಿಜ ಮೋಹನಾಕಾರದಿಂ ।
ಸಮಸಂದ ವೈಭವದ ರೂಪ ವಿಸ್ತಾರದಿಂ ।
ಅನುಚಿತಾಲಾಪಂಗಳೆಂದು ಕೀರಂಗಳಂ ।
ಅನುದಿನಂ ಮಧುಪಂಗಳೆಂದು ಭೃಂಗಂಗಳಂ ।
ನೆಱೆ[3] ವಿಜಾತಿಗಳೆಂದು ಕಳ ಕೋಕಿಲಂಗಳಂ ।
ಮಿಱೆ[3]ಪಾ ಕುಜಾತಂಗಳೆಂದು [4]ಚೂತಂಗಳಂ ।
ಪ್ರಕೃತಿ ಚಳಮಪಘನಮಿದೆಂಬು ತೆಂಗಾಳಿಯಂ ।
ಪ್ರಕಟ ಮಧು ಸದನಮೆಂದಲರ ಬಾಣಾಳಿಯಂ ।
ಋಜು ಗುಣೋಪೇತಮಲ್ತೆಂದಿಕ್ಷುಧನ್ವಮಂ ।
ನಿಜದೆ ಜಡಜಾತಮೆಂದಬ್ಜ ಸಂತಾನಮಂ ।
ನಾಡೆ ಪಕ್ಷಗನೆಂದು ರೋಹಿಣೀ ಕಾಂತನಂ ॥
[5]ಜೋಡಿಯಂ ಬಿಡದಿರ್ಪನಲ್ಲದ ವಸಂತನಂ ।

1. ಕಂತುಕ. 2. ಧೃತಿ. 3. ಪಕ್ಷೆಯ್ದೊಕಂ. 4. ಭೂತಂ. 5. ನೋಡಿ ಬಡೆ.

ಬಗೆಯದೆ ಪರಿಜನಮಿದೇವುದೆಂದವನುಟಾದು ।
ಜಗಮನೆಱಗಿಪೆನೆಂದು ವರಮೂರ್ತಿಯಂ ತಳೆದು ।
ತಾನೆಸೆವ ಕಂದರ್ಪನೆಂದೆ ಸಂದೆಗವೊಗೆಯೆ ।
ಮಾನವರ ಕಣ್ಗಳೋಳಿಗೆ ಕೌತುಕಂ ನೆಗೆಯೆ ।
ಪಿರಿದೆಸೆವನಸಮ ಸೌಂದರ್ಯ ರತ್ನಾಕರಂ ।
ಧರಣೀಶ ಕಂದರ್ಪ[1]ನವನೀ ಕಳಾಧರಂ ॥

ಕಂ॥ ವಿಸಟಂಬಱ ವ[2]ಬಲಾಜನ ।
ವಿಸರಕ್ಕೆಲೆ ಬೀಡುದಾಣಮಂ ಪಡೆದನೊ ತಾ ॥
ನೊಸೆದಂಬುಜಭವನೆನೆ ವೋ ।
ಹಿಸುವುದು ಕಂದರ್ಪಭೂಪನನುಪಮ ರೂಪಂ ॥೧೩೪॥

ಮ॥ಸ್ರ॥ ಘನ ಭೀರುತ್ವಕ್ಕೆ ತಾಣಂ ಪ್ರಚಲತೆಗೆ ನಿಜಾವಾಸಮೆಂದನ್ಯ ಭೂಕಾಂ ।
ತ ನಿಕಾಯ ಸ್ವಾಂತಮಂ ಪೊರ್ದದೆಯಿದು ಸತತಂ ನಿರ್ಭಯ ಸ್ಥಾನಮೋರಂ ॥
ತೆ ನಿರಾತಂಕ ಸ್ಥಳಂ ತಾನೆನುತನುಪಮ ಸತ್ತ್ವೋನ್ನತ ಶ್ರೀಕರಂ ಭೋಂ ।
ಕನೆ ಕಂದರ್ಪಾವನೀನಾಥನ ಸುರುಚಿರ ಚಿತ್ತಾಗ್ರದೊಳ್ ಬಂದು ಕಂಡಳ್ ॥೧೩೫॥

ಎನಸುಂ ಗೋಪಾಂಗನಾನೀಕದ ಕಠಿನ ಕುಚೋದ್ಘೃಷ್ಟ ಸಂಶ್ಲೇಷಮಾಯ್ತೆಂ ।
ಬಿನಿತರ್ಕೇವೈಸಿ ಕಂಜೇಕ್ಷಣನುರಮನಣಂ ಬಿಟ್ಟೆದೆಂದುಂ [3]ಪುರಸ್ತ್ರೀ ॥
ಜನ ಪೀನೋರೋಜ ಮೃಷ್ಟ ವ್ಯವಹೃತಮೆನುತುಂ ಬಂದು ಕಂದರ್ಪ ರಾಜೇಂ ।
ದ್ರನ ರುಂದ್ರೋರುಸ್ಥಳೀ ಮಂದಿರಮನೆ ಮುದದಿಂದಿಂದಿರಾದೇವಿ ಸಾರ್ದಳ್ ॥೧೩೬॥

ಮ॥ಸ್ರ॥ ವಿನುತಾತಿಸ್ನಿಗ್ಧ ನವ್ಯಾತುಳ ರುಚಿ ನಿಚಯಾಮಿತ್ರವೋ ಗಾತ್ರವೋ ವೋ ।
ಹನ ಸೌಂದರ್ಯ ಪ್ರಭಾಸ್ವನ್ಮಣಿಗಣ ವಿಳಸದ್ಗೇಹವೋ ದೇಹವೋ ನೂ ॥
ತನ ಚಿತ್ತೋದ್ಭೂತ ವಶ್ಯೋನ್ನತ ರುಚಿರ ಕಳಾವರ್ತಿಯೋ ಮೂರ್ತಿಯೋ ಪೇ ।
ಟನೆ ತಾಂ ಕಣ್ಗೆಡ್ಡಮಾದಂ ಕೃತಿರತಿರಮಣಂ ಸಾಹಸೋದ್ದಾಮ ಭೀಮಂ ॥೧೩೭॥

1. ನವನಿಧಿ. 2. ಬಲಾದ್ರಸ್ಸಿ. 3. ಪುರಶ್ರೀ.

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾ ಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ಶಾಸ್ತ್ರ ಶಸ್ತ್ರಾಭ್ಯಾಸ ವರ್ಣನಂ
ಸಪ್ತಮಾಶ್ವಾಸಂ.

---

# ಅಷ್ಟಮಾಶ್ವಾಸಂ

ಕಂ॥ ಶ್ರೀ ನಿಖಿಲ ಭುವನ ಸೌಂದ।
ರ್ಯಾನೀಕಮದೇಕ ಮೂರ್ತಿಯಾಯ್ತೆನೆ ಶೋಭಾ॥
ಸ್ಥಾನ ಸ್ವರೂಪ ವಿಭವದೆ।
ತಾನೆಸೆದಂ ರೂಢಿವೆತ್ತು ರಾಜಮನೋಜಂ ॥೧॥

ಇಂತಪೂರ್ವ ರೂಪಾಶ್ಚರ್ಯಂಬೆತ್ತು ಕಂದರ್ಪದೇವನಿರ್ಪುದುಮೊಂದು ದಿವಸದೊಳ್—

ಮ॥ಸ್ರ॥ ಸುರಚಾಪ ಶ್ರೇಣಿಯಂ ಸಾಲಿಡುತಿರೆ ಪದ ಸೇವಾವೃತಾನೇಕ ಭೂಕಾಂ।
ತರ ಕೋ[ಟೀರಾತ್ತ] ರತ್ನದ್ಯುತಿ ತತಿ ಪೊಸವೆಳ್ದಿಂಗಳಂ ಸುತ್ತಿ ಸೂಸು॥
ತ್ತಿರೆ ಕಾಂತಾನೇತ್ರ ಕಾಂತಿ ಪ್ರಸರಮುಸದಳಂ ಚಿತ್ರಮಂ ಬೀಱೆ ವಿಶ್ವಂ।
ಭರ ಭೂಪಂ ಲೀಲೆಯಿಂದೋಲಗದೊಳೆಸೆಯುತಿರ್ದಂ ಮಹಾದೇವಿ ಯುಕ್ತಂ ॥೨॥

ಆಗಳರಸಂ ಕಂದರ್ಪದೇವನ ಮುಖಾವಲೋಕನೋತ್ಸುಕತೆಯಿಂ [ಕರೆ] ತರಲ್ ಕಟಾಪೆ ಚಂದ್ರಭೂತಿಯೆಂಬಂ ಶಸ್ತ್ರಾಭ್ಯಾಸ ಶಾಲೆಯಂ ಪೊಕ್ಕು—

ಕಂ॥ ನತನಾದನಲ್ತೆ ಕಾಣು।
ತ್ತತಿರಾಗದೆ ಚಂದ್ರಭೂತಿ ಕಂದರ್ಪಮಹೀ॥
ಪತಿಗೆ ಭುವನದೊಳತ್ಯು।
ನ್ನತ ಮಹಿಮರ ಮಹಿಮೆಯಾರನೇನೆಱಗಿಸದೇ ॥೩॥

ಮ॥ ಘನ ಸೌಂದರ್ಯಕಳಾ ಕಳಾಪ ನಿಧಿಯಪ್ಪೀ ನಿನ್ನ ಭಾಸ್ವದ್ವಿನೂ।
ತನ ಗಾತ್ರಾಮಳ ಕಾಂತಿ ಕೌಮುದಿಯ ಕೇಳೀ ದೋಹಳಂ ಭೂವರೇಂ॥
ದ್ರನ ಮಾದೇವಿಯ ದೃಕ್ಚಕೋರಿಗಳೊಳಾದತ್ತೀಗಳೆಟ್ಟಿಂದು ಭೋಂ।
ಕನೆ ಕೈಗೂಡಿಸವಕ್ಕೆ ನೈಪನೆಲೆ ಕಂದರ್ಪ ಕ್ಷಮಾ ವಲ್ಲಭಾ ॥೪॥

ಮಿಗೆ ವಾಕ್ಪ್ರೌಢಿಯೊಳಿಂತು ಬಿನ್ನವಿಸೆಯುಂ ಕೇಳುತ್ತುಮಾ ಚಂದ್ರಭೂ।
ತಿಗೆ ಕಂದರ್ಪನರೇಂದ್ರನಂದು ಪಿರಿದಾನುಂ ಮೆಚ್ಚುತುಂ ಚಿತ್ತದೊಳ್ ॥
ಬಗೆದಂದಾ ಪಿತೃಮಾತೃ ಯುಗ್ಮದ ಪದ ಪ್ರೋದ್ಯನ್ನಖಾನೀಕ ರೋ।
ಚಿಗಳಿಂ ತನ್ನ ವಿಶಾಲ ಮೌಳಿಗೆ ನವೀನೋತ್ತಂಸಮಂ ಮಾಳ್ಪುದುಂ ॥೫॥

ಕಂ॥ ಇನಿತಂ ಬಗೆದಾ ಕಂದ।
ರ್ಪನರೇಂದ್ರಂ ಗುರುಜನಾಂಘ್ರಿ ದರ್ಶಕ ರಾಗಂ ॥
ಜನಿಯಿಸೆ ತಡೆಯದೆ ನಿಜ ಪರಿ।
ಜನ[1]ಯುತನಭ್ಯಾಸ ವಾಸಮಂ ಪೊಱಮಟ್ಟಂ ॥೬॥

ಚಂ॥ ಸುರ ಕರಿಯಂತೆ ಕಣ್ಗೊಳಿಸಿ ಮುನ್ನಮೆ ಪಣ್ಣಿ ಸಮಂತು ತಂದ ಸಿಂ।
ಧುರ ಪತಿ ಪಟ್ಟವರ್ಧನಮನಾಗಳೆ ಸಾರ್ಚಿದೊಡೇಱ[3] ತನ್ಮಹೀ ॥
ವರ ಮುದ[2]ನಂ ಗೃಹಾಬಿಮುಖನಾದನುಪೇತ ಚತುರ್ಬಳಂ ಪುರಂ।
ದರ ಪದ ದರ್ಶನೋತ್ಸುಕತೆಯಿಂ ಪಿಗೆ ಬರ್ಪ ಜಯಂತನೆಂಬಿನಂ ॥೭॥

ಕಂ॥ ಕಂದರ್ಪನೊಡನೆ ಪರಿಪೂ।
ರ್ಣೇಂದು ಬರುತ್ತಿರ್ಪ ತೆಱನನೆಂ ನೆನೆಯಿಸಿತೋ ॥
ಕಂದರ್ಪ ಭೂವರಂಗಾ।
ನಂದದಿನೆತ್ತಿದ ನವೀನ ಧವಳಚ್ಛತ್ರಂ ॥೮॥

ಇಂತು ಕಂದರ್ಪದೇವಂ ನವೀನ ಕಂದರ್ಪದೇವನಂತೆ ಬರುತ್ತಿರ್ಪಾಗಳ್—

ಕಂ॥ ಸಡಿಲೆ ಮುಡಿ ಬಳ್ಕೆ ನಡು ದಡ।
ದಡಿಸುತ್ತಿರೆ ತೊಡೆಗಳುಣ್ಮೆ ನೂಪುರ ನಿನದಂ ॥
ನಡೆತಂದು ನೋಡಿದಳ್ ಕ।
ಣ್ಣುಡುವೆಳಗದಿರುತ್ತುಮಿರೆ ಕುಮಾರನನೊರ್ವಳ್ ॥೯॥

ಚಂ॥ ಚರಣ ತಳಕ್ಕೆ ಬೀೞ್ವ ಮಣಿಕಾಂಚಿಯನೆತ್ತದೆ ಚುರ್ಚುತಿರ್ಪ ನೂ।
ಪುರಮನೆ ಸೈತು ಸಾರ್ಚದೆ ಜಗುೞ್ದಿೞಿವಾ ಭುಜ ಭೂಷಣಂಗಳಂ ॥

---

1. ಯುತದ. 2. ಸಂಗರಾಭಿ.

ಪರಿಕಿಸದುನ್ನತ ಸ್ತನದೆ ಜಾಱುವ ಮೇಲುದನೊರ್ವ ಕಾಂತೆ ಸಂ।
ವರಿಸದೆ ಬಂದು ಸಂಭ್ರಮದಿನೀಕ್ಷಿಸುತಿರ್ದಳಿಳೇಶ ಕಂತುವಂ ॥೧೦॥

ಎಱಲೆ ಕೆಳಕ್ಕೆ ಮೇಲುದು ಜಗುಱ್ದು ಬಱಲ್ಮುಡಿ ಜೋಲ್ದು ಮಾಲೆ ತಾಂ।
ಕೞಲೆ ಸಡಿಲ್ದು ನೀವಿ ನಸು ಬಿಱ್ತಿರೆ ನಾಣ್ಬದನಂತು ಚೌಕದಿಂ॥
ದಿೞೀತರೆ ಘರ್ಮ ವಾಃಕಣ ಗಣಂ ನೆಗೞುತ್ತಿರೆ ನೋಡುತಿರ್ದಳಾ।
ಕುಳತೆಯಿನೊರ್ವ ಚಂದ್ರ[ಮುಖಿ] ಮೆಯ್ಮರೆದಿಂತು ಮಹೀಶ ಕಂತುವಂ ॥೧೧॥

ಅವರಸಿರ್ಪ ಮಧ್ಯದ ಕಳಂಕಮದಂ ಪೊಱಗಿಕ್ಕಿ [ಕರ್ಚಿ] ಮು।
ತ್ತಾ ವಿಧುಬಿಂಬಮಂ ತಳೆದು ನಿರ್ಮಳಮಾಯ್ತೆನೆ ಕೊಳ್ವ ರೋಹಿಣೀ॥
ದೇವಿಯೊ ತಾನೆನಲ್ ಮಿಸುಪ ಕನ್ನಡಿಯಂ ಪಿಡಿದೊರ್ವ ಕಾಂತೆ ನಿಂ।
ತಾವಗಮಿಂತಭೀಕ್ಷಿಸುತುಮಿರ್ದಳಿಳಾಧಿಪ ಪುಷ್ಪಚಾಪನಂ ॥೧೨॥

ಉ॥ ಅಂಗಜ ರಾಜನಂತೆ ಕೃತಕಾದ್ರಿಗಳಂತೆಸೆದಿರ್ಪ ಬಳ್ಳಿ ಮಾ।
ಡಂಗಳನೇಱೀ ನೋೞ್ಪ ಧವಳಾಂಬರೆಯರ್ಕಳ ಲೋಲ ನೇತ್ರ ಜಾ॥
ಲಂಗಳ ನೀೞ್ದು ನುಣ್ಪೆಳಗು ತಳ್ತಿರೆ ಪಾಲ್ಗಡಲಂ ಕಳಾ ವಿಳಾ।
ಸಾಂಗದಿನೀಸಿ ಬರ್ಪ ಶಶಿವೋಲ್ ನರನಾಥ ಮನೋಜನೊಪ್ಪಿದಂ ॥೧೩॥

ಚಂ॥ ತಮತಮಗೆಯ್ದಿ ಬಂದತುಳ ಸಂಭ್ರಮದಿಂ ಕಮನೀಯ ಕಾಮಿನೀ।
ಸಮುದಯ ಚಾರು ಭೂಷಣ ಮಣಿವ್ರಜ ಮಂಗಳ ದೀಪಿಕಾಳಿಯಿಂ॥
ದಮೆ ಪೊಸ ಸಂಜೆಯೊಳ್ ಪೊಳೆವ ತಾರೆಗಳೊಳ್ ಪೊಳೆಯುತ್ತುಮಿರ್ಪ ಚಂ
ದ್ರಮನ ವಿಳಾಸಮಂ ನೆನೆಯಿಸುತ್ತೆಸೆದಂ ನರನಾಥಮನ್ಮಥಂ ॥೧೪॥

ಕಂ॥ ನಿರವಧಿ ವಿಳಾಸದಿಂ ನಿಜ।
ಪುರಮಂ ತಾನಿಂತು ಪೊಕ್ಕು ನೃಪ ಗೇಹದ ಗೋ॥
ಪುರದಲ್ಲಿ ಪಟ್ಟವರ್ಧನ।
ಕರೀಂದ್ರದಿಂದಿೞದನಾ ಕ್ಷಿತೀಶ ರತೀಶಂ ॥೧೫॥

ಮ॥ಸ್ರ॥ [1] ವರ ಸೌಂದರ್ಯಾಮೃತಾಂಭೋನಿಧಿ ಮನುಜತೆಯಂ ತಾಳ್ದಿತೋ ಪುಣ್ಯ ಪುಂಜಂ।
ನರರೂಪಂಬೆತ್ತುದೋ ಕೇಳಿಲೆ ತನು ಜನಿತಾನೂನ ಶೋಭಾ ಪ್ರಭಾ ಮಂ॥

1. ಕರ.

ಜರಿ ಕಣ್ಗಳ್ಗಾದಮಾಶ್ಚರ್ಯಮನೆ ಬಿಡದೆ ಬೀಜುತ್ತಿರಲ್ಕಾನಗುರ್ವಿಂ ।
ಬರುತಿರ್ದಂ ರಾಜ ಕಂಜಾಕ್ಷನ ಸಭೆಗೆ ಸಮಂತಂದು ಕಂದರ್ಪದೇವಂ ॥೧೬॥

ಮ॥ ಪಿತೃ ಮಾತೃಪ್ರಯ ನೇತ್ರ ಕೈರವ ಕುಲ ವ್ಯಾಕೋಚಮಂ ಮಾಡಿ ಸ।
ನ್ನುತ ಚಿತ್ತಾಬ್ಧಿಯನುರ್ವಿ ಕೊರ್ಪಿಸುವ ಪೆಂಪಿಂ ಮುಂದೆ ಪೆಂಪಾಂತಿರಾ ॥
ಯತ ನೇತ್ರಾಂಶುವ ಜೊನ್ನವೊತ್ತರಿಸಿ ಪರ್ಬುತ್ತಿರ್ಪಿನಂ ತನ್ಮಹೀ ।
ಪತಿ ಕಂದರ್ಪನದೊಂದು ಲೀಲೆಯೊಳೆ ಸಾರ್ತಂದಂ ಸಭಾ ಸ್ಥಾನಮಂ ॥೧೭॥

ವರ ಲೀಲಾತ್ಮಕರಾಗಿ ಬರ್ಪುದನೆ ನೋಡುತ್ತಿರ್ಪ ಮಾದೇವಿಯಾ ।
ಧರಣೀವಲ್ಲಭರಾ ಪರೀತ ನೃಪರಾ ನೇತ್ರಂಗಳೋಳ್ [1]ನಾಡೆ ಬಂ ॥
ಧುರ ಕರ್ಪೂರ ಶಲಾಕೆಯಂತೆ ನಿಜ ರೂಪಾಶ್ಚರ್ಯಮಾದಂ ಪುಗು ।
ತ್ತಿರೆ ತಾನಿಂತು ನರೇಂದ್ರಕಂತು ಪುಗುತಂದಂ ತತ್ಸಭಾ ಸ್ಥಾನಮಂ ॥೧೮॥

ಮ॥ಸ್ರ॥ ಕುಸುಮಾಸ್ತ್ರಂ ರಮ್ಯರೂಪಂ ತಳೆದನೆನೆ ವರಸ್ತ್ರೀ ಜನ ಸ್ವಾಂತಮಂ ಮೋ ।
ಹಿಸುತುಂ ತೇಜಃಪ್ರಭಾವಾಂಗದಿನಖಿಳ ನೃಪ ಶ್ರೇಣಿಗಾಶ್ಚರ್ಯಮಂ ಪು ॥
ಟ್ಟಿಸುತುಂ ಮಾದೇವಿ ತದ್ವಲ್ಲಭರ ನಿಜ ಮನೋಹರ್ಷ ವಾರಾಶಿಯಂ ಪೆ ।
ರ್ಚಿಸುತುಂ ಪೊಕ್ಕಂ ಮಹೀಭೃತ್ಸಭೆಯನೆ ಪದೆಪಿಂ ಬಂದು ಕಂದರ್ಪದೇವಂ ॥೧೯॥

ಕಂ॥ ನರನಾಥನ ಪದ ಪಲ್ಲವ ।
ಕಿರಣದೊಳಾತ್ಮೀಯ ಮೌಳಿ[2] ಕೀಲಿತ ಮಣಿ ಮಂ ॥
ಜರಿ ಕಿರಣಮಂ ಸಮಂತೊಡ ।
ವೆರಸಿದನತಿ ವಿನಯದಿಂದೆ ನೃಪಕಂದರ್ಪಂ ॥೨೦॥

ತಡೆಯದೆ ಮಾದೇವಿಯ ಕೇ ।
ಸಡಿಗಳ ನಖ ಕಿರಣ ಶುಕ್ತಿ[3] ಕಾಲಂಕೃತಿಯಂ ॥
ಪಡೆದಂ ತನ್ನಯ ಮೌಳಿಗೆ ।
ಪೊಡವೀಶ ರತೀಶನತುಳ ವಿನಯೋನ್ನತಿಯಂ ॥೨೧॥

ಇಂತು ವಿನಯ ವಿನಮಿತನಾದ ಕಂದರ್ಪದೇವನಂ ಪರಸುತ್ತಿ ನಿಜ ನಯನ ಧವಳ ಪ್ರಭಾ ಪೀಯೂಷ ಪೂರದೆ ಮಿಸಿಸುವಂತೆ ಬಿಡದೆ ನೋಡುತ್ತುಂ ನಿಜ

1. ಮಾಡೆ. 2. ಕಿನಿತಸು. 3. ಜಾಲಂ.

ನಿಖಿಳ ರಾಜ ಲಕ್ಷ್ಮೀಪಟ್ಟವಮಂ ಕಟ್ಟಲೆಡೆಯಾದುರುತರ ಭಾಳದೋಳ್ ಬೆಱೆದ ನಿಜಾಂಗುರುಳ್ಗಳಂ ಬೆರಲ್ಗೊನೆಯಿಂ ತಿರ್ದುತ್ತುಮಾಗಳ್—

ಮ ॥ ಮುದದಿಂ ಭೂಪ ಮುಕುಂದನುನ್ನತ[1]ನಿಜಾಂಕೋಪಾಂತಿಕ ಸ್ಥಾನದೋಳ್ ।
ಪದೆಪಿಂ ಕುಳ್ಳಿರಿಸಲ್ಕೊಡರ್ಚಿದೊಡದಂ ತಾನೊಲ್ಲದಾ ಪೀಠ ಪಾ ॥
[2]ರ್ಶ್ವದೆ ರಾರಾಜಿಪ ಸಿಂಹವಿಷ್ಟರ ಶಿರೋವಿನ್ಯಸ್ತಸಾವಂ ವಿಲಾ ।
ಸದಗುರ್ವಚ್ಚರಿಯಂ ಕುಡುತ್ತುಮಿರೆ ಕಂದರ್ಪಾವನೀವಲ್ಲಭಂ ॥೨೨॥

ಕಂ॥ ವಿನಮಿತನಾಗಿ ಮಹೀನಾ ।
ಥನ ದೇವಿಯ ಪರಕೆವಡೆದು ಮೇಧಾವಿಳನಾ ॥
ವಿನಯ ಗುಣ [3]ನಿಧಿಯ ಕಂದ ।
ರ್ಪನರೇಂದ್ರನ ಪೀಠ ಪಾರ್ಶ್ವದೊಳ್ ಕುಳ್ಳಿರ್ದಂ ॥೨೩॥

ಪರಿವೃತ ವಾರ ವಿಳಾಸಿನಿ ।
ಯರ ವಿಲುಳಿತ ನಯನ ಧವಳರುಚಿ ತತಿಯೊಳ್ ಬಿ ॥
ತ್ತರಿಸಿದನೆಳವೆಳ್ದಿಂಗಳ ।
ಸಿರಿ ಬಳಸಿದ ಚಂದ್ರನಂತೆ ನೃಪಕಂದರ್ಪಂ ॥೨೪॥

ಮ ॥ ಸಲೆ ಶೂನ್ಯಾಕೃತಿಯಾಗಸಂ ಪ್ರಚಲ ರೂಪಂ ಮೇಘವೆಂದೊಲ್ಲಾದಾ ।
ಲಲಿತಾಮರ್ತ್ಯ [4]ಶರಾಸನಾಳಿ ನೆಱೆ ಸಾರ್ತಂದಿರ್ಪ ತಾರಾದ್ರಿವೋಲ್ ॥
ವಿಲಸದ್ವೇಷ್ಟಿತ ಭೂಪ ಸಂಕುಲ ಕಿರೀಟಾನೇಕ ರತ್ನಪ್ರಭಾ ।
ವಲಿಯಿಂ ಕೋಮಲ ಮೂರ್ತಿ ಕಣ್ಗೊಳಿಸಿದತ್ತಾ ರಾಜ ಕಂದರ್ಪನಾ ॥೨೫॥

ಕಂ॥ ಬಳಸಿದ ಸಕಲ ಸಭಾ ಜನ ।
ವಿಳೋಚನಾವಳಿಗನಂತಮಾಗಿ ಕರಂ ಕ ॥
ಣ್ಗೊಳಿಸುವ ಸೌಂದರ್ಯದ ತನಿ ।
ವೆಳಗಿಂ ಕಂದರ್ಪದೇವನಸದಳಮೆಸೆದಂ ॥೨೬॥

ಕಂದರ್ಪನೃಪನ ವಿಮಳ ಮು ।
ಖೇಂದುವನಡಿಗಡಿಗೆ ನೋಡಿ ನೆಲೆವೆರ್ಚುವ ಪೆಂ ॥

---

1. ನಿಜಾಂಗೋ. 2. ರ್ಶ್ವೋರ್ವೀರ್ವಿಯೊಳಿರ್ದ. 3. ನಿಧಿನಿಧಿ ಕಂದರ್ಪ ದೇವನ.
4. ಸುರಾಸನಾಳಿ.

ಪಿಂದೆ ವಿಜಯಾವತೀ ಸತಿ।
ಯಿಂದುವನೀಕ್ಷಿಸಿದ ಶರಧಿಯೋಳ್ ದೊರೆಯಾದಳ್ ॥೨೭॥

ಪುದಿದೆನ್ನಗ್ಗದ ಮಹಿಷೀ।
ಪದವಿದು ಸಾಫಲ್ಯಮಾಯ್ತೆನುತ್ತುಂ ಮುದದಿಂ॥
ದೊದವಿದ ವಿಜಯಾವತಿ ಸತಿ।
ಪದೆಪಿಂ ಕಂದರ್ಪನೃಪನನೀಕ್ಷಿಸುತಿರ್ದಳ್ ॥೨೮॥

ಮ॥ ಸಿರಿ ಕಂದರ್ಪನನಂದು ಪೆತ್ತ ಫಲವೇನ[1] ವ್ಯಕ್ತಮಾಂ ನೋಟ್ಪೊಡಾ॥
ಸಿರಿಯಿಂದಂ ವಿಜಯಾವತೀ[ಸತಿ] ಮಿಗಿಲ್ ಸುವ್ಯಕ್ತ ಸೌಂದರ್ಯ ಬಂ॥
ಧುರನಂ ಪೆತ್ತಳಿಳೇಶ ಕಂತುವನೆನುತ್ತುಂ ಕೂಡೆ ರಾಜನ್ಯಕೋ।
ತ್ಕರಮಾಗಳ್ ಪೊಗಳುತ್ತಿರಲ್ಕೆ ಪಿರಿದುಂ ಮಾದೇವಿ ಮೆಯ್ವೆರ್ಚಿದಳ್ ॥೨೯॥

ಸಲೆ ಮಾತಂಗ ಸಮಾಜ ಸಂಗತಿಗೆ ಪೇಸುತ್ತಿರ್ಪುದಂ [2]ದುರ್ವಿಷಾ।
ವಿಲ ಶೇಷೋಗ್ರ ಫಣಾಗ್ರದೊಳ್ ನೆಱೆ[3] ಭಯಂಗೊಂಡಿರ್ಪುದಂ ಕಂಡಜಂ॥
ವಿಲಸದ್ಭೂಸತಿ ಸೈತಿರಲ್ ಸಮೆದ ಸದ್ಮಂ ತಾನಿದೆಂದಾ ನೃಪಂ।
ನಲಿವಂ ನೋಡಿ ತದೀಯ ದೋಶ್ಶಿಖರಮಂ ಕಂದರ್ಪರಾಜೇಂದ್ರನಾ ॥೩೦॥

ಸ್ರ॥ ಇನ್ನರ್ ತಾವಾರುಮೆನ್ನನ್ವಯದೊಳುದಯಿಸಿರ್ದುರ್ವರಾಧೀಶರೆಂತುಂ।
ಮುನ್ನಿಲ್ಲೀ ವಿಶ್ವ ವಿಶ್ವಂಭರೆಯನವಿರತಂ ತನ್ನ [3]ವೀರಾತಪತ್ರ॥
ಚ್ಛನ್ನಚ್ಛಾಯಾವಶಂ ಮಾಳ್ಪಿತಿ ಬಳನುದಯಂಗೆಯ್ದನಾಂ ಧನ್ಯನೆಂದುಂ।
[4]ನುನ್ನಂಬೆತ್ತಿರ್ಪ ಕಂದರ್ಪನ ಮುಖಮನಿಳಾಧೀಶ್ವರಂ ನೋಡುತಿರ್ದಂ ॥೩೧॥

ಮನುಜಾಕಾರಮನಾಂತು ಮತ್ತನಯನಾದಂ ಸುಪ್ರಭ ಶ್ರೀಮುನೀ।
ಶನ ದತ್ತಾಜ್ಞೆಯೊಳೊಕ್ಕನಲ್ಲದೊಡೆ ಮರ್ತ್ಯರ್ಗುಂಟೆ ಸಂಭಾವಿಸ॥
ಲ್ಕಿನಿತೊಂದುಜ್ಜ್ವಲ ಕಾಂತಿಯಿಂತಿನಿತು ತೇಜೋ ರಾಜಿತಾಕಾರವೆಂ।
ದೆನುತುಂ ನೋಡುತುಮಿರ್ದನಾಗಳರಸಂ ಕಂದರ್ಪರಾಜೇಂದ್ರನಂ ॥೩೨॥

ಮತ್ತಮಾಗಳೋಲಗದೊಳಿರ್ದ ಭಾರತೀಭೂಷಣನೆಂಬ ಮಹಾಕವೀಶ್ವರಂ ವಿಶ್ವಂಭರ ನರೇಶ್ವರನಂ ನೋಡಿ ದೇವ! ಕಂದರ್ಪದೇವಂ ನಿರವಧಿ ಮಹತ್ತರನ

1. ವ್ಯಕ್ತಮಂ. 2. ದುರ್ವಿಶಾ. 3. ವಿಲಾತಪತ್ರ. 4. ನೂನಂ.

ಪ್ಪುದಱಿಂದುಗ್ರನಲ್ಲದ ಭರ್ಗನುಂ ಕ್ಷಮಾಧರನಪ್ಪುದಱಿಂ ಕುತ್ಸಿತಾಕಾರ ಧಾರಿಯಲ್ಲದ ಕಂಜನಾಭನುಂ ವಾಗ್ವಿಳಾಸೋಪೇತನಪ್ಪುದಱಿಂ ರಜೋಮಯನಲ್ಲದ ರಾಜೀವ ಗರ್ಭನುಂ ಮಹೋದಾರ ಧೀರನಪ್ಪುದಱಿಂ ವಿಯಚ್ಚರನಲ್ಲದ ವಿನೂತ ಜೀಮೂತ ವಾಹನನುಂ ಸುಧರ್ಮಾನುರಾಗನಪ್ಪುದಱಿಂ ಪರದಾರಾಸಕ್ತನಲ್ಲದ ಪುರಂದರನುಂ ಸಮ್ಮೋಹನ ಸ್ವರೂಪನಪ್ಪುದಱಿಂ ಮಧುಪ್ರಿಯನಲ್ಲದ ಮನ್ಮಥನುಂ ಕುವಲಯಾನಂದ ಕಾರಣನಪ್ಪುದಱಿಂ ದೋಷಾಕರನಲ್ಲದ ದ್ವಿಜರಾಜನುಂ ಜಗನ್ಮಿತ್ರನಪ್ಪುದಱಿನಸ್ತಂಗತನಲ್ಲದ ಗಭಸ್ತಿ[1]ಸಹಸ್ರನುಂ ಮಹಾಬಲನಪ್ಪುದಱಿಂ ಪ್ರಕೃತಿ ಚಲನಲ್ಲದ ಜಗತ್ಪ್ರಾಣನುಂ ರಾಜರಾಜನಪ್ಪುದಱಿಂ ದಿಕ್ಪ್ರವೃತ್ತಿಯಲ್ಲದ ಪುಣ್ಯಜನೇಶ್ವರನುಂ ಪ್ರತಾಪ ಧನಂಜಯನಪ್ಪುದಱಿಂದಾಶ್ರಯಾಶನಲ್ಲದ ಬೃಹದ್ಭಾನುವುಂ ಸಮುತ್ಕೀರ್ಣ ಗಾಂಭೀರ್ಯನಪ್ಪುದಱಿಂ ಜಡ ಪ್ರಕೃತಿಯಲ್ಲದ ರತ್ನಾಕರನುಂ ಸುಸ್ಥೈರ್ಯನಪ್ಪುದಱಿಂದಷ್ಟಾಪದ ಸ್ವರೂಪಮಲ್ಲದಮರಾಚಲೇಂದ್ರನುಂ ಮಹಾಮೇರುವಿನಂತೆ ಭದ್ರ ಲಕ್ಷಣೋಪೇತನುಂ ಸದಲಂಕೃತಿ ಶಾಸ್ತ್ರದಂತೆ ಸಮಭಾವ ಶೋಭಿತನುಂ ತ್ಯಕ್ತಾನುಮತಿಯಪ್ಪಿಂದುವಿನಂತೆ ಕಮನೀಯ ಕಳಾ ಕಳಾಪನುಂ ವಿಬುಧ ಸಭೆಯಂತೆ ವಿನೂತ ಧಿಷಣೋಪಯುಕ್ತನುಂ ಸ್ವಸ್ತಿಕೋತ್ತರ ಪತ್ರದಂತೆ ವರ್ಧಮಾನನು ಮೆಂದು ವರ್ಣಿಸುತ್ತಿರೆ ತದೀಯ ಶ್ಲೇಷೋಕ್ತಿಗೆ ಮೆಚ್ಚಿ ಪಸಾಯಂಗೊಟ್ಟು ತದನಂತರದೊಳ್—

ಮ॥ ಜನನಾಥಂ ಜನಿತಾನುರಾಗ ರಸದೊಳ್ ತೇಂಕಾಡುತಿರ್ದಾಗಳಂ ।
ತೆನಸುಂ ತನ್ನಯ ಚಿತ್ತದೊಳ್ ಬಗೆದನುರ್ವೀಪೂಜ್ಯಮಂ ಪ್ರಾಜ್ಯ ರಾ ॥
ಜ್ಯ ನವೀನಾತುಳ ರತ್ನಮಂ ಪದೆಪಿನಿಂ ತಾನಂದು ಕಂದರ್ಪದೇ ।
ವನ ಕೋಟೀರ ಮುಖಕ್ಕಲಂಕರಿಸುವೊಂದುದ್ಯೋಗಮಂ ಬೇಗದಿಂ ॥೩೩॥

ತದೀಯ ಪ್ರಸ್ತಾವದೊಳ್—

ಕಂ॥ ಅಕುಟಿಲಮುಪರ್ವಮುಪ[2]ಲಿ ।
ಪ್ತ ಕನದ್ಬಹು ವರ್ಣಮಪ್ಪ ವೇತ್ರಂ [3]ಪುದಿದೊ ॥
ಪ್ಪೆ ಕರಾಬ್ಜ[4]ದೊರ್ಬ ದೌವಾ ।
ರಿಕನಾ ನರನಾಥನೋಲಗಕ್ಕೆಯ್ತಂದಂ

ಕೆಲಸಾರ್ದು ನಿಂದು ವಕ್ಷಃ ।
ಸ್ಥಲ ವಿನಮಿತ ನೇತ್ರನಾಗಿ ಕರ ಸರಸಿಜ ಕು ॥
ಟ್ಮಲ ಘಟಿತ ನಿಟಿಲನಾಗಳ್ ।
ನಲವಿಂ ದೌವಾರಿಕಂ ಸಮಂತಿಂತೆಂದಂ ॥೩೪॥

---

1. ಹಸ್ತನುಂ. 2. ರಿಷ್ಠ. 3. ಪುದಿದೊಪ್ಪಿ. 4. ನೊರ್ಬ,

ಉ॥ ಬಿನ್ನಪಮುರ್ವರೇಶ ಭವದೀಯ ಪದಾಂಬುಜ ದರ್ಶನೋತ್ಸುಕ।
ತ್ವಂ ನೆಲೆವೆರ್ಚಿ ಲೋಕದೊಳಪೂರ್ವಮಿದೊಂದೆನಿಪೊಂದು ವಾಜಿ ರ॥
ತ್ನಾನ್ವಿತನಾಗಿಯೊರ್ಚ ಮಣಿದತ್ತಕನೆಂಬ ಮಹಾವಣಿಗ್ವರಂ।
ತಾಂ ನಲವಿಂದೆ ಬಂದು ಪಡಮಂ ನೆಜತೆ [1]ಪಾರ್ದಪನಲ್ತೆ ಬಾಗಿಲೊಳ್ ॥೩೬॥

ಇಂತು ಬಿನ್ನವಿಸಿದ ದೌವಾರಿಕಂಗರಸಂ ಒರವೇಟಿಂಬುದುಂ ಬಂದ ಮಣಿದತ್ತಕಂ ತನ್ನ ಪೆಸರನನ್ವರ್ಥಕಂಮಾಳ್ಪಂತದೊಂದು [2]ನೂತನ ಹಯ ರತ್ನಮನರಸಂಗೆ ದರ್ಶನಮನಿತ್ತು ನಿಂದಿರ್ಪುದುಮಾಗಳ್—

ಕಂ॥ ಬರುತಿರ್ದುದು ಪೊಸ[3]ದುಗುಲದ।
ತೆರೆಯೊಳ್ ಧಾರಕರ [4]ಕಾಪಿನೊಲವಿಂ ಗಳ ಗ॥
ರ್ಗರ ರುತಿಗೆ ವಿವಿಧ ವಿಧ ಪರಿ।
ಕರಮಂ ಪ್ರಕಟಿಸುತುಮಾ ತುರಂಗಮ ರತ್ನಂ ॥೩೭॥

ಮ॥ ತೆರೆದೊಂಗಲ್ ಪಿರಿದೊಪ್ಪುವಾ ಯವನಿಕಾ ಕ್ಷೌಮಾಂಬರ ಶ್ರೇಣಿ ಬಿ।
ತ್ತರದಿಂದುಣ್ಮುವ ಕಾಯ ಕಾಂತಿ ವಿಸರಂ ಪೀಯೂಷ ಪೂರ ಪ್ರಭಾ॥
ಸುರಮಾಗಿಂತಮೃತಾಂಬು ರಾಶಿವೆರಸೋರಂತಾಗಳುಚ್ಚೈಶ್ಶ್ರವಂ।
ಬರುತಿರ್ಪಂತಿರೆ ತಾಂ ಬರುತ್ತುಮೆಸೆದತ್ತಾ ದಿವ್ಯ ವಾಹೋತ್ತಮಂ ॥೩೮॥

ಕಂ॥ ಖುರ ಪಾತಂ ತಾಳ ಲಯೋ।
ತ್ಕರ ಸಂಗತಿವೆತ್ತು ವಿವಿಧ ಗತಿಯ ಬೆಡಂಗ॥
ಚ್ಚರಿವಡೆಯಲ್ ಧಾರಕರು।
ಚ್ಚರಣದೆ ಬರುತಿರ್ದುದಾ ತುರಂಗಮ ರತ್ನಂ ॥೩೯॥

ಬರುತಿರ್ದುದಶ್ವ ರತ್ನಂ।
ಬರೆ ಭೂಪನ ಚಿತ್ತವೃತ್ತಿ[5]ಗತ್ಯಾಶ್ಚರ್ಯಂ॥
ಧರಣಿಪತಿಗಧಿಕ ರತ್ನಂ।
ಬರೆ ಪರಿವೃತ ಸಕಲ ಸಭೆಗೆ ಕೌತುಕ ಭಾವಂ ॥೪೦॥

1. ಪಾರುತಿರ್ದಪನಲ್ತೆ. 2. ನೂತನ. 3. ದುಕೂಲದ. 4. ತಾಟಗೊಳವಿ.
5. ಗಾಶ್ಚರ್ಯಂ.

ದತ್ತಾವಲೋಕನಾಗಿ ನೃ।
ಪೋತ್ತಮನಿರೆ ಕಂಡು ಕುಸುಮ ವಿಸರಾಂ[1]ಜಳಿಯಂ ॥
ಬಿತ್ತರದೆ ಸೂಸುತುಂ ಮಣಿ।
ದತ್ತ್ರಕನಾ ಯವನಿಕಾಳಿಯಂ ಪಿಂಗಿಸಿದಂ ॥೪೧॥

ಕಂ॥ ಶರದಭ್ರಪಟಲವಿರದೋ।
ಸರಿಸಿದ ರಾಕೇಂದು ಬಿಂಬದಂತೆ ದುಕೂಲಾಂ॥
ಬರ ಯವನಿಕಾಳಿ ಪಿಂಗಿದ।
ವರ ಹಯಮೆಸೆದಿರ್ದುದಾಗಳಮಳಚ್ಛವಿಯಿಂ ॥೪೨॥

ಮ॥ಸ್ರ॥ ದೆಸೆಯಂ ದೇಹಾಂಶುವಿಂದಂ ನೆಱೆ ಧವಳಿಸುತುಂ ನಾಡೆಯುಂ ತನ್ಮ
ಹೀ ನಾ।
ಥ ಸಭಾಂತರ್ಭಾಗಮಂ ಕಣ್ಗೊಳಿಸಿ ಬೆಳಗುತುಂ ದುಗ್ಧವಾರಾಶಿ ಫೇನ॥
ಪ್ರಸರಂ ತದ್ವಾಜಿ ರೂಪಂ ತಳೆದುದೆನೆ ಮಹಾಶ್ಚರ್ಯ ಸೌಂದರ್ಯದಿಂ ತಾ।
ನೆಸಕಂಬೆತ್ತಿರ್ದುದಾ ಧಾರಕರ ಬಳಸಿನೊಳ್ ನೂತ್ನ ದಿವ್ಯಾಶ್ವ ರತ್ನಂ ॥೪೩॥

ಕಂ॥ ಪೊಱ ಪೊಣ್ಮುವ ತನಿವೆಳಗಿನ।
ತುಱುಗಲೊಳಾ ತುರಗ ರತ್ನದವಯವ ಮುಖದೊಳ್ ॥
ಮಿಱುಗುವ ಚೆಲ್ವಂ ನಿಟ್ಟಿಸ।
ಲಱಿಯದೆ ಬೆರಗಾಗಿ ನೃಪತಿ ನೋಡುತ್ತಿರ್ದಂ ॥೪೪॥

ತ್ರಿದಶೇಂದ್ರಂ ಸಲೆ ಮಾತಂ।
ಗದ ಸಂಗತಿವೆತ್ತನೆಂದು [2]ಬೇಸಱದೆಟ್ಟಿಂ ॥
ದುದು ಧರೆಗೆ ಸುರ [3]ತುರಗಮೆನೆ।
ಪದೆದಾ ಹಯಮಂ ನರೇಂದ್ರನೀಕ್ಷಿಸುತಿರ್ದಂ ॥೪೫॥

ಮ॥ ಇದು ತದ್ಭೂತಳದಶ್ವ ಜಾತಿಯೊಳೆ ತಾನುದ್ಭೂತಮಾದಂದಮು।
ಲ್ತದು ನೋಡಲ್ [4]ದಲಭೂತ ಪೂರ್ವಮೆಸೆವೀ ಸೌಂದರ್ಯಮಾ ಶೌರ್ಯ ಸಂ॥
ಪದಮಾ ಕಾಂತಿ ಕಳಾಪಮಾ ಮಸಕಮಾ ತೀವ್ರತ್ವಮಾ ಸತ್ವಮಾ।
ಮದಮೆಂದಾ ಹಯರತ್ನಮಂ ಪದೆದು ನೀಡುಂ ನೋಡುತಿರ್ದಂ ನೃಪಂ ॥೪೬॥

---

1. ಉಳಿಯಿಂ. 2. ಪೆಸರದೆಟ್ಟಿಂ. 3. ತುರಂಗಮುದುವೆಂದು. 4. ಪಡಭೂತ.

ಕಂ॥ ಪಿರಿದಾನುಂ ಪೊಟ್ತುವರಂ।
ತುರಗಮನವನೀಕ್ಷಿಸುತ್ತುಮಿರ್ದಾ ವಿಶ್ವಂ॥
ಭರ ಭೂಪನೊಯ್ಯನೆ ವಣಿ।
ಗ್ವರ ಮಣಿದತ್ತಕನ ವಕ್ತ್ರಮಂ ವೀಕ್ಷಿಸಿದಂ ॥೪೭॥

ಇಂತು ನೋಡಿದಾಗಳ್—

ಮ॥ ಸಿರುತಂ ದೇವರಿದಂ ವಿಚಾರಿಪೊಡದೇನಂ ಪೇಟ್ದಪೇಂ ತತ್ಪುರಂ।
ದರನುಚ್ಚೈಶ್ರ್ಯವಮಿಂತಕಾರಣದೆ ಸಿಂಧು ದ್ವೀಪಕೆಟ್ತಂದು ಚೆ॥
ಚ್ಚರದಿಂ ಬಂಧುರ ಗರ್ಭೆಯೆಂಬ ಪೆಸರುದ್ಯದ್ಘೋಟಿಕಾ ರತ್ನದೊಳ್।
ಪಿರಿದುಂ ಕ್ರೀಡಿಸಿ ಪೋಗೆ ಪುಟ್ಟಿದುದದರ್ಕೀ ದಿವ್ಯ ವಾಹೋತ್ತಮಂ ॥೪೮॥

ಕಂ॥ ಜವದಿಂ ಗರುತ್ಮನಂ ವಾ।
ಯುವನೆಂದುಂ ಮಿಗುವುದಿಱಕೆಗೆಯ್ವುದು ತಾಂ ನೋ॥
ಡುವೊಡೆ ನರೇಂದ್ರನೆ ಪೆಸರಿಂ।
ಪವನಂಜಯಮೆಂಬುದೀ ತುರಂಗಮ ರತ್ನಂ ॥೪೯॥

ಮ॥ ಗಣಿದಂ ಗೆಯ್ವೊಡಹೀಂದ್ರನುಂ ನೆಱೆಯನೀ ದಿವ್ಯಾಶ್ವ ರತ್ನಾಂಗ ಲ।
ಕ್ಷಣ ಶೋಭಾ ಸಮುದಾಯಮಂ ವಿಪುಳ ವೇಗಾಶ್ಚರ್ಯಮಂ ಚಿತ್ರ[1]ಚಾ॥
ರಣ ಶಿಕ್ಷಾ ಕುಶಲತ್ವಮಂ ಬಹು ವಿಧ ವ್ಯಾಪ್ತಿ ಪ್ರಸನ್ನತ್ವಮಂ।
ಪ್ರಣುತಾನೂನ ಸಮತ್ವಮಂ ಪ್ರವಿಲಸತ್ತೀವ್ರತ್ವಮಂ ಸತ್ತ್ವಮಂ ॥೫೦॥

ಚಂ॥ ಸರಸಿಜ ಸಂಭವಂಗಮರಿದಂಗದ [2]ಮಂಗಳ ಲಕ್ಷಣಂಗಳಂ।
ಪರಿಕಿಸೆ ಬೇಱೆವೇಱೆ [3]ಪೆಸರ್ಗೊಳ್ವೊಡೆ ಮಿಕ್ಕ ನರರ್ಗಮೆಂತುಮಿ॥
ನ್ನರಿ[4]ವುಮದಿರ್ಕೆ ದೇವ ಪೆಱತೇಂ ಹಯಶಾಸ್ತ್ರ ಸುಲಕ್ಷಣಕ್ಕುದಾ।
ಹರಣಮಿದೆಂದೊಡೇವೊಗೞ್ವೆನೀ ಹಯರತ್ನದ ಲಕ್ಷಣಂಗಳಂ ॥೫೧॥

ಉ॥ ಆವ ತುರಂಗಮಕ್ಕೊಳವು ಭಾವಿಪೊಡೀ ಪವನಂಜಯಾಶ್ವನಂ।
ಶೀ ವಿಳಸನ್ಮಯೂರ ಗಳ ಸನ್ನಿಭ ಕಂಧರಮೀ [5]ವಲದ್ಭುಜ॥
ವ್ಯಾವೃತಮೀ ವಿಶಾಲತೆಯಸಾಂತುರಮೀ ಚಳ ಕುಬ್ಜ ಕರ್ಣಮಿಂ।
ಶೀ ವಿಪುಳೋಚ್ಚ ಭಾಳಪುಟಮೀ ಪರಿ ವೃತ್ತತೆವೆತ್ತ ಪಶ್ಚಿಮಂ ॥೫೨॥

---

1. ಕಾ॥ ರಣ. 2. ಮಂಗದ. 3. ಪೆಸಗೊರ್ಂಡೆ. 4. ಡುಮಿದ. 5. ವಶದ್ರುವ.

ಕಂ॥ ಪತಿಗಲ್ಲದೆ ಪೆಱರ್ಗೆಡೆಗುಡ।
[1]ದ ತೆಱದೆ ನಡೆವಿಡಿದ ಬೆನ್ನ ಸಂಕಡಿ ಚಂಡಾ॥
ಕೃತಿಯ ತೆಱನಱಿ[2]ದು ನಿಮ್ನೋ।
ನ್ನತಿವೆತ್ತುದು ಚರಣ [3]ಕಾಂಡಮಶ್ವಾಗ್ರಣಿಯಾ ॥೫೩॥

ದೇವರ ಸಭೆಯೊಳ್ ಸಕಲ ಕ।
ಲಾ ವಿದರುಂಟೇಂ ತುರಂಗ ಶುಭ ಲಕ್ಷಣ ಶೋ॥
ಭಾವಳಿಯಂ ನೆಱೆಯಱಿವನ।
ದಾವನವಂ ದೇವನೆಂಬೆನಶ್ವಾಗಮದೊಳ್ ॥೫೪॥

ಚಂ॥ ಧರಣಿಯೊಳಶ್ವಶಾಸ್ತ್ರ ಕಳೆಯೊಳ್ ನೆಱೆ ಬಲ್ಲ ಬುಧರ್ಕಳೆಲ್ಲಮು।
ಚ್ಚರಿಯೆನೆ ಬಲ್ಮೆಯಂ ಮೆಱೆಯಲೊಲ್ವೊಡಮೀ ಪವನಂಜಯಾಶ್ವ ಭಾ॥
ಸುರ ಶುಭ ಲಕ್ಷಣಂಗಳನಭೀಕ್ಷಿಸಿ ಕಲ್ತುಕೊಳಲ್ಕೆ ಬಲ್ಮೆ ಬಿ।
ತ್ತರಿಸುವುದಿಲ್ಲದಂದವರ್ಗೆ ಬಲ್ಮೆಯದೆಲ್ಲಿಯದುರ್ವರೇಶ್ವರಾ ॥೫೫॥

ಕಂ॥ ನರನಾಥರೊಳಗೆ ಚಕ್ರೇ।
ಶ್ವರನೆಂತುಂ ನೀನೆ ತುರಗ ತತಿಯೊಳ್ ಚಕ್ರೇ॥
ಶ್ವರನೆ ಪವನಂಜಯಾಶ್ವಂ।
ಪರಿಕಿಪೊಡಿನಿತರ್ಕೆ ದೇವ ಸಂದೆಯಮುಂಟೇ ॥೫೬॥

ಮ॥ ಪದೆಪಿಂದೀ ಪವನಂಜಯಾಶ್ವನೆನಸುಂ ಮತ್ಪುಣ್ಯದಿಂ ದೇವ ಬಂ।
ದುದು ಸಂಭಾವಿಪೊಡಂ ಸಮಸ್ತ ವರ ವಸ್ತು ಶ್ರೇಣಿಗುತ್ಕೃಷ್ಟ ಪು॥
ಣ್ಯ ದಶಾಧೀಶ್ವರ ಸಾರ್ವಭೌಮನೊಡೆಯಂ ತಾನೆಂದು ನಿಮ್ಮಲ್ಲಿಗಾಂ।
ಮುದದಿಂ ತಂದೆನಿದೊಂದು ವಿಸ್ಮಯಮೆ ಕೈಕೊಳ್ ಭೂಪ ಚಕ್ರಾಯುಧಾ ॥೫೭॥

ಕಂ॥ ಮುದದೆ ನೆಱೆಯಱಿಯೆ ಬಿನ್ನವಿ।
ಸಿದ ಮಣಿದತ್ತಕ ವಣಿಗ್ವರೇಣ್ಯನ ವಚನ॥
ಕ್ಕಿದು ಚೋದ್ಯಮೆಂದು ತಾಂ ನೋ।
ಡಿದನಾಗಳ್ ನೃಪತಿ ಮಂತ್ರಿಮುಖ್ಯನ ಮೊಗಮಂ ॥೫೮॥

1. ದತಿಕ್ರೆರ. 2. ದನತಿನಿರ್ಮಾ। ನತಿ. 3. ಕಾಂಗ.

ಮ॥ ಪಿರಿದುಂ ದೇವರಿದರ್ಕೆ ವಿಸ್ಮಯಮಯ ಸ್ವಾಂತಬ್ಜ[1]ರಿಂತಾಗಲ ।
ಚ್ಚರಿಯೇಂ ಮಾನವ ಮೂರ್ತಿವೆತ್ತ ವಿಭುವೀ ಕಂದರ್ಪದೇವ ಪ್ರಭಾ ॥
ಸುರ ಪುಣ್ಯೋದಯದಿಂದಗಣ್ಯ ವರ ವಸ್ತು ವ್ರಾತವೆಲ್ಲಿರ್ದೊಡ ।
ತಿರದೆಯ್ತಂದಪುದೆಂದು ಬಿನ್ನವಿಸಿದಂ ಪ್ರಜ್ಞಾಬಲಂ [2]ಸತ್ಯಮಂ ॥೫೯॥

ಇಂತು ಬಿನ್ನವಿಸಿದ ಮಂತ್ರಿಮುಖ್ಯನ ವಚನಕ್ಕೆ ಸಂತಸಮನಾಂತು ನರೇಂದ್ರಚಕ್ರಿ ಪವನಂಜಯಾಶ್ವಮಂ ಕೈಕೊಂಡು—

ಚಂ॥ ಬೆಲೆಯಿಡಲೀ ಹಯಕ್ಕೆ ಭುವನ ತ್ರಯಮುಂ ಬೆಲೆಯಲ್ತು ನೋಳ್ಪೊಡಂ ।
ಬೆಲೆಯಿಸಿತೆಂದು ಕಲ್ಪಿಪೊಡೆ ದೋಷ[3]ಮದೀಯುಚಿತಕ್ಕೆ ಭಾವಿಸಲ್ ॥
ಬೆಲೆ ಮಣಿದತ್ತಕಾಹ್ವಯನ ಚಿತ್ತದ ತೃಪ್ತಿಯೆನುತ್ತುಮಾ ನೃಪಂ ।
ನಲವಿನೊಳಿತ್ತನಾ[4]ವುದಿದು ಸಾಲ್ವುದೆನಿಪ್ಪುದು ಸೀಮೆಯಪ್ಪಿನಂ ॥೬೦॥

ಕಂ॥ ಪದೆಪಿಂದಾಗಳ್ ತನ್ನಯ ।
ಪದ ಪೀಠದ ಪಾರ್ಶ್ವ ವಿಷ್ಟರಾಗ್ರದೊಳೆಸಕಂ ॥
ಪುದಿದೊಪ್ಪುವ ನೃಪಮದನನ ।
ವದನಾಂಬುರುಹಮನಭೀಕ್ಷಿಸಿದನವನೀಶಂ ॥೬೧॥

ಮ॥ ಇದು ಸಂಭಾವಿಸೆ ದಿವ್ಯ ವಾಹಮಿದು ಪಲ್ ನನ್ನೊಂದು ಪುಣ್ಯಪ್ರಭಾ ।
ವದಿನೆಯ್ತಂದುದು ತಪ್ಪದಿಂದಿದುವೆ ಸತ್ಯಂ ನೋಡೆ ಸೀಸೇಱಿ ತ ॥
ಕ್ಕುದು ಪೀಂ ತಕ್ಕನಿದರ್ಕೆ ನೋಳ್ಪೊಡೆನುತುಂ ಕಂದರ್ಪದೇವಂಗೆ ರಾ ।
ಗದಿನಾಗಳ್ ಪವನಂಜಯಾಶ್ವಮನದಂ ತಾನಿತ್ತನುರ್ವೀಶ್ವರಂ ॥೬೨॥

ಜನಕಂ ತಾನೊಸೆದೀಯೆ ತತ್ತುರಗಮಂ ಕೈಕೊಂಡು ಕಂದರ್ಪದೇ ।
ವನಣಂ ರಾಗದಿನೇಱಿ ತೋರುವ ಮನಂಬೆತ್ತಂಡಮಂ ಭಾವದಿಂ ॥
ದೆನಸುಂ ತಾನಱಿದೆಯ್ದು ಪಲ್ಲಣಿಸಿ [5]ತಂದಂ ವಾಹಕೋತ್ತಂಸನೊ ।
ರ್ಬನದಂ ವಿಸ್ಮಯಮಾಗಳುಣ್ಮೆ ವಿಜಯಶ್ರೀ ಗೇಹಮಂ ವಾಹಮಂ ॥೬೩॥

ಕಂ॥ [6]ಇನ್ನಮೆ ದಲ್ ಪರಿಭಾವಿಪೊ ।
ಡೆನ್ನಧಿಪನ ಸಭೆಯೆನಿಸುತ್ತುಮಱಪುವ ತೆಱದಿಂ ॥

1. ರೇಕಾತಾಗಲ। ಚ್ಚರಿಯೋ. 2. ಸತ್ಯಮಂ. 3. ಮದೀಯ ಚಿತ್ತಕ್ಕೆ. 4. ವಸಿದು.
5. ತಂದು. 6. ಇನ್ನವೆಂ.

ಸನ್ನುತ ಕವಿ ಮುಖ ಶೋಭಾ ।
ಸನ್ನದ್ಧಮನಪ್ಪುಕೆಯ್ದುದಾ ಹಯರತ್ನಂ ॥೬೪॥

ಚಂ॥ ಅಳವಡಿಸಿಕ್ಕಿದಾ ಬಿಳಿಯ ಚೌರಿಗಳುಜ್ಜ್ವಲ ಕಾಂತಿ ನೀಳ್ದು ಗೊಂ ।
ದಳಿಸಿರೆ ಜಾಹ್ನವೀ ನದಿಯ ಪೂರಮೆ ನಾಲ್ದೆಸೆಯಿಂದೆ ಸೋರ್ವ ನಿ ॥
ರ್ಮಳ ರುಚಿರಾಂಶು ರಮ್ಯ ಹಿಮವದ್ಗಿರಿಯಂದದಿನಿರ್ದುದಾಗಳಾ ।
ವಿಳಸಿತ ತತ್ಸಭಾ ಜನದ ಕಣ್ಗೆ ಹಯಂ ಪವನಂಜಯಾಹ್ವಯಂ ॥೬೫॥

ಮಿಸುನಿಯ ಪೊನ್ನ ಪಲ್ಲಣದೊಳುಲ್ಲಸಿತಂಬಡೆಯಲ್ಕೆ ಕೂಡೆ ತೆ ।
ತ್ತಿಸಿದ ಸಮಸ್ತ ರತ್ನ ರುಚಿಗಳ್ ಪುದಿದುಣ್ಮೆ ತದೀಯ ದೀಧಿತಿ ॥
ಪ್ರಸರದಿನಿಂದ್ರಚಾಪ ಲತೆ ಪರ್ಬೆ ವಿರಾಜಿಪ ತಾರಕಾದ್ರಿಯಂ ।
ತೆಸೆದುದು ತತ್ಸಭಾಜನದ ಕಣ್ಗೆ ಹಯಂ ಪವನಂಜಯಾಹ್ವಯಂ ॥೬೬॥

ಅನಿಮಿಷ ವಾಜಿಗಂ ಪೆಸರ ಬಂಧುರಗರ್ಭೆಗವಿಾ ತುರಂಗಮಂ ।
ಜನಿಯಿಸಿತೆಂದು ಪೇಳ್ದನಜಃಯಂ ಮಣಿದತ್ತಕನೀ ಧರಿತ್ರಿಯೊಳ್ ॥
ಜನಿಯಿಸಿದಶ್ವಮಲ್ತಿದುವೆ ತಾಂ ಸುರ ವಾಜಿಯೆನುತ್ತೆ ವಿಸ್ಮಯಂ ।
ಜನಿಯಿಸಿ ತೋರ್ಪುದಲ್ತೆ ಪವನಂಜಯ ವಾಜಿಯನಾ ಸಭಾಜನಂ ॥೬೭॥

ಕಂ॥ ಕಡೆವಾಯಿಂ ನೊರೆಯುರುಳಿಗ ।
ಳೆಡೆವಿಡದುಗುತಿರೆ ಖಲೀನ ಯಷ್ಟಿಯ ಮಣಿಗಳ್ ॥
ಘುಡಿಘುಡಿಸಿ ಕಡಿಯುತುಂ ಕ ।
ಣ್ಗುಡಿ ನಿಮಿರೆ ನಿರೀಕ್ಷಿಸುತ್ತುಮಿರ್ದುದು ತುರಗಂ ॥೬೮॥

ಘುರುಘುರಿಸುವ ಘನ ಹೇಷಾ ।
ವಿರುತಿ ಪೊದಳ್ದುಣ್ಮಿಪೊಣ್ಮುತಿರೆ ತಾಂ ಬಿಡದು ॥
ರ್ವರೆಯಂ ದಕ್ಷಿಣ ಖುರದಿಂ ।
[1]ಬೆರಂಟುತಿರ್ದುದು ತುರಂಗಮಾಗ್ರಣಿಯಾಗಳ್ ॥೬೯॥

ಶುಭಸೂಚನೆಗಳನಾ ಹಯ ।
ಮಭಿನಯಿಸುವುದಂ ಸಮಂತಭೀಕ್ಷಿಸುತಾಗಳ್ ॥

1. ಬರುಂಟು.

ಸಭೆ ಜಯಜಯ ಎನುತಿರೆ ನೃಪ।
ವಿಭು ತಾನತುಳ ಪ್ರಮೋದ ಮಾನಸನಾದಂ ‖೭೦‖

ಆ ಸಮಯದೊಳ್—

ಮ‖ ಪದೆಪಿಂ ತತ್ಸಭೆಯಂ ತನುಪ್ರಭೆ ಕರಂ ತೞ್ಪೊಯ್ವಿನಂ ವಿಷ್ಟರಾ।
ಗ್ರದಿನೆೞ್ದುನ್ಮದ ಸಿಂಧುರೇಂದ್ರ ಸಮ ಲೀಲಾಯಾನದಿಂ ಬಂದು ಬೇ॥
ಗದೊಳಾದಂ ಮನಮೀಯೆ ಬೋಳವಿಸುತುಂ ಕಂದರ್ಪ ರಾಜೇಂದ್ರನೇ।
ಏಱಿದನಾಗಳ್[1]ಹರಿವಾಜಿಯಂ ಮಿಗುವ ತೇಜೋ[2]ರಾಜಿಯಂ ವಾಜಿಯಂ ‖೭೧‖

ಚಂ‖ ಸುೞಿಯಿಸುತಾಜಿಯಂ ಪೊಳಯಿಸುತ್ತೊಲವಿಂದೆಡಕಂ ಬಲಕ್ಕಮಾ॥
ಗಳೆ ತಿರುಪುತ್ತನೇಕ ವಿಧಮಪ್ಪ ಸುಶಿಕ್ಷೆಗಳಂ ಮನಕ್ಕೆ ಸಂ॥
ಗಳಿಸಿ ತದೀಯ ಚಿತ್ತಮದು ಚಿತ್ತದೊಳೈಕ್ಯಮಾಗಿ ದೋ।
ರ್ವಳ ಪವಮಾನ ಸೂನು ಪವನಂಜಯನೇಱಿ ತೋಱಿದಂ ‖೭೨‖

ಮ‖ ಮಡಸೋಂಕಂ [3]ಮನದಂಕೆಯಂ ತಿಳಿದು ಶಿಕ್ಷಾಪ್ರೌಢಿಯೊಳ್ ನಾಡೆ ನೇ।
ರ್ಪಡೆಯುಂ ವೇಡೆಯ ವೇಗದಿಂ ಬಹು ಗತಿ ವ್ಯಾಪ್ತತ್ವದಿಂ ತೋರ್ಕೆಯೊಳ್॥
ತೊಡರ್ದಯ್ದುಂ ತೆಱನಪ್ಪ ಧಾರೆಗಳನಾಗಳ್ ನೋಡೆ ನಾನಾ ವಿಧಂ।
ಬಡೆಯುತ್ತುಂ ಪವನಂಜಯಾಶ್ವನೆನಸುಂ ವಿಭ್ರಾಜಿಸಿತ್ತೋಜೆಯಿಂ ‖೭೩‖

ಕಂ‖ ವಿರಹಿಗಳವೋಲ್ ವಿಚಿತ್ರೋ।
ದ್ಧುರ ಧಾರಾ ಲಯಗತಿ ಪ್ರಭಾಸುರದಿಂ ಬಂ॥
ಧುರ ಗೌಡ [4]ರೀತಿವೋಲ್ ಸುರು।
ಚಿರ ಪದದ ತರಂಗದಿಂದಮೆಸೆದುದು ತುರಗಂ ‖೭೪‖

ಬಿಡೆ ಪವನಂಗೆನಸುಂ ಮುಂ।
ಗುಡಿಯಪ್ಪುದು ತನ್ನ ನಾಮದನ್ವರ್ಥಕಮಂ॥
ಪೊಡವಿಗೆ ತೋರ್ಪಂತೆನೆ ನೋ।
ೞ್ಪೊಡೆ ಪವನಂಜಯನ ವೇಗಮೇನಚ್ಚರಿಯೋ ‖೭೫‖

1. ಏಱಿ. 2. ಭ್ರಾಜಿಯಂ. 3. ಮನದಂತೆ. 4. ರೀತಿಯೊಳ್.

ಕಂ॥ ಪವಣಿಸಿದ ಪೊೞ್ತುಗಲ್ಲದೆ।
ರವಿ ವಾಜಿಗಳಪರ ಶರಧಿಗೆಯ್ದುವೆನುತ್ತುಂ॥
ಪವನಂಜಯುವೇೞ್ಪುದೆನೆ।
ಪವಣಿಪ ನಿನ್ನಾವನವಱ ರಯುವುಂ ಜಯುವುಂ ॥೭೬॥

ಮ॥ ಧರೆ ಮಾತಂಗ ಕುಲ ಪ್ರಯುಕ್ತೆಯೆನುತುಂ ತಾಂ ಮುಟ್ಟದೆಂಬಂತೆ[1]ತ।
ಚ್ಚರಣ ವ್ರಾತಮನೊರ್ಮೆಮೊದಲ್ ಸರಳಿಪಂತಾ ನವ್ರ ಘೋಣಾಗ್ರ ಕೋ॥
ಟರದಿಂ ಕಾಲ್ಗಳ ಸಾಲ[2]ನಿಂತಗುಳ್ವವೋಲಾಶ್ಚರ್ಯ ವೇಗ ಪ್ರಭಾ।
ಸುರಮಾಯ್ತಾ ಪವನಂಜಯಾಹ್ವಯ ಹಯಂ ತದ್ವಾಹ[3]ಳೀ ಕೇಳಿಯೊಳ್
॥೭೭॥

ಕಂ [4]ಒಡರಿಪೊಡಾ ಪವನಂಜಯು।
ದೊಡನೆಯ್ದುವುದೊಡಲ ನೆೞಲದಲ್ಲದೆ ರಯದಿಂ॥
ದೊಡನೆಯ್ದುವ ವಾಜಿಗಳೀ।
ಪೊಡವಿಯೊಳಿಲ್ಲೆನಿಸುತಿರ್ದುದಾ ವಾಹಳಿಯೊಳ್ ॥೭೮॥

ಚ॥ ಪದಯುಗ ರಮ್ಯನಪ್ಪ ಹರಿ ಮುನ್ನಳೆಯಲ್ಕೆ ತದಂಘ್ರಿ[5]ಗಾದವೆ।
ಯ್ದದ ನೆಲನೆಯ್ದಲಪ್ಪುದೆ ಚತುಶ್ಚರಣಾಂಚಿತದೀ ಹರಿ ಸ್ಫುರ॥
ತ್ಪದ ನಿಕರಕ್ಕದೆಂಬ ತೆಱದಿಂ ಪಿರಿದುಂ ಪವನಂಜಯಾಶ್ವ ರ।
ತ್ನದ ಪದ ಸಂಚಯ ಪ್ರಚಲನಕ್ಕಣಮೆಯ್ದದು ಮೇದಿನೀ ತಳಂ ॥೭೯॥

ಮ॥ [6]ಕವಿಯೋರಂತಿರೆ ಪತ್ತಿದಂತೆ ನೆಲನತ್ತಂ ವೃತ್ತ ರೇಖಾಂಕಮು।
ಪ್ಪವೊಲಿಂತುರ್ವಿಯ ನುದ್ಧತಂಕವಣಿ ಗಿರ್ರೆಂದೆಂಬಿನಂ ನಾಡೆ ತಿ॥
ಕ್ಕುವನಶ್ವಾಕೃತಿ ಮಾಳ್ಕೆಯಂ ಮಿಗೆ ನಿಮಿರ್ಚಿಟ್ಟಂದದಿಂ ಬಿಟ್ಟು ತೋ।
ಱುವನೇರಾಟದೊಳಾ ಮಹಾ ತುರಗಮಂ ಕಂದರ್ಪಧಾತ್ರೀಶ್ವರಂ ॥೮೦॥

ದೆಸೆಗಳ್ ವಾಜಿಮಯಂ ನೆಲಂ ಖುರಮಯಂ ತಾನೆಂಬಿನಂ ವೇಗದೊಂ।
ದೆಸಕಂಬೆತ್ತಿರಲೇೞ್ ತೋಱುತಿನಿತಾನುಂ ತತ್ಪಭ್ರಾಂತರ್ಜನ॥
ಕ್ಕೆ ಸಮಂತಚ್ಚರಿ ಪುಟ್ಟುವಂತೆ ಪಿರಿದುಂ ಕಂದರ್ಪದೇವಂ ವಿರಾ।
ಜಿಸೆ ವೈಚಿತ್ರ್ಯದೆ ತೋಱುತಿರ್ದನೊಲವಿಂದಾ ಕಂತುಕ ಕ್ರೀಡೆಯಂ ॥೮೧॥

---

1. ತಚ್ಚರಥಿ. 2. ನಿಂತುಗುಳ್ವ. 3. ದಿರ್ಕೇಳಿ. 4. ಒದವಿದೊಡಾ. 5. ಗಾಢ.
6. ತವೆಯಾರಂ ನೆಱೆ.

ಕ್ಷಿತಿಯುಂ ವ್ಯೋಮಮುಮೆಯ್ದೆ ಕಂತುಕಮಯಂ ಚಿತ್ರಿರ್ದುದೆಂಬೀ ವಿಚಿ।
ತ್ರತೆ ಮೆಯ್ವೆರ್ಚುವಿನಂ ತುರಂಗ[1]ಮದ ಬೇಗಂ ತಾಂ ಬೆಡಂಗಾಗೆ ತ॥
ನ್ನತುಳೋದ್ಯತ್ಕರ ಪದ್ಮದಿಂ ಪೊಡೆವ ಬೇಗಂ ತಾಂ ಬೆಡಂಗಾಗೆ ತೋ।
ಱುತುಮಿರ್ದಂ ಭುಜ ಸಾಹಸಾನಿಲ ಸುತಂ ತತ್ಕಂತುಕ ಕ್ರೀಡೆಯಂ ॥೮೨॥

ಮ॥ ಇದು ತಾನೆಂತುಮಭೂತಪೂರ್ವಮೆನುತುಂ ಪಕ್ಷ್ಮಂಗಳಾಲೋಲ ವೃ।
ತ್ತದೊಳಿತ್ತಂ ಪೆಜಸಿಂಗಿ ತತ್ಸಭೆಯುಮಾ ರಾಜೇಂದ್ರನುಂ ದೇವಿಯುಂ॥
ಮುದದಿಂದಂ ನಡೆ ನೋಡುತಿರ್ದನರಸಂ ಕಂದರ್ಪದೇವಂ ವಿನೋ।
ದದಿನಾಗಳ್ ನೆಱೆ ತೋರ್ಪ ಕಂತುಕ ವಿಚಿತ್ರ ಕ್ರೀಡೆಯಂ ರಾಗದಿಂ ॥೮೩॥

ಜನಪಂ ವಿಸ್ಮಯಮುತ್ತಭೀಕ್ಷಿಸುತುಮಿರ್ದಿಂ ಸಾಲ್ವುದಿಂ ಸಾಲ್ವುದಿ।
ನ್ನೆನುತುಂ ತನ್ನತುಳಾಜ್ಞೆಯಿಟ್ಟು ಬರವೇಟಲ್ಕಂಡು ತದ್ವಾಜಿ ರಾ॥
ಜನನಾತ್ಮೀಯ ಕರಾಬ್ಜದಿಂದೆ ಗಳ ಮೂಲ ಸ್ಫಾಲನಂಗೆಯ್ಯುತೊ।
ಯ್ಯನೆ ತಾಂ ಬೋಳವಿಸುತ್ತುಮಾಗಳಿೞಿದಂ ಭೂಪಾಲ ಪುಷ್ಪಾಯುಧಂ ॥೮೪॥

ಮನ[2]ಮಾದಂ ನೆಲೆವೆರ್ಚೆ ನೋಡುತಿರೆ [3]ಭೂಪಂ ತನ್ನನಾ ಭೂಪನಾ।
ನನಮಂ ನೋಡದೆ ತಾಂ ವಿನಿಮ್ನ ಮುಖನಾಗುತ್ತಾಗಳೆಟ್ತಿಂದು ಮೆ॥
ಲ್ಲನೆ ಕುಳ್ಳಿರ್ದನಿಳೇಶ ಕಂತು ನಿಜ ದೇಹಾಂಶು ವ್ರಜಂ ನೀಟ್ದು ಭೋಂ।
ಕನೆ ತೇಂಕಾಡಿಸೆ ತತ್ಸಭಾವೃತ ಸಭಾ ರಾಜನ್ಯಕಾನೀಕಮಂ ॥೮೫॥

ಆ ಸಮಯದೊಳ್—

ಕಂ॥ ಅವಧಾರೆಲೆ ನೃಪವರ ನೋ।
ಡುವುದೀ ಕಂದರ್ಪದೇವನಭ್ಯಾಸ ವಿಚಿ॥
ತ್ರವನೆಂದು ಭದ್ರಚಂಡಂ।
ಸುವಿನಯದಿಂದೆಟ್ದು ಮಾಡಿದಂ ಬಿನ್ನಪಮಂ ॥೮೬॥

ಅಂತಾ ಬಿನ್ನಪಮಂ ನೃಪ।
ಕಾಂತಂ ನೆಱೆ ಕೇಳ್ದು ಭದ್ರಚಂಡನ ಚಿತ್ತಂ॥
ಸಂತಸಮನ್ನೆಯ್ದಿ ತಣಿವ।
ನ್ನಂ ತಾನೊಸೆದಿತ್ತನಾಗಳಭಿಮತ ತತಿಯಂ ॥೮೭॥

1. ಮದು. 2. ಮಾನಂ. 3. ರೂಪಂ.

ಅಂತಿತ್ತು ಮತ್ತಮಿಂತೆಂದಂ—

ಮ॥ ಇನಿತೊಂದೊಪ್ಪುವ ರೂಪಮುಂ ವಿನಯಮುಂ ಸಾಮರ್ಥ್ಯಮುಂ ಸತ್ತ್ವಮುಂ ।
ಮನಮುಂ ಧೈರ್ಯಮುಮಾರ್ಯವೃತ್ತಿಯುಂ ಮನೂನ ಜ್ಞಾನಮುಂ ಪೇಳ್ವೊಡೀ ॥
ಮನುಜರ್ಗೆಲ್ಲಿಯದೆಂದಭೀಕ್ಷಿಸುತುಮಿರ್ದಂ ನಾಡೆ ವಿಶ್ವಂಭರಾ ।
ವನಿಪಾಲಂ ಪಡೆಪಿಂದೆ ನಂದನನಾ ಕಂದರ್ಪರಾಜೇಂದ್ರನಂ ॥೮೮॥

ಕಂ॥ ತನಯನ ಮೊಗಮಂ ನೋಡು ।
ತ್ತನೂನಮುದನಾಗಿ ಮನದೊಳೊಂದುಜ್ಜುಗಮಂ ॥
ನೆನೆದಾ ಪ್ರಜ್ಞಾಬಲ ಸಚಿ ।
ವನ ಮೊಗಮಂ ನೋಡಿದಂ ನರೇಂದ್ರಮುಕುಂದಂ ॥೮೯॥

ಮ॥ ಎನಗೀ ದುರ್ವಹಮಪ್ಪ ರಾಜ್ಯಭರಮಂ ತಾಳ್ವುದಿಂ ಸಾಲ್ವುದೇ ।
ಕೆನಲೇಕಾಕಿಯೆನಾಗೆಯಿಂದುವರೆಗಂ ತಾಳಿರ್ದೆನಾನೀಗಳಿಂ ॥
ತೆನಸುಂ ಬೇಗದೊಳೀ ಸಮಗ್ರತರ ರಾಜ್ಯಶ್ರೀಗೆ ಕಂದರ್ಪದೇ ।
ವನ ಕೋಟೀರ [ದ ಪೀಠ] ಮಾಗಿಸುವೆನಾನೆಂದಂ ನರೇಂದ್ರೋತ್ತಮಂ ॥೯೦॥

ಕಂ॥ ಇನಿತುಂ ನಿಶ್ಚಯಿಸಿಯೆ ಭೋಂ ।
ಕನೆ ನುಡಿದ ನರೇಂದ್ರಚಕ್ರಪಾಣಿಗೆ ಸನ್ಮಂ ॥
ತ್ರಿ ನಿಧಾನನಾ ಪ್ರಧಾನಂ ।
ವಿನಯದಿನುಸಿರ್ದಂ ಸಮಂತು ಸಮಯೋಚಿತಮಂ ॥೯೧॥

ಮ॥ ಇದು ದೇವರ್ ನೆನೆದಂತೆ ಕಾರ್ಯ[1]ದೊದವಿಂ ತಾನಪ್ಪುದಂತಾದೊಡಿಂ ।
ಮೊದಲೊಳ್ ಮಾಡಿ ವಿವಾಹ ವೈಭವಮನೀ ಕಂದರ್ಪದೇವಂಗೆ ಪೆಂ ॥
ಪೊದವಿಪ್ಪನ್ನತ ರಾಜ್ಯಲಕ್ಷ್ಮಿಯ ಲಸದ್ವೈವಾಹ ಕಲ್ಯಾಣಮಂ ।
ಪದೆಪಿಂ ಮಾಳ್ಪುದು ಯುಕ್ತಮೆಂದನರಸಂಗಾ ಮುಖ್ಯ ಮಂತ್ರೀಶ್ವರಂ ॥೯೨॥

ಇಂತು ನುಡಿದ ಸಚಿವನ ಮಾತಿಂಗಮಿದುಚಿತಮೆಂದು ಮನದೇಗೊಂಡು ಮಹೀಧರಚಕ್ರನೋಲಗಮಂ ವಿಸರ್ಜಿಸಿ ಮಜ್ಜನ ಭೋಜನ ಕ್ರಿಯಾನಂತರಂ

1. ಮೊದಲಂ.

ಮಂತ್ರಶಾಲೆಗೆಯ್ತಂದು ಮಂತ್ರಿಮುಖ್ಯನಂ ಬರಿಸಿ ಮಹಾದೇವಿವೆರಸು ವಿಷ್ಟರಾಸೀನ ನಾಗಿ—

ಮ॥ ನೆಗೞಲ್ವೇೞ್ಪುದು ನಾವತಿ ತ್ವರಿತದಿಂ ಕಂದರ್ಪದೇವಂಗೆ ನೆ।
ಟ್ಟಗೆ ವೈವಾಹಮನುರ್ವಿಯೊಳ್ ನೃಪಕುಲ ಪ್ರಖ್ಯಾತರಾರಾ ನೃಪಾ॥
ಳಿಗಳೊಳ್ ನಮ್ಮ ಸಮಾನಮಪ್ಪ ನೃಪರಾರಂತಾ ನೃಪಾನೀಕದೊಳ್।
ಮಿಗೆ ಕನ್ಯೋತ್ತಮೆಯಾವಳೆಂದು ಬೆಸಗೊಂಡಂ ಮಂತ್ರಿಯಂ ಭೂಭುಜಂ ॥೯೩॥

ಕಂ॥ ದೇವರಿದಂ ಬೆಸಗೊಳ್ವೊಡಿ।
ಳಾವರರುತ್ಕೃಷ್ಟ ಕುಲಜರುಂಟವರೊಳ್ ಕ॥
ನ್ಯಾವಳಿಯುಂಟಾದೊಡಮೇಂ।
ಭಾವಿಪುದಿದನೆನಗೆ [1]ತೋಱೆ ತಾಂ ಬಿನ್ನವಿಪೆಂ ॥೯೪॥

ಕಂ॥ ರೂಪದಿನೀ ಕಂದರ್ಪ ಮ।
ಹೀಪತಿಗೆಣೆಯೆಂತುಮಿಲ್ಲ ಚತುರಂಬುಧಿ ವೇ॥
ಳಾ ಪರಿವೃತ ವಸುಮತಿಯೊಳ್।
ವ್ಯಾಪಿಸಿ ನೋಡುವೊಡಿಳೇಶ ನೃಪಕನ್ಯಕೆಯಂ ॥೯೫॥

ಮ॥ಸ್ರ॥ ಇದರಿಂದೊಂದುಂಟು ದೇವರ್ ಬರಿಸುವುದಸಮಾನಾನ್ವಯೋದ್ಭೂತರಪ್ಪ ।
ಗ್ಗದ ಭೂಪಾನೀಕದಾ ಕನ್ನಿಕೆಯರಸಿಬರಂ ತಂದು ತೋಱಲ್ಕೆ ತಾಂ ಮೆ ॥
ಚ್ಚಿದಳಂ ಕಂದರ್ಪದೇವಂಗತಿಶಯಮೆನೆ ವೈವಾಹಮಂ ಮಾಡುವಂ ಶೀ।
ಘ್ರದೊಳೆಂದಿಂತೀಗಳುರ್ವೀಶ್ವರನಿದುಚಿತಮೆಂಬಂದದಿಂ ಮಂತ್ರಿಯೆಂದಂ ॥೯೬॥

ಕಂ॥ ಎನೆ ಸಚಿವನ ಮಾತಪ್ಪುದಿ।
ದೆನುತುಂ ವಿಖ್ಯಾತ ನೃಪರ ಕನ್ಯಾಜನಮಂ॥
ಜನಪತಿ ತರವೇೞ್ದಟ್ಟಿದ।
ನನುರಾಗದಿನಾಗಳಂತೆ ಶಿಷ್ಟೋತ್ತಮರಂ ॥೯೭॥

ಅಂತು ಕೞುಪಿದಾಗಳ್—

ಮ॥ಸ್ರ॥ ಪಡೆಪಿಂದೊಯ್ದೊಯಲೆಂದಿದಿರ್ದೊಡಮನುಪಮ ಕಂದರ್ಪದೇವಂಗೆ ತಾಂ ಬೇ।
ಡಿದಪಂ ವಿಶ್ವಂಭರೋರ್ವೀಶ್ವರನನುನಯದಿಂದಟ್ಟಿದಂ ಶಿಷ್ಟರಂ ಪು॥

---

1. ತೋಱಿತಂ.

ಣ್ಯದ[1]ಪಾಂಗೋಳ್ಪಾಯ್ತೆನುತ್ತುಂ ಕಲ್‌ಪಿದುದವನೀಪಾಲ ಜಾಲಂ ಕರಂ ಬೇ।
ಗದೊಳಾಗಳ್ ತನ್ಮತಮ್ಮಾತ್ಮಜೆಯರನಿಬರಂ ಪೆರ್ಚಿದಾನಂದದಿಂದಂ ॥೯೮॥

ಕಂ॥ ಮನಸಿಜನಾಜ್ಞೆಗೆ ಸಮ್ಮೋ।
ಹನ ದೇವತೆಯರ್ಕಳಿರದೆ ಬರ್ಪಂತಿರೆ ಭೋಂ॥
ಕನೆ ಬಂದುದು ನೃಪಕನ್ಯಾ।
ಜನಮತುಳ ವಿಳಾಸ ಭಾಜನಂ ತತ್ಕ್ಷಣದೊಳ್ ॥೯೯॥

ಇಂತಗಣ್ಯ ಲಾವಣ್ಯ ಸುಧಾ ಶರಧಿಯೊಳೊಗೆದ ಲಕ್ಷ್ಮೀಲಲನಾವಳಿಯಂತೆ ಪಂಚಬಾಣನ ವಶೀಕರಣ ಪಾಂಚಾಲಿಕೆಗಳಂತೆ ರೂಪ ಕಮನೀಯ ಕಳಾ ಸಮ್ಮೋಹನ ಪುತ್ರಿಕೆಗಳಂತೆ ಬಂದ ರಾಜಕನ್ಯಕೆಯರಂ ಪೆಸರ್ಗೊಂಡು ಬೇಱೆ[3] ಬೇಱೆ[3] ತೋಱಿದಾಗಳ್—

ಕಂ॥ ಕನ್ನಿಕೆಯರ ಸೊಗಯಿಪ ರೂ।
ಪನ್ನೋಡದೆ ತನ್ನ ರೂಪನಾ ನೃಪನ ಪದೋ॥
ದ್ಯನ್ನಖ ಮುಕುರಂ[2]ಗಳೊಳೆನ।
ಸುನ್ನೋಡುತ್ತಿರ್ದನಿಂತು ರಾಜಮನೋಜಂ ॥೧೦೦॥

ಕಂ॥ ನೋಡಲ್ ನಾಣ್ಚಿದೊಡೇಂ ಮಾ।
ತಾಡಿ ಮನಂಗಾಣ್ಬೆನೆಂದು ಮಂತ್ರಿವರಂ ಮಾ॥
ತಾಡಿಸಿಯುಂ ಮಾತಾಡದೆ।
ನೋಡದೆ ಕಂದರ್ಪದೇವನಿಂತಿರುತಿರ್ದಂ ॥೧೦೧॥

ಮ॥ ಮನಮಾ[3]ನಿರ್ದ ನಿವಾಸಮಾ ಮುನಮುನೀಗಳ್ ನಿಶ್ಚಳಂ ಚಿತ್ತ ಪಾ।
ವನಸತ್ತ್ವಕ್ಕೆಡೆಗೊಟ್ಟನಂತದಱಿಸೆಂತುಂ ಸಾಮರ್ಥ್ಯದಾಂ ಶಕ್ಯಮು॥
ಲ್ಲೆನಗೆಂದೋಸರಿಸಿರ್ದವೋಲ್ ಮದನ ರಾಗಂ ಪೊರ್ದದಾಕೀರ್ಣ ಯೌ।
ವನದೊಳ್ ಪಜ್ಜಳಿಸಿತ್ತು ಚಿತ್ತಮೆನಸುಂ ಕಂದರ್ಪರಾಜೇಂದ್ರನಾ ॥೧೦೨॥

ಕಂ॥ ವನಿತಾ ಸಂಗತಿ ಕಂದ।
ರ್ಪ ನರೇಂದ್ರನ ಚಿತ್ತವೃತ್ತಿಗದು ಸೈತಲ್ಲೆಂ॥

---

1. ಪಾಂಗೊಳ್ಪಾಯೆನುತ್ತುಂ. 2. ದದೊಳೆನ. 3. ಗಿರ್ದ.

ಬಿನಿತಂ ಭಾವದಿನಂದರ ।
ಸನ ಮೊಗಮಂ ನೋಡಿ ಮಂತ್ರಿ ಮತ್ತಿಂತೆಂದಂ ॥೧೦೩॥

ಮ॥ ಇನಿತೊಂದಾಗ್ರಹಮೇಕೆ ನಮ್ಮೊಳಿಲೆ ಭೂಭೃಚ್ಚಕ್ರಿ ತನ್ನಿಷ್ಟಮಾ ।
ವ ನರೇಂದ್ರಾತ್ಮಜೆಯಲ್ಲಿ ಪುಟ್ಟಿದುದವಂ ಕಂಡಾಗಳಾ ಭೂಪನಂ ॥
ದನೆಯಂ ತಂದು ವಿವಾಹಮಂ ನೆಗೞ್ವಿಮಾ ಕಂದರ್ಪದೇವಂಗೆ ನಾ ।
ಮೆನೆ ಮಂತ್ರೀಶನ ಮಾತುಗೇಳ್ದು ಮಿಗೆ ಚಿಂತಾ ಸ್ವಾಂತನಾದಂ ನೃಪಂ॥೧೦೪॥

ಕಂ॥ ಮುನಿಪನ ದಯೆಯಿಂದಾದಂ ।
ತನಯಂ ನಮಗಾಗೆಯುಂ ತದೀಯ ವ್ರತಮಂ ॥
ನೆನೆದಿರ್ಪ[1]ನೀತನೆನುತುಂ ।
ಜನಪತಿಯುಂ ಸತಿಯುಮಿಂತು ಚಿಂತೆಯನಾಂತರ್ ॥೧೦೫॥

ಮ॥ ತನಗೀ ಕನ್ನಿಕೆಯರ್ ಸ್ವರೂಪ ಸಮಮಲ್ಲೆಂದಂದಣಂ ನೋಡುತಿ ॥
ರ್ದನೋ ಬೇರೊರ್ಬ ವಿಚಿತ್ರ ರೂಪವತಿಯಂ ಕಂಡೋತು ತದ್ಭ್ರಾಂತಿವೆ ॥
ತ್ತನೊ ತಾಂ ಸನ್ಮುನಿ ದತ್ತನಪ್ಪುದಱಿನಾ ಮಾರ್ಗಕ್ಕೆ ಪಕ್ಕಾಗಲಿ ।
ರ್ದನೊ ಕಂದರ್ಪನೆನುತ್ತುಮಿಂತು ಬಗೆಯುತ್ತಿರ್ದಂ ಧರಾಧೀಶ್ವರಂ ॥೧೦೬॥

ಕಂ॥ ಇನಿತಂ ಚಿಂತಿಸುತುಂ ತಾ ।
ನೆನಿತಾನುಂ ಭೂಪ ಚಕ್ರಿ ಚಿಂತಿಸುತಿರೆಯುಂ ॥
ಮನಮನದನಱಿದು ಮತ್ತಂ ।
ನೆನೆದೊಂದಂ ಮಂತ್ರಿಮುಖ್ಯನಿರದಿಂತೆಂದಂ ॥೧೦೭॥

ಮ॥ ಮನಮಾವಂದದದೊಳಿರ್ದುದಿರ್ದದಱೊಳತ್ಯಾಸಕ್ತಿವೆತ್ತಿರ್ಪುದೆಂ ।
ಬಿನಿತುಂ ನಿಶ್ಚಯಮಲ್ತೆ ಭಾವಿಪೊಡಮಿಾ ಕಂದರ್ಪದೇವಂಗೆ ಮೋ ॥
ಹನ ಕಾಂತಾ ಜನಮಿಂತು ಸೇವಕಜನಂ ತಾನಾಗೆ ತಾನಪ್ಪುದಾ ।
ವನಿತಾ ಸಂಗಮುಮೆಂದು ಬಿನ್ನವಿಸಿದಂ ತನ್ಮಂತ್ರಿ ತಥ್ಯಾರ್ಥಮಂ ॥೧೦೮॥

ಅದಂ ಮಹೀನಾಥಂ ಮನದೇಗೊಂಡು—

1. ಕೆಯ್ತುಮೆ.

ಮ॥ಸ್ರ॥ ಕ್ಷಣದಿಂ ಕಂದರ್ಪ ರಾಗೋತ್ಕರಮನುದಯಿಸಲ್ ಸಾಲ್ವ ಸಮ್ಮೋಹನ ಸ್ತ್ರೀ ।
ಗಣಮಂ ವೀಣಾ ಕಳಾ ಪ್ರೌಢಿಯ ವರ ವನಿತಾನೀಕಮಂ ಗೇಯ ವಿದ್ಯಾ ॥
ಗಣಿಕಾ ಸಂದೋಹಮಂ ಚಾಮರದಡಪದ ಕಾಂತಾಳಿಯಂ ತಾನಿಳೇಶಾ ।
ಗ್ರಣಿ ತತ್ಸೇವಾ ನಿಮಿತ್ತಂ ಪರಿಜನಮಸಿಳಾಧೀಶ ಪುಷ್ಪೇಷುಗಿತ್ತಂ ॥೧೦೯॥

ಮ॥ [1]ಅನಪೇಕ್ಷಾತ್ಮಕನೆನ್ನದಿಂತು ಯುವರಾಜ್ಯ ಶ್ರೀಯನೊಲ್ದಿತ್ತು ಮ ।
ತ್ತೆನಿತಾನುಂ ಬಗೆಗೊಳ್ವವೋಲುಚಿತ ವಸ್ತು ವ್ರಾತಮಂ ಕೊಟ್ಟು ಚೆ ॥
ಲ್ವಿನೆ [2]ಮಾಡಿರ್ದ ಕುಮಾರಮಂದಿರಕೆ ತಾಂ ಬೀೞ್ಕೊಟ್ಟು ಕಂದರ್ಪದೇ ।
ವನ [3]ಸಾಸಿರ್ಮೆಯ ವಾಙ್ಮುಖಂ ಕಳಿಪಿದಂ ವಿಶ್ವಂಭರೋರೀಶ್ವರಂ ॥೧೧೦॥

ಅನಿಮೇಷಾರ್ಯ ಸದೃಕ್ಷಸಂ ಸಚಿವನಂ ಬೀೞ್ಕೊಟ್ಟು ಹರ್ಷಪ್ರವ ।
ರ್ಧನೆ ಮುಖ್ಯಾಖಿಳ ಕಾಂತೆಯರ್ ಚರಣ ಮಂಜೀರ ಸ್ವರಂ [ಪೊಣ್ಮೆ]ಘೋಂ ॥
ಕನೆ ತಾಮೇೞೆ ತದೀಯ ವಿಷ್ಟರದಿನೆೞ್ದಿಟ್ಟಿಂದು ವಿಶ್ವಂಭರಾ ।
ವನಿಪಾಲಂ ವಿಜಯಾವತೀ ಸತಿಯುತಂ ಪೊಕ್ಕಂ ನಿಜಾವಾಸಮಂ ॥೧೧೧॥

ಪತಿಯಪ್ಪಂ ಪೆಱತೇಂ ಸುರೂಪ ವಿಭವಂ ಕಂದರ್ಪದೇವಂ ದಲೆಂ ।
ದತುಳಾನಂದದಿನಿಂತು ಬಂದ ನೃಪಪುತ್ರೀ ವೃಂದಮಿಂತೆಲ್ಲರುಂ ॥
ಗತ ರಾಗಾತ್ಮಕರಾದರೆಂದುಚಿತ ವಸ್ತು ವ್ರಾತಮಂ ಕೊಟ್ಟು ಭೂ ।
ಪತಿ ತಾಂ ಮನ್ನಿಸಿ ಬೇಗದಿಂ ಕಳಿಪಿದಂ ತತ್ಕನ್ಯಕಾನೀಕಮಂ ॥೧೧೨॥

ಇಂತು ಕಳಿಪಿ ಕತಿಪಯ ದಿವಸಮಂ ಕಳಿಪುತ್ತುಮಿರೆಯಿರೆ—

ಮ॥ಸ್ರ॥ [4]ಹ್ರದಿನೀ ಸರ್ವಾಂಬುವಂ ಪೀರ್ದನಿತನೆ ದಿವದೊಳ್ ಕಾಣಿಸುತ್ತುಂ ಸ್ಫುರತ್ಪಾ ।
ದ ಪಳಂಗಳ್ ಪೊತ್ತೆ ಭೂರೇಣುಗೆ ಮಿಗೆ ಬಿಸುಪಂ ಪೆರ್ಚಿಸುತ್ತುಂ ಕುಜವ್ರಾ ॥
ತದ ಶೀತಚ್ಛಾಯೆಗತ್ಯುಷ್ಣತೆಯನೊದವಿಸುತ್ತುಂ ಪೊದೞ್ವೇಗೆಯಿಂ ಬಂ ।
ದುದು ತಾಂ ಸಂತಪ್ತ ತಿಗ್ಮಾತಪ ವಿಪುಳತರ ಜ್ವಾಲಮಾ ಗ್ರೀಷ್ಮಕಾಲಂ ॥೧೧೩॥

ಕಂ॥ ನೆಗಪುತ್ತುಂ ಗಗನ ತಳ ।
ಕ್ಕಗಣಿತ ವಾತೂಳಕಾಳಿಯಂ ಕಾಯ್ಪು ಸಮಂ ॥
ತೊಗೆದ ಕಡುವಿಸಿಲ ಪಸರಮು ।
ನುಗುೞುತ್ತುಂ ಬಂದುದತುಳ ಭೀಷ್ಮಂ ಗ್ರೀಷ್ಮಂ ॥೧೧೪॥

1. ಅನಪಿತಾಕ್ಷ್ಮ. 2. ಮಾಗಿರ್ದ. 3. ಸಾಸಿರ್ಮ. 4. ಹ್ರದನಿ.

ಮ॥ಸ್ರ॥ ಒಗೆದಾಗಳ್ ಮಾಗಮುಕ್ಕ್ರಂ ಮೊದಲೊಳೆ ತವೆ ತೂಳ್ದಿಕ್ಕಿ ದಾವ ಜ್ವಲಜ್ಜಾ।
ಲೆಗಮತ್ಯಾಭೀಳಮಪ್ಪಾತಪದ ಪಸರಮುಂ ಕೂಡೆ ಕಾಱುತ್ತುಮುದ್ಯ॥
ನ್ಮೃಗತೃಷ್ಣಾ ಮಾಲೆಯುಂ ಧಾತ್ರಿಗೆ ಮಿಗೆ ಕೆದಱುತ್ತುಂ ಕರಂ ಕಾಟ್ಪುನಿಂ ಕೈ।
ಮಿಗುತುಂ ಬಂದತ್ತದೊಂದದ್ಭುತಮೊದವಿದಮೋಘಂ ಮಿಮೋಘಂ ನಿದಾಘಂ
॥೧೧೫॥

ಚಂ॥ ವಿಳಯ ಕೃಶಾನು ರೂಪದ ನಿದಾಘದ ಬರ್ಪ ಪೊಡರ್ಪಿಗಳ್ಕಿ ಸಂ।
ಚಳಿಸಿ ಪಯೋದಮಾಲೆ ಪಟಿಯಲ್ಕೆ ನಿರಾಶ್ರಯದಿಂದಿರಮ್ಮದಾ॥
ನಿಳನಿರದೆಯ್ದೆ ಬಂದಿಳೆಯನಾವರಿಸಿತ್ತೆನೆ ತೀವ್ರ ತಾಪದಿಂ।
ದಳುರ್ವ ಬಿಸಿಲ್ಪೊದಟ್ಟಿ ನೆಲನಂ ಸಲೆ ಬಾಯ್ಬಿಡೆ ಕೂಡೆ ನಾಡೆಯುಂ ॥೧೧೬॥

ಕಂ॥ ಇದು ಲಯ ಪಾವಕನುರಿವಸ।
ರದ ಮುಸಕದ ಚೂಣಿಯೆಂಬಿನಂ ಶಿವಶಿವ ನೋ॥
ಡಿದೊಡೆವೆ ಸೀಯಲ್ ಕಡುಗಾ।
ಯ್ಪೊದವಿದುದಾತಪದ ಬಿಸುಪದೇನಸದಳಮೋ ॥೧೧೭॥

ತರು[1]ನೀಡ ತತಿಗೆ ದಳ್ಳುರಿ।
ಪರಿದೊಡೆ ನಿಲಲಾರದೆಟ್ಟಿ ಪಾಱುವ ವಿಹಗೋ॥
ತರ್ಕದ ಕೊನೆಗಱಗಳುರೆ ಸೀ।
ಕರಿಪೋದವಿದೇನಳುಂಬಮೋ ಬಿಸಿಲೆಸಕಂ ॥೧೧೮॥

ಮ॥ಸ್ರ॥ ಸಮುಸಂದೌರ್ವಾನಳಂ ಪರ್ಬಿದವೊಲುದಧಿಕಾಯ್ದುರ್ಕೆಸರ್ಗೊಂಡುದಾಭೀ।
ಳ ಮಹದಾವಾಗ್ನಿ ಮೆಯ್ಸೋಂಕಿದ ತೆಱದೆ[2]ತರುಸ್ತೋಮದಾ ಸಾರ್ದ್ರಪತ್ರಾ॥
ಳಿ ಮುರುಂಟಿತ್ತೊಟ್ಟೆ ಸುಟ್ಟಂದದೊಳೆ ಚಿಟಿಚಿಟಿಲ್ ಪಟ್ಟುಪಟ್ಟೆಂಬ ನಿರ್ಘೋ।
ಷಮುದುಣ್ಮುತ್ತುಂ ಸಿಡಿಲ್ದತ್ತಚಲ ಚಯಮದೇಂ ತೀವ್ರಮೋ ಗ್ರೀಷ್ಮತಾಪಂ
॥೧೧೯॥

ಕಂ॥ ಒದವಿದ ನಿದಾಘ ಸಂತಾ।
ಪದಳುರ್ಕೆಗಿಳಾ ವಧೂಟಿ ನೆಱೆ[3] ಸೈರಿಸಲಾ॥

---

1. ಗಿಡ ತತಿಯುಳಲುರಿ. 2. ತನು.

ರದೆ ಚೀರುತಿರ್ಪ ತೆಱನಾ ।
ದುದು ಪಿರಿದುಂ ಪೊಣ್ಮಿದತುಳ ಭೇರೀ ನಾದಂ ॥೧೨೦॥

ಚಂ॥ ತ್ವರಿತದೆ ಪುಟ್ಟಿ ಬಿರ್ರೆನುತುವಾ ಕ್ಷಣದಿಂ ಪೊಗೆದೆತ್ತಿ ದೂವೆಯಂ ।
ತಿರೆ ಕಡುಗಾಯ್ದು ಭೂ ರಜಮನಾ ರಜದಾಹತಿಯಿಂದೆ ಪೊತ್ತಿ ಸೀ ॥
ಕರಿಗೊಳುತಿರ್ಪ ಶುಷ್ಕದಳ ಸಂಕುಳ ಧೂಮ ವಿಮಿಶ್ರದಿಂದಮಂ ।
ಬರಮನೆ ಚುಂಬಿಸುತ್ತಿರದೆ ಸುಟ್ಟುರೆಗಳ್ ನೆಗೆದತ್ತುವೆತ್ತಲುಂ ॥೧೨೧॥

ಚಂ॥ ವನನಿಧಿ ಸಪ್ತಕೋಪಚಿತಮುಪ್ಪಖಿಳಾವನಿ ಚಕ್ರಮೆಯ್ದೆ ಭೋಂ ।
ಕನೆ ಕಡುಗಾಯ್ದು ದಿಕ್ಕರಿಗಳುನ್ನತ ಕಂಠ ಕದಂಬಕಂ ಫಣೀಂ ॥
ದ್ರನ ವಿಳಸತ್ಫಣ ಪ್ರತತಿ ಪೊತ್ತಿ ಕರಂಪೊಗೆಯೇಱುತಿರ್ದುದೆಂ ।
ದೆನೆ ಕಿಡಿ ಬೀಱ್ವ ಬೇಸಗೆಯ ತಾಪ ವಿಜೃಂಭವಿದೇನಳುಂಬವೋ ॥೧೨೨॥

ಮ॥ಸ್ರ॥ ಸಲೆ ಸತ್ತ್ವಂ ಬಿಱ್ವನಂ ಕಾಯ್ದುದಕ [1]ರಸ ಸಮಾಜಂ ಸಮುತ್ತಪ್ತದಿಂ ಶ್ಯಾ ।
ಮಳಮಾಯ್ತಂಭೋದ ಮಾರ್ಗಂ ಮುಱುಗಿ ಕರಗುವಂತಾಯ್ತು ವಿಶ್ವಂಭರಾ
ಮಂ ॥
ಡಳಮಾಭೀಳ ಸ್ಫುಲಿಂಗಾಳಿಯ ಹಗವದ ಸಾಲೆತ್ತಿದಂತಾಯ್ತು ದಿಕ್ಸಂ ।
ಕುಳಮೋವೋ ಇಂತಿದೇನುಗ್ರಮೊ ಲಯಶಿಖಿ ರೂಪಂ ನಿದಾಘ ಪ್ರಕೋಪಂ
॥೧೨೩॥

ಉ॥ ತೊಟ್ಟನೆ ಪಲ್ವಲಾಂಬು ತವೆ ಬತ್ತಿದುದಾಕ್ಷಣವೆಟ್ಟಿ ಹೆಟ್ಟಿ ಕಾ ।
ಯ್ದಿಟ್ಟಗೆಯುಂದಮಾಯ್ತು ನೆಲೆಗಾಣದೆ ಕಾಯ್ದು ನದೀ ಹ್ರದಾಂಬುಗಳ್ ॥
ನೆಟ್ಟಗೆ ನೋಡೆನೋಡೆ ಒಱತೆಯ್ದೆ ಮಣಲ್ ಕಿಡಿಯುಂದಮಾಯ್ತೆನಲ್ ।
ನಿಟ್ಟಸಬಾರದಿಂ[2]ತಕಟ ಬೇಸಗೆಯುಗ್ರಮದೇನುದಗ್ರಮೋ ॥೧೨೪॥

ಕಂ॥ ಮೃಗತತಿ ಪೊದಟ್ಟು ಮೃಗತೃ ।
ಷ್ಣೆಗಳಂ ಜಲಮೆಂದು ಪಱಿದುಮೋರಂತೊಡಲೊಳ್ ॥
ನೆಗೆದ ಕಡು ತಾಪದಿಂ ಪೊಗೆ ।
ಮೊಗದಿಂ [3]ಸೂಸಿರ್ದುದಾ ನಿದಾಘದೊಳೆತ್ತಂ ॥೧೨೫॥

1. ದರಸಸಮಾಜಂ. 2. ತಖಿಳ. 3. ಸೂಸಿತ್ತುಮಾ.

ಚಂ॥ ಜಳ ಲವಮಿರ್ದ ಬೆಂಚೆಗೆ ತೃಷಾತುರದಿಂ ಪಱಿತಂದು ತೀರದೊಳ್ ।
ಘಳಿಲನೆ ಕಾಲನೂಱಿ ಮೊಗಮಂ ನೆಱೆ [1]ನೀಡಿ ತದೀಯ ಪಂಕವಾ ॥
ಷ್ಕಳದಮಹೋಷ್ಣಮೋಷ್ಠ ಪುಟಮಂ ಸುಡೆ ಸಾರ್ದು ಬಿದಿರ್ಚಿ ಮೋಱೆಯಂ ।
ಬಳವಳಿಸುತ್ತುಮಿರ್ದುದುಸಮಂತುಮೃಗೌಘಮದಾನಿದಾಘದೊಳ್ ॥೧೨೬॥

ಕಂ॥ ನೆಗಪಿದ ಸೋಗೆಯ ನೆೞಲಾ ।
ಸೆಗೆ ನಿಲಲಾ ನೆಲದ ಕಾಯ್ಪಿನಿಂ ಚರಣ ತಳಂ ॥
ಮಿಗೆ ಬೆಂದಿರಲಾಱದೆ ನೆ ।
ಟ್ಟಗೆ ಮಮ್ಮಲಮಱುಗುತಿರ್ದುದೊಂದು ಮಯೂರಂ ॥೧೨೭॥

ತುದಿಗೊಳೆ ಕಾಯ್ದುಕ್ಕುವ ದೊಣೆ ।
ಯುದಕದೊಳಿಡೆ ಚಂಚು ಬೆಂದು ಭೋಂಕನೆ ತಲೆಯಂ ॥
ಬಿದಿರ್ದೋದವಿಂ ಬಾಯ್ಬಿಟ್ಟೊಳ ।
ಱಿದುದೊದವಿದ ತಾಪದಿಂ ವಿಹಂಗ ಕಳಾಪಂ ॥೧೨೮॥

ಚಂ॥ ತರಣಿ ಸಮಂತು ನಮ್ಮಧಿಪನಾಗಿಯುಮಿಂತುಱೆ ಕಾಯ್ದನೆಂದು ತ ।
ತ್ಸರಸಿಜ ಲಕ್ಷ್ಮಿಗೆಯ್ದಱಚುತಿರ್ದಪುದೆಂಬಿನಮಾ ನಿದಾಘ ಭೀ ॥
ಕರತರ ತಾಪದೇೞ್ಗೆಗೆನಸುಂ ನಿಲಲಾಱದೆ ಚೀಱುತುಂ ಕರಂ ।
ಕೊರಗಿದ ಪದ್ಮಪತ್ರದ ನೆೞಲ್ವಿಡಿದಿರ್ದುದು ಕೋಕ ಸಂಕುಳಂ ॥೧೨೯॥

ಕಂ॥ ನೆೞಲಾಗಿರ್ದ ಸರೋರುಹ ।
ದಳಮದು ಕಡುವಿಸಿಲ ಬೆಂಕೆಯಿಂ ಕೊರಗಿದೊಡಾ ॥
ಗಳೆ ತನ್ನೆಱಂಕೆಗೊಡೆಯಂ ।
ಕಳವಳಿಸುವ ಸತಿಗೆ ಪಿಡಿದುದೊಂದು ರಥಾಂಗಂ ॥೧೩೦॥

ಚಂ॥ ಜನಿತ ನಿದಾಘದುಗ್ರತರ ತಾಪದಳುರ್ಕೆಯೊಳೆಯ್ದೆ ಕಾಯ್ದು ಚು ।
ಯ್ಯನೆ ಕುದಿಗೊಂಡ ನೀರ ಬಿಸುಪಿಂಗೆನಸುಂ ಮರುಗುತ್ತುಮಲ್ಲಿ ತೊ ॥
ಟ್ಟನೆ ತವೆ ಮೞ್ಗಿಪೋದ [2]ಶಫರಾದಿ ಪಯಶ್ಚರ ಜಂತು ಜಾಲ ಜೀ ।
ವನದೊಡನಾಗಳಂತೆ ಗತ ಜೀವನಮಾಯ್ತು ಸರೋವರೋತ್ಕರಂ ॥೧೩೧॥

---

1. ನೀವಿ. 2. ಶಫರಾಳಿ ಜಲಚರ.

ಕಂ॥ ಪರಿಹೃತ ಶಂಬರಮಾದುದು ।
ಪಿರಿದುಂ ಕಾಸಾರ ಸಮಿತಿ ಕಂದರ್ಪನ ಭೀ ॥
ಕರ ಬಾಹು ಪರಾಕ್ರಮದಂ ।
ತಿರೆ ಭೀಷ್ಮ ಗ್ರೀಷ್ಮದುರುತರಾ [ತಪದಿಂದಂ] ॥೧೩೨॥

ಸರಸಿಜ ಕುಲಮುತ್ಸಾರಿತ ।
[1]ಶರವಾಯ್ತುನ್ಮುಕ್ತ ವಿಶಾಖಮುಪ್ಪತುಳ ಧನು ॥
ರ್ಧರನ ಕರ ಶರದವೋಲ್ ಭೀ ।
ಕರಮೆನಲೊಗೆದಾ ನಿದಾಘ ತಾಪೋತ್ಕಟದಿಂ ॥೧೩೩॥

ಮ॥ ಘನ ಪಂಕಾಧರ ಮಗ್ನ ಕಚ್ಛಪ ಕುಳಂ ಬದ್ಧಾಶ್ಮ ತತ್ಸಂಧಿ ರಂ ।
ಧ್ರ ನಿಕಾಯೋಪಗತಾರ್ತ ಕರ್ಕಟಕ ಜಾಲಂ ಸಾರ್ದ್ರವೇಲಾ ಸುರಂ ॥
ಗ ನಿವೇಶ ಸ್ಥಿತ ಸಂಕಟಾಂಗಮಯ ಶಾಲೂರೋತ್ಕರಂ ತ್ಯಕ್ತ ಜೀ ।
ವನ ಮತ್ಸ್ಯ ವ್ರಜಮಿರ್ದುದಿಂತು ಸರಸೀ ಸಂದೋಹಮಾ ಗ್ರೀಷ್ಮದೋಳ್ ॥೧೩೪॥

ಕಂ॥ ಗಿರಿ ಗುಹೆಗಳ [2]ನೆಟಿಲುರಿಯಿಂ ।
ಪಿರಿದಾಗುತ್ತಿರೆ ತದೀಯ ತಾಪೋತ್ಕಟದಿಂ ॥
ಕೊರಗುತ್ತುಂ ನೆಱೆ ಬಾಯ್ಬಿ ।
ಟ್ಟಿರುತಿರ್ದುದು ಕೇಸರಿ ವ್ರಜಂ ಬೇಸಗೆಯೊಳ್ ॥೧೩೫॥

ಮ॥ಸ್ರ॥ ತನುವಂ ತಳ್ಪೊಯ್ವ ತೀವ್ರಾತಪದ ಬಿಸುಪಿಗಳ್ಕಳ್ಕಿ ಧೂಳಿ ವ್ರಜಾಸೇ ।
ಚನಮುಂ ಮಾಳ್ಪುಜ್ಜುಗಂ ಮಿಕ್ಕಿರದೆ ಮೊಗೆಯಲಾ ಭೂರಜಂ ವಿಸ್ಫುಲಿಂಗೌ ॥
ಘ ನಿಘೃಷ್ಟೋದ್ಘೃಷ್ಟ ರೇಣೂತ್ಕರಮನೆ ಮೊಗೆದಂತಾಗಿ ತತ್ಪುಷ್ಕರಂ ಬೆಂ ॥
ದೆನಸುಂ ಬೆರ್ಚುತ್ತೆ ಘೀಳಿಟ್ಟೊರಲಿ ಪಱಿದುದೋರಂಡದಿಂ ಹಸ್ತಿ ವೃಂದಂ ॥೧೩೬॥

ಕಂ॥ ಉರಿವಿಸಿಲ ಬೇಗೆಯಿಂ ಬಿರಿ ।
ಬಿರಿದೆಡೆವಿಡ[3]ದುಗುವ ಮುತ್ತುಗಳ [ನುಡ] ಬಿಂದೂ ॥
ತ್ಕರಮೆಂದು ತುಡುಕಿ ಕರ ಪು ॥
ಷ್ಕರಮಂ ಬೀಱುತ್ತುಮಿರ್ದುದೊಂದು ಗಜೇಂದ್ರಂ ॥೧೩೭॥

---

1. ಸರಮಾಯ್ತುನ್ಮುತ್ತ. 2. ನೆಟಿಲುರಿಯುಂ. 3. ದುಗುತ.

[1]ಬಿದು ಬಿರಿದು ಸುರಿವ ರಕ್ತಾ |
ರ್ದ್ರದ ಮುತ್ತುಗಳಿಂ ಗಜವ್ರಜಂ ನೆನೆಯಿಸುತಿ ||
ರ್ದುದು ವಿಲಯ ಕಾಲದೊಳ್ ಕೆಂ |
ಡದ ಮುೞೆ[2]ಗಱೆವರ್ಷಮಂ ನಿದಾಘದೊಳಾಗಳ್ ||೧೩೮||

ಮ||ಸ್ರ|| ಒಳಱುತ್ತುಂ ಗ್ರೀಷ್ಮ ಸಂತಾಪದೆ ಮರುಗುವ ಬಾಲೇಭಮಂ ತನ್ನ ನಾಲ್ಗಾ |
ಲ್ಗಳ ಮಧ್ಯಚ್ಛಾಯೆಯೊಳ್ ಸೈತಿರಿಸಿ ಬಿಸಿಲ ಕಾಯ್ಪಿಂಗೆ ಮೆಯ್ಯೊಡ್ಡಿ ಕುಂಭ ||
ಸ್ಥಳಮುಂ ತಾಂ ಬೇಗೆಯಿಂ ಬಿಬ್ಬನೆ ಬಿರಿದುಗೆ ಮುಕ್ತಾಗಣಂ ಸ್ಥಾಣುವಂ ತಾಂ |
ಬಳಲುತ್ತುಂ ನೆಮ್ಮಿ ದಂತದ್ವಯವೃತ ಕರನಾಗಿರ್ದುದತ್ತೊಂದಿಭೇಂದ್ರಂ ||೧೩೯||

ಮ|| ಕಡುಗಾಯ್ದುರ್ವಿಯನಳ್ಕಿ ಮೆಟ್ಟುವ ನಿಜಸ್ತ್ರೀ ಹಸ್ತಿಗಾ ಹಸ್ತದಿಂ |
ಡುಡಿದಾಗಳ್ ತಳಿರಂ ಪದಕ್ಕೆ ಪರಪುತ್ತುಂ ಮೇಲೆ ಕಾಯ್ಪಿಂದಣಂ ||
ಬಿಡೆ ತಳ್ಪೊಯ್ವ ಬಿಸಿಲ್ಗೆ ಪಲ್ಲವದ ಗುಚ್ಛಂಗೊಂಡು ಸೈತಾ ನೆೞ |
ಲ್ವಿಡಿದಾದಂ ಬರುತಿರ್ದುದೊಂದು ಮದ ಮಾತಂಗಂ ಪಯೋವಾಂಛೆಯಿಂ ||೧೪೦||

ಮ||ಸ್ರ|| ಅಳುರುತ್ತಿರ್ಪಾತಪ ಜ್ವಾಲೆಗೆ ಬೆದಱಿ ಕರಂ ಬಂದಗಾಧ[3]ಸ್ರವಂತೀ |
ಜಳದೊಳ್ ಸಂರಂಭದಿಂದಂ ಮುೞುಗಿ [4]ಕುದಿವ ತದ್ವಾರಿ ತಾಪಕ್ಕೆ ಘೀಳಿ ||
ಟ್ಟೊಳಱುತ್ತಾವೇಗದಿಂದಂ ಪೊಱಮಡುವ ಬಹಿರ್ಜ್ವಾಲೆಗುಳ್ಳಳ್ಕುತತ್ಯಾ |
ಕುಳದಿಂ ಮೆಯ್ವಿಟ್ಟು ಜೋಲ್ದಿರ್ದುದು ನೆರೆದು ನದೀ ತೀರದೊಳ್ ವಾರಣೌಘಂ ||೧೪೧||

ಮ|| ಜಳಮಾತ್ರಂ ಪುದಿದಿರ್ಪ ಪಲ್ವಲ ಮಹಾ ಜಂಬಾಲದೊಳ್ ಕೇಸರಾ |
ವಳಿಯುಗ್ರಂ ನಸುದೋಱಿದಂತೆ [ನೆಱೆ]ನಿಷ್ಕಂಪತ್ವದಿಂ ಗಾತ್ರ ಸಂ ||
ಕುಳದೊತ್ತೊ[5]ತ್ತಿ ಮುೞುಂಗಿ ನವ ಲೇಪೋದ್ವಕ್ತ್ರಮಾಗಿರ್ದುದ |
ಸ್ಖಳಿತೋಚ್ಚಂಡ ನಿದಾಘ ತಾಪ ಭಯದಿಂ ಕ್ರೋಡವ್ರಜಂ ನಾಡೆಯುಂ ||೧೪೨||

---

1. ಬಿಡಿ. 2. ಗಱೆಜೀವಬ್ಜ. 3. ಶ್ರಮಂತೀ. 4. ಕುಡಿವ.
5. ತ್ತಿಗಳಿಂ ಮುಳುಂಕಿ ಲವಲೇಶೋದ್ವಕ್ತ್ರ.

ಮ॥ಸ್ರ॥ ಬಿಡೆ ವಾಯ್ದುಗ್ರಾತಪ ಜ್ವಾಲೆಗೆ ತನು [1]ಪುೞುಪೇೞುತ್ತಣಂಬೇಯೆ ಬಾಯಂ।
ಬಿಡುತಂ ತೇಂಕುಣ್ಮಿ ಜಿಹ್ವಾಲತೆಯೊಳೞ್ತೆ ಜಲಂಗುಂದುತುಂ ಬಂದು ತಾಂ॥
ಮಡುಗೊಂಡಾ ಪಲ್ವಲಂಬೊಕ್ಕಡಿಗಡಿಗೆ ಪೊರಳ್ದೞ್ದುತುಂ ಮೆಯ್ಯನಾರ।
ಲ್ಗುಡದೋರಂತಿರ್ದುದೆತ್ತಂ ಬಿಡದಡವಿಗಳೊಳ್ ಸಂಘದಾ ಸೈರಿಭಂಗಳ್ ॥೧೪೩॥

ಮ॥ ಅನಲೋಷ್ಮಾವಳಿಯಿಂ ಮಹೋಗ್ರಮೆನೆ ಕಾಯ್ದುಷ್ಮಾತಪ ಜ್ವಾಲೆಗ।
ಳ್ಕಿ ನಿತಾಂತಂ ಘನಪಂಕ ಪಲ್ವಲ ಕುಳಾಂತರ್ಭಾಗಮಂ ಬಂದು ಭೋಂ।
ಕನೆ ಪೊಕ್ಕಿರ್ದುದು ತದ್ದಿವಾಂತಮನೆ ಪಾಱುತ್ತುಂ ಮುಹುಶ್ಶೃಂಗ ತಾ।
ಡನ ಜಾತಾಂಬು ಕಣಾವಳಿ ದ್ರವ ಮಿಳತ್ಕಾಯಂ ಲುಲಾಯ ವ್ರಜಂ ॥೧೪೪॥

ಮ॥ಸ್ರ॥ ವರುಣಂ ವಾರಾಶಿಯಂ ಪೊಕ್ಕಡಗಿದನಭವಂ ಗಂಗೆಯಂ ಪೊತ್ತು ನಿಂದಂ।
ಹರಿ ದುಗ್ಧಾಂಭೋಧಿಯಂ ಭೋಂಕನೆ ವಸಿಯಿಸಿದಂ ಮಿಕ್ಕ ಶಕ್ರಾದ್ಯರೆಲ್ಲಂ॥
ಕೊರಗುತ್ತುಂ ಗೊಂಟುಗೊಂಟಂ ಪುಗುತಿರೆ ಭುವನಂ ತೀವ್ರ ತಪ್ತಾತ್ಮಮಾಗು।
ತ್ತಿರೆ ಪರ್ವಿತ್ತುರ್ವಿ ದಾವಾನಲ ಪಟು ಭಟರಾಟೋಪದಿಂ ಗ್ರೀಷ್ಮತಾಪಂ॥೧೪೫॥

ಇಂತು ವಿಳಯ ದಹನಂಗೆ ಸಮನಾಗಿ ಸಮನಿಸಿರ್ದಾ ನಿದಾಘ ಸಮಯದೊಳ್—

ಮ॥ಸ್ರ॥ ವಿನುತ ಸ್ತ್ರೀ ವಾಂಛೆಯಂ ಚಿತ್ತದೊಳುದಯಿಪೆವೆಂಬುಜ್ಜುಗಂ ಮಿಕ್ಕು ಸಂಮೋ।
ಹನ ವಿದ್ಯಾಪ್ರೌಢಿವೆತ್ತೋಲಗಿಸುತನುದಿನಂ ರೂಪ ಸೌಂದರ್ಯ ವಾರಾಂ॥
ಗನೆಯರ್ ತಾವಿರ್ಪುದುಂ ತತ್ಪ್ರಿಯಮೊಗೆಯದೆ ಕಂದರ್ಪದೇವಂಗೆ ಪುಟ್ಟಿ।
ತ್ತೆನಸುಂ ಚೆಲ್ವಿಂ ಪೊದೞ್ದಾ ವಿಪುಳ ವನ ವಿಹಾರ ಕ್ರಿಯೋದ್ಯೋಗ ರಾಗಂ ॥೧೪೬॥

ಕಂ॥ ವಿಪುಳ ವನ ವಿಹರಣ ವಿನೋ।
ದ[2]ಪರೀತ ಸ್ವಾಂತನಾಗಿ ನೋಡಿದನೆನಸುಂ॥
ನೃಪ ಕುಸುಮಚಾಪನಾಗಳ್।
ವಿಪುಳ ಪ್ರಿಯ ಮಿತ್ರನಪ್ಪ ಮೇಧಾವಿಳನಂ ॥೧೪೭॥

1. ಪುಳಿಬೇಳು. 2. ಪಲಿತ.

ಮ॥ ಎಲೆ ಮೇಧಾವಿಳ ನಮ್ಮ ರಮ್ಯ ವಿಪುಳೋದ್ಯಾನಕ್ಕೆ ನಾವಿಂದು ಪೋ।
ಗಿ ಲಸಚ್ಚೂತದ ತಳ್ತ ತಣ್ಣೆಲೊಳೋರಂತಿರ್ಪಮಿರ್ದೀಯೆಲರ್॥
ಜ್ವಲನಾಕಾರಮನಪ್ಪುಕೆಯ್ದುಳುರ್ವ ತೀವ್ರ ಗ್ರೀಷ್ಮದುರ್ಕೆಯ್ತಮು।
ಟ್ಟಿಲೊಡಂ ಬರ್ಪಮೆನುತ್ತುಮಿಂತು ನುಡಿದಂ ಭೂಪಾಲ ಪುಷ್ಪಾಯುಧಂ
॥೧೪೮॥

ಕಂ॥ ಆನಿದನೆ ಬಿನ್ನವಿಸಲನು।
ಮಾನಿಸೆ ನೀವಿದನೆ ದೇವ ನುಡಿದಿರ್ ವಪುಳೋ॥
ದ್ಯಾನಕ್ಕೆ ಪೋಪಮೆಂದೆನೆ।
ತಾನುಂ ನಯದಿಂದೆ ಸಚಿವ ಸುತನನುವಿಸಿದಂ ॥೧೪೯॥

ಎನೆ ಮನದೇಗೊಂಡಾಗಳ್—

ಮ॥ಸ್ರ॥ ಮುಡಿವೂವಂ ಬಿಟ್ಟು ಝುಂಕಾರಿಸು[1]ವಳಿ ಗಣಮುಂ ನೀಟ್ಟು ಮೇಲೇಟಿ
ಯುಂ ಮೆ।
ಲ್ಲಡಿಯಂ ತಳ್ಪೊಯ್ದು ಮಂಜೀರದ ಮೃದು ರವಮುರ್ಜೀಟಿಯುಂ ರಮ್ಯ
ರಮ್ಯಂ॥
ಬಡೆದುದ್ಯತ್ಕಂಕಣಾಂತರ್ಝಣ ರುತಿವೆರಸಾಗಳ್ ವರಸ್ತ್ರೀ ವಿತಾನಂ।
ಬಿಡದೇಟಿಕ್ಕೆಟ್ಟಿನಾಗಳ್ ಕೃತಿರತಿರಮಣಂ ಸಾಹಸೋದ್ದಾಮ ಭೀಮಂ
॥೧೫೦॥

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾ ಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ಪವನಂಜಯಾಶ್ವ ವರ್ಣನಂ
ಯುವರಾಜ ಪದವೀ ವರ್ಣನಂ ನಿದಾಘ ವರ್ಣನಂ
ಅ ಷ್ಟ ಮಾ ಶ್ವಾ ಸ ಂ.

---

1. ವಮಣಿಗಳಂ.

# ನವಮಾಶ್ವಾಸಂ

ಕಂ॥ ಶ್ರೀ ರಮಣೀಯ[ಮ]ದಾತ್ಮೃತ ।
ನೂ ರುಚಿ ತಳ್ತೊಪ್ಪಿಯ್ಯೆ ತದ್ವಧೂಜನ ಸಭೆಯಂ ॥
ಭೂರಮಣ [1]ಮನೋಜಂ ನಾ ।
ನಾ ರತ್ನ ವಿಕೀರ್ಣ ವಿಷ್ಟರಾಗ್ರದೆ ನೆಗಟ್ಟಿಂ ॥೧॥

ಮ॥ಸ್ರ॥ ಘನಸಾರ [2]ಕ್ಷೋದವಾ ಚಾಮರದೆಲರಲೆಪಿಂ ಕೂಡೆ ತಳ್ತೀಟಿ ಸಿಂಹಾ ।
ಸನದೊಳ್ ತಾನೆಟ್ಟು ಮೇಧಾವಿಳನ ಕರ ಪರಿನ್ಯಸ್ತ ಹಸ್ತಾಬ್ಜನಾಗಿಂ ॥
ತು ನಿಜ ಸ್ವಾಂತಾನುರಾಗಂ ಪೊಱಮಡೆ ಪೊಱನುಟ್ಟಂ[3]ತದಾವಾಸದಿಂ ಭೋಂ।
ಕನೆ ವಾರಸ್ತ್ರೀಯುತಂ ವಿಶ್ರುತ ವಿಪುಳ ವನಕ್ಕಂತು ಕಂದರ್ಪದೇವಂ ॥೨॥

ಮ॥ ಅನಲ ಜ್ವಾಲೆಯೆ ತಾನೆನಿಪ್ಪ ಬಿಸಿಲುರ್ಕಂ ಪೀರ್ವ ಪಿಂಛಾತಪ ।
ತ್ರ ನಿಕಾಯಂಗಳ ತಣ್ಣೆಟಲ್ವುಱುಗಲಿಂದಂ [4]ತಪ್ತ ವಾತೋಷ್ಣ ವೀ ॥
ಜನಮಂ ಮಾಡುವ ಚಾಮರೋದ್ಭವ ಮರುತ್ಸನ್ನದ್ಧದಿಂ ತಳ್ತು ಭೋಂ ।
ಕನೆ ಕಂದರ್ಪ ನರೇಂದ್ರನಾ ವನ ತಟಕ್ಕೆಟ್ತಂದನಾನಂದದಿಂ ॥೩॥

ಮ॥ಸ್ರ॥ ಕುಳಿರ್ವಂಭೋಜಾಕರಾಂತಸ್ಸಲಿಲ ಮಿಳಿತದಿಂ ಪುಷ್ಪ ಸಂದೋಹ ಗಂಧಂ।
ಗಳ ಸೋಂಕಿಂ [5]ತತ್ಪರಾಗಾವಹದಿನೊಗೆದ ತಚ್ಛೈತ್ಯ ಸೌರಭ್ಯ ಮಾಂದ್ಯಂ॥
ಗಳ ಪೆಂಪಿಂ ಸೊಂಪುವೆತ್ತಿರ್ಪಿರವನೆ ವಿಭು ಕಂದರ್ಪದೇವಂಗೆ ತಾನಾ ।
ಗಳೆ ತೋರ್ಪಂತಲ್ಲಿ ತೀಡಿತ್ತನುಪಮ ವಿಪುಳೋದ್ಯಾನ [6]ಚಾರಂ ಸಮೀರಂ ॥೪॥

ಮ॥ ವನಜಾತಾನನೆ ಹಂಸಯಾನೆ ಕಳಕಂಠ ಧ್ವಾನೆ ಕೋಕಾತುಳ ।
ಸ್ತನೆ ಭೃಂಗಾಳಕೆ ಸಲ್ಲತಾಂಗಿ ವಿಪುಳೋದ್ಯಾನೋಲ್ಲಸಲ್ಲಕ್ಷ್ಮಿ ತೊ ॥
ಟ್ಟನೆ ಕಂಡರ್ಫ್ಯಮನೆತ್ತುತಿರ್ದಳೆನಸುಂ ಕಂದರ್ಪದೇವಂಗೆ ತಾ ।
ನೆನೆ ಚೆಲ್ವಾಯ್ತೆಲರಿಂದಮಲ್ಲುಗುವ ಪುಷ್ಪಾಸಾರವೋರಂದದಿಂ ॥೫॥

---

1. ಮನೋಜನಂ. 2. ಕ್ಷೇಡ. 3. ತಥಾ. 4. ತಪ್ತಪಾತೋಷ್ಣಜೀವನಮಂ.
5. ತತ್ಪರಾಂಗಾ. 6. ಭಾರಂ.

ಮ॥ಸ್ರ॥ ಮಿಳಿರುತ್ತಿರ್ಪುಲ್ಲಸತ್ಪಲ್ಲವದ ಗುಡಿಗಳಿತ್ತಂ ಪೊದಟ್ಟೊಪ್ಪೆ ಚಂಚ।
ತ್ಕಳ[ಕಂಠ] ವ್ರಾತ ಭೇರೀ ಸಿನದವೊಗೆಯೆ ಕೀರಾವಳಿ ಪ್ರೋಲ್ಲಸತ್ಕಾ॥
ಹಳ ರಾವಂ ತೀವೆ ಭೃಂಗೀ ನಿವಹ ಮಧುರ ಗೇಯ ಸ್ವರಂ ಪೊಣ್ಮೆ ಪೂಣ್ಪಾ।
ಗಳೆ ಕಂದರ್ಪಾಂಕನಂ ತದ್ವನ[1]ವಧುವಿದಿರ್ಗೊಳ್ವಂದವಾಯ್ತುಬ್ಬಿಯಿಂದಂ ॥೬॥

ಕಂ॥ ಯಮುನಂತವಿಭಿನ್ನ[ಚ್ಛಾ]।
ಯಮಿಳಾ ಧರನಂತೆ ತಾಂ ಸುವರ್ಣ ಶ್ರೀಯು॥
ಕ್ತ ಮನೋಹರಮಾಗಿರ್ಪುದು।
ಕಮನೀಯಂಬೆತ್ತನೂನ ವಿಪುಳೋದ್ಯಾನಂ ॥೭॥

ಪರಿಕಿಪೊಡಪಗತ ಭಾಸ್ಕರ।
ಕರ ನಿಕರಂ ರಜನಿಯಂತಿರುಪಚಿತ ಶಿಶಿರಂ॥
ಪಿರಿದುಂ ತಪಸ್ಯದಂತಿರೆ।
ನಿರುಪಮ ಶೋಭಾ ನವೀನ ವಿಪುಳೋದ್ಯಾನಂ ॥೮॥

ಇಂತೆಸೆದು ತಣ್ಪಿನ ತಾಯ್ವನೆಯುಂ ತಣ್ಣೆಲರ ತಾಣಮುಂ ಕಂಪಿನ ಕಡಾರವುಂ ನುಣ್ಬುಳಿನದ ನಿಳಯಮುಂ ಕೀರಂಗಳ ಕೌತುಕ ಶಾಲೆಯುಂ ಕೇಕಿಗಳ ಕೇಳೀ ನಿವಾಸಮುಂ ಪರಭೃತಂಗಳ ಪುಣ್ಯಾಗಾರವುಂ ಮಧುಪಂಗಳ ಮಂದಿರಮುಂ ಜಕ್ಕವಕ್ಕಿಗಳ ಜನ್ಮಾವಸಥಮುಂ ಮರಾಳಂಗಳ ಮಂಗಳ ಸದನಮುಂ ನಿಖಿಳ ವಿಕಿರಂಗಳ ನಿಕೇತನಮುಂ ಸರಸಿಗಳ ಸುಕೃತ ಶರಣಮುಂ ವಸಂತನ ವಿಚಿತ್ರ ಸದ್ಮಮುಂ ಮನಸಿಜನ ಮೋಹನ ಭವನಮುಂ ಮಲಯಾನಿಲನ ಮನೋಹರ ಗೇಹಮುಂ ಸಹಕಾರದ ಸಂದಣಿಯುಂ ತೆಂಗಿನ ತಿಂತಿಣಿಯುಂ ಕದಳಿಯ ಕಂಟಿಯುಂ ದಾಡಿಮದ [2]ತೋರಣಮುಂ ಈಳೆಯಿಟ್ಟೆಯುಂ ತಿಲಕದ ತೆರಳ್ಕೆಯುಂ ಅಸುಗೆಯುಗಾರವುಂ ಬಕುಳದ ಬೀಡುದಾಣಮುಂ ಕುರವಕದ ಕಾವಣಮುಂ ಚಂದನದ ಚಂಚುರಾಲಯಮುಂ ಚಂಪಕದ ಚೌವಟ್ಟಮುಂ ವಿಚಕಿಳದ ವೀಧಿಯುಂ ಮಾಲತಿಯ ಮಾಲೆಯುಂ ಗೋಸ್ತನಿಯ ಗುಂಜಕಾರಮುಂ ಎಳ ಲತೆಯಲರಂಬುಂ ಕೇತಕಿಯ ಕುತ್ತುಱುಂ ಕ್ರಮುಕದ ಸಮೃದ್ಧಿಯುಂ ಫಣಿ ವಲ್ಲಿಯ ಫೇಣಿಯುಮೆನಿಪ ವಿಪುಳೋದ್ಯಾನಮಂ ಪುಗುತರ್ಪಾಗಳ್—

1. ಮದು. 2. ತ್ತೊರಮುಂ.

ಮ॥ಸ್ರ॥ ಬಳಿಯಂ ಬರ್ಪಂಗನಾ ಲೋಚನ ರುಚಿ ಕುಡಿಯಿಟ್ಟಾವನಾಂತಸ್ತಮಸ್ಸಂ ।
ಕುಳಮಂ ತೂಳ್ದಟ್ಟುತುಂ ಮುಂಬಱಿದು ಪುಗೆ ತದೀಯಾಂಘ್ರಿ ಮಂಜೀರ ಜಾತಾ ॥
ಕುಳ ಝುಂಕಾರ ಪ್ರಣಾದಂ ಬಱಿಯುಗೆ ವಿಪಳೋದ್ಯಾನಮಂ ಪೊಕ್ಕನಾಜ್ಞಾ ।
ನಿಳಯಂ ಕಂದರ್ಪದೇವಂ ಸಚಿವ ವರ ಕರನ್ಯಸ್ತ ಹಸ್ತಾರವಿಂದಂ ॥೯॥

ಕಂ॥ ವನ ಕೇಳಿಗೆಳಸಿ ಮನಸಿಜ ।
ನನುಪಮ ತನ್ಮೂರ್ತಿವೆತ್ತು ಪುಗುವಂತಿರೆ ಮೋ ॥
ಹನ ರೂಪರುಂದ್ರ ಕಂದ ।
ರ್ಪನರೇಂದ್ರಂ ಬಂದು ವಿಪುಳವನಮಂ ಪೊಕ್ಕಂ ॥೧೦॥

ಮ॥ ಬರೆ ಕಂದರ್ಪನೃಪಂಗೆ ತತ್ಪವನ ಪಾತೋದ್ಧೂಳನ ವ್ಯಾಜದಿಂ ।
ದಿರದಾಗಳ್ ನತೆಯಾಗಿ ತಾನಲರ್ಗಳಂ ಸಂಸ್ನಿಗ್ಧ ಶಾಖಾ ಲಸ ॥
ತ್ಕರದಿಂ ಕಾಣ್ಕೆಯನಿತ್ತು ಕೀರ ರವದಿಂದೌಚಿತ್ಯ ವಾಗ್ವೃತ್ತಿಯಿಂ ।
[1]ಪಿರಿದಾನುಂ ಮೆರೆದಳ್ ತದೀಯ ವನಲಕ್ಷ್ಮೀ ಕಾಂತೆ ಸಂಪ್ರೀತಿಯಿಂ ॥೧೧॥

ಕಂ॥ ವನ ಪರಿವೇಷ್ಟಿತ ಧರೆಗೊ ।
ರ್ವನೆ ನೀನಧಿನಾಥನೆಂದು ಕಂದರ್ಪಂಗಾ ॥
ವನಲಕ್ಷ್ಮಿ ತಳಿವ ಸೇಸೆಗ ।
ಳೆ[2]ನಿಸುಗುಮೆಲರಲೆಪದಿಂದಮಲ್ಲುಗುವಲರ್ಗಳ್ ॥೧೨॥

ಮ॥ಸ್ರ॥ ಮನವೊಲ್ದಿರ್ಪ್ಪಾಳ್ದನಪ್ಪಂಗಜನನುಪಮ ಸನ್ಮೂರ್ತಿಯಂ ತಾಳಿ ತಾಂ ಬಂ ।
ದನೆನುತ್ತುಂ ತದ್ವನಶ್ರೀ ರಮಣಿಗಱಿಪುವಂತೆಯ್ದೆ ಪೊಣ್ಮುತ್ತು ಕಂದ ॥
ರ್ಪನರೇಂದ್ರ ಶ್ರೋತ್ರ ಸಂತೃಪ್ತಿಯೆನೆ ಪಡೆಯುತುಂ ಭೃಂಗ ಘೋಷಂ ಮರಾಳ ।
ಸ್ವನಮುನ್ಮತ್ತಾನ್ಯಪುಷ್ಟ ಧ್ವನಿ [3]ಶುಕ ರುತಿ ಕೇಕಿಸ್ವರಂ ಕೋಕ ನಾದಂ ॥೧೩॥

ನಲವಿಂ ಕಂದರ್ಪದೇವಂ ಬರೆ ವಿಪುಳವನ ಶ್ರೀ ಮನಃಪ್ರೇಮದಿಂದು ।
ಜ್ಜ್ವಲ ಮುಕ್ತಾಜಾಲದಿಂದಿಕ್ಕಿದ ಕಡಿಗಳೊ ತದ್ಭೂರುಹೋದಗ್ರ ಶಾಖಾ ॥

---

1. ಪರಿದಾನುಂ. 2. ನವ. 3. ಸುಖ.

[1]ವಲದಗ್ರಂ ಸೋಂಕೆ ಸೋರ್ದಂಬರ ಭಗಣವೊ ತಾನೆಂಬಿನಂ [2]ಕೀಡುವಾ
ತೆಂ ।
ಬೆಲರಿಂದಲ್ಲೊಕ್ಕ ಪುಷ್ಪಾವಳಿ ವನ ಮಹಿಯೊಳ್ ರಮ್ಯಮಾದತ್ತದೆತ್ತಂ
॥೧೪॥

ಕಂ॥ ಎನಸುಂ ಕಂದರ್ಪ ನರೇಂ ।
ದ್ರನ ಬರವಿಂಗಾ ವನೋರ್ವಿಗನುಪಮ ರಾಗಂ ॥
ಜನಿಯಿಸಿತೆನೆ ಕುಸುಮ ಪರಾ ।
ಗ ನಿಕಾಯದಿನೆಸೆದುವತುಳ ಪುಳಿನ ತಳಂಗಳ್ ॥೧೫॥

ಘನ ತುಹಿನವುದಯಿಸಿದ ತಾ ।
ಯ್ವನೆ ತದ್ವಿಪುಳವನದಾ ತರುಚ್ಛಾಯೆ ಪೊದ ॥
ಱ್ದೆನಸುಂ ಪುದಿದುದು ಕಂದ ।
ರ್ಪನರೇಂದ್ರನ ತನುಗೆ ನಾಡೆ ಸೊಗಯಿಪ ತಣ್ಪಂ ॥೧೬॥

ಮ॥ಸ್ರ॥ ತರು ಪರ್ಣಚ್ಛಾಯೆಯಿಂದಂ ತನು[3]ಗಳಿ ರವದಿಂ ಕರ್ಣ [4]ರಂಧ್ರಕ್ಕೆ ಪುಷ್ಪೋ ।
ತ್ಕರ ನವ್ಯಾವೋದದಿಂ ನಾಸಿಕಕೆ ಫಲ ರಸ ಸ್ವಾದುವಿಂ ಜಿಹ್ವೆಗುದ್ಭಾ ॥
ಸುರ ಗುಚ್ಛಾಚ್ಛ ಪ್ರವಾಳಂಗಳ ಶಬಲ ವಿಚಿತ್ರಾಂಶುವಿಂ ಕಣ್ಗಲಂಪಂ ॥
ಪಿರಿದುಂ ತಾನೀಯುತಿರ್ದತ್ತನುಪಮ ವಿಪುಳೋದ್ಯಾನವೋರಂದದಿಂದಂ ॥೧೭॥

ಕಂ॥ ಕಾಂತಮೆನಿಪ್ಪಾ ವಿಪುಳ ವ ।
ನಾಂ[5]ತರಮಂ ಸುತ್ತಿ ನೋಟ್ಪಲಂಪಿಂ ತಳರ್ದಂ ॥
ಕಾಂತಾ ಪರಿವೃತನವನೀ ।
ಕಾಂತಂ ಕಂದರ್ಪದೇವನಂತಾ ಕ್ಷಣದೊಳ್ ॥೧೮॥

ಇಂತು ಬರುತ್ತಿರ್ಪಾಗಳ್—

ಮ॥ ಇದು ದಲ್ ಚೈತ್ರ ಸುವರ್ಣಕಾರನತುಳಾಶ್ಚರ್ಯಕ್ಕೆ ಪಕ್ಕಾಗೆ ಮಾ ।
ಡಿದನಿಂತುನ್ಮುಖ ಸನ್ಮಯೂಖಮಯ [6]ಮಾಣಿಕ್ಯಂಗಳಿಂ ಮೌಳಿಯಂ ॥

---

1. ಮಳವಗ್ರಂ. 2. ತಿಡುವಾ. 3. ಗುಳಿ. 4. ಚಂದ್ರ. 5. ತರದಿಂ.
6. ಮಾಣಿಕ್ಯಂಗಳಂ.

ಪದೆಪಿಂದಂ ವನಲಕ್ಷ್ಮಿಗೆಂಬ ತೆಱದಿಂ ತಚ್ಚಂಪಕಂ ಚೆಲ್ವನಾ ।
ಳ್ಪುದುತಾಂಕುಟ್ಮಳ ಕೋಟಿಯಿಂದಮೆನುತುಂ ಮೇಧಾವಿಳಂ ತೋಱದಂ॥೧೯॥

ಅದನಭೀಕ್ಷಿಸಿ ನೃಪಕಂತುವಿಂತೆಂದಂ—

ಕಂ॥ ಸದಮಳ ಚರಿತ್ರ[1]ರಾವಾ ।
ಸದವೋಲ್ ಮಧುಪಾವಳೀ ವಿವರ್ಜಿತಮಾಗಿ ॥
ರ್ದುದು ಮಧುಮಯ ಪ್ರಸೂನಾ ।
ಸ್ಪದಮಾಗಿಯುಮಿಾ ನವೀನ ಚಂಪಕ ವೃಕ್ಷಂ ॥೨೦॥

ಮ॥ ನವ ಸೌರಭ್ಯದ ಚಂದನಾರ್ದ್ರ ತಿಲಕೋದಂಚದ್ವನಶ್ರೀಗೆ [2]ಪ ।
ಲ್ಲವ ಗಾರುತ್ಮತ ಮಿಶ್ರಮಪ್ಪಮಳ ಮುಕ್ತಾಹಾರಮಂ ಸಾರ್ದು ನೀ ॥
ಡುವ ಸೇವಾಂಗನೆ ತಾನಿದೆಂದೆನೆ ಕರಂ ಚೆಲ್ವಾಯ್ತು ತೆಂಗಾಳಿ ತೂ ।
ಗುವ ಮಲ್ಲೀ ಲತೆ ಝಂಕೃತಾಳಿ ಮಿಳಿತಾನೂನ ಪ್ರಸೂನಂಗಳಿಂ ॥೨೧॥

ಇಂತು ನುಡಿದ ಮೇಧಾವಿಳಂಗೆ ಮೆಚ್ಚುತ್ತುಂ ಪೋಗೆವೋಗೆ—

ಚಂ॥ ಮಿಳಿರ್ದೆಸೆವಳ್ಳಿಗೊಂಬುಗಳ ಪತ್ರದಿಱುಂಬಿನ ನೀಡನೀಡದೊಳ್ ।
ಘಳಿಲನೆ ಸಾರ್ದು ಕೂಡುವ ವಿಹಂಗದ ಕಾತರಮಪ್ಪ [3]ಕೂಜಿತಾ ॥
ವಳಿಗೆ ನಗುತ್ತುಮಿರ್ಪ ವನಲಕ್ಷ್ಮಿಯ ಬಾಯ್ದೆಱೆಯಂತೆ [ನಾಡೆ] ಕ ॥
ಣ್ಗೊಳಿಸುವ ಪಣ್ಗಳಂ ತಳೆದು ತಾನೊಱಗಿರ್ದುದು ದಾಡಿಮ ವ್ರಜಂ ॥೨೨॥

ಆ ದಾಡಿಮ ದ್ರುಮದೊಳ್—

ಕಂ॥ ಬಿಡೆ ಸವಿಯಲ್ ಬೀಜಮನುಗಿ ।
ವೆಡೆಯೊಳ್ ಚಂಚೂಪುಟಂಗಳಂ [ಬಿಡದೆಂತುಂ] ॥
ತೊಡರ್ದೊಡೆ ಕೀರ್ಕೀರೆನುತುಂ ।
ಪಿಡಿಮಿಡಿಗೊಳುತಿರ್ದುದೊಂದು ಕೀರ ಕಿಶೋರಂ ॥೨೩॥

ಆ ಶುಕ ಶಿಶುವಿನುತ್ಸುಕತೆಯಂ ನೋಡಿ ನಗುತ್ತುಮಲ್ಲಿಂ ತಳರ್ದು—

---

1. ದಾವಾ. 2. ವಿ। ಲರಿತಾನಂತ ಸೌಮಿತ್ರ. 3. ಕೂಜರಾ.

ಚಂ॥ [1]ಮೃದು ಕಳಕಂಠ ವಾದ್ಯ ನಿನದಂ ಪೊಱಪೊಣ್ಮೆ ಪೊದಟ್ದ ಭೃಂಗ ಸಂ।
ಘದ ಮೃದು ಗೇಯ ನಿಸ್ವನಮುದುಣ್ಮೆ ವಸಂತ ನೃಪಾಲನಗ್ರದೊಳ್ ॥
ಪದೆಪೊಗೆದಾಡುತಿರ್ಪ ವನಲಕ್ಷ್ಮಿಯು ನರ್ತಕಿಯೆಂಬ ಪೆಂಪನಾ।
ಳ್ದುದು ಫಲಭಾರ ಕಂಬು ಲತೆ ತೆಂಬೆಲರ್ವೊಯ್ಲಿನ ಲೋಲ ವೃತ್ತಿಯಿಂ ॥೨೪॥

ಅದಂ ಕಂಡು ಮೇಧಾವಿಳನಿಂತೆಂದಂ—

ಕಂ॥ ಜಿನುಗುತ್ತುಂ ಭೋಂಕನೆ ಮಧು।
ಪ ನಿಕಾಯಂ ಸೋಂಕೆ ತನ್ನನೇವೈಸಿ ಕರಂ ॥
ತೊನೆವಂತಿರ್ದುದು ವನ ಷವ।
ನನೆ ಪುಯಲಿಂದೊಲೆವ ಕಂಬು ಲತೆ ಸೊಗಯಿಸುಗುಂ ॥೨೫॥

ಚಂ॥ ತರು ತತಿಯೊಳ್ ತ್ರಿಲೋಚನಮಿದಿಂವರವಿಂದ ನಿವಾಸನಟ್ಟಿಯಿಂ।
ಸರಳ ತಳಾಂಗುಳಿ ತ್ರಿಶಯದಿಂ ಫಲ ವಕ್ತ್ರದೊಳಂಕೆಗೆಯ್ದು ತ ॥
ತ್ಸರಕ ಪುಟಾಂಬುವಂ ಪುದಿದನೆಂಬುದನುರ್ವಿಗೆ ತೋಱುತಿರ್ಪವೋಲ್।
ಸುರಿವುದು ನಾಳಿಕೇರ ಕುಜವೊಳ್ಳೆಳನೀರನೆ ತೋಱಗಾಯ್ಗಳಿಂ ॥೨೬॥

ಇಂತುತ್ಪ್ರೇಕ್ಷಿಸಿ ನುಡಿದು ಸಚಿವ ಸುತಂಗೆ ತೋಱುತ್ತುಂ ಪೋಗೆವೋಗೆ—

ಚಂ। ಗಗನದೊಳೊರ್ಮೆಯುಂ ತೊಳಲುತಿರ್ಪ ವಿಯಚ್ಚರ ಸಂಕುಲಕ್ಕೆ ನೆ।
ಟ್ಟಗೆ ಪರಿಪಕ್ವಮಪ್ಪ ಫಲ ಸಾರಮನಿತ್ತು ನಿಜೋನ್ನತಿಕ್ಕೆಯಂ ॥
ಪೊಗಳಿಸಿಕೊಳ್ವೆನೆಂಬ ತೆಱದಿಂ ರಸಮುಣ್ಮುವ ತೋಱವಣ್ಣಮಾ।
ಲೆಗಳನೆ ನೀಟ್ದು ತಾಳ್ದಿಸೆಯುತಿರ್ದುದು ತಾಳ ಮಹೀರುಹಂ [ವಲಂ] ॥೨೭॥

ಆ ತಾಳ ತರುವನುನ್ಮುಖರಾಗಿ ನಿರೀಕ್ಷಿಸುತಿರ್ಪಾಗಳ್—

ಕಂ॥ ನೆಱೆ ತಮ್ಮಧಿದೇವತೆಯೆಂ।
ದಱೆದಾ ವನಲಕ್ಷ್ಮಿಗೆಱಗು[ವಂ] ತಿರೆ [ತಾಂ] ಜೋ ॥
ಲ್ದೊಱಗಿರ್ದುವು ಬಿರಿವಣ್ಗಳ।
ತುಱುಗಿದ ಬಿಣ್ಗೊನೆಯ ಭರದ ಬಾಳೆಯ ಸಾಲ್ಗಳ್ ॥೨೮॥

---

1. ಮಧು.

ಅವನಭೀಕ್ಷಿಸಿ ಕಂದರ್ಪದೇವನಿಂತೆಂದಂ—

ಕಂ॥ ಫಳ ಸಮಿತಿ ಮೊದಲೊಳುದಯಿಸೆ।
ಬಳಿಕಂ ಫಲಮಿಲ್ಲ ಕದಳಿಗೆಂತುಂ ದ್ರುಮ ಸಂ॥
ಕುಳದೊಳ್ ವಿಚಾರಿಪೊಡೆ ನಿ।
ಶ್ಚಳ ಭೋಗಮ[ನಾಂಪ] ಭೂಮಿಜರ್ಕಳ ತೆಱದಿಂ ॥೨೯॥

ಇಂತು ಮೇಧಾವಿಳಂ ಪೇಱುತ್ತುಂ ಪೋಗೆವೋಗೆ—

ಕಂ॥ ಪಿರಿದುಂ ವಂಧ್ಯಾಂಗನೆಯಂ।
ತಿರೆ ತಾನಪ್ರಸವಮಾಗಿಯುಂ ಮೂಲಾಗ್ರಂ॥
ಬ[ರಮೆ]ಯ್ದೆ ಕಾತು ಮಿಗೆ ಬಿ।
ತ್ತರಿಸಿರ್ದುದು ಪನಸ ಕುಜಮಿದೇನಚ್ಚರಿಯೋ ॥೩೦॥

ಆ ಪನಸಮನಿಂತೆಂದತ್ತಂ ಪೋಗೆವೋಗೆ—

ಮ॥ ಧರೆ ಕುದ್ದಾಲ ಹತಕ್ಕೆ ಸೈರಿಸಿ ಕರಂ ತಾಂ ಪೆತ್ತಳಿಂತೆನ್ನನೆಂ।
ದುರು ಶಾಖಾ ಕರದಿಂ ತದೀಯ ಜಠರಾಗ್ರ ಸ್ಥಾನಮಂ ನಾಡೆ ನೇ॥
ವರಿಸುತ್ತಿರ್ದಪುದೆಂಬಿನಂ ಫಲದ ಬಿಣ್ಪಿಂ ತೂಂಬವೋಲ್ ಜೋಲ್ದಿಳಾಂ।
ತರಮಂ ತಳ್ತು ವಿರಾಜಿಸಿತ್ತಭಿ ನತೋದ್ಯನ್ಮಾತುಳುಂಗ ವ್ರಜಂ ॥೩೧॥

ಕಂ॥ ಚಿತ್ತಜ ನೃಪಂಗೆ ಚೈತ್ರಂ।
ಮುತ್ತಿನ ಮಂಡವಿಗೆಯಂ ವಿಚಿತ್ರದೆ ಸಮೆದಂ॥
ತೆತ್ತಿದನೆನೆ ಮಿಗೆ ತಳ್ತುದಿ।
ರ್ಮುತ್ತೆ ಮುಗುಳ್ನಿಗೆಯುತಿರ್ದುದತ್ತೊಂದೆಡೆಯೊಳ್ ॥೩೨॥

ಶಿತಿಕಂಠನಂತಪರ್ಣಾ।
ನ್ವಿತಮಿದು ತಾನೆನಿಸಿ ತಳ್ತ ತನಿವಣ್ಗಳ ಸಂ॥
ಗತಿಯಿಂದೆ ತುಱುಗಿ ನೆಱೆ ಕ।
ಣ್ಗತಿಶಯಮಾಗಿರ್ದುದಲ್ಲಿ ನಾರಂಗ ಕುಜಂ ॥೩೩॥

ಅದಂ ನೋಡುತ್ತುಂ ಪೋಗೆವೋಗೆ ಮುಂದೊಂದೆಡೆಯೊಳ್—

ಮ॥ಸ್ರ॥ ತವೆ ಪೀರ್ಗುಂ ರಾಹು ಮತ್ತಾಮುದಿಯನೆನುತುಮಾಭೀತಿಯಿಂಬೀಜಮಾಗಿಂ।
ದುವೆ ತಾಂ ಬೈತಿಟ್ಟಬೆಳ್ದಿಂಗಳೊ ವಿಪುಳವನೋರ್ವೀರವಾಸ್ಯ ಪ್ರಹಾ[ಸಾಂ]॥
ಶುವೊ ಪೇಳೆಂಬಂತಿರುದ್ಯಾನದ ತಿಮಿರಮನೆಟ್ಟಿಟ್ಟುತಿರ್ದತ್ತು ಚಂದ್ರಾ।
ಶ್ರ ವಿಭಾಸ್ವತ್ಸರ್ವ ಸೋಪಾನದ ತಸಿವೆಳಗಿಂದೊಂದು ಪುಂಡ್ರಾಬ್ಜ ಷಂಡಂ ॥೨೪॥

ಮ॥ ಕರಿಯಂತಾ ಕಮಲಾಕ್ಷನಂತೆ ಲುಳಿತೋದ್ಯದ್ಭದ್ರ ಸೌಂದರ್ಯಮಾ।
ಕರಿಯಂತಾ ಕಮಲಾಕ್ಷನಂತೆ ವರ ಚಕ್ರಾಲಂಕೃತಿ ಖ್ಯಾತಮಾ॥
ಕರಿಯಂತಾ ಕಮಲಾಕ್ಷನಂತೆ ಪಿರಿದುಂ ಪದ್ಮೋಪವಿಷ್ಟ ಪ್ರಭಾ।
ಸುರಮಾಗಿರ್ದುದು ಕಣ್ಗೆಗುರ್ವುವಡೆದಾ ಶ್ವೇತಾಂಬುಜಾತಾಕರಂ ॥೨೫॥

ಮ॥ ಗರುಡಂ ತಾನಡಿಯಿಟ್ಟನಿಂತಮೃತಮಂ ಕೊಂಡುಯ್ವುದರ್ಕೆಂತುಮಿ।
ಲ್ಲಿರಿಸಲ್ಕಾರದೆನುತ್ತುಮಾ ಸುಧೆಯನಿಂದ್ರಂ ತಂದು ಬೈತಿಟ್ಟನೀ॥
ಸರಸೀ ಗರ್ಭದೊಳೆಂಬಿನಂ ಸುರುಚಿರ ಸ್ವಾದುತ್ವದಿಂ ಸ್ವಚ್ಛಭಾ।
ಸುರ ಶುಭ್ರತ್ವನಿರ್ದುದಚ್ಚರಿಯನಾಂತಬ್ಜಾಕರಾಂತರ್ಜಲಂ ॥೨೬॥

ಕಂ॥ ಪೆತ್ತುದು ಪೂರ್ಣಶಶಾಂಕರ।
ವೊತ್ತಮನೆನೆ ಮಧುಪ ಮಿಳಿತ ಸರಸಿಜ [ಕುಲ] ದೊಂ॥
ದೊತ್ತಂಬದಿಂದಮೆನಸುಂ।
ಬಿತ್ತರಿಸುತ್ತಿರ್ದುದಾ ಸರೋರುಹ ಷಂಡಂ ॥೨೭॥

ಆ [1]ಸಿತ ಸರೋಜ [ಷಂಡ]ಮುಂ ಕಂಡು—

ಮ॥ ವರ ದುಗ್ಧಾರ್ಣವಮುಂ ನಿರೀಕ್ಷಿಪ ವಿನೋದೋದ್ಭೂತ ಚೇತೋಮುಹಾ।
ತುರದಿಂ ಜೊನ್ನದ ಜೊಂಪದೊಳ್ ನಡೆತರುತ್ತಿರ್ಪಿಂದುವೆಂಬಂತೆ ತ॥
ತ್ತರುಣೀ ಸಂಚಯ ಲೋಲ ಲೋಚನ ವಿಭಾ ಚಂದ್ರಾತಪ ವ್ರಾತದೊಳ್।
ಬರುತಿರ್ದಂ ಮುದದಿಂದಮಾ ಸರಸಿಗುರ್ವೀಪಾಲ ಪುಷ್ಪಾಯುಧಂ ॥೨೮॥

ಕಂ॥ ಪಿರಿದೆಸೆವ ತತ್ಸಿತಾಬ್ಜಾ।
ಕರ ಶೋಭೆಯನದನಭೀಕ್ಷಿಸುತ್ತಿರ್ದ ನರೇ॥

1. ಶೀತ.

ಶ್ವರ ಕುಸುಮಚಾಪನಾಗಳ್ ।
ಪರಿತೃಪ್ತಾಂಬಕ ಪಯೋರುಹ ದ್ವಯನಾದಂ ॥೩೯॥

ದೇವ ದಿಟಂ ನಿಮ್ಮಯ ಚೇ ।
ತೋವೃತ್ತಿಯ ತೆಱದಿನೀ ಸರೋವರ ಸಲಿಲಂ ॥
ಪಾವನಮೆನಸುಂ ಸ್ವಚ್ಛಂ ।
ಭಾವಿಪುದೆಂದಿಂತು ಮಂತ್ರಿತನಯಂ ನುಡಿದಂ ॥೪೦॥

ಮ॥ ಅರವಿಂದಾಸನನಂತಿರಾವೃತ ರಜಂ ತಾನಾಗಿಯುಂ ಪಂಕಜೋ ।
ದರನಂ ಪೋಲ್ತೆನಸುಂ ಸ್ವಕೀಯ ಜನತಾಂತಸ್ಸತ್ತ್ವಮಂ ವ್ಯಕ್ತಮಾ ॥
ಗಿರೆ ತೋಱುತ್ತಿದು ಶೋಭೆವೆತ್ತುದೆನುತುಂ ಕಂದರ್ಪರಾಜೇಂದ್ರನ ।
ಚ್ಚರಿವಟ್ಟೀಕ್ಷಿಸುತಿರ್ದನಾ ಸಿತ ಸರೋ[1]ಜಾತಾಕರಾಚ್ಛಾಂಬುವಂ ॥೪೧॥

ಆಗಳ್—

ಕಂ॥ ಪರಿವೃತ ವನಿತಾ ಲೋಚನ ।
ಮರೀಚಿ ಚಂದ್ರಿಕೆಯ ಸೋಂಕಿನಿಂ ಸೋಪಾನ ॥
ಸ್ಫುರಿತೇಂದು ಕಾಂತವೊಸರಲ್ ।
[2]ಸರಸಿ ಕರಂ ತೀವಿ ರೋಧಿವಱಿದುದು ಬನದೊಳ್ ॥೪೨॥

ಮ॥ ಬಹು ಹಂಸೀ ವೃತ ರಾಜಹಂಸನವೊಲಾಗಳ್ ರಾಜ ಹಂಸಂ ಕಳಾ ।
ವಹನುರ್ವೀಶ ಮನೋಭವಂ [3]ಸರಸಿಯಂ ತದ್ವಾರ ಕಾಂತಾವಳೀ ॥
ಸಹಿತಂ ಭೋಂಕನೆ ಪೊಕ್ಕು ಪಾದ ವನಜ ಪ್ರಕ್ಷಾಳನಂಗೆಯ್ಯು [4]ತುಂ ।
ತುಹಿನಾಂಶೂಪಲದೊಂದು ಪಟ್ಟ ಶಿಲೆಯೊಳ್ ನಿಂದಿರ್ದನಾನಂದದಿಂ ॥೪೩॥

ಸರಸೀ ಲಕ್ಷ್ಮಿಗೆ ಪುಂಡರೀಕ ವಿಭವಂ ತಾನ್ನಿರ್ಪುದೆಂತಸ್ಮದೀ ।
ಶ್ವರನಿರ್ದಂತೆನುತೀಳ್ದು ಕೊಳ್ವ ತೆಱದಿಂ ತಾಂ ಪೊಕ್ಕು ತತ್ಪಂಕಜಾ ॥
ಕರದೊಳ್ ಕೋಮಳ ನಾಳ ಸಂಯುತ ಸಿತಾಂಭೋಜಾತಮಂ ಕೊಂಡು ಭೂ।
ವರ ಕಂದರ್ಪನ ಕೈಗೆ ನೀಡಿದನದಂ ನಿಂದಂದು ಮೇಧಾವಿಳಂ ॥೪೪॥

---

1. ಜಾತಾರತ. 2. ಸರನಿಕರಂತಿವಿ. 3. ನಲವಿನಿಂ. 4. ತಿ। ರಹಿತಾಂ.
5. ನೋದಿನಸ್ಮ.

ಆ ಸಿತ ಸರೋಜಾತಮಂ ವಿಸ್ಮಯ ಸ್ವಾಂತನಾಗಿ ನೋಡುತ್ತುಮಲ್ಲಿಂ ತಳರ್ದಾಗಳ್—

ಮ॥ಸ್ರ॥ ಮೊದಲೊಳ್ ಚೈತ್ರಂ ವಿಚಿತ್ರಾಸ್ಪದಮೆನೆ ಮುದದಿಂ ಮಾಡಿಯುಂ ತದ್ವಸಂತಂ
ಪದೆಪಿಂದಂ ಬಣ್ಣವಿಟ್ಟಂಗಜ ನೃಪತಿಯ ಗೂಡಾರವೋ ತಾನಿದೆಂಬಂ ॥
ದದೆ ನಾನಾವರ್ಣ ಪರ್ಣ ಪ್ರಭೆಯ ರುಚಿಗಳಿಂ ಪೂಗಳಿಂ ಕಾಯ್ಗ[1]ಳಿಂದಂ ॥
ಪುದಿದತ್ಯಾಕೀರ್ಣ ಮಾದ್ಯತ್ಪಿಕ ಶುಕ ಮಧುಪವ್ರಾತಮಿರ್ದತ್ತು ಚೂತಂ
॥೪೫॥

ಮ॥ ಇರದಿಂ ಬೀೞ್ಗುಮಣಂ ನಿರಾಶ್ರಯದೊಳಿರ್ಪೀ ವ್ಯೋಮವೆಂದಂಜಿ ತ।
ದ್ಧರಣೀ ಯಾಮಿಸಿ ತನ್ನ ತೋಳ್ದುಱುಗಲಿಂ ತಾೞ್ದಿರ್ದಳೆಂಬಂತಿರಂ ॥
ಬರಮಂ ಚುಂಬಿಪ ತುಂಗ ಶಾಖೆಗಳ ಶೋಭಾಕೀರ್ಣದಿಂದೊಪ್ಪೆ ಮಾ।
ಮರನಂ ನೋಡಿದನಾಗಳುನ್ಮುಖತೆಯಿಂ ಭೂಪಾಲ ಪುಷ್ಪಾಯುಧಂ ॥೪೬॥

ಕಂ॥ ತೊಳಗುವ ಕೊನರ್ಗಳ ಕೆಂದಳಿ।
ರ್ಗಳ ಪಸುರ್ದಳಿರ್ಗಳ ಪೊದೞ್ದನೆಗಳಪ್ಪಾ ಪೂ।
ಗಳ ಮಿಡಿಗಳ ಕಾಯ್ಗಳ ಪ॥
ಣ್ಗಳ ಪುದುವಿಂದಡಿಸಿದಾ ವಿನೂತಂ ಚೂತಂ ॥೪೭॥

ಚಂ॥ ವರ ಶುಕ ಶೋಭೆಯಿಂ ಮುಸಿ ವರೇಣ್ಯ ಮಹಾ ಸಭೆಯಂತೆ ಸಂತತಂ।
ಪರಿವೃತ ಕಾಳಕಂಠ ಕಮನೀಯದಿನದ್ರಿಜೆಯಂತೆ ತನ್ಮನೋ ॥
ಹರ ಹರಿ ಯುಕ್ತದಿಂ ಕಮಲೆಯಂತೆ ಶಿಲೀಮುಖ ಸಂಘ ಸಂಗದಿಂ।
ಭರಿತ ನಿಷಂಗದಂತೆಸೆವುದಾವಗಮಾ ಸಹಕಾರ ಭೂರುಹಂ ॥೪೮॥

ಕಂ॥ ಇದು ತಣ್ಪಿನ ತಾಯ್ಪನೆ ಸೊಂ।
ಪೊದವಿದ ತಣ್ಣೆೞಲ ಬೀಡುದಾಣಂ ಹೃದ್ಯಾ ॥
ಸುದತಿಯ ಸೌಖ್ಯಾಸ್ಪದಮೆನೆ।
ಪುದಿದು ಕಱಂ ಚೆಲ್ವನಾಯ್ತು ಚೂತ ಕುಜಾತಂ ॥೪೯॥

ಮ॥ ಸ್ಮರ ಸಮ್ಮೋಹನ ದೇವತಾವಸಥಮುಂಗೋದ್ಭೂತ ಭೂತನಾಥ ರಾ।
ಜ್ಯ ರಮಾವಾಸಮನಂಗ ಮಂಗಳ ಗೃಹಂ ಪಂಚೇಷು ಕೇಳೀ ಕಳಾ ॥

1. ದೊ। ಪ್ಪಿದುದತ್ಯಾ.

ಶರಣಂ ಮನ್ಮಥ ಮಂತ್ರಶಾಲೆ ಮದನಾಸ್ತ್ರಾಗಾರಮಾಗಿರ್ದ ಮಾ ।
ಮರನಂ ತೊಟ್ಟನೆ ಕಂಡನಾಗಳಿದಿರೊಳ್ ಕಂದರ್ಪದೇವಂ ನೃಪಾ ॥೫೦॥

ಕಂ॥ ಲೋಕಮನೆೞಗಿಪ ಮದನ ಮ ।
ಹೀಕಾಂತನ [1]ವಶ್ಯ ವಸ್ತ್ಯಮೆನೆ ಮಿಸುಗುವ ತ ॥
[2]ನ್ಮಾಕಂದ ಕುಜಾತಮನಂ ।
ತಾ ಕಂದರ್ಪಾವನೀಶನಾಗಳ್ ಕಂಡಂ ॥೫೧॥

ಮ॥ ಇದರೊಳ್ ನಿನ್ನ ಮನಕ್ಕಮೊಂದಿಸುತೆ ಚೆಲ್ವಂ ತೋರ್ಪೆವಾವೆಂದು ರಾ ।
ಗದಿನಾಗಳ್ ನಿಜ ನೇತ್ರ [3]ಪುತ್ರಿಕೆಗಳುಯ್ಯಲ್ ಪೋಪವೋಲ್ ಪೋಗೆ ತ ॥
ತ್ಸುದತೀ ಯೂಥ ಸಮೇತಮೆಯ್ದಿದನದಂ ಕಂದರ್ಪ ರಾಜೇಂದ್ರನು ।
ನ್ಮದ ಕೀರಾನ್ಯ ಭೃತಾವಳೀ ಮಧುರನಾದೋಪೇತಮಂ ಚೂತಮಂ ॥೫೨॥

ಕಂ॥ ಪರಿವಾರ ವನಿತೆಯರ್ ನಿಜ ।
ತರಳೇಕ್ಷಣ ಕಿರಣದಿಂದದಂ ಕುಸುಮಿಸುತಂ ॥
ಬರೆ ಬರುತುಮಿರ್ದನಾ ಸುರು ।
ಚಿರ ಚೂತ ಕುಜಕ್ಕೆ ನೃಪಮನೋಭವನಾಗಳ್ ॥೫೩॥

ಮ॥ ಮೃಗಮಂ ಗೆಲ್ವೆನಮೋಘಮೆಂದು ಸರಲಂ ತೂಗಾಡುತುಂ ಕೂರ್ಪು ಕೈ ।
ಮಿಗೆ ಮಾಕಂದ ರಥಕ್ಕೆ ಬರ್ಪ ವಿಳಸತ್ಕಂದರ್ಪನೆಂಬಂತಿರಾ ॥
ವಗಮಾ ಶುಭ್ರ ಸರೋಜಮಂ ತಿರುಪುತುಂ ಬಂದಂ [4]ತದೀಯಾಮ್ರ ಶಾ ।
ಖಿಗೆ ಕಂದರ್ಪ ನರೇಂದ್ರನಿಂತೆಸೆಯುತಂ ಸಾಶ್ಚರ್ಯ ಸೌಂದರ್ಯದಿಂ ॥೫೪॥

ಕಂ॥ ಸನ್ನದ್ಧ ತುರಂಗದ ತೆಱ ।
ದಿನ್ನೆಱೆ ಮಿಱುಗುವ ಖಲೀನ ಶಾಖಾ ಮುಖದಿಂ ॥
ಮುನ್ನೀರವೋಲ್ ಪ್ರವಾಳ ಸ ।
ಮನ್ವಿತದಿಂ ಶೋಭಿ [ಸಿತ್ತು] ಚೂತ ಕುಜಾತಂ ॥೫೫॥

ವರ ಪರ್ಣಾಕೀರ್ಣ ವಿಭಾ ।
ಸುರಮೆನಿಸಿದ ತನ್ನ ಪೆಂಪಿನಿಂ ಹರನಂ ಮಾಂ ॥

---

1. ವಶ್ಯವಶ್ಯ. 2. ನ್ನಾತ್ಮಕಂದಕಜಾತ. 3. ಪುತ್ರಿಕೆಗಳೊಳೊಯ್ಯಲ್.
4. ತದೀಯಾಭ್ರಶಾಖೆಗೆ.

ಕರಿಪುದಪರ್ಣಾನ್ವಿತನೆಂ ।
ದುರು ಶುಕ ಪಿಕ ಚಪಲ ರಾವದಿಂ ಚೂತ ಕುಜಂ ॥೫೬॥

ಇಂತು ನುಡಿದ ಸಚಿವನ [1]ಶ್ಲಿಷ್ಟೋಕ್ತಿಗೆ ಮೆಚ್ಚುತಿರ್ಪಾಗಳ್—

ಚಂ॥ ಪಸುರ್ದಳಿರೋಳಿಯೋ ಶುಕ ನಿಕಾಯ[2]ದೆಜಂಕೆಯ ಮಾಲೆಯೋ ಸಮು ।
ಲ್ಲಸಿತ ನವಾಂಕುರ ವ್ರಜವೊ ಚಂಚು ಸಮಾಜವೊ ಪೇಟಿನುತ್ತುವಿಾ ॥
ಕ್ಷಿಸುವ ನರೇಂದ್ರ ಮನ್ಮಥನ ಕಣ್ಗೆ ವಿಚಿತ್ರಮನುಂಟುಮಾಡಿ ರಂ ।
ಜಿಸಿದುದು ಕೀರ ಸಂತತಿಯ ತಿಂತಿಣಿಯಿಂ ಸಹಕಾರ ಭೂರುಹಂ ॥೫೭॥

ಘಳಿಲನೆ ಗೆಲ್ ಜಗತ್ತ್ರಿತಯಮಂ ರತಿವಲ್ಲಭ ನಿಲ್ಲೆನುತ್ತುಮಾ ।
ಗಳೆ ಮದನಂಗೆ ಚೈತ್ರನಲರಗ್ಗದ ಕೂರಲಗಾಗೆ ಷಟ್ಪದಾ ॥
ವಳಿ ಮಿಱುಗುತ್ತುಮಿರ್ಪ ಗಱಿಯಾಗೆ ವಿನಿರ್ಮಿಸಿ ತಂದ ಬಾಣ ಸಂ ।
ಕುಳಮೆನೆ ತೀವಿದಾ ಸರಲ ಮೂಡಿಗೆ ತಾನೆನಿಸಿತ್ತು ಮಾಮರಂ ॥೫೮॥

ಇಂತೆಸೆವ ಚೂತ ಕುಜಾತಮಂ ಭೂನಾಥ ಮನ್ಮಥಂ ನೋಡುತ್ತುಮಿರ್ದು ತದೀಯ ವಿಶಾಲ ಪ್ರದೇಶದೊಳ್—

ಮಾಲಿನೀ ॥ ಗಳಿತ ಕುಸುಮ ರೇಣು ಶ್ರೇಣಿಯಿಂ ಕಂಪಿಡುತ್ತುಂ ।
ಪೊಳೆವ ಪುಳಿನಮಂ ಕಂಡಲ್ಲಿ ಕುಳ್ಳಿರ್ಪಲಂಪಂ ॥
ತಳೆದು ಸಖ ಸಮೇತಂ ಲೀಲೆಯಿಂ ಸಾರ್ದನೋರಂ ।
ತಳಿಗಳುಲಿಯುತುರ್ಬೇಟಿಲ್ಕೆ ಭೂಪೇಕ್ಷುಚಾಪಂ ॥೫೯॥

ಚಂ॥ ಪುದಿದ ಪರಾಗದಿಂಪದುವೆ ತಣ್ಪಿನ ಕೋಶ ನಿವಾಸಮೆಂಬ ಸೊಂ ।
ಪೊದವಿ ಪೊದಟ್ಟು ರಂಜಿಸುತುಮಿರ್ಪ ತದೀಯ ವನಾಮ್ರ ಭೂಜ ಮೂ ॥
ಲದ ಪುಳಿನ ಸ್ಥಳಕ್ಕೆ ನಡೆತಂದನಿಳೇಶ ಮನೋಭವಂ ಕಳಾ ।
[3]ವಿದಿತ ಸರೋಜ ಸಂಭವನುದಗ್ರ ಭುಜಾ ಬಲ ಮಾರುತೋದ್ಭವಂ ॥೬೦॥

ಆ ಪುಳಿನ ತಳಕ್ಕೆ ಬಂದು ನಿಂದು ನೋಟ್ಪಾಗಳ್—

---

1. ಶಿಷ್ಟೋಕ್ತಿಗೆ. 2. ದರಂತೆಯು. 3. ನಿಧಿತ.

ಮ॥ ಯುವತೀ ಯೂಥಮನಿನ್ನೆಗಂ ಪಡೆದ ಮತ್ಪ್ರಾಗಲ್ಭ್ಯಮಾಶ್ಚರ್ಯಮಾ ।
ಗೆ ವಧೂ ರತ್ನಮನೊರ್ಬಳಂ ಪಡೆವೆನಾನೆಂದಬ್ಜಜಂ ಪೂಣ್ದು ಮಾ ॥
ಡುವಲಂಪಿಂ ಮೊದಲಲ್ಲಿ ತಾಂ ಬರೆದ ರೇಖಾ ಶ್ರೀಯೆನಲ್ ಮೋಹಿಸುತ್ತುಂ ।
[ತವೆ] ಕಟ್ಟಿರ್ದುದದೊಂದು ಚಿತ್ರಪಟಮಾ ಚೂತ ದ್ರುಮ ಸ್ಕಂಧದೊಳ್ ॥೬೧॥

ಚಂ॥ ತೊಳಪ ತದೀಯ ಚೂತ ಕುಜ ಬಂಧುರ ಕಂಧರದಲ್ಲಿ ಕಟ್ಟಿ ಪ ।
ಜ್ಜಳಿಸುತುಮಿರ್ದ ತತ್ಪಟದ ಚಿತ್ರಮನಾಸವ ರೂಪ ಶೋಭೆಗೆಂ ॥
ದೆಳಸಿ ನರೇಂದ್ರ ಮನ್ಮಥನ ಕಣ್ಮಲರ್ಗಳ್ ಪಱದತ್ತು ಭೋಂಕನಾ ।
ಗಳೆ ನಿಧಿಯಂ ಸಮಂತಿದಿರೊಳೀಕ್ಷಿಸಿದುಜ್ಜ್ವಲ ದೀಪ ವರ್ತಿವೋಲ್ ॥೬೨॥

ಮ॥ ಇದು ಮೂಲೋಕದ ಕಾಮಿನೀ ತತಿಗೆ ಚೆಲ್ವಂ ಬೇಡಿದಂತೀಯಲು ।
ಣ್ಮಿದ ಲಾವಣ್ಯ ನಿಧಾನಮೋ ನವ ಲಸತ್ಸಮ್ಮೋಹನಾನೀಕ ಸಂ ॥
ಪದಮೋ ತಾನೆನೆ ಕಣ್ಗೆ ಕೌತುಕಮನಾದಂ ಬೀಱುತೊಪ್ಪಿರ್ದ ಚಿ ।
ತ್ರದ ಪೆಣ್ಣಂ ಪದೆದಾಗಳೀಕ್ಷಿಸಿದನಾ [ಭೂಪಾಲ] ಪುಷ್ಪಾಯುಧಂ ॥೬೩॥

ಕಂ॥ ಪುದಿದಂತಶ್ಛವಿಯಿಂ ಸೊಂ ।
ಪೊದವೆ ಸಚೇತನಮಿದೆಂಬ ಭಾವಮನೆ ಮನ ॥
ಕ್ಕುದಯಿಸಿ ನೆಱೆ ತೋರ್ಪಾ ಬರೆ ।
ಪದ ಪೆಣ್ಣಂ ಭೂಪ ಕುಸುಮಕಾಂಡಂ ಕಂಡಂ ॥೬೪॥

ಮ॥ಸ್ರ॥ ಅಸಿತಂಗೋಪಾಂಗ ಸಂಘಾತದಿನತಿಶಯ ಲಾವಣ್ಯಮಂ ಬೀಱುವಂತೆ ।
ಯ್ದಿ ನಿಜೋಪಾಂಗಂಗಳಿಂ ಚೆಲ್ಲವನೆ ಕೆದಱುವಂತಾಸ್ಯ ನೀರೇಜದಿಂ ಸ್ಮೇ ॥
ರ ನವ ಪ್ರದ್ಯೋತ ಪೀಯೂಷಮನೆ ಪಸರಿಪಂತೊಪ್ಪುವಾಶ್ಚರ್ಯ ಚಿತ್ರಾಂ ।
ಗನೆಯಂ ಚಿತ್ತಂ ಮರಲ್ದಾ ನೃಪ ಕುಸುಮಶರಂ ನಾಡೆ ಮುನ್ನೋಡಿ
ಸೋಲ್ತಂ ॥೬೫॥

ಕಂ॥ ಎಳಸಿದುವೆಯ್ದಿದುವಾಗಳೆ ।
ಬಳಸಿ [1]ದುವವಯವಮನಂತು ನಲವನಲಂಪಂ ॥
ತಳೆದುವು ಬರೆಪದ [2]ಪೆಣ್ಗಂ ।
ದಳಿಪಿದುವವನೀಶ ಮನ್ಮಥನ ನಯನಂಗಳ್ ॥೬೬॥

1. ದನವಯವ. 2. ಪೆಣ್ಣಂ.

ಮ॥ ಕುರುಳೊಳ್ ನೇವರಿಸಂತೆ ಭಾಳ ಪುಟದೊಳ್ ಮುಂಡಾಡುವಂತಾ ನವಾ।
ಧರದೊಳ್ ಚುಂಬಿಸುವಂತೆ ಪೀನ ಕುಚದೊಳ್ ಪೋರ್ವಂತೆ ನೈತಂಬದೊಳ್ ॥
ನೆರೆವಂತಂಘ್ರಿಯೊಳೊಲ್ಮೆಯಿಂದೆಱಗುವಂತಾಸಕ್ತಿ ಮೆಯ್ವೆರ್ಚೆ ಸಂ।
ಚರಿಸುತ್ತಿರ್ದುವಿಳೇಶ ಮನ್ಮಥನ ಕಣ್ಗಳ್ ಚಿತ್ರ ಕಾಂತಾಂಗದೊಳ್ ॥೬೭॥

ಚಂ॥ ತವಕಮನಪ್ಪುಕೆಯ್ದು ನಯನಂಗಳ ಜೆಂಬಿಡದೆಯ್ದೆ ಸೋಂಕಿತೆಂ।
ಬವೊಲವನೀಶ ಕಂತುವ ಮನಂ [1]ಪಟ ಚಿತ್ರದ ಪೆಣ್ಣ ರೂಪ ವೈ ॥
ಭವದೊ[2]ಳಲಂಪುವೆತ್ತುದು ಕರಂ ನೆಲೆಗೊಂಡುದು ನಟ್ಟು ನಿಂದುದು।
ತ್ತವಳದಿನೊಂದಿ ಸಂದುದೊಳಪೊಕ್ಕುದಭೀಕ್ಷಿಸಿದಾ ಕ್ಷಣಾರ್ಧದೊಳ್ ॥೬೮॥

ಕಂ॥ ಇದು ದಲ್ ಬರೆಪದ ಪೆಣ್ಣೆಂ।
ಬುದು ತೋಱದೆ ವಿಾರಿ ನೆಗೆದನತಿ ರಾಗೋದ್ರೇ ॥
ಕದಿನಾಗಳಂತೆ ಮೇಲ್ವಾ।
ಯ್ವುದಕುಜ್ಜುಗಿಸಿತ್ತು ನೃಪಮನೋಜನ ಚಿತ್ತಂ ॥೬೯॥

ಮ॥ ಮನದೊಳ್ ಮನ್ಮಥ ರಾಗಮುಬ್ಬರಿಸಿ ನೋಟಂ ನಟ್ಟು ನೋಟಕ್ಕೆ ತೊ।
ಟ್ಟನೆ ಗಾತ್ರಂ ತನಿಗೆತ್ತಿ ಚುಂಬನಕೆ ಬಾಯ್ತೇರ್ಸೈಸಿಯಾಲಿಂಗನ ॥
ಕ್ಕೆ ನಿಜೋದ್ಯದ್ಭುಜ ಶಾಖೆಗಳ್ ನಿಮಿರೆ ಮೇಲ್ವಾಯ್ದಂ ಪಟಾಲೇಖದಂ।
ಗನೆಗಾಗಳ್ ವಿಗತ ತ್ರಪಂ ನೃಪಮನೋಜಾತಂ [3]ಮಹೌತ್ಸುಕ್ಯದಿಂ ॥೭೦॥

ನವ ಸಂಗಕ್ಕೆನೆ ಲಜ್ಜೆವೋಗಿ ನೃಪನಂ [4]ತದ್ಗೇಹದೊಳ್ ಕೂಡುವಂ।
[5]ದವಳುಂ ಪಿಂದೊಳಪೊಕ್ಕಳೆಂದೆನೆ ಮನಂಬೊಕ್ಕಿರ್ದಳಂ ಚಿತ್ರ ಚಿ ॥
ತ್ರ ವರಸ್ತ್ರೀಯಸಿಳೇಶ ಮನ್ಮಥನಣಂ ತಾನಲ್ಲಿ ಕೂಡಲ್ಕೆ ಸಾ।
ರ್ದವೋಲಂಗೋದ್ಭವ ರಾಗವಹ್ನಿ ನಿಮಿರಲ್ ಜೋಲ್ದೆಯ್ದಿದಂ ಮೂರ್ಛೆಯಂ
॥೭೧॥

ಕಂ॥ ಬರೆಪದ ಪೆಣ್ಗಳಿಪಿದುದಂ।
ಪರಿವಾರ ಸ್ತ್ರೀಯರಱದರೆಂದುರು ಲಜ್ಜಾ ॥
ಭರನಾಗೆ ನೋಡದಿರ್ಪಂ।
ತಿರೆ ಕಣ್ಗಳ್ ಮುಗಿದು ನೃಪತಿ ಮೂರ್ಛೆಗೆ ಸಂದಂ ॥೭೨॥

1. ಜಪ. 2. ಳಲಂಕೆ. 3. ಮಸೋತ್ಸುಕ್ಯ. 4. ತಗ್ಗೇಹ. 5. ದವಲಂ.

ಇಂತು ನೃಪಕಂಟು ಮೂರ್ಛಾವೇಗಮನೆಯ್ದಿದುದಂ ಸಚಿವ ತನಯಂ ತೊಟ್ಟನೆ ಕಂಡು—

ಮ॥ ಇದು ತಾಂ ವಿಸ್ಮಯಮಿಾ ವನಾಂತರದೊಳೆಂದುಂ ಮುನ್ನಮಿಲ್ಲೀ ವನಾ।
ವ್ರದೊಳೀ ಚಿತ್ರಪಟಂಬೊಲೀ [1]ಪಟದ ಪೆಣ್ಣಂ ಕಂಡು ಸೋಲ್ತೀಗಳೆ॥
ಯ್ದಿದನೀ ಮೂರ್ಛೆಯನೀ ನರೇಂದ್ರ ಮದನಂ ಮತ್ತೀಗಳಾವಿಲ್ಲಿಗಾ।
ವುದನೇಗೆಯ್ವುದೆನುತ್ತೆ ಮಂತ್ರಿ ತನಯಂ ವಿಭ್ರಾಂತಿಯಂ ತಾಳ್ದಿದಂ ॥೭೩॥

ಇನಿತಂ ಚಿಂತಿಸುತಿರ್ದಣಂ ತಡೆಯದಂತಾ ಸ್ತ್ರೀಯರೊಳ್ ಸೂಕ್ತಿ ಮಂ।
ಡನೆಯಪ್ಪಗ್ಗದ ರತ್ನಮಾಲೆಯುಸೆ ನೀನೀಯಂದಮಂ ಪೋಗಿ ಭೋಂ।
ಕನೆ ವಿಶ್ವಂಭರ ಭೂವರಂಗೆ ಪದೆಪಿಂ ಪೇಳ್ದೀಕ್ಷಣಂ ಕೊಂಡು ಬಾ॥
ಯೆನುತುಂ ಬೇಗದೊಳಟ್ಟಿದಂ ಬುಧ ನುತಂ ಬೋಧಾಳು ಮೇಧಾವಿಳಂ ॥೭೪॥

ಕಂ॥ ಘಳಿಲನೆ ನಿಯಮಿಸೆ ಮೇಧಾ।
ವಿಳನಟ್ಟಿದೊಡಿರದೆ ತಾನತಿ ತ್ವರಿತದೊಳಾ॥
ಗಳೆ ರತ್ನಮಾಲೆಯೆಯ್ದಿದ।
ಳಿಳಾಧಿನಾಥನ ವಿರಾಜಿಪೊಡ್ಡೋಲಗಮಂ ॥೭೫॥

ಚಂ॥ ತ್ವರಿತದೆ ರತ್ನಮಾಲೆ ಬರುತಿರ್ಪಪಳಾವುದು ಕಾರ್ಯಮಾಗಿಯ।
ಚ್ಚರಿಯನದೇನನೀಗಳೆ ನಿವೇದಿಸಲಿಮ್ಮಯ [2]ಸಾರ್ಗೆನುತ್ತುಮಿಂ॥
ತರ[3]ಸನದಕ್ಕೆ ದತ್ತ ನಯನಾಂಬುರುಹ ದ್ವಯನಾಗಿ ವೀಕ್ಷಿಸು।
ತ್ತಿರೆಯಿರೆ ಬಂದು ತಾನೆಱಗಿದಳ್ ಪದ ಪಂಕರುಹಕ್ಕೆ ಬೇಗದಿಂ ॥೭೬॥

ಕಂ॥ ಜನಪಾಸ್ಯ ವಿಧುಗೆ ಪೆಳಱಿದು।
ವೆನಸುಮಿವೆಂಬಂತೆ ಹಸ್ತ [ಕುಮುದ] [4]ಯುಗಂ ಭೋಂ॥
ಕನೆ ಮುಗಿದು ದೇವ ಬಿನ್ನಪ।
ಮೆನುತಾಗಳ್ ರತ್ನಮಾಲೆ ತಾನಿಂತೆಂದಳ್ ॥೭೭॥

ಮ॥ ಒಗೆದುಚ್ಚಂಡ ನಿದಾಘದಾತಪದ ಕಾಯ್ಪಂ ತಾಳ್ದುವಂದಟ್ಟಿ ಕೈ।
ಮಿಗೆ ಕಂದರ್ಪ ನರೇಂದ್ರನಿಂದು ಪಿಪುಳೋದ್ಯಾನಕ್ಕೆ ಬಂದಲ್ಲಿ ತ॥

1. ಪದದ. 2 ಸಾರ್ಗೆ. 3. ಸದನಕ್ಕೆ. 4. ನಿಗಳಂ.

ಣ್ಪಿಗಡರ್ಪಾಗಿ ವಿರಾಜಿಪಾ ವನ ತರು ಸ್ತೋಮಾತುಳಚ್ಛಾಯೆಯೊಳ್ ।
ಬಗೆ ಬಂದಂತೆ ವಿನೋದದಿಂದೆ ನಡೆದಾಡುತ್ತುಂ ಬರುತ್ತಿರ್ಪುದುಂ ॥೭೮॥

ಚಂ॥ ಪಿರಿದೆಸೆವೊಂದು ಚೂತ ಕುಜಮಿರ್ದುದು ತತ್ಕುಜದಲ್ಲಿ ತಾಸಿದ ।
ಚ್ಚರಿ ಭುವನ ತ್ರಯಕ್ಕೆಸಿಪ ರೂಪ ತನೂದರಿ ತಿಟ್ಟಿವಿಟ್ಟು ತ ॥
ತ್ತರುಣಿಯ ನಾಮಮಿಂತು ಕುಸುಮಾವಳಿಯೆಂದೆಸಿಪಕ್ಷರೋತ್ಕರಂ ।
ಬರೆದ ನವೀನ ಚಿತ್ರ ಪಟಮಿರ್ದುದು ಕಟ್ಟಿ ವಿಚಿತ್ರ ಶೋಭೆಯಿಂ ॥೭೯॥

ಮ॥ ಪರಿವಾರಾಂ[1]ಗನೆಯರ್ ಮನಃಪ್ರಿಯ ಸಖಂ ಮೇಧಾವಿಳಂ ಪಕ್ಕದೊಳ್ ।
ಬರೆ ಕಂದರ್ಪ ನರೇಂದ್ರನಿಂತು ನಡೆ[2]ದಾಡುತ್ತುಂ ತದಾಮ್ರಕ್ಕೆ ಬಂ ॥
ದಿರದಾ ಚಿತ್ರದ ಪೆಣ್ಣನೀಕ್ಷಿಸಿ ಕರಂ ಕಣ್ಸೋಲ್ತು ಮೇಲ್ವಾಯ್ದು ಚ ।
ಚ್ಚರದಿಂ ಮೂರ್ಛೆಯನೆಯ್ದಿದಂ ಮದನ ರಾಗೋದ್ರೇಕದಿಂ ಭೂಪತೀ ॥೮೦॥

ಕಂ॥ ಇದನಱಪಲ್ ದೇವ ಭವ ।
ತ್ಪದ ಪದ್ಮಕ್ಕೆಯ್ದಿ ವಂದೆನೆಂದುಚಿತ ವಚೋ ॥
ವಿದೆ ರತ್ನಮಾಲೆ ಬಿನ್ನವಿ ।
ಸಿದುದನದಂ ನೃಪತಿ ಕೇಳ್ದು ವಿಸ್ಮಿತನಾದಂ ॥೮೧॥

ಇಂತು ಮಹೀಕಾಂತಂ ವಿಸ್ಮಯ ಸ್ವಾಂತನಾಗಿ ಮಂತ್ರಿಮುಖ್ಯನ ಮೊಗಮಂ ನೋಡಿದಾಗಳ್—

ಮ॥ ನೆಱೆ ಮೂಲೋಕದೊಳಿಲ್ಲ ಭಾವಿಸೆ ಕುಭೃತ್ಕಂದರ್ಪನಂ ಸೋಲಿಸಲ್ ।
ನೆಱೆವಾಶ್ಚರ್ಯ ಸುರೂಪೆಯರ್ ಪಟದ ಪೆಣ್ಣಂ ನೋಡಿ ಸೋಲ್ತಂಗದೆ ॥
ಬ್ಬಱುಗೆಟ್ಟಂ ಗಡ ದೇವ ವಿಸ್ಮಯಮಿದೇನೆಂತಾಯ್ತುದಂ ಬೇಗದಿಂ ।
ದಱಯಲ್ವೇಟ್ಟುದು ಪೋಪಮೇಱುಮಿರದಿನ್ನೆಂದಂ ಪ್ರಧಾನೋತ್ತಮಂ ॥೮೨॥

ಮನಮಾಗಳ್ ನೆನೆದಂತೆ ಮಂತ್ರಿ ನುಡಿಯಲ್ ಕೇಳ್ದಾಗ್ರಹಂಬೆತ್ತು ಭೋಂ ।
ಕನೆ ಸಿಂಹಾಸನದಿಂದಮೆಟ್ಟಿ ಚಿತಮಪ್ಪಾಪ್ತೀಯರಂ ಕೂಡಿಕೊಂ ॥
ಡು ನಿಜಸ್ತ್ರೀ ವಿಜಯಾವತೀ ಸಹಿತಮಂತಾ ಕೌತುಕೋಪೇತ ಚೇ ।
ತಸಿಳೀಶಾಗ್ರಣಿ ಬಂದನಂದು ವಿಪುಳೋದ್ಯಾನಕ್ಕೆ ತಾನಾ ಕ್ಷಣಂ ॥೮೩॥

---

1. ಗನೆಯಂ. 2. ಪಾಡುತ್ತುಂ.

ಮ॥ ವನಮಂ ಪೊಕ್ಕು ಬರುತ್ತೆ ಭೂಪಹರಿ ಕಂಡಂ [1]ಕಂತುದೇ ।
ವನ ಮೂರ್ಛಾಪಹರ ಕ್ರಿಯಾತುರತೆ ಮಿಕ್ಕೋರಂದದಿಂ ಪುಷ್ಪ [2]ವೀ ॥
ಜನಮಂ ಬೀಸುತೆ ಶೀತ ವಾಷ್ಕಣಮನಂಭೋಯಂತ್ರದಿಂದೊತ್ತಿ ಸೇ ।
ಚನಮಂ ಮಾಡುತೆ ಕಾಮಿನೀ ಜನಮುದಿರ್ದಾ ಚೂತ ಭೂಜಾತಮಂ ॥೮೪॥

ಕಂ॥ ಪಿರಿದಾತುರದಿಂ ನೃಪ ಮುರ ।
ಹರನಾಗಳ್ ತಾನುಮರಸಿಯುಂ ನಿಜ ಮಂತ್ರೀ ॥
ಶ್ವರನುಂ ಪ್ರಿಯ ಪರಿಜನಮುಂ ।
ಬೆರಸಾ ಮಾಕಂದ ಕುಜ ತಟಕ್ಕೆಯ್ತಂದಂ ॥೮೫॥

ಮ॥ ವರ ವರ್ಣಾತಿಶಯಂಗಳಿಂ ನುತ ವರೇಣ್ಯಾಗಣ್ಯ ಲಾವಣ್ಯ ವಿ ।
ಸ್ತರದಿಂ ವಿಸ್ಮಯ ಶೋಭೆಯಂ ಬಿಡದೆ ಬೀಱುತ್ತುಂ ತದೀಯಾಮ್ರ ಕಂ ॥
ಧರದೊಳ್ ಕಟ್ಟಿರುತಿರ್ದ ಚಿತ್ರಪಟದಾ ಪೆಣ್ಣಂದಮಂ ಕಂಡು ಭೂ ।
ವರನಾಗಳ್ ಬೆಱಗಾಗಿ ನಿಂದನೆನಸುಂ ನಿಷ್ಪಂದ ತಾರತ್ವದಿಂ ॥೮೬॥

ಕಂ॥ ದೇವಿಯುಮಾ ಸಚಿವನುಮು ।
ವ್ಯಾವೃತ ಪರಿಜನಮುಮಾಗಳಾ ಬರೆಪದ ಶೋ ॥
ಭಾ ವನಿತೆಯನೀಕ್ಷಿಸಿ ನೆಱೆ ।
ತಾವುಂ ಬೆಱಗಾಗೆ ವಿಸ್ಮಯಾತ್ಮಕರಾದರ್ ॥೮೭॥

ಸುರ ಕನ್ಯಾ ವಿದ್ಧಮೊ ಖೇ ।
ಚರ ಕನ್ಯಾ ವಿದ್ಧಮೋ ವಿಚಾರಿಪೊಡಿದು ಮ ॥
ರ್ತ್ಯರ ಕನ್ಯಾಕೃತಿಯಲ್ತೆಂ ।
ದರಸಂ ತತ್ಪಟದ ಪೆಣ್ಣನೀಕ್ಷಿಸುತಿರ್ದಂ ॥೮೮॥

ನೆಱೆ ಲೋಕಮನಾಕೃತಿಯಿಂ ।
ಬೆಱಗಿಪ ಕಂದರ್ಪ ನೃಪನ ಚಿತ್ರದ ಪೆಣ್ಣಂ ॥
ತೆ[ಱಗಿಸಿ]ದುದು ತಾನೆನುತುಂ ।
ಬೆಱಗಾಗಿ [3]ಸರೇಂಪ್ರ ಚಕ್ರಿ ನೋಡುತ್ತಿರ್ದಂ ॥೮೯॥

ಆಗಳ್—

1. ಕಂಡದೇ. 2. ಬಿ॥ ಜ್ಞನಮಂ ಬೀಸಿತು ಶೀತವಾತುಷನೆಂಬೋ. 3. ಸದೆಂದೆ.

ಮ॥ ಸುವತೀ ಸಂಕುಳಮೆಯ್ದೆ ಮಾೞ್ಪ ಶಿಶಿರ ವ್ರಾತಕ್ಕೆ ತನ್ಮೂರ್ಛೆ ಪಿಂ ।
ಗಿದುದೋ ಪಿಂಗದೊ ನೋೞ್ಪೆನೆಟ್ಟಿ ಜಾಪೆನಾನೆಂಬುಜ್ಜುಗಂ ಮಿಕ್ಕು ಜೇ ॥
ಗದೆ ಕಂದರ್ಪನ ಸಾರ್ಗೆ [1]ವೋಗಲಸುಗೆಯ್ಯುತ್ತಿರ್ದ ಭೂಪಂಗೆ ತಾಂ ।
ಪದೆಪಿಂ ಬಿನ್ನಪಮೆಂದು ಮೆಲ್ಲನುಸಿರ್ದಂ ಮಂತ್ರೀಶನೌಚಿತ್ಯಮಂ ॥೯೦॥

ಕಂ॥ ಎನಿತಾನುಂ ಪಿಡಿ[2]ದಾಮಯ ॥
ಮನಮೀ ಕಂದರ್ಪ ದೇವನೆಲೆ ನೃಪ ನಿಮ್ಮಾ ॥
ನನಮಂ ಕಾಣುತ್ತಿರೆ ಭೋಂ ।
ಕನೆ ಜನಿಯಿಸೆ ಮಗುೞೆ ಮೂರ್ಛೆ ನಿಶ್ಚಯಮಕ್ಕುಂ ॥೯೧॥

ಅದಱಿಂ ನಾಮಿದನಣಮಱಿ ।
ಯದ ತೆಱದಿಂ ಮಗುೞ್ದು ಬೇಗದಿಂದೀಗಳೆ ಪೋ ॥
ಪುದು ಕಾರ್ಯಮೆಂದು ಬಿನ್ನವಿ ।
ಸಿದ ಸಚಿವನ ನುಡಿಯನದನೆ ನೃಪನೆರ್ದೆಗೊಂಡಂ ॥೯೨॥

ಮ॥ ಮದನಾವಸ್ಥೆಯನೆಯ್ದಿ ತನ್ನೃಪತಿ ಕಂಡಂ ಬಂದನೆಂದಾರುಮೆ ।
ನ್ನಡೆ ಕಂದರ್ಪನನೀಗಳೆಟ್ಟಿ ಜಾಸಿಕೊಂಡೆಟ್ಟಿತ್ತು ಪೂರ್ವದೆಂದಿಂತು ಜೇ ॥
ಗದೆ ಮೇಧಾವಿಳ ಮುಖ್ಯಮಪ್ಪ ವನಿತಾನೀಕಕ್ಕೆ ಸಂಜ್ಞೋಕ್ತಿಯಿಂ ।
ದಿದನಾಜ್ಞಾಪಿಸಿ ಪೋಗಿ ಭೂಪ ಕಮಲಾಕ್ಷಂ ಪೊಕ್ಕನಾಸ್ಥಾನಮಂ ॥೯೩॥

ಕಂ॥ ಕ್ಷಿತಿನಾಥಂ ತಡೆಯದಲಂ ।
ಕೃತ ವಿಷ್ಟರನಾಗಿ ತನ್ನ ಬಲಗೆಲದೊಳಲಂ ॥
ಕೃತ ವಿಷ್ಟರನಾದ ನಿಜಾ ।
ನ್ವಿತ ಮಂತ್ರಿಯ ಮುಖಮನೀಕ್ಷಿಸುತ್ತಿಂತೆಂದಂ ॥೯೪॥

ಮ॥ ಮನುಜರ್ಕಟ್ಟಿದುದಲ್ಲ ಚಿತ್ರಪಟಮಿಂತೀ ಪೋಲ್ವೆಯಪ್ಪಂಗನಾ ।
ಜನಮೀಯುರ್ವಿಯೊ[3]ಳಿಲ್ಲದಿರ್ಕೆ ವಿಪುಳೋದ್ಯಾನಕ್ಕೆ ವಿದ್ಯಾಧರೀ ॥
ಜನಮೆಟ್ಟಿಂದಿರುತಿರ್ದುದೊರ್ಮೆ [4]ಪರಿ ವಿದ್ಯಾಲೇಖದಭ್ಯಾಸಮಂ ।
ನೆನೆದಾಗಳ್ ಬರೆದಿಟ್ಟುಪೋದ ಪಟ ಚಿತ್ರಂ ತಾನಿದೇನಕ್ಕುಮೋ ॥೯೫॥

1. ವೋಲಗಸು. 2. ದಮಯ. 3. ಳಂತದಿರ್ಕೆ. 4. ಪರವಿದ್ಯಾಲೇಖಿಗಭ್ಯಾಸಮಂ.

ಇದು ಸಂಭಾವಿಸೆ ಚೋದ್ಯಮಿಾ [1]ಪಟದ ಚಿತ್ರಸ್ತ್ರೀಯ ರೂಪೆಯ್ದೆ ನೆ ।
ಟ್ಟುದು ಕಂದರ್ಪನ ಚಿತ್ತದೊಳ್ ತರಿಸಿ ಸಾವಾ ಕನ್ನೆಯೊಳ್ ಮಾಳ್ಪುಮು ॥
ಗ್ಗದ ವೈವಾಹಮನೆಂ[2]ಬೊಡುರ್ವರೆಯೊ[3]ಳಿನ್ನಳ್ ಕನ್ನೆ ತಾನೆಂತುಮಿ ।
ಲ್ಲ ದಲೆಂದುನ್ಮುಖನಾಗಿ ಚಿಂತಿಸಿದನಾ ವಿಶ್ವಂಭರೋರ್ವೀಶ್ವರಂ ॥೯೬॥

ಅದರ್ಕೆ ಮಂತ್ರಿವರನಿಂತೆಂದಂ—

ಕಂ॥ ಪೆಸರ್ವೆತ್ತುದು ಬಹು ರತ್ನಾ ।
ವಸುಂಧರಾಯೆಂಬ ನೀತಿ ನಾವಿದನಿಂತೇ ॥
ಅುಸಲಾಗದು ದೇವ ವಿಚಾ ।
ರಿಸುವಮಣಂ ವಿಶ್ವವಸುಧೆಯೊಳ್ ಚರರಿಂದಂ ॥೯೭॥

ಇಂತು ಬಗೆದಂದು ಮಂತ್ರಿವರನಾ ಬೇಗದೊಳ್—

ಚಂ॥ ಬರೆದು ತದೀಯ ಚಿತ್ರಪಟ[4]ಮಿರ್ದವೊಲೊಲ್ವನಿತಂ ಪಟಂಗಳಂ ।
ಬರಿಸಿ ಚರರ್ಗೆ ಕೊಟ್ಟಿಳೆಯೊಳೀ ಪಟ ಚಿತ್ರದ ಪೋಲ್ವೆಯಪ್ಪ ಸೌಂ ॥
ದರಿ ನಿಜ ನಾಮದಿಂದೆ ಕುಸುಮಾವಳಿಯೆಂಬಳದೆಲ್ಲಿಯುಂಟು ಚ ।
ಚ್ಚರದೊಳೆ ನೋಡಿ ಬರ್ಪುದೆನುತುಂ ಸಚಿವಾಗ್ರಣಿಯಾಗಳಟ್ಟಿದಂ ॥೯೮॥

ಅದಲ್ಲದೆಯುಂ—

ಉ॥ ಈ ಪಟ ಚಿತ್ರದಾಕೃತಿಯಳಂ ಕುಸುಮಾವಳಿಯೆಂಬಳಂ ಬಹು ।
ದ್ವೀಪದೊಳೆಲ್ಲ ಭೂತಳದೊಳಗ್ಗದ ಭೂವರ ಕನ್ಯೆಯರ್ಕಳೊಳ್ ॥
ವ್ಯಾಪಿಸಿ ನೋಡಿ ನಿಶ್ಚಯಿಸಿ ಬೇಗದೆ ಬರ್ಪುದೆನುತ್ತುಮಿಂತುಮಾ ।
ಜ್ಞಾಪಿಸಿ ತಾಂ ಪ್ರಗಲ್ಭ ಚರರಂ ಸಚಿವಾಗ್ರಣಿ ನೋಡಿಯಟ್ಟಿದಂ ॥೯೯॥

ಕಂ॥ ಇಳೆಯೊಳ್ ಕುಸುಮಾವಳಿಯೆಂ ।
ಬಳ ಠಾವಱಿದಿರದೆ ಬಂದವರ್ಗೆ ಪಸಾಯಂ ॥
ಗಳನೀವೆನೆನುತ್ತುಂ ಚರ ।
ಕುಳಮಂ ಕಳಿಪುತ್ತೆ ಸಚಿವನಿರೆ ಮತ್ತಿತ್ತಂ ॥೧೦೦॥

---

1. ದಿಟದ. 2. ಬಳೂರ್ವರೆ. 3. ಳಿನೋಳ್ಪಿನೆ. 4. ಮಿರ್ದನೋಲ್ವನಿತಂ.

ಚಂ॥ ವನಮನಿತುಂ ತುಷಾರಮಯಮಾಗೆ ಕರಂ ಜಲಯಂತ್ರ ಜಾಲದಿಂ ।
ವನಿತೆಯರಾರಿ ಸೀರ್ಗ್ಗಳನೆ ಸೂಸುವ ಕಮ್ಮೆಲರುಣ್ಮೆ ಪುಷ್ಪ ವೀ ॥
ಜನ ತತಿಯಿಂದೆ ಬೀಸುವ ಲಸತ್ತುಹಿನ ಕ್ರಿಯೆಯಿಂದೆ ಮೂರ್ಛೆ ಮೆ ।
ಲ್ಲನೆ ಪೆಱಪಿಂಗೆ ಕಣ್ದೆಱೆದನಾ ಕ್ಷಣದಿಂ ನರನಾಥ ಮನ್ಮಥಂ ॥೧೦೧॥

ಕಂ॥ ಕೆಳೆಯನ ಮುಖಮಂ ಕಟ್ಟೆದಿ ।
ರೊಳಭೀಕ್ಷಿಸೆ ನಾಣ್ಚಿ ಮನದೊಳೊಂದಿದ ಕುಸುಮಾ ॥
ವಳಿಯಂ [1]ಮತ್ತಂ ಕೂಡ ।
ಲ್ಕೆಳಸಿದನೆನೆ ಮಗುಳೆ ನೃಪತಿ ಮೂರ್ಛಿತನಾದಂ ॥೧೦೨॥

ಅದಂ ಕಂಡು ಮೇಧಾವಿಳಂ ವಿಸ್ಮಯಾವಿಳನಾಗಿ—

ಮ॥ ಮನದನ್ನಂಗೆನಗೇಕೆ ನಾಣ್ಚಲೆಲೆ ಕಂದರ್ಪಾವನೀನಾಥ ಪೇ ।
ೞನಿತುಂ ಪೀಡಿತನಾದೊಡಂ ಹೃದಯಮಂ ಪಿಂತಿಕ್ಕಿ ಮಾಟ್ಪಂತುಟೇ ॥
ನೆನುತುಂ ಚಿತ್ತದ ಲಜ್ಜೆಯಂ ಪ್ರಿಯ ವಚಃಪೀಯೂಷದಿಂ ತೂಳ್ದಿ ತೊ ।
ಟ್ಟನೆ ತನ್ಮೂರ್ಛೆಯನಾಗಳೆಬ್ಬಿಱಿಸಿದಂ ಬೋಧಾಳು ಮೇಧಾವಿಳಂ ॥೧೦೩॥

ಕಂ॥ ಘನಮೆನಿಸಿದ ಸಚಿವ ತನೂ ।
ಜನ ವಾಕ್ಸುಧೆ ಪಱಿದು ಚಿತ್ತಸಂಭವ ಲಜ್ಜಾ ॥
ಘನ ಕರ್ದಮಮಂ [2]ಚಾಳಿಸೆ ।
ಕಣ್ದೆಱೆದಂ ಮಹೀಶ ಮನ್ಮಥನಾಗಳ್ ॥೧೦೪॥

ಹೃದಯಾಬ್ಜ ಕುಟಿಯೊಳೊಡಗೂ ।
ಡಿದ ಕುಸುಮಾವಳಿಯ ಸಂಗಮಂ ಪೇಟ್ಪಂತು ॥
ಣ್ಮಿದ ರಾಗ ರುಚಿ ನಿಚಿತ[3]ನಂ ।
ದದಸೀಕ್ಷಿಸಿದಂ ನೃಪಾಂಗಜಂ ಸಖ ಮುಖಮಂ ॥೧೦೫॥

ಇಂತು ನೃಪಕಂತು ಕಣ್ದೆಱೆದಾಗಳ್—

ಮ॥ [4]ವನಮಿಂತೆಲ್ಲಿಯದೀ ವನಾವನಿ ತಲಾಕ್ರಾನ್ತೇಗಳೆಲ್ತಿಂದೆನೀ ।
ವನಿತಾ ಸಂಕುಲವೆತ್ತಣಿಂ ನೆಱೆದುದೀ ವಾರ್ಯಂಶಮುಂ ಪುಷ್ಪ ವೀ ॥

1. ಮತ್ತಮಗೂಡ. 2. ಪಾಲಿಸೆ. 3. ಸದಿ. 4. ವನಮುಂತೆಲ್ಲಿಯ.

ಜನಮುಂ ಸಂಗಳಿಸಿತ್ತಿದೇನೊ ಸಖನಾನೆಂಬೀತನಾರೆಂದು ತಾ।
ನೆನೆಸುಂ ಭ್ರಾಂತಿಯನಾಂತು ಕಲ್ಪಿಸುತುಮಿರ್ದಂ ಭೂಪ ಪುಷ್ಪಾಯುಧಂ॥೧೦೬॥

ಕಂ॥ ತನುವೇನಾಗಿರ್ದುದು ತ।
ನ್ಮನಮೆಂತಿರುತಿರ್ದುದೆಂಬ ತೆಱನಱಿಯದೆ ತೊ॥
ಟ್ಟನೆ [1]ಜೊಂಪಿನೊಳಳಿಯೆಟ್ಟಿಱು।
ಜನಿಯಿಸೆ ನೃಪಕಂತುವಿಂತು ಭಾವಿಸುತಿರ್ದಂ ॥೧೦೭॥

ಮತ್ತಮಾಗಳ್—

ಮ॥ ವಿಪುಳೋದ್ಯಾನವಿದೀತನೆನ್ನಯ ಸಖಂ ಮೇಧಾವಿಳಂ ಸುತ್ತಿ ರಾ।
ಜಿಪ ಕಾಂತಾಳಿ ಮದೀಯ ಸೇವಕ ವಧೂ ಸಂದೋಹಮೆಂದಿಂತು ನೋ॥
ಡಿ ಪರಿಜ್ಞಾತಕನಾಗುತಾಗುತುಮೆ ಮತ್ತಂ ಕುಟ್ಮಳಾಕಾರನೇ।
ತ್ರ ಪ್ರಯೋಜದ್ವಯನಾದನಾ ನೃಪಮನೋಜಂ ಮನ್ಮಥ ಭ್ರಾಂತಿಯಿಂ॥೧೦೮॥

ಕಂ॥ ಅಱಿವು ಮಱವೆಗಳೆನಿಪ್ಪೆರ।
ಡಱ ಮಧ್ಯಾವಸ್ಥೆಯೊಳ್ ಮನಂ ಪಿರಿದಾನುಂ॥
ತಱಿಸಂದು ನೃಪ ಮನೋಜಂ।
ಜೆಱಗಿಂ [2]ಕರುವಿಟ್ಟ ಪುರುಷನಂತಿರುತಿರ್ದಂ ॥೧೦೯॥

ಇಂತಿರ್ದ ನೃಪಮನೋಭವನ ಚೇತೋಭಾವಮುಂ ಕಂಡು—

ಮ॥ ಇಸಿತೊಂದಜ್ಞತೆಗೇಕೆ [3]ದೇವ ಪಿಱಿದುಂ ಪಕ್ಕಾದಿರಿಂ ಪೋಯ್ತುದೆ।
ತ್ತ ನಿಜಜ್ಞಾನ ಗುಣಂ ಕರಂ ಜಡರವೋಲ್ ನೀವೀ ಪಟಸ್ತ್ರೀಗೆ ಸೋ॥
ಲ್ವಿಸಿತುಂ ತಕ್ಕುದೆ ನಿಮ್ಮ ರೂಪ ಸದೃಶಂ ತಾನಪ್ಪುದೇಂ ನೋಟ್ಪೊಡೆಂ।
ದೆನುತುಂ ಮಂತ್ರಿ ಸುತಂ ಪ್ರಬೋಧಿಸಿದನಿಂತೌಚಿತ್ಯ ವಾಗ್ವೃತ್ತಿಯಿಂ ॥೧೧೦॥

ರತಿಯಂ ರೂಪ ವಿಲಾಸದಿಂ ಮಿಗುವ ಕನ್ಯಾನೀಕಮುಂ ತಂದು ತೋ॥
ಱುತಿರಲ್ ಮೆಚ್ಚದೆ ದೇವ ವೀಕ್ಷಿಸಿದ ನಿಮ್ಮಾ ಲೋಚನಂಗಳ್ ವಿಚಾ।
ರತೆಗೆಟ್ಟೇನೆಱಗಲ್ಕೆ ತಕ್ಕುದೆ ಪಟಸ್ತ್ರೀ ಚಿತ್ರ ಸೌಂದರ್ಯದು।
ನ್ನತಿ[4]ಗೆಂದಿಂತುಚಿತೋಕ್ತಿಯಿಂದಮೆನಿತಾನುಂ ಬೋಧೆಗೆಯ್ದಂ ಸಖಂ ॥೧೧೧॥

1. ಜೊಂಮಿನೊನಳಿಯಚ್ಚರು. 2. ತರುವಿಟ. 3. ದದ. 4. ಗೆಂದಿಂದು.

ಕಂ॥ [1]ವಿನಯೋನ್ನತಿಯಿಂದಱಿವಿಂ ।
ದೆನಸುಂ ಪೆಸರ್ವೆತ್ತ ನೀವಿದೇಂ ಪಟ ಚಿತ್ರಾಂ ॥
ಗನೆಗೆಱಗಿ [ವಿ] ಮತಿಯಂ ತಳೆ ।
ವಿಸಿತುಮನುಚಿತಂ ವಿಚಾರಿಪೊಡೆ ನೃಪ ಮದನಾ ॥೧೧೨॥

[2]ಇಸಿತಾನುಂ ಬೋಧಿಪ ವಿ ।
ತ್ರನ ಸಮುಚಿತ ವಚನ ಚಯಮನೊಳಕೆಯ್ದಂ ತಾ ॥
ನೆನಲೆಟ್ಟಱು ಚಿತ್ತದೊಳೊ ।
ಯ್ಯನೆ ಜನಿಯಿಸೆ ನೋಡಿದಂ ನರೇಂದ್ರ ಮನೋಜಂ ॥೧೧೩॥

ಇಂತು ನರನಾಥನೆಟ್ಟಱುವೆಱಸಿ ನೋಡಿದುದನಱಿದು—

ಕಂ॥ ಉದಯಿಸುತೆಟ್ಟಱು ಚಿತ್ತದೊ ।
ಳಿದುವೆ ಮಹಾ ಲಾಭಮಿಲ್ಲಿ ನೃಪಸಿರವಿಂ ಸಾ ॥
ಲ್ವದೆನುತ್ತೊಡಗೊಂಡುಯ್ವುದ ।
ನದನೆನಸುಂ ಬಗೆದು ಸಚಿವ ಸುತನಿಂತೆಂದಂ ॥೧೧೪॥

ಮ॥ಸ್ರ॥ ಪಿರಿದಾನುಂಪೊಟ್ತುಪೋಯ್ತೀವಿಪುಳವನವಿಹಾರಕ್ಕೆಂದು ಬಂದುಗ್ರ ತಾಪೋ ।
ತ್ಕರಮಾಗಿರ್ದಾತಪಂ ತಣ್ಪನೆ ತಳೆದುದು ತಾನಸ್ತ ಶೈಲಕ್ಕೆ ಸೂರ್ಯಂ ॥
ಬರಲಿರ್ದಂ ದೇವ ನೀವಿಂ ತಡೆಯದೆ ಬಿಜಯಂಗೆಯ್ವುದೌಚಿತ್ಯಮೆಂದಾ ।
ತುರದಿಂ ಮೇಧಾವಿಳಂ ಬಿನ್ನವಿಸಿದನಿತುಮಂ ಕೇಳ್ದು ಕಂದರ್ಪದೇವಂ ॥೧೧೫॥

ಕಂ॥ ಹೃದಯದೊಳವಿರಳವೆನೆ ತೀ ।
ವಿದ ಕುಸುಮಾವಳಿಯ ಲಲಿತ ಲಾವಣ್ಯ ಕಲಾ ॥
ಪದ ಭರಮಂ ನೆಱೆ[3] ತೋರ್ಪಂ ।
ದದಿನವನಿಪ ಕಂತು ಮೆಲ್ಲನಲ್ಲಿಂದೆಟ್ದಂ ॥೧೧೬॥

ಮ॥ ಕೆಲದೊಳ್ ಮುನ್ನಮೆ ದತ್ತ ಪಾಮು ಕರನಾಗಿರ್ದಾತ್ಮ ಮಿತ್ರಾಸ್ಯ ಮಂ ।
ಡಲಮಂ ವೀಕ್ಷಿಸುತುಂ ಪ್ರಕೋಷ್ಠ ಪುಟ ಪೀಠನ್ಯಸ್ತ ಹಸ್ತಾಬ್ಜನಾ ॥

1. ವಿಸಿತಾ. 2. ಯೆಸಿತಾನುಂ. 3. ದಂಸಾಲ್ದುಸಾ.

ಗಿ ಲಸದ್ಯಾನದೊಳುಣ್ಮೆ ಮಾಂದ್ಯಮವನೀಶಾನಂಗಮೆತ್ತಾನುಮಾ।
ಲಲನಾ ಯೂಥ ಸಮೇತಮಿಂತು ತಳರ್ದಂ ತಚ್ಚೂತ ಭೂಜಾತಮಂ ॥೧೧೭॥

ರತಿಯಂ ಕೂಡೆ ತೊಟಲ್ದು ನೋಡಿ ಬನದೊಳ್ ತಾಂ ಕಾಣದಾ[1]ವಿಹ್ವಲ।
ಸ್ಥಿತಿಯಿಂ ಬರ್ಪ ಮನೋಜನೀತನೆನೆ ಚಿತ್ತಂ ಚಿತ್ರ ಕಾಂತಾಮಳಾ॥
ಕೃತಿಯೊಳ್ ಮಗ್ನತೆವೆತ್ತು ಕಣ್ಗೆ ಪೆಱತೇನುಂ ತೋಱದಾಗಳ್ ಬಹಿ।
ರ್ಧೃತಿಯಿಂ ಮೆಲ್ಲನಿಳೇಶಕಂತು ಬಱುತಿರ್ದಂ ತದ್ವನೋಪಾಂತದೊಳ್ ॥೧೧೮॥

ಉ॥ ಭೋಂಕನೆ ಭೂಪಕಂತುಗಿನಿತಾಯ್ತಿರದಾಗಳೆ ದಿಕ್ಸಮಾಜಮೆ।
ಲ್ಲಂ ಕುಸುಮಾವಳೀ ಮಯ[2]ಮನಂತಮೆನಿಪ್ಪ ನಭೋಂತರಂಗಮೆ॥
ಲ್ಲಂ ಕುಸುಮಾವಳೀಮಯಮಣಂ ನಯನಂ ಪಱಿದಗ್ರ ಭಾಗಮೆ।
ಲ್ಲಂ ಕುಸುಮಾವಳೀಮಯಮಣಂ[ಪೆಱತೆಲ್ಲಮುಮಾಯ್ತಗೋಚರಂ] ॥೧೧೯॥

ಮ॥ . . . . . . . . . . . . . . ।
. . . . . . . . . . . . . . ॥
. . . . . . . . . . ಕಣ್ಣಾಗೆ ಕಾಣುತ್ತುಮಾ।
ವಿರಹ ವ್ಯಾಕುಳನುರ್ವರೇಶ ಮದನಂ ಬಂದಂ ಸಖೋದ್ದಿಷ್ಟಮಂ ॥೧೨೦॥

ಕಂ॥ ವನಮೆನಸುಂ ಕುಸುಮಾವಳಿ।
ಯನುಪಮ ವಿರಹಾನಳಾರ್ಚಿಯೊಳ್ ಪುಗುತಿರೆ ಪೊ॥
ಕ್ಕನಿಳೇಶ ಮನೋಜಂ ಚೆ।
ಲ್ವಿನ ನೆಲೆಯೆನೆ ಮಿಸುಪ ನೆಲೆಯ ಮಣಿ ಮಂದಿರಮಂ ॥೧೨೧॥

ಮ॥ಸ್ರ॥ ಒಳಗಿರ್ಕುಂ ಮಂಚದೊಳ್ ನೋಡುವೆನಿನಿಯಳನೆಂಬೊಂದು ವಿಭ್ರಾಂತಿಯಿಂ ವ್ಯಾ।
ಕುಳ ಭಾವಂಬೆತ್ತು ಮತ್ತೇನುಮನಱಯದೆ ಮಿತ್ರೋಪಯುಕ್ತಂ ಸಮಂತು॥
ಜ್ಜ್ವಳ ಚಂಚಚ್ಚಂದ್ರ ಕಾಂತೋಪಳ ಕೃತದೆ ಕರಂ ರಮ್ಯಮಾಗಿರ್ದ ಶಯ್ಯಾ।
ನಿಳಯಕ್ಕೆಯ್ತಂದು ಪೊಕ್ಕಂ ಕೃತಿರತಿರಮಣಂ ಸಾಹಸೋದ್ದಾಮಭೀಮಂ ॥೧೨೨॥

1. ವಿಂಹ್ವಣಸ್ಥಿಯಂ. 2. ಮಹಾಂತ.

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾ ಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ವಿಪುಳವನ ವಿಹಾರ ವರ್ಣನಂ
ಪುರಪ್ರವೇಶ ವರ್ಣನಂ
ನ ವ ಮಾ ಶ್ವಾ ಸಂ

---

# ದಶಮಾಶ್ವಾಸಂ

ಕಂ॥ ಶ್ರೀ ಕುಸುಮಾವಳಿಯ ವಿಚಿ।
ತ್ರಾಕೃತಿ ಮನದೊಳ್ ಪೊದಳ್ದು ತಾನಿರ್ದಂ ಶೋ॥
ಭಾಕರ ಮೂರ್ತಿ ವಿಳಾಸನಿ।
ಳಾಕಾಂತ ಮನೋಜ[ನಾಗಳ]ನುಪಮ ತೇಜಂ ॥೧॥

ಆ ಸಮಯದೊಳ್—

ಕಂ॥ ಪದೆಪಿಂ ಮನ್ನಿಸೆ ತತ್ಸಮ।
ಯದೊಳೋಲಗಕಾರ್ತಿಯರ್ಕ[1]ಳಂ ಕಳಿಪಲ್ವೇ॥
ಡಿದರಂ ತಡೆಯದೆ ತಾಂ ಕಳಿ।
ಪಿದನಾ ಮೇಧಾವಿಳಂ ವಿವೇಕೋಕ್ತಿ ಬಳಂ ॥೨॥

ಇಂತು ವಿಳಾಸಿನಿಯರಂ ವಿಸರ್ಜಿಸಿದಾ ಸಮಯದೊಳ್—

ಚಂ॥ ಬರೆಪದ ಪೆಣ್ಣ ನೀಕ್ಷಿಸಿ ಕರಂ ವಿಕಳಾತ್ಮಕನಾದನೆಂದು ಭೂ।
ವರ ಕುಸುಮಾಸ್ತ್ರನಂ ನಗುತಮೇಳಿಸಿ ನೋಡುತು[2]ಮಿರ್ದ ನೀನುಮಿಾ॥
ಪರಿಯೊಳೆ ಪದ್ಮಿನೀ ವಿರಹ ವಿಹ್ವಲನಾಗೆನುತುಂ ವಿಧಾತ್ರನಿ।
ತ್ತುರುತರ ಶಾಪದಿಂದಿೞದವೋಲಿೞದಂ ರವಿ ಪಶ್ಚಿಮಾಬ್ಧಿಯೊಳ್ ॥೩॥

ಮ॥ ವಿರಹಾವಸ್ಥೆಯನಪ್ಪುಕೆಯ್ದು ಪಿರಿದುಂ ಸುಯ್ವಿಂಕೆಯಿಂ ಪಂಕಜೋ।
ತ್ಕರಮುಂ ಕಂದಿಸುತುಂ ನಿರರ್ಗಳ ಗಳದ್ಬಾಷ್ಪಾಂಬು ಪೂರಂಗಳಿಂ॥
ಸರಸೀ ವಾರಿಗೆ ಪೆರ್ಚನುದ್ಭವಿಸುತುಂ ಕಂಠಂಬರಂ ಬೀಗಿದಾ।
[3]ಸೆರೆಯಿಂ ವಿಹ್ವಲಿಸುತ್ತುಮಿರ್ದುದತಿ ದೀನಾಲೋಕ ಕೋಕವ್ರಜಂ ॥೪॥

ಇರದಸ್ತಾದ್ರಿಯನೆಯ್ದಿ ಪೋದನಿನನೆಂದಾಗಳ್ ವಿಯೋಗ ಭ್ರಮೋ।
ದ್ಧುರದಿಂದತ್ತಲೆ ವಕ್ತ್ರಮಾಗೆ ನಿಡುಸುಯ್ಯುತ್ತಿರ್ಪುದುಂ ನೀಳ್ದು ಪಾ॥

1. ಳೊಕ್ಕಳಿ, 2. ಮಿರ್ದೆನೀಮಿಾ॥. 3. ಶರದಿಂ.

ಯ್ವ ರಥಾಂಗ ಪ್ರಕರಾಂತರಂಗ ವಿರಹಾಗ್ನಿ ಜ್ವಾಲಿಕಾ ಜಾಲಮಾ।
ವರಿಸಿತ್ತೆಂಡೆನೆ ಸಂಜೆಗೆಂಪೆಸೆದುದಿಂತಾ ಪಶ್ಚಿಮಾಶಾಂತದೊಳ್ ॥೫॥

ಚಂ॥ ರವಿ ಕರ ತಾಪದಿಂದೆ ಹೃದಯಂ ಮಿಗೆ ಪೊತ್ತಿದ ಧಾತ್ರಿಯಾಸ್ಯದಿಂ।
ದವಿರಳಮಾಗೆ ಮಿಕ್ಕೊಗೆವ ಕರ್ಬೊಗೆ ತಾನೆನೆ ತನ್ಮಹೀ ಗುಹಾ॥
ನಿವಹದಿನುಣ್ಮಿ ಪೊಣ್ಮಿ ಪೊಱಪಾಯ್ದಿರದಾಗಳೆ ನೋಡಿ ನೋಡಿ ಭೂ।
ಭುವನಮನೆಯ್ದೆ ಪರ್ಬಿದುದು ಮರ್ಬು ಮಹಾಂಜನ ಪುಂಜಮೆಂಬಿನಂ ॥೬॥

ಉ॥ ಪಿಂಗದೆ [1]ಬಂದು ಬಂದು ಮಿಗೆ ಪೀರುತುಮಿರ್ಪ ಚಕೋರ ಪಕ್ಷಿ ಜಾ।
ಲಂಗಳಿನೊರ್ಮೆ [2]ತೀರ್ಗುಮಿರದೀ ಶಶಿ ಚಂದ್ರಿಕೆಯೆಂದು ಪದ್ಮಗ॥
ರ್ಭಂ ಗಡ ಮುನ್ನಮಿಂತು ಪಡೆದಂಬರದೊಳ್ ನೆಱೆ ತೀವಿದಚ್ಚವೆ।
ಳ್ದಿಂಗಳ ಬೀಜ ರಾಜಿಯೆನೆ ತಳ್ತೊಗೆದಿರ್ದುವು ಚಾರು ತಾರೆಗಳ್ ॥೭॥

ಕಂ॥ ಜಳಧರ ಸಮಾಜಮುಗ್ರಾ।
ನಿಳ ಹತಿಯಿಂ ಪಾಱಿ ಪೋಗೆಯುಂ ತಜ್ಜಾತಾ॥
ತುಳ ವಿಲಸದಮಳ ಮುಕ್ತಾ।
ವಳಿ ಪತ್ತಿರ್ದಂತೆ ಭಗಣಮೆಸೆವುದು ನಭದೊಳ್ ॥೮॥

ಮ॥ ವಿಳಸತ್ಪೂರ್ವ ಪಯೋಧಿಯೊಳ್ ಪೊಳೆಯುತಿರ್ಪುದ್ಯತ್ಪ್ರವಾಳ ಪ್ರಭಾ।
ವಳಿ ಮೇಗಣ್ಗಡರುತ್ತುಮಿರ್ದಪುದೊ ತೀವ್ರ ಜ್ವಾಲೆವೆತ್ತಂಗಜಾ॥
ನಳ ಬೀಜಂ ಪೊಱಪೊಣ್ಮುತಿರ್ದಪುದೊ ಪೇಟೆಂಬಂದದಿಂದಿಂದು ಮಂ।
ಡಳಮಾರಕ್ತತೆಯಿಂ ಪೊದಟ್ದುದಯಿಸಿತ್ತೈಂದ್ರೀ ನಗೇಂದ್ರಾಗ್ರದೊಳ್ ॥೯॥

ಕಂ॥ ತ್ರಿದಶ ವರದೀ[ರ್ಘಿಕಾ]ನಿಟಿ।
ಲದೆ ಕೇಶಂ ಪುಟ್ಟಿತೆಂಬಿನಂ ಶೋಣತೆವೆ॥
ತ್ತುದು [ಮೂಡಲ]ತನುರಾಗ।
ಪ್ರದ ಲಲಿತ ಸ್ತಂಭಮಾ ಸುಧಾಕರ ಬಿಂಬಂ ॥೧೦॥

ಉ॥ ಮೀಱಿದ ಖೇದಮುಂ ಮುದಮುಮೊರ್ಮೆಯೆ ಕೋಕ ಚಕೋರ ಕೋಟಿಗಂ।
ತೇಱಿದುದ[3]ಸ್ಮಿತ ಸ್ಮಿತ ಮುಖ[ದ್ಯುತಿ]ಯೊರ್ಮೆಯೆ ಪಂಕಜ ಕೈರವೋತ್ಕರ॥

---

1. ಬಂದುಬಂಪ್ಪಲಮಿಗೆ. 2. ತಿಗುರ್. 3. ಸ್ಮಿತಸ್ಮಿತ.

ಕ್ಕೆಱಗಿದುದಾ ವಿಯೋಗಿಗೆ ಪಯೋನಿಧಿಗೊರ್ವೆಯೆ ಕಿರ್ಚು ಪೆರ್ಚೆ ತ।
ಳ್ತಿಱಿದುದದಾಗಳಂತಮರ ದಿಕ್ಕುಧರೇಂದ್ರಮನೇಱಿ ಚಂದ್ರಮಂ ॥೧೧॥

ಚಂ॥ ಇರದೆ ತೆಱಳ್ದು ಬಕ್ಕಬಯಲಂ ಬಿಸುಟಿಲ್ಲಿಯುಮಾಂತು ನಿಲ್ಲದಾ।
ತರುಕುಳ ಕೋಟರಾಂತರದೊಳಿಟ್ಟಣಮಪ್ಪಲರ್ದೊಂಗಲೊಳ್ ಮಹೀ॥
ಧರ ಕುಟ ಕುಂಜದೊಳ್ ಬಹು ಗುಹಾಳಿಯ [1]ಕೋಣೆಯೊಳಿರ್ದ್ದು ಪೊಕ್ಕು ಮೆ।
ಯ್ಗರೆದುದು ತಳ್ತ ಕತ್ತಲೆ [2]ಮರುದ್ದಿಶೆಯೊಳ್ ತಲೆದೋಱೆ ಚಂದ್ರಮಂ ॥೧೨॥

ಉ॥ ನಾಡೆ ಬಯಲ್ಗೆ ಬಿಟ್ಟು ತಮಮಂ ತವೆ ನುಣ್ಣನೆ ನುಂಗಿ ಕೆಟ್ಟು ಬಿ।
ಟ್ಟೋಡಿ [3]ಕುಜಚ್ಛದಂಗಳಿಱಿಬಂ [ಮಿಗೆ] ಪೊಕ್ಕಮಿತ ಶ್ರಮದಲ್ಲಿಯು॥
ಳ್ಳಾಡೆ ತೊಟಲ್ಚಿ ತೂಳ್ದು ಕಡುಪಿಂ ಕೆದಱಿಟ್ಟ ಮಹಾಂಧಕಾರಮಂ।
ಕೂಡೆ ಗುಹಾಳಿಯಂ ಪುಗಿಸುತಿರ್ದುದು ಚಂದ್ರಿಕೆ ಸಾಂದ್ರ ಶೋಭೆಯಿಂ ॥೧೩॥

ಮ॥ ರಸೆಯಿಂ ಮೇಣೆಱೆತಂದುದೋ ಭುಜಗ ರಾಜಾಂಗಾಮಳ ಜ್ಯೋತಿಯೆ।
ಣ್ದೆಸೆಯಿಂ ಮೇಣ್ ಕವಿತಂದುದೋ ದಿಗಿಭ [4]ಸಂಜಾತ ಪ್ರಹಾಸಾಂಶು [ವಾ॥
ಗಸದಿಂ] ಮೇಣೆಱೆತಂದುದೋ ಸುರನದೀ ಫೇನಪ್ರಭಾ ಮಾಲೆಯೆಂ।
ಬೆಸಕಂ ಕೈಮಿಗೆ ಪರ್ಬಿತುರ್ಬಿ ಜಗಮಂ ತತ್ಸಾಂದ್ರ ಚಂದ್ರಾತಪಂ ॥೧೪॥

ಕಂ॥ ನೆನೆಯಿಸುತಿರ್ದುದು ತುಂತು।
ವರ್ಣನಿ ಮುಸುಕಿದ ದುಗ್ಧವಾರ್ಧಿಯಂ ತಾನೆನಸುಂ॥
ತನಿವೆಳ್ದಿಂಗಳ್ ಮುಸುಱಿದ।
ಮಿನುಕಿಂದೊಪ್ಪುವ ನಭೋಂಗಣಂ ಧೃತ ಭಗಣಂ ॥೧೫॥

ತಳತಳಿಸುವ ತನಿವೆಳ್ದಿಂ।
ಗಳ ಬಳಗಮಭಿನ್ನಮಾಗಿ ಪರ್ಬಿದಗುರ್ಬಿಂ॥
ಪೊಳೆವಮೃತಂ ತೀವಿದ ನಿ।
ರ್ಮಳ ಹಿಮಕಿರಣಾಶ್ಮ ಭಾಂಡಮೆನಿಸಿತಜಾಂಡಂ ॥೧೬॥

ಇಂತಗುರ್ಬಿನಿಂ ಭುವನಮಂ ಪರ್ಬಿ ಚಂದ್ರಾತಪಂ ಸಾಂದ್ರ ಶೋಭೆವೆತ್ತ ಸಮಯದೊಳ್—

1. ಕೊಣ್ಪಯೋದಿ. 2. ಮರುದ್ದೆಸೆ. 3. ಕುಜಚ್ಛರಂ. 4. ಖಾನಿತ.

ಕಂ॥ ಮನದನ್ನ[1]ಮಪ್ಪ ಸೇವಕ।
ವನಿತಾವಳಿವೆರಸು ಮಿತ್ರ ಮೇಧಾವಿಳನಾ॥
ಜನನಾಥ ಕುಸುಮಚಾಪನ।
ವಿನೂತ ಪರ್ಯಂಕ ಪಾರ್ಶ್ವದೊಳ್ ಕುಳ್ಳಿರೆಯುಂ ॥೧೭॥

ಮ॥ ಕರಣಾನೀಕದೊಳೆಟ್ಟಿ ಜಚ್ಚಟಿಱಿದು ಮೆಯ್ಯೊಳ್ ಕೂಡೆ ಮೆಯ್ವೆರ್ಚಿ ದು।
ಸ್ತರ ಕಂತುಜ್ವಲನ ಪ್ರತಾಪವೊಗೆವಾ ಸುಯ್ವಿಂಕೆಯಿಂ ಕೋಮಳಾ।
ಧರ ಬಿಂಬಂ ಪುಱುಕೆಟ್ಟು ಪಕ್ಷ್ಮಪುಟಮುಂ ಬೆಚ್ಚಂತೆ ಕಣ್ಮುಚ್ಚೆ ತಾ।
ನಿರುತಿರ್ದಂ ನಿಜ ಶಯ್ಯೆಯೊಳ್ ವಿರಹದಿಂ ಭೂನಾಥ ಮೀನಧ್ವಜಂ ॥೧೮॥

ಕಂ॥ ಏನೆಂದಱಿಯದೆ ವಿರಹೋ।
ಗ್ರಾನಲನರ್ಚಿಷ್ಕಲಾಪದೊಳ್ ಮುೞುಗಿ ಧರಿ॥
ತ್ರೀನಾಥ ಪುಷ್ಪಚಾಪಂ॥
ತಾನಿಂತಿರುತಿರ್ದನೆಸೆವ ಶಯ್ಯಾತಳದೊಳ್ ॥೧೯॥

ಚಂ॥ ಅತುಳ ತುಷಾರ ಜನ್ಮಗೃಹ[2]ಮಿಂತಿದು ತಾನೆನಿಪಿಂದುಕಾಂತ ನಿ।
ರ್ಮಿತದೆಸೆದಿರ್ಪ ಸೆಜ್ಜೆವನೆ ತಣ್ಪಳಿದುಂ ನೃಪಕಂತು ಕಾಯದು॥
ದ್ಧತ ವಿರಹಾನಲ ಪ್ರಬಲ ತಾಪ ಕಳಾಪದೆ ಕಾಯ್ದು ಸಂತತಂ।
ಹುತವಹನಿರ್ಪ ಸೆಜ್ಜೆವನೆಯಂತೆವೊಲಿರ್ದು[3]ದದುಂ ಮಹಾದ್ಭುತಂ ॥೨೦॥

ಮ॥ ಎಲೆತಾ[4]ನೆಂತಿರುತಿರ್ದನೋ ನೃಪಮನೋಜಂ ಪರ್ಪಿ ಸರ್ವಾಂಗಮಂ।
ಸಲೆಕೊಳ್ವೀ ವಿರಹ ಜ್ವರ[5]ಜ್ವಲನ ತಾಪೋದ್ರೇಕದಿಂದೀ ತನು॥
ಚ್ಚಲದುಚ್ಚಂಡದ ಕಾಯ್ಪಿನೀ ನೆಲದೊಳಿರ್ಪೀಯೆನ್ನ ಮೆಯ್ತಾಪಮಂ।
ತಳೆದತ್ತೆಂದೆನುತುಂ ಸಮಂತು ಬೆಱಗಾದಂ ನೋಡಿ ಮೇಧಾವಿಳಂ ॥೨೧॥

ಕಂ॥ ಬನದೊಳಿರಲೀಯದಾಂ ಕೆ।
ಮ್ಮನೆ ತಂದೆಂ ನೃಪ ವರಂಗಿದಲ್ಲಿಂ ಮಿಗಿಲಾ॥
ಯ್ತು ನಿಜಾಂಗ ವಿರಹ ಶಿಖಿಯೆಂ।
ದೆನುತುಂ ಮೇಧಾವಿಳಂ ಕರಂ ಚಿಂತಿಸಿದಂ ॥೨೨॥

1. ರಪ್ಪ. 2. ಮೆಂತಿದು. 3. ದದಿಂ. 4. ಸಂತಿರು. 5. ಜ್ವಲದ.

ಚಂ॥ ಪವಣಿಸುವಂತುಟಲ್ತು ನೃಪ[1]ಕಂತುವಿನೀ ವಿರಹಾತುಳಾಗ್ನಿ ತಾ।
ಪವನಿದನೆಂತು ನಂದಿಸುವೆನೇನನೊಡರ್ಚುವೆನಾವುದಂ ತೊಡ॥
ರ್ಚುವೆ[2]ನೊಸೆದಂತುಟಂ ನೆಗಱ್ವೆನಾಂ ಶಿಶಿರೌಘಮನೆಂದೆನುತ್ತೆ ಮಿ।
ತ್ರ ವರನದರ್ಕೆ ಚಿಂತಿಸುತೆ ವೀಕ್ಷಿಸಿದಂ ವನಿತಾ ಜನಾಸ್ಯಮಂ ॥೨೩॥

ಮ॥ ಮೊಗಮಂ ನೋಡಿದ ಮಂತ್ರಿಪುತ್ರನ ಮನಂ ಪೂಣ್ದಂತುಟಂ ಮಾಡುವು।
ಜ್ಜುಗದಿಂ ಬೇಗದೊಳೆಯ್ದಿ ತಂದುದು ತದೀಯ ಸ್ತ್ರೀಜನಂ ಚಂದನಾಂ॥
ಬುಗಳಂ ಚಂದನ ಗಂಧಮಂ ಕುಸುಮ ಭೂಷಾವ್ರಾತಮಂ ಪುಷ್ಪ ರಾ।
ಜಿಗಳಿಂದೊಪ್ಪುವ ವೀಜನ ವ್ರಜಮನಂಭೋ ಯಂತ್ರ ಸಂಧಾನಮಂ ॥೨೪॥

ಕಂ॥ ಏನಂ ತಡಮಂ ಮಾಡದೆ।
ತಾನುಂ ತತ್ಪರಿಕರಾಂಗನಾಳಿಯುಮೋರಂ॥
ತಾ ನೃಪಕಂತುಗೆ ಶಿಶಿರ ವಿ।
ಧಾನ ಕ್ರಿಯೆಗಳನೊಡರ್ಚಿದಂ ಸಚಿವ ಸುತಂ ॥೨೫॥

ಮ॥ ತನುವಂ ಸೂಸಿದ ಚಂದನಾ[3]ಭಿಷವಮುಂ ತಾಂ ಬೇಗದೊಳ್ ಚುಯ್ಯೆನು।
ತ್ತೆನಸುಂ ಭೋಂಕನೆ ಕಾಯ್ದು ಕೂಡೆ ಕುಳಿಬೇಱುತ್ತಿರ್ದುದೋರಂತೆ ಮೇ॥
ಲೆ ನಿತಾಂತಂ ಬಿಡುವಾಲಿ ನೀರ್ವನಿಯ ತಂದಲ್ ಗಾತ್ರಮಂ ತಾಗಿ ತೊ।
ಟ್ಟನೆ ಮಱ್ಗಿತ್ತು ಮಹೀಶ ಕಂತುವಿನ ದೇಹೋದ್ದಾಹಮಿನ್ನೆಂತುಟೋ ॥೨೬॥

ಕಂ॥ ತುಡಿಸಿದ ಬೇಗದೊಳಾ ಪೂ।
ದೊಡವನಿತುಂ ಕೊಱಗಿ ನಾಡೆಯುಂ ಶಿಖಿ ಮುಖಮಂ॥
ತೊಡರ್ದಂತಾಯ್ತೆನೆ . . . . ।
. . . ಪೊಪವಣಿಸದಂತುಟೆ . . . ॥೨೭॥

ಚಂ॥ . . . . . . . . . . . . . . . ।
. . . . . . . . . . . . . . . ॥
. . . . . . . . . . . . . . . ।
. . . . . ಭೂಪ ಕಂತುವಿನ ಕಂತು ದವಾನಲ ತಾಪಮೆಂತುಟೋ ॥೨೮॥

---

1. ಕಂತುವನೀ. 2. ನೆನದಂತುಟಂ. 3. ವಖಿಳ.

ಕಂ॥ ಅಡಿಗಡಿಗೆ ಮೇಲೆ ಮೇಲೆಡೆ ।
[ವಿಡ]ದೆನಸುಂ ಸೂಸುವಾಲಿ ನೀರ್ವನಿಗಳ್ ತ ॥
ಳ್ತಿಡಿದುಗುತರಲ್ಕೆ ನಸು ನಗೆ ।
ಪೊಡರಿಂ ಪೊಜಮಡುವುದೇನಳುಂಬಮೊ ತಾಪಂ ॥೨೯॥

ಚಂ॥ ಬಿಡುವ ತುಷಾರ ವಾಃಕಣ ಗಣಂಗಳ [1]ಸೇಚನಕಂ ಸಮಂತು ಸಂ ।
ಗಡದೊಳೆ ಬೀಸುತಿರ್ಪಲರ ವೀಜನ ರಾಜಿಯು ತಳ್ತ ತಣ್ಣೆಲರ್ ।
ಮಡದಿಯರುಜ್ಜ್ವಲಾಂಗ ತತಿಯೊಳ್ ತನುಗೊಟ್ಟುಮದತ್ಯುದಗ್ರಮಾ ।
ಗೊಡರಿಸಿತಲ್ಲದಾ ನೃಪನ ತಾಪಮನಾರಿಸಲಾಜಿದೇನುಮಂ ॥೩೦॥

ಕಂ॥ ಒದವಿದ ಶಿಶಿರ ಕ್ರಿಯೆಯಂ ।
ಪದೆಪಿಂ ಮಾಟ್ಪಬಲೆಯರ್ಕ[ಳುಪಚಾರದೆ] [2]ಕೂ ॥
ಡಿದ ನೃಪನ ವಿರಹ ಶಿಖಿ ಕೋ ।
ಡದೆನುತ್ತುಂ ಸಚಿವ ಸೂನು ವಿಸ್ಮಿತನಾದಂ ॥೩೧॥

ಇಂತು ನುಡಿದಾಗಳ್—

ಕಂ॥ ಘಳಿಲನೆ ಮತ್ತಂ ಮೇಧಾ ।
ವಿಳನಬಲಾ ತತಿ ಸಮೇತನಾಗಳೆ ಶಿಶಿರಾ ॥
ವಳಿ ನೂರ್ಮಡಿ ಮಿಗಿಲೆನೆ ಸಂ ।
ಗಳಿಸಿದನೋರಂತೆ ನೃಪ ಮನೋಜನ ಮೆಯ್ಯೊಳ್ ॥೩೨॥

ಉ॥ ನಿಟ್ಟಿಪ ಕಣ್ಗೆ [3]ಕಂಪಮನೊಡರ್ಚುವ ಚಂದನ ಚಾರು ಪಂಕದಿಂ ।
ಸುಟ್ಟಿಪ ನುಣ್ಪೆರಲ್ಗೆ ನಿಮಿರ್ದೈಕಿಲನೀವ ತುಷಾರ ವಾರಿಯಿಂ ।
ಮುಟ್ಟಿದ ಮೆಯ್ಯುಮಂ ನಡುಗಿಪಾ ಕುಸುಮ ವ್ಯಜನೌಘ ವಾಯುವಿಂ ।
ನೆಟ್ಟಗೆ ಮಾಡುತೊರ್ಪೆಯೆ ನೃಪಂಗೆನಸುಂ ಶಿಶಿರೋಪಚಾರಮಂ ॥೩೩॥

ಚಂ॥ ಪದೆಪಿನೊಳಿಂತು ತಾನುಮಿರದಾ ನರನಾಥ ಮನೋಭವಂಗೆ ಪೆ ।
ರ್ಚಿದ ಶಿಶಿರೋಪಚಾರಮನೊಡರ್ಚಿದುದೆಂಬಿನಮಾಗಳಂತೆ ತ ॥
ತ್ಸದತಿಯುರಾಯತಾಂಬಕ ಸಿತದ್ಯುತಿ ಚಂದ್ರಿಕೆಯಿಂದೆ ಚಂದ್ರಕಾಂ ।
ತದ ಸೊಗಯಿಪ್ಪ ಸೆಜ್ಜೆವನೆ ಮೇಲುಗುತಿರ್ದುದು ಬಿಂದು ಜಾಲಮಂ ॥೩೪॥

1. ಸೇರ್ವಡಹಂ. 2. ಕೋರಿದ. 3. ಕಾಪನು.

ಚಂ॥ ಎನಿತೆನಿತುಂ ಸಮಗ್ರ ಶಿಶಿರ ಕ್ರಿಯೆಯಂ ಪಡೆಪಿಂದಮೆಯ್ದೆ ಮಾ ।
ಣ್ಪನಿತನಿತುಂ ಮಹೀಶ ಮಕರಧ್ವಜನಾ ವಿರಹಾಗ್ನಿ ನಾಡೆ ಯೌ ॥
ವನದ ಪೊಡರ್ಪನೆಯ್ದಿದುದು ತತ್ತುಹಿನ ಪ್ರಕರ ಕ್ರಿಯಾ ಗುಣಂ ।
ತನಗೆ ಸಮುತ್ಥ ಚೇತನ ಕೃತೋಚಿತ ಪಿಂಡದ ಕಂಡಮೆಂಬಿನಂ ॥೩೫॥

ಸಲೆ ನಿಮಿರ್ದಂಗ ತಾಪ ಹರಮೆಂದುಪಯೋಗಿಪ ಶೀತಳ ಕ್ರಿಯಾ ।
ವಲಿಗೆ ಮಹೀಶ ಮನ್ಮಥನ ಹೃದ್ವಿರಹಾನಲಗ್ರಮಾಗೆ ಕಂ ॥
ಡಲೆ ವಿಪರೀತಮಿಾ ತೆಱನೆನುತ್ತುಮೆ ತಾಂ ಬಗೆಗೆಟ್ಟು ಚಿಂತೆಯಿಂ ।
ಚಲ ಮತಿಯಾಗಿ ಮಂತ್ರಿ ತನಯಂ ಮನಮಿಕ್ಕಿರೆ ತತ್ಸಮಿಾಪದೊಳ್ ॥೩೬॥

ಆ ಸಮಯದೊಳ್—

ಕಂ॥ ನರನಾಥನ ಸಭೆಯಿಂ ಬಂ ।
ದಿರದೀಕ್ಷಿಸಿ ರತ್ನಮಾಲೆಯಱಿದಳ್ ಭೂಪ ॥
ಸ್ಮರನಿವನಂ ಸುದತಿಯರಾ ।
ಚರಿಸುವುದಂ ಸಚಿವ ಸುತನ ಚಿಂತೆಯ ತೆಱನಂ ॥೩೭॥

ಲಲನಾವಳಿ ನೃಪಕಂತುಗೆ ।
ಪಲವಂದದೆ ಮಾಳ್ಪ ಶೀತಳ ಕ್ರಿಯೆಯನದಂ ॥
ನಿಲಿಸಿ ಮೊದಲೊಳ್ ಬಱಿಕ್ಕಂ ।
ಕೆಲಸಾರ್ದಾ ಸಚಿವ ನಂದನಂಗಿಂತೆಂದಳ್ ॥೩೮॥

ಮೇಧಾವಿಳನೆನಿಸಿರ್ದುಂ ।
ಮೇಧಾವಿಳ ಮತಿಗಿ[1]ದೆಲ್ಲ ತಕ್ಕುದೆ ಪೆಱರಂ ॥
ಬೋಧಿಪ ನೀಂ ಪೆಱರಿಂದಂ ।
ಬೋಧಿಸಿಕೊಳ್ವನಿತನುಚಿತಮಲ್ಲವೆ ನಿನ್ನೊಳ್ ॥೩೯॥

ಮ॥ ಎನೆ ಕೇಳ್ದಾಗಳೆ ರತ್ನಮಾಲೆಯ ಮುಖಾಂಭೋಜಾತಮಂ ನೋಡಿ ತೊ ।
ಟ್ಟನೆ ಜೀವಂಬಡೆದಂತೆ ಹರ್ಷಿತಮನಂ ತಾನಾಗೆ ನೀನೇಕೆ ಪೇ ॥
ೞನಿತಾನುಂ ತಡೆದಿರ್ದೆ ಮಾಳೆ ಶಿಶಿರಕ್ಕುರ್ಬೇಟ್ವ ಭೂಭೃನ್ಮನೋ ।
ಜನ ತಾಪಕ್ಕಗಿದಿರ್ದೆನೆಂದುಸಿರ್ದನಿಂತಾ ಮಂತ್ರಿ ಮೇಧಾವಿಳಂ ॥೪೦॥

1. ದಲ್ತೆ.

ಉ॥ ಈ ನೃಪ ಪುಷ್ಪ ಚಾಪನ ಮನೋಭವ ತಾಪಮನಾಱಿಸಲ್ಕೆ ಪೂ ।
ಣ್ದಾನಿನಿತಾನುಮಪ್ಪ ಶಿಶಿರ ಕ್ರಿಯೆಯಂ ನೆಗಳುತ್ತುಮಿರ್ದೊಡಂ ॥
ತಾನೆನಸುಂ ಪ್ರಚಂಡತರ[1]ಮಪ್ಪುದಿದರ್ಕೆಲೆ ರತ್ನಮಾಲೆ ಪೇ ।
ೞ್ದೇನನೊಡರ್ಚಿ ನಂದಿಸುವೆನೆಂದೆನೆ ತಾನುಸಿರ್ದಳ್ ನಯೋಕ್ತಿಯಿಂ ॥೪೧॥

ಮ॥ ಜನಿತಾನಂಗಜ ಪಾವಕಂಗೆ ತುಹಿನಾಂಭಸ್ಸ್ಪರ್ಶಿಯಂ ಮೇಲೆನಿ ।
ಪ್ಪೆನಸುಂ ಸೇಚಿಸಿ [2]ಚಂದನೇಂಧನಮನಾದಂ ಸಾರ್ಜಿತಂ ಪುಷ್ಪವೀ ॥
ಜನಮಂ ಮಾಣದೆ ಬೀಸುತುಂ ಕೆಲದೊೞಿರ್ದೇಕಾಜದೇಕಾಜದೆಂ ।
ದೆನೆ ತಾನಾಱುವುದೇಂ ಪೊದಳ್ದುರಿವುದಂ ಮಾಣ್ದಂತು ಮೇಧಾವಿಳಾ ॥೪೨॥

ಚಂ॥ ನವ ಸಹಕಾರದಲ್ಲಿ ನಡೆ ನೋಡಿದ ತತ್ಪಟ ಚಿತ್ರರೂಪದೊ ।
ಪ್ಪುವ ಕುಸುಮಾವಳೀ ಸತಿಯ ಸಂಗ [3]ಸುಖಾಮೃತ ಪೂರದಿಂದೆ ನಂ ॥
ದುವುದಿನಿತಲ್ಲದೀ ನೃಪ ಮನೋಭವನಂಗದ ಮನ್ಮಥಾಗ್ನಿ ನಂ ॥
ದುವುದೆ ಲತಾಂತ ವೀಜನದ ಮಾರುತನಿಂ ಬಹು ಚಂದನೇಧ್ಮದಿಂ ॥೪೩॥

ಮ॥ ಪೆಱತೇನಾ ಕುಸುಮಾವಳೀ ಸತಿಯೆ ತಾಂ ಪ್ರತ್ಯಕ್ಷಮಾಗುತ್ತಿರಲ್ ।
ನೆಱೆ[3] ಮಾಣ್ಗುಂ ದಿಟಮಂತದಲ್ಲದೊಡೆ ನಿನ್ನೀ ವಾಕ್ಪಯಃಪೂರದಿಂ ॥
ಪೆಱಿಸಾರ್ಗುಂ ನರನಾಥ ಕಂತುವಿನ ಚಿತ್ತಾನಂಗ ತೀವ್ರಾಗ್ನಿಯೆಂ ।
ದಱಿಪಲ್ಕಾಗಳೆ ರತ್ನಮಾಲೆ ನುಡಿದಂ ಕೇಳ್ದಂತು ಮೇಧಾವಿಳಂ ॥೪೪॥

ಕಂ॥ ಸಲೆ ಪತ್ತೆ ಸಾರ್ದು ಮಂಚದ ।
ಕೆಲದೊಳ್ ಕುಳ್ಳಿರ್ದು ಸಖ ವರಂ ಕರ ತಲದಿಂ ॥
ಲಲಿತಾಂಗಮನೆಳವಿಸಿ ಕೋ ।
ಮಲ ಹಸ್ತಮನೆತ್ತಿ [4]ಮೆಲ್ಲನಂದಿಂತೆಂದಂ ॥೪೫॥

ಮ॥ ಜಡರಂತೇಕೆಲೆ ದೇವ ನೀವಿನಿತು ದುರ್ವಾರೋಗ್ರ ಕಾಮಾಗ್ನಿಯೊಳ್ ।
ತೊಡರಲ್ ತಕ್ಕುದೆ ನಿಮ್ಮ ಚಿತ್ತವೆಳಸಿರ್ಪಾ ಚಿತ್ರದಾ ರೂಪಿನೊಳ್ ॥
ಪಡಿಯಪ್ಪಾ ಕುಸುಮಾವಳೀ ಯುವತಿಯಂ ನೀಂ ನೋಡಿ ತಂದೀವುದೆಂ ।
ದೊಡಮಾಂ ತಾರೆನೆ ಮೇಣಸಾಧ್ಯಮೆ ಭವನ್ಮಾಹಾತ್ಮ್ಯದಿಂ ಭೂಪತೀ ॥೪೬॥

1. ಪುಷ್ಪ. 2. ಚಂದನಿಂದ. 3. ಸಭಾ. 4. ಮೆಲ್ಲನೆ ನೋಡುತ್ತಿಂತೆಂದಂ.

ಕಂ॥ ದೇವ ಭವದೀಯ ಸಮಯದಿ ।
ನಾವುದು[1]ಮೆನಗರಿದದಿಲ್ಲ ಕುಸುಮಾವಳಿಯೆಂ ॥
ಬಾ ವಧುವನಾವ ತೆಱದಿಂ ।
ದಾ ವೇಗದೆ ನೋಡಿ ತಂದಪೆಂ ತ್ರೈಜಗದೊಳ್ ॥೪೭॥

ಮ॥ ಉಸಿರಲ್ ನಾಣ್ಚಿದಿರೇಕೆ ದೇವ ಪೆಱತೇನೀಯಂದಮಂ ಕಂಡು ಸೈ ।
ರಿಸಿ ಕೊಂಡಿರ್ಪನೆ ಪೋಪೆನಾವ ತೆಱದಿಂದೆಂತಾದೊಡಂ ತಂದಪೆಂ ॥
ಪೆಸರ್ವೆತ್ತೀ ಕುಸುಮಾವಳೀ ವಧುವನಾಂ ಬರ್ಪನ್ನೆಗಂ ರತ್ನಮಾ ।
ಲೆ ಸಮಂತಿರ್ಪುದೆನುತ್ತುಮೇೞ್ಚೆ ಪದೆಪಿಂದಾ ಮಂತ್ರಿ ಮೇಧಾವಿಳಂ ॥೪೮॥

ಆ ಸಮಯದೊಳ್—

ಮ॥ ಶ್ರವಣೋಪಾಂತಮನೆಯ್ದಿದಾ ವಚನಮಾತ್ರಕ್ಕೆಟ್ಟೞಿಂ ತಾಳ್ದಿ ಭೂ ।
ಪಮನೋಜಂ ಮಱೆದಾ[2]ನಿರಲ್ಕೆ ಭಯದಿಂ ತಾನೀಕ್ಷಣಂ [3]ಪೊಕ್ಕನೆ ॥
ನ್ನ ಮನಃಪ್ರೇಮ ಸಖಂ ದಲೆಂದಱೆದು ಸಂತಪ್ತಾಶ್ರು ಸಮ್ಮಿಶ್ರ ನೇ ।
ತ್ರಮನಾಗಳ್ ತೆಱೆದಿಂತು ತತ್ಸಖನ ವಕ್ತ್ರಾಂಭೋಜಮಂ ನೋಡಿದಂ ॥೪೯॥

ಕಂ॥ ಮುಸುಕಿದ ಮಂಜಿನ ಮೞೆಯೊಳ್ ।
ನಸುದೋಱುವ ಶೋಣ ಕಮಲ [ಯುಗ]ದಂತೆ ಪೊದ ॥
ೞ್ದಿಸೆದುವು ನೃಪಕುಸುಮಾಸ್ತ್ರನ ।
ಕಿಸುಗಣ್ಗಳ್ ವಿಹಿತ ಬಾಷ್ಪ ಜಳ ವಿಲುಳಿತದಿಂ ॥೫೦॥

ಅಱಿಪಿದುದನೆ ಪೇೞಲ್ಕ ।
ಣ್ದೆಱೆದೀಕ್ಷಿಸಿದಂ ನೃಪಾಲ ಪುಷ್ಪಾಯುಧನಾ ॥
ನಱಿಪಿಯೆ ಪೊದೆಪೆನೆಂಬೊಂ ।
ದೆಱಕದೆ ಮುಗುೞ್ದಲ್ಲಿ ಸಖ ವರಂ ಕುಳ್ಳಿರ್ದಂ ॥೫೧॥

ಕಡುಗಾಯ್ಪಿಂದಿರಲಾಱದೆ ।
ಕಡೆಗಣ್ಣಿಂ ನೋಡುವಂತೆ ಸುರಿದಶ್ರು[4]ಗಳಂ ॥
ಕಡುವೆರಲಿಂ ತಾನೆನಸುಂ ।
ಮಿಡಿಯುತ್ತುಂ ಭೂಪ ಕುಸುಮಶರನಿಂತೆಂದಂ ॥೫೨॥

---

1. ಮನಗಿರಿದುದಿಲ್ಲ. 2. ಗಿರಲ್ಕೆ. 3. ಪೊಕ್ಕುಮೆ. 4. ಜಲಂ.

ಮ॥ ಏನಗೀಗಳ್ ಪಟಚಿತ್ರ ಕಾಮಿನಿಯ ಚಿಂತಾಭ್ರಾಂತಿ ಕೈಮಿಕ್ಕುದೆಂ।
ದೆನುತೋರಂತಿದು ಕಾರ್ಯಮೆಂಬ ಬಗೆಯಿಂ ಪೂಣ್ದೇೞಲೇತರ್ಕೆ ಪೇ ॥
ೞ್ನಿತಲ್ತಾಂ ಪಿರಿದುಂ ತದೀಯ ವನ ಸಂಚಾರ ಶ್ರಮುಕ್ಕಳ್ಕಿ ಸಃ ।
ಮ್ಮನೆ ಕಣ್ಮುಚ್ಚಿರುತಿರ್ದನೇಕೆ ಸುಗಿವ್ಯೈ ನೀನಿಂತು ಮೇಧಾವಿಳಾ ॥೫೩॥

ತನು ಬೇಱಲ್ಲದೆ ಚಿತ್ತವೊಂದೆನಿಪ ಚೇತೋಮಿತ್ರ ಮೇಧಾವಿಳಂ ।
ಗೆ ನಿಜ ಸ್ವಾಂತದೊಳೊಂದಿದೊಂದು ವಿರಹಾಗ್ರಾವಸ್ಥೆಯಂ ಪೇೞದೊ ॥
ಯ್ಯನೆ ಮತ್ತೊಂದನೆ ಬೇಱೆ ತೋಱೆ ನುಡಿದಂ ತಾನಂತಿದೇನುವ್ವ ಧೈ ।
ರ್ಯ[1]ನಿವಿಷ್ಟಾತ್ಮನೊಕಾಮುಮಾವರಿಸಿಯುಂಭೂಪಾಲಪುಷ್ಪಾಯುಧಂ ॥೫೪॥

ಕಂ॥ ಮನಮಂ ಬರಿಕೆಯ್ದುವನಿಪ ।
ಮನಸಿಜನಿರದೆಟ್ಟಿ ಶಯ್ಯೆಯೊಳ್ ತಾಂ ಕುಳ್ಳಿ ॥
ರ್ಪಿನಮೆನಸುಂ ತನುವಿರ್ದುದು ।
ಮನೋಭವಾನಳ ನಿಗುಪ್ತ ಗೇಹದ ತೆಱದಿಂ ॥೫೫॥

ಕಂ॥ ಮನದೊಳಗಿರ್ಪಿನಿಯಳ್ಗಂ ॥
ಮನದನ್ನನೆನಿಪ್ಪ ಮಂತ್ರಿ ಮಂತ್ರಿಸುತಂಗಂ ॥
ಮನಮಂ ಸರಿಗೊಟ್ಟು ನೃಪಂ ।
ಮನಿಸಿಜನಂತಿರ್ದನೇಂ ಮಹಾಧಿಕ ಮನನೋ ॥೫೬॥

ಮ॥ ಪುಸಿಯಲ್ತೀ ನೃಪಕಂತುಗಾ ವನ ವಿಹಾರ ಶ್ರಾಂತಿಯಿಂದಾಯ್ತುಗು ।
ರ್ವಿಸುವೊಂದುಷ್ಣತೆ ಮೆಯ್ಗಿದಲ್ಲದೆ ಪಟಸ್ತ್ರೀ ದರ್ಶನ ಭ್ರಾಂತಿಯಿಂ ॥
ದಸಮಾಸ್ತ್ರ ಜ್ವಲನಂ ಪೊದಱ್ದೆನೆ ಮತ್ತಂದಂಗನಾನೀಕವಿಾ ।
ಕ್ಷಿಸುತಿರ್ಪನ್ನೆಗಮೊಪ್ಪುವುಜ್ಜ್ವಲತೆವೆತ್ತಿರ್ದತ್ತು ತದ್ಗಾತ್ರದೊಳ್ ॥೫೭॥

ಪರಮಸ್ನೇಹ ರಸಂ ರುಚಿಚ್ಛಲದಿನಾದಂ ನೇತ್ರದಿಂ ತಾಂ ಕಡ ।
ಲ್ವರಿಯುತ್ತಿರ್ದಪುದೆಂಬವೋಲ್ [2]ಪದೆದು ನೋಡುತ್ತುಂ ಮನಃಪ್ರೇಮಮು ।
ಕ್ಷರರೂಪಂ ಬಡೆದಂತೆ [3]ತೋರ್ಪ ಮಧುರೋಕ್ತಿ ವ್ರಾತದಿಂ ಭೂವರ ।
ಸ್ಮರನಾಗಳ್ ಪಡೆಯುತ್ತುಮಿರ್ದನೆನಸುಂ ಮಿತ್ರಂಗತಿ ಪ್ರೀತಿಯಂ ॥೫೮॥

---

1. ವಿನಿಷಾತ್ಮನೋ. 2. ಪಡೆದು. 3. ತಿರೊಪ್ಪ.

ಕಂ॥ ಕಡು ನಲವಿಂ ನೋಡುತ್ತುಂ ।
ನುಡಿಸುತ್ತುಂ ನೃಪಮನೋಭವಂ ನಿಜಮಿತ್ರಂ ॥
ಗೆಡೆಯುಡುಗದ ಮುದಮಂ ಮಿಗೆ ।
ಪಡೆಯುತ್ತುಂ ಪ್ರಿಯದೊಳಿರ್ದನಿರ್ದಾ ಪದದೊಳ್ ॥೫೯॥

ವಿರಹಿಗಳನಡಸಿ ನೋಡಲ್ ।
ಪರಿಯಿಸಿದ ಮನೋಜನೆಂಬ ಕೀನಾಶನ ಭಾ ॥
ಸುರ ರಜತದಂಡಮೆನೆ ಬಿ ।
ತ್ತರಿಸಿದುದು ಗವಾಕ್ಷ ಮುಖದೆ ತೊಳಗುವ ಜೊನ್ನಂ ॥೬೦॥

[1]ಅಸಿದೆನೆ ಗವಾಕ್ಷದಿಂದಿಳಿ ।
ದೆಸೆದೆನಸುಂ ತೊರ್ಪ ಜೊನ್ನದತ್ತಲ್ ದತ್ತಾ ॥
ಕ್ಷಿ ಸರೋಜನಾಗಿ ತಾನೀ ।
ಕ್ಷಿಸಿದಂ ನರನಾಥ ಕಂತುವಂತಾ ಪದದೊಳ್ ॥೬೧॥

ಅದನಱಿದು—

ಮ॥ ಇದನೇವೇೞ್ವೆಸಿಳೇಶ ಮನ್ಮಥ ಭವತ್ಕೀರ್ತಿ ಪ್ರಭಾ ಪೂರದಂ ।
ದದಿನಾಕೀರ್ಣತೆವೆತ್ತು ಲೋಕಮನಗುರ್ವಿಂ ಪರ್ವಿ ಸಾಂದ್ರತ್ವವಾ
ದುದು ಚಂದ್ರಾತಪವೀಗಳಂತಿದಱ ಚೆಲ್ವಂ ನಾಡೆ ನೋಡಲ್ಕೆವೇ ।
ಳ್ಪುದೆನುತ್ತುಂ ನುಡಿದಂ ನಯೋಕ್ತಿ ಚತುರಂ ತನ್ಮಂತ್ರಿ ಮೇಧಾವಿಳಂ ॥೬೨॥

ಕಂ॥ ತನ್ನ ಮನಂ ಬಯಸಿದ ತೆಱ ।
ದಿನ್ನುಡಿದಾತ್ಮೀಯ ಸಖನ ವಚನಮನಾಗಳ್ ॥
ತಾನ್ನೆಗಳ್ವಂತಿರೆ ಪೊಱಮ ।
ಟ್ಟನ್ನಿಜ ಮಣಿ ನಿಳಯದಿಂ ನರೇಂದ್ರ [2]ಮನೋಜಂ ॥೬೩॥

ಮ॥ ಹಿಮಬೀಜ ವ್ರಜಮಿಂತಿದೆಂಬ ತೆಱದಾ ತಚ್ಚಂದ್ರಿಕಾ ನವ್ಯ ಸಂ ।
ಗಮದಿಂ ಸಂಭವಿಸಿರ್ಪ ಸೀರ್ಪನಿಗಳಂ ತಳ್ತಲ್ಲಿ ವಿಸ್ತಾರವು ॥
ಪ್ಪಮಳೇಂದೂಪಲದೊಂದು ಪಾಸಱೆ ಕರಂ ಶುಭ್ರದ್ಯುತಿ ವ್ರಾತದಿಂ ।
ದಮೆ ವಿಭ್ರಾಜಿಸುತಿರ್ದುದಾ ನೃಪ ನಿವಾಸ ಪ್ರಾಂಗಣೋಪಾಂತದೊಳ್ ॥೬೪॥

1. ಅಸಿದನೆ. 2. ಮನುಜಂ.

ಕಂ॥ ಆ ಸೊಗಯಿಪ ಶಶಿಕಾಂತದ ।
ಪಾಸಱೆ[3]ಯೊಳ್ ಸಖ[1]ಸಮನ್ವಿತಂ ತಳ್ಪವನಿಂ ॥
ತೋಸರಿಸಿ ಚರಣದಿಂದೆ ನೃ ।
ಪಾಸಮಶರನಲ್ಲಿ ಬಂದು ತಾಂ ಕುಳ್ಳಿರ್ದಂ ॥೬೫॥

ಇಂತೆನಸುಂ ತೊಳಗುವ ಶಶಿ ।
ಕಾಂತದ ಪಾಸಱೆ[3]ಯ ಪಾರ್ಶ್ವದೊಳ್ ಸಚಿವ ಸುತಂ ॥
ಕಾಂತಾಳಿ ಯುತಂ ಕುಳ್ಳಿ ।
ರ್ದಂ ತನು ಧಾವಳ್ಯ[2]ಮಾನುತಿರೆ ತತ್ಪ್ರಭೆಯಿಂ ॥೬೬॥

ಆ ಸಮಯದೊಳ್—

ಮ॥ ಗಿರಿ ತಾರಾ ಗಿರಿಯರ್ಣ್ಣವಂ ನೆಱೆ[3] ಲಸದ್ದುಗ್ಧಾರ್ಣವಂ ವಿಶ್ರುತೋ ।
ರ್ವರೆ ಶುದ್ಧ ಸ್ಫಟಿಕೋಪಳೋರ್ವರೆ ವಿಯಚ್ಚಕ್ರಂ ಸುಧಾ ಚಕ್ರಮೆಂ ॥
ಬುರು [3]ಶೋಭಾ ಯುತಮಾಗೆ ಪರ್ಬಿ ಪಿರಿದುಂ ಚೆಲ್ವಾದ ಚಂದ್ರಾತಪೋ ।
ತ್ಕರಮಂ ಭೂವರ ಕಂತು ವಿಸ್ಮಯದೆ ನೋಡುತ್ತಿರ್ದನೋರಂದದಿಂ ॥೬೭॥

ಚಂ॥ ಧರಿಯಿಸಿದೆಂ ದಿಟಂ ಹರಿ ವಿರಿಂಚಿ ಸುರಾಸುರ [4]ಸಂಕುಳಕ್ಕಗೋ ।
ಚರನೆನಿಪಿಂದುಶೇಖರನನೆಂದೆನಸುಂ ನೆಲೆವೆರ್ಚುತಿರ್ದ ಭಾ ॥
ಸುರ ರಜತಾಚಲ ಪ್ರಭೆಯೊ ಪೇೞ್[3]ನೆ ಲೋಕಮನುರ್ಬಿಪರ್ಬಿ ಬಿ ।
ತ್ತರಿಸಿದ ಸಾಂದ್ರ ಚಂದ್ರಿಕೆಯನೀಕ್ಷಿಸುತಿರ್ದನಿಳೇಶ ಮನ್ಮಥಂ ॥೬೮॥

ಕಂ॥ ಎಂತೆಂತು ನೋಡುತಿರೆ ತಾ ।
ನಂತಂತು ಮನೋಜ ಶಿಖಿಯನವನಿಪ ಕಂತು ॥
ಸ್ವಾಂತದೊಳೆ ಬಳೆಯಿಸಿತ್ತೆನ ।
ಸುಂ ತೊಳಪ ತದೀಯ ಚಂದ್ರಿಕಾ ವಿಸ್ತಾರಂ ॥೬೯॥

ಕಂ॥ ಎಸೆವ ಘನ ತುಹಿನ [5]ಲತಿಕಾ ।
ವಿಸರಮಿದೆನೆ ಮಿಸುಪ ಶಶಿಯ ಪೊಸ ತಣ್ಗದಿರ್ಗಳ್ ॥

---

1. ಸಮುಪಿಸುವ. 2. ಮಾಗುತಿರೆ. 3. ಶಿದೇಭಾಯಮಾಗೆ. 4. ಸಂಕುಳಕ್ಕೆಗೋ.
5. ತಿಲಕಾ.

[1]ಬಿಸುಗದಿರ್ಗಳಾಗಿ ಸೋಂಕಿದು ।
ವಸದಳವಂತಾ ಮಹೀಶ ಮದನನ ತನುವಂ ॥೭೦॥

ಮ॥ [2]ತನಗೆಂತುಂ ಮಿಗಿಲೀ ಮಹೀಶ ಮದನಂ ತಾಂ ಮೋಹನಾಕಾರದಿಂ ।
ದೆನುತೀವಂ ಪಿರಿದಾಗೆ ಮೆಯ್ಗ್ಗರೆದಿರುತ್ತಿರ್ಪಂಗಜಂ ಮಾಟ್ಪೆನೀ ॥
ತನೊ[3]ಳೀ ಪೊಟ್ಟನೊಳೀ ವಿಳಾಸವೊಳಸೋರ್ವಂತೀಗಳಾನೆಂದು ಚಂ ।
ದ್ರನ ಚಂದ್ರಾತಪದೊತ್ತುಗೊಂಡಿಸುತುಮಂತಿರ್ದಂ ಲತಾಂತಾಸ್ತ್ರದಿಂ ॥೭೧॥

ಕಂ॥ ಚಿತ್ತಜನಿರದಾರ್ದಿಸುತಿರೆ ।
ಚಿತ್ತಮನುರೆ ನಡುವ ಕುಸುಮ ಶರ ಹತಿಗೆ ಕು ಭೃ ॥
ಚ್ಚಿತ್ತಜನಳ್ಕುವ ತೆಱದಿಂ ।
ಚಿತ್ತಸಖಂ ಮಂತ್ರಿತನಯನೀಕ್ಷಿಸಿಯಱಿದಂ ॥೭೨॥

ಇನ್ನಿಲ್ಲಿ ನಿಮಿಷ[4]ಮಿರ್ದೀ ।
ಜೊನ್ನಮನೀಕ್ಷಿಸಿಯುಮವನಿಪಾಲ ಮನೋಜಂ ॥
ಮುನ್ನಾದವಸ್ಥೆಯಂ ಪಡೆ ।
ವನ್ನಿಶ್ಚಯವೆಂದು ಮಂತ್ರಿಸುತನಿಂತೆಂದಂ ॥೭೩॥

ಮ॥ ಭುವನಾಧೀಶ ಮನೋಜ ಸಾಲ್ವುದು ಸಮಂತೀ ಚಂದ್ರಿಕಾ ವಿಕ್ಷಣೋ ।
ತ್ಸವಮೀಗಳ್ ಪಿರಿದಾಯ್ತು ಪೊಟ್ತು ಬಿಜಯಂಗೆಯ್ಯಂದ[5]ದಿಲ್ಲಿಂದೆನು ॥
ತ್ತವೆ ತತ್ಪಟ್ಟ ಶಿಲಾಗ್ರದಿಂದವೊಡಗೊಂಡೆಟ್ಟಿಂದು ತಾಂ ಪೊಕ್ಕನೊ ।
ಪ್ಪುವ ಸೌಖ್ಯಾಶ್ರಯಮಪ್ಪ ಸೆಜ್ಜೆವನೆಯಂ ತನ್ಮಂತ್ರಿ ಮೇಧಾವಿಳಂ ॥೭೪॥

ಕಂ॥ ಸಮನಿಸಿದ ಮನ್ಮಥ ಭ್ರಮ ।
ದೆ ಮನಂ ಮಱ[3]ದಿಂತು ಬಂದು ಶಯ್ಯಾ[6]ಕಲ್ಪ ॥
ಕ್ರಮದಲ್ಲಿ ಮೆಯ್ಯನೀಡಾ ।
ಡಿ ಮಹೀಶ ಮನೋಜನಿರುತಿರಲ್ಕಾ ಪದದೊಳ್ ॥೭೫॥

ಉ॥ ಆಂ ಕಡುಗಾಯ್ದೆನೆನ್ನ ಛಲದಿಂ ಮದನಂ ಮನಮೆಯ್ದೆ ನೋಯಲೆ
ಚ್ಚಂ ಕುಸುಮಾಸ್ತ್ರದಿಂದಮೆನೆ ತಾನಱದೀಗಳಿಳೇಶ ಪುಷ್ಪಚಾ ॥

1. ಬಿಸಿ. 2. ತಮಗೆ. 3. ಳಿವೊತ್ತರೊಳಿ. 4. ಮಿರ್ದ. 5. ದಲೆಲ್ಲಿಂ.
6. ತಳ್ಪ॥ಪ್ರಿಯ.

ಪಂ ಕುಡುಗುಂ ಸಮಂತೆನಗೆ ಶಾಪಮನೆಂದಿರದೋಡಿ ಪೋದನಾ ।
ಶಂಕೆಯಿನೆಂಬವೋಲಪರ ಶೈಲಮನೈದಿದನಂದು ಚಂದ್ರಮಂ ॥೭೬॥

ಚಂ॥ ಇರದಳುರ್ದಾವಗಂ ಬಿಡದೆ ಶೋಷಿಸುತಿರ್ದಪುದೆನ್ನ ಜನ್ಮಮಂ ।
ದಿರವೆನಿಪಬ್ಧಿ ಗರ್ಭಮನೆನುತ್ತಮೆ ತಾಂ ಮುಳಿದೌರ್ವ ವಹ್ನಿಯಂ ॥
ನಿರವಿಪೊಡಾರ್ಪಿನಿಂದವೊಳಪೊಕ್ಕಪನೆಂಬವೊಲಾಗಳಸ್ತ ಭೂ ।
ಧರಮನೆ ಬಿಟ್ಟು ಪಶ್ಚಿಮ ಪಯೋನಿಧಿಗಂದಿೞಿದಂ ಸುಧಾಕರಂ ॥೭೭॥

ಉ॥ ನೆಟ್ಟನೆ ತಾರಕಾ ಪತಿಯೆನಿಪ್ಪಿರವೀಕ್ಷಿಸದೆಮ್ಮನಿಂದು ತಾಂ ।
ತೊಟ್ಟನೆ ಬಿಟ್ಟುಪೋದನಿರದೀಗಳೆ ತನ್ನಯ ತೀವ್ರ ಪಾದದಿಂ ॥
ದಿಟ್ಟಿರಿಸಲ್ಕೆ ಬರ್ಪನಿನನೆಂಬಿನಿತುಮ್ಮಳವಾಗೆ ಕಾಂತಿ ಮೆ ।
ಯ್ಗೆಟ್ಟುದೆನಲ್ಕೆ ನಿಷ್ಕಳೆಯನೆಯ್ದಿದುದಾ ಭಗಣಂ ಪ್ರಭಾತದೊಳ್ ॥೭೮॥

ಕಂ॥ ನೀರಜದ ನಗೆ ಮುಗುಳ್ತುದು ।
ಕೈರವದ ವಿಕಾಸಮೞಿದುದಾ ಕೋಕದ ಚೀ ॥
ತೋರಾಗಮಧಿಕಮಾಯ್ತು ಚ ।
ಕೋರದ ಮದಮುಡುಗಿ ಪೋಯ್ತು ಮುನ್ನೇಸಱಿನೊಳ್ ॥೭೯॥

ಚಂ॥ ಹಿಮರುಚಿ ತಾ[1]ನಗಲ್ದಿರದೆ ಪೋಗೆ ತದೀಯ ವಿಯೋಗ ತಾಪದಿಂ ॥
ದಮರ್ದಿರಲಾರದಂಬರಮನೊಕ್ಕಿೞಿದುರ್ವಿಯ [2]ಶಾದ್ವಲಂಗಳ ॥
ಗ್ರಿಮದೊಳೆ ಮೆಯ್ಯನಿಕ್ಕಿದ ಸಮುಜ್ವಲ ತಾರಕ ಪುಂಜಮೆಂಬ ವಿ ।
ಭ್ರಮಮನೆ ಬೀಱುತಿರ್ದುದೆನಸುಂ ಪನಿಪುಲ್ಲ ಪಯಃಕಣ ವ್ರಜಂ ॥೮೦॥

ವಿರಹ ತಮಂ ತಮಿಸ್ರದೊಡನೋಡೆ ರತೋತ್ಕಟ ರಾಗಮುಣ್ಮೆ ಚ ।
ಚ್ಚರದಿರದೆಯ್ದೆವಂದು ತವಕಂ ತವೆ ಮಿಕ್ಕಮರ್ದಪ್ಪೆ [3]ನಾಣದುಂ ॥
ಪರಿಯೆ ಮುದಶ್ರುಗಳ್ ಸುರಿಯೆ ಪಕ್ಷ್ಮಮೆಱಲ್ತರೆ ಕಣ್ಣಲರ್ ಮುಗು ।
ಳ್ತರೆ ನೆರೆಯುತ್ತುಮಿರ್ದುದು ರಥಾಂಗಶತಂ ಶತ[ಪತ್ರ][4]ಸದ್ಮದೊಳ್ ॥೮೧॥

ತಡೆದು ಬೞಲ್ಕೆ ಕೋಪಿಸಿ ನಿಜೇಶನದೊಂದು ರಥಾಂಗ ಕಾಂತೆ ಮೆ ।
ಯ್ಗುಡದೆ ಕಡಂಗಿ ಚಂಚುಪುಟದಿಂದಿೞಿದತ್ತಲೆ [5]ನೂಂಕೆ ಪೋಗದೋ ॥

---

1. ನಗಲ್ಲದಿರೆ. 2. ಪಡ್ವಲಂ. 3. ನಾಣ್ಮದಂ. 4. ಪದ್ಮ. 5. ನೂಂಕಿ.

ಗಡಿಸದೆ ಪತ್ತಿ ಸಾರ್ದು ತನುಸೋಂಕಿನೊಳಾ ಮುೞಿಸಂ ಕೞಲ್ಚಿ ತಾಂ ।
ಬಿಡದೊಡಗೂಡುತಿರ್ದುದು ರತೋತ್ಸುಕ [ಮಾನಸನಾಗು] ತಾ ಕ್ಷಣಂ ॥೮೨॥

ಕಂ॥ ವ್ಯಾಕುಳತೆ ಪಿಂಗೆ ಸುರತೋ ।
ದ್ರೇಕದೊಳಿರೆ ಬಂದು ತಡೆಯದೊಡಗೂಡಿ ಸಮಂ ॥
ತಾ ಕಾಂತೆಯನಾಲಿಸಿದುದು ।
ಕೋಕನದಂ [1]ಕೋಕಿಯುಂ ನಿವಾಸದೊಳಾಗಳ್ ॥೮೩॥

ಚಂ॥ ನೆಱೆ ಮರವಟ್ಟು [2]ಕಾದಲನ ಮೆಯ್ಗಮರ್ದಪ್ಪಿ ತೊಡರ್ಚಿ ಪಾರ್ಶ್ವದೊಳ್ ।
ಮಿಱುಗುವ ದೀಪಕಾವಳಿಗೆ ಕಂಪಮನೊಂದಿಸಿ ಪಂಜರಂಗ[3]ಳೊಳ್ ॥
ಗಱಿಗಳನೊಯ್ಯನೊಕ್ಕೆೞಲೆ ನಿದ್ರೆಯೊಳಿರ್ಪ ಶುಕಾಳಿಗಾದ[4]ಮ ।
ಚ್ಚಱನೊಡಗೂಡಿ [5]ತೀಡಿದುದು ತಣ್ಣೆಲರಾಗಳೆ ಸುಪ್ರಭಾತದೊಳ್ ॥೮೪॥

ಎಱಕೆಗಳೊಳ್ ಪೊದೞ್ದ ಪನಿಪುಲ್ಲ ಪಯಃಕಣಮಂ ಬಿದಿರ್ಚಿ ಕ ।
ಣ್ದೆಱೆದಿದಿರ್ಗೊಂಬಿನೊಳ್[6]ತೊಡರ್ದ ಚಂಚುವನಂಟಿ ನಿಮಿರ್ಚಿ ನೀವಿ ನು ॥
ಣ್ಗಱಿಗಳಸುಣ್ಮಿ ದಲ್ ಚಿಲಿಮಿಲಿ ಧ್ವನಿಗೆಯ್ದು ವಿಹಂಗಮಂಗ[7]ಳೆ ।
ಚ್ಚಱೆ ಕುಟುಕಂ ಕೊಳಲ್ಕಿರದೆ ಪಾರಿದುವೆಣ್ದೆಸೆಗಂ ಪ್ರಭಾತ್‌ದೊಳ್ ॥೮೫॥

ಘಳಿಲನೆ ಘೂಕ ನೇತ್ರ ತತಿಯೊಳ್ ತಿಮಿರಂ ತಲೆದೋಱೆ ತೊಟ್ಟನಾ ।
ಗಳೆ ಪೊಣರ್ವಕ್ಕಿಯೊಳ್ ಸುರತ ಕೇಳಿ ಕರಂ ತಲೆದೋಱೆ ಪಾರಿಜಂ ॥
ಗಳ ಮುಖದೊಳ್ ವಿಳಾಸಮೆನಸುಂ ತಲೆದೋಱೆ ಪೊದೞ್ದು ನಾಡೆ ಕ ।
ಣ್ಗೊಳಿಸುವದೊಂದು ಕೆಂಪು ತಲೆದೋಱಿದುದೈಂದ್ರಿಯ ಭೂಧರೇಂದ್ರ [ದೊಳ್ ॥೮೬॥

ಮ॥ಸ್ರ॥ ಸುರ ದಿಕ್ಶೈಲೇಂದ್ರ ಪೀಠಾಗ್ರಿಮದರುಣ ಶಿಲಾ ಲಿಂಗಮೋ ತದ್ದಿಶಾ ಸೌಂ ।
ದರಿ ತಾಳ್ದಿರ್ಪಾ ಲಸತ್ಕಂಠಿಕೆಯ ತರಳ ಮಾಣಿಕ್ಯಮೋ ಸಾಂದ್ರ ಸಿಂದೂ ॥
ರ ರಜಂ ತಳ್ತೊಪ್ಪುವೈರಾವತ ಗಜದ ಶಿರಃಪಿಂಡಮೋ ಪೇೞಿದೆಂಬಂ ।
ತಿರೆ ಕೆಂಪಿಂ ಸೊಂಪುವೆತ್ತುಣ್ಮಿದುದರುಣ ರುಚಿಸ್ತಂಭಮಾ ಸೂರ್ಯ ಬಿಂಬಂ ॥೮೭॥

1. ಕೋಕನಾ. 2. ಕಾದಲರ. 3. ಳೊಳರಿ. 4. ಮಚ್ಚರ. 5. ತಿಳಿದುದು.
6. ತೊಡದು. 7. ಳಕ್ಕರಿ.

ಕಂ॥ ಸುರ ದಿಗ್ದೇವತೆಯ ವಿಭಾ ।
ಸುರ ಸದನವಿದೆನಿಪ ತದ್ಗಿರಿ ಪ್ರಾಸಾದ ॥
ಸ್ಫುರಿತಾಗ್ರದೊಳಜನಿಟ್ಟುರು ।
ತರ ಮಣಿ ಕಲಶಂಬೊಲೆಸೆದುದಾ ರವಿ ಬಿಂಬಂ ॥೮೮॥

ಚಂ॥ ನೃಪ ಕುಸುಮಾಸ್ತ್ರನೆಂತು ಕುಸುಮಾಸ್ತ್ರನ ತತ್ಕುಸುಮಾಸ್ತ್ರ ಮಾಲೆಯೊಂ ।
ದುಪಹತಿಯೊಳ್ ಸಹಿಷ್ಣುತೆಯನಾಂತನದೆಂತು ಪೊಡಟ್ದು ಚಂದ್ರಿಕಾ ॥
ವಿಪುಳತರೋಷ್ಣಮಂ ತಳೆದನೆಂತದನೀಕ್ಷಿಪೆನೆಂದು ಬಂದವೋಲ್ ।
ತಪನನುದಗ್ರಮಪ್ಪುದಯ ಶೈಲ ಶಿರೋಗ್ರಮನಾಗಳೇಱಿದಂ ॥೮೯॥

ಇಂತು ಭಾಸ್ಕರಂ ವಾಸವಾದ್ರಿ ಪ್ರವೇಶನಾಗಿರ್ದಾಗಳ್—

ಕಂ॥ ಆ ನಿದ್ರಾಂಗನೆಯೊಳ್ ಪಿರಿ ।
ದಾನುಂ ಪಿಂಗದವೊಲೆಸೆವ ಕುಸುಮಾವಳಿಯೊಳ್ ॥
ತಾನುಪಚಿತ ಮನನಾಗೆ ಮ ।
ಹೀನಾಥ ಮನೋಜನಿಂತು ಶಯ್ಯೆಯೊಳಿರ್ದಂ ॥೯೦॥

ಮ॥ಸ್ರ॥ ಇನಿತುಂ ಪೊೞ್ತಪ್ಪಿನಂ ತಾಂ ನೆರೆದಿರನವನೀನಾಥ ಪುಷ್ಪೇಷು ನಿದ್ರಾಂ ।
ಗನೆಯೊಳ್ ಪಿಂತೇಕೆ ತಾನಿರ್ದಪನೆನುತುಮನೂನ ಪ್ರಭಾತ ಕ್ರಿಯಾ ವ ॥
ಸ್ತು ನಿಕಾಯ ಸ್ವೀಕೃತೋದ್ಯತ್ಕರ ಸರಸಿಜಮಾಗಿಂತು ತದ್ವಾರ ನಾರೀ ।
ಜನಮಾ ಪರ್ಯಂಕದಿಂದುಪ್ಪವಡಿಪ ಸಮಯಂಬಾರ್ದು [1]ತಾನಿರ್ದುದಾಗಳ್
॥೯೧॥

ಆ ಸಮಯದೊಳ್—

ಉ॥ [2]ಸ್ವಾಂತದೊಳೊರ್ಮೆಯುಂ ನೆರೆದು ಮೋಹಿಸುವಾ ಕುಸುಮಾವಳೀ ಲಸ ।
ತ್ಕಾಂತೆ ಕರಂ ಸ್ವಕೀಯ ಲಲಿತಾಂಗದ ಸಂಗದಿನಿರ್ದಳೆಂಬ ವಿ ।
[3]ಭ್ರಾಂತಿಯಿನಿಂತು ಕಣ್ದೆಱೆದು ಭೋಂಕನೆ ಭಾಸುರ ಶಯ್ಯೆಯೊಳ್ ಮಹೀ ।
ಕಾಂತ ಮನೋರಜನಿರ್ದರುಜು ವಕ್ತ್ರ ಸರೋರುಹನಾಗೆ ನೋಡಿದಂ ॥೯೨॥

1. ತಾವಿರ್ದು. 2. ಶಾಂತ. 3. ಭ್ರಾಂತಿಯ.

ಕಂ॥ ಪದೆದೀಕ್ಷಿಸಿ ಕಾಣದೆ ನಿಜ।
ಸುದತಿಯ[1]ನೇಕಿಂತು ಮಾಯಮಾದಳೊ ಪರ್ಯಂ॥
ಕದೊಳೀಗಳೆನುತ್ತುಂ ನೃಪ।
ಮದನಂ ನಿಷ್ಪಂದ ನೇತ್ರನಾಗಿರುತಿರ್ದಂ ॥೯೩॥

ಇಂತಿರ್ದ ಭಾವಮಂ ಮಂತ್ರಿಸುತನಱಿದು—

ಮ॥ ರವಿ ಪೂರ್ವಾಚಲ ಮಸ್ತಕಾಗ್ರ ಮಣಿಯಾದಂ ದೇವ ನೀಮೀ ಪ್ರಭಾ।
ತ ವಿನೂತ ಕ್ರಿಯೆಯಂ ನಿಮಿರ್ಚಿ ಪದೆಪಿಂ ನಿರ್ವರ್ತಿಸಲ್ವೇಱ್ಕುಮಿಾ॥
[2]ಸವನೋಪಕ್ರಮ ವಸ್ತು ವರ್ಗಮನವಂ ತಾಳ್ದಿಂತಃ ಪಾರ್ದಿರ್ಪುದೀ।
ಯುವತೀ ಯೂಥಮೆನುತ್ತೆ ಬಿನ್ನವಿಸಿದಂ ತನ್ಮಂತ್ರಿ ಮೇಧಾವಿಳಂ ॥೯೪॥

ಮ॥ಸ್ರ॥ ಕಿವಿಯಂ [3]ತಳ್ಪೊಯ್ವ ಮೇಧಾವಿಳನ ವಚನ ಮಾತ್ರಕ್ಕೆ ತದ್ಭ್ರಾಂತಿ ಚೇತೋ।
ಭವನಾಂತರ್ಭಾಗದಿಂದಾ ಕ್ಷಣದೆ ತೊಲಗೆ ಪರ್ಯಂಕದಿಂದೆೞ್ದು ಧಾತ್ರೀ॥
ಧವ ಪುಷ್ಪಾಸ್ತ್ರಂ ಪ್ರಭಾತ ಕ್ರಿಯೆಗಳನಿತುಮಂ ತೀರ್ಚಿ ತಾಂ ಬಂದು ಶೋಭಾ।
ರ್ಣವಮುಪ್ಪಾಸ್ತ್ಮೀಯ ಕೇಳೀ ನಿಳಯದೆ ಮಣಿ ಸಿಂಹಾಸನಾಸೀನನಾದಂ ॥೯೫॥

ಕಂ॥ ಆ ನೃಪ ಕುಸುಮಾಸ್ತ್ರನ ಮಿಸು।
ಪಾ ನವಮಣಿ ಪಾದ ಪೀಠ ಪಾರ್ಶ್ವೋರ್ವಿಯೊಳಂ॥
ತಾ ನಿಜ ಸಖ ಮೇಧಾವಿಳ।
ನಾ [4]ನಿಖಿಳಸ್ತ್ರೀ ಸಮೇತದಿಂ ಕುಳ್ಳಿರ್ದಂ ॥೯೬॥

ಮ॥ಸ್ರ॥ ಸಮಸಂದೋರಂಬದಿಂ ಕಂಕಣ ಗಣದ ಝಣತ್ಕಾರಮುರ್ಬೇೞೆ ನೀೞ್ದಾ
ದಮುದಂಚಲ್ಲೋಲ ನೇತ್ರಂಗಳ ಬೆಳಪ ವಿಳಾಸಂ ತುಳುಂಕಾಡೆ ತೋರ್ಪಾ॥
ಕಮನೀಯಾಂಗ ತ್ರಿಭಂಗಿ ತ್ರಿಗುಣಿಸೆ ನಿಜಲಾವಣ್ಯಮಂ ಚಾಮರೀ ಸ್ತೋ।
ಮಮದಿಂತುರ್ವೀಶ ಪುಷ್ಪಾಯುಧನ ಕೆಲದೊಳಿರ್ದತ್ತು ವಿಭ್ರಾಜಿಸುತ್ತುಂ ॥೯೭॥

ಆ ಸಮಯದೊಳ್—

1. ನೆಂತಿಂತು. 2. ಸಮಯೋಪಪ್ರದ 3. ತಳ್ಪೊಯ್ಯೆ. 4. ಗಖಿಳಶ್ರೀ.

ಉ॥ ಭೂವರ ಕಂತುವೀ ಸಮಯದೊಳ್ ನೆಗೞ್ದಾವ ಕಳಾ ಪ್ರಸಂಗ ಲೀ।
ಲಾವಹ ಚಿತ್ತಸಾದನೆನುತುಂ ವದನಾಬ್ಜಮನೀಕ್ಷಿಸುತ್ತುಮಿ।
ರ್ಪಾ ವರ ಕಾಮಿನೀ ಜನ ವಿಲೋಲ ವಿಲೋಚನ ಕಾಂತಿ ಚಂದ್ರಿಕಾ।
ವ್ಯಾವೃತದಿಂ ಕಳಾಧರನೆನಿಪ್ಪ ನಿಜಾಹ್ವಯಮಾಯ್ತು ಸಾರ್ಥಕಂ ॥೯೮॥

ಕಂ॥ ತಮತಮಗಾ ವರೆ ಮಹಿಳಾ।
ಸಮುದಯಮದು ತಮ್ಮ ಸತ್ಕಳಾ ಪ್ರೌಢಿಗಳಿಂ॥
ಸಮುಸಂದೋಲಗಿಸುವ ಬಗೆ।
ಸಮನಿಸೆ ಸಮಯಮನೆ ಪಾಱುತಿರೆ ನೃಪವರನಾ ॥೯೯॥

ಉ॥ ಆವ ವಿನೋದಮಂ ನೆನೆಯದಾರುಮನೀಕ್ಷಿಸದೇನುಮೆನ್ನದು।
ರ್ವೀವರ ಪುಷ್ಪಚಾಪನೆನಸುಂ ಮನದೊಳ್ ಮೆಱೆದಿರ್ಪ ಕಾರ್ಯಮಂ॥
[1]ಭಾವಿಸುವನ್ನೆಗಂ ತಿರುಗುತಿರ್ದನದೆಂತು ಬಹಿಃಪ್ರಸಂಗ ಕೇ।
ಳೀವೃತ ಚಿತ್ತನಪ್ಪನೆ ನಿಜಾಂತರದೊಳ್ ಪ್ರಿಯಮೊಂದನೊಂದಿದಂ ॥೧೦೦॥

ಮ॥ ಸರಸಂಬೆತ್ತ ಬಹುಪ್ರಕಾರದ ಕಳಾಪ್ರಾಗಲ್ಭ್ಯದಿಂ ಭೂವರ।
ಸ್ಮರನಂ ಮೋಹಿಪೆವೆಂದು ಸಾರ್ದು ಸಮಯಂಬಾಱುತ್ತುಮಾ ಚಿತ್ತದೊಂ॥
ದಿರವಂ ಭಾವಿಸಿ ತತ್ಪದಾಬ್ಜ ಧರೆಯೊಳ್ ಚಿತ್ರಾಂಗನಾನೀಕದಂ।
ತಿರೆ ತಾನಿರ್ದುದು ರತ್ನಮಾಲೆವೆರಸಂತಾ ವಾರ ನಾರೀ ಜನಂ ॥೧೦೧॥

ಕಂ॥ ಏನುಂ ಬಹುವಿರ್ನೋದ ವಿ।
ತಾನಕ್ಕೆಱಗದೆ ನರೇಂದ್ರ ಮನ್ಮಥನಾಗಳ್॥
ತಾನಿರ್ದನಂಗಭವನೆನಿ।
ತಾನುಂ ಕರುವಿಟ್ಟ ಚಿತ್ರಪುರುಷನ ತೆಱದಿಂ ॥೧೦೨॥

ಈಯಂದದೊಳಿರ್ದ ಕಂದರ್ಪದೇವನ ಭಾವಮನಱಿದು ಮಂತ್ರಿತನಯಂ ಮನದೊಳಿಂತೆಂದಂ—

ಕಂ॥ ಪೊಱಗತುಳ ಧೃತಿಯನಾಂತಂ।
ನೆಱೆ ಮನದೊಳ್ ತಳೆದನೆನೆವ ಕುಸುಮಾವಳಿಯಂ॥

[1] ಭಾವಿಸುವನ್ನನಂ.

ಪೆೞತೇನೀ ನೃಪಮದನನ ।
ತೆಱನಿದು ಸಮನಾಯ್ತು ನಾಡೆ ಬದರೀ [1]ಫಳದೊಳ್ ॥೧೦೩॥

ಮತ್ತಮಿಂತೆಂದಂ—

ಮ॥ ಧೃತಿವೆತ್ತಂ ನೃಪಕಂತುವೀ ತೆಱನನೆಂತುಂ ಪೇೞನೆಂ ಪೇೞಲೇ ।
ಕೆ ತದೀಯ ಪ್ರಿಯಮಂ [2]ನಿಮಿರ್ಚಡೊಡೆ ಮನ್ಮಿತ್ರತ್ವಮೇಬಾೞ್ತೆ ತ ॥
ತ್ಸತಿಯಂ ತಂದಪೆನೆಂದು ಮಂತ್ರಿತನಯಂ ತಾಂ ಪೂಣ್ಕೆಗೆಯ್ವಾಗಳು ।
ಣ್ಮಿತು ಮಧ್ಯಂದಿನ ಸೂಚ್ಯಮಪ್ಪ ಘಟಿಕಾ ಭೇರೀ ಗಭೀರ ಸ್ವರಂ ॥೧೦೪॥

ಆ ಸಮಯದೊಳ್—

ಕಂ॥ ಮನುಜೇಶ ಮದನ ಮಧ್ಯಂ ।
ದಿನಮಾಯ್ತೇೞಲ್ಕೆವೇೞ್ಕುಮಿಂತೀಗಳ್ ಮ ॥
ಜ್ಜನ ಭೋಜನ ಕ್ರಮಕ್ರಿಯೆ ।
ಗೆನುತುಂ ಬಿನ್ನವಿಸಿದಂ ಪ್ರಧಾನ ತನೂಜಂ ॥೧೦೫॥

ಭಿನ್ನವಿಸಿದ ಮಿತ್ರನ ಮಾ ।
ತನ್ನೃಪ ಕುಸುಮೇಷು ಮೀಱಲಱಯದೆ ಮತ್ತಂ ॥
ಮನ್ನಿಸಿ ವಿಸರ್ಜಿಸಿದನೆನ ।
ಸುನ್ನಿಖಿಳ ವಿಳಾಸಿನೀ ಸಮಾಜಮನಾಗಳ್ ॥೧೦೬॥

ವೃ॥ ಘಳಿಲನೆ ಬಿಜಯಂಗೆಯ್ಯಿಮಿನ್ನೆಂದು ಮೇಧಾ ।
ವಿಳನನುವಿಸೆ ತಾಂ ಕೇಳ್ದು ತದ್ವೇಗದಿಂ ಬಂ ॥
ದಲಸದೆಸಕದಿಂ ಮಜ್ಜನಾದಿ ಕ್ರಿಯಾ ಸಂ ।
ಕುಳಮನೆ ನೆಗಳ್ದಂ ಭೂಪ ಕಂದರ್ಪನಾಗಳ್ ॥೧೦೭॥

ಮತ್ತಮಾ ಪದದೊಳ್—

ಮ॥ ಹಿಮ ತಾಂಬೂಲಮನಾಗಳಂತೆ ಕೆಲದೊಳ್ ತಾಂ ನಿಂದು ನೀಡುತ್ತುಮಿಂ ।
ತು ಮಹೀನಾಥ ಮನೋಜನಿಂ ಮೊಗಮನೀಯಲ್ಪತ್ಕ ವಾಗ್ವೃತ್ತಿಯಿಂ ॥

1. ತಳದೊಳ್. 2. ನಿಮಿರ್ಚಿದೊಡೆ.

ದಮೆ ಮಾತಾಡಿಸುತಂ ಗವಾಕ್ಷ ರಹಿತಂ [1]ನೀರಾವಮುಪ್ಪೊಂದು ಜೆ।
ಲ್ಪವಮರ್ದೇಕಾಂತ ಗೃಹಕ್ಕೆ ಬಂದನೊಡಗೊಂಡಾ ಮಂತ್ರಿಮೇಧಾವಿಳಂ ॥೧೦೮॥

ಕಂ॥ ವಿನುತ ನವರತ್ನ ರಚಿತಾ।
ಸನವಂ [2]ತಂದೇಜಲಿಕ್ಕಿದಂ ನೃಪ ಕುಸುಮಾ ॥
ಸ್ತ್ರನ ಪದ ಪಯೋಜ ಪಾರ್ಶ್ವಾ।
ವನಿಯೊಳ್ [3]ಕುಳ್ಳಿರ್ದು ಮಂತ್ರಿಸುತನಿಂತೆಂದಂ ॥ ॥೧೦೯॥

ಎನಸುಂ ಮಂತ್ರೀಶ್ವರ ಲೋ।
[4]ಚನನರಸಂ ತಾನೆನಿಪ್ಪ ನೀತಿಯನುರ್ವೀ ॥
ಜನಕೆ ಪ್ರುಸಿಮಾಡಿದೈ ನೀ।
ನೆನಗೆ ಮನೋಗತಮನುಸಿರದೆಲೆ ನೃಪಮದನಾ ॥೧೧೦॥

ತನಗಾದ ಮನಸ್ಸುಖ ದುಃ।
ಖ ನಿಕಾಯಮನಜಿಪದಿಂತು ನೆಱೆ ವಂಚಿಸುತಿ ॥
ರ್ಪನ ಕೆಳೆಯದು ಕಿಂಪಾಕದ।
ತನಿವಣ್ಣಾಕೃತಿಯ ಸದೃಶಮಲ್ಲವೆ ನೃಪತೀ ॥೧೧೧॥

ಮ॥ ಪರಿಭಾವಿಪ್ಪೊಡೆ ದೇವ ನಿಮ್ಮಯ ನಿಜ ಕ್ಷತ್ರಾನ್ವಯೋಪೇತಮಾ।
ಗಿರೆ ಬಂದಾ ಸಚಿವಾಧಿಪತ್ಯ ಕುಲಜಂ ಪ್ರಜ್ಞಾಬಲಂ ಮಂತ್ರಿ ಶೇ ॥
ಖರನಂತಾತನ ಪುತ್ರನೆಂ [5]ನಿಮಗೆ ಚೇತೋಮಿತ್ರನಾಂ ನೀವದಾ।
ವ [6]ರಹಸ್ಯೋಚಿತ ಕಾರ್ಯಮಾದೊಡದನೆನ್ನಂ ವಂಚಿಸಲ್ತಕ್ಕುದೇ ॥೧೧೨॥

ಕಂ॥ ದೇವರ್ ಜೀವನ ಮುಖ್ಯಮ।
ನಾವುದುಮಂ ಮತ್ಪಿತಂಗೆ ವಂಚಿಸರದಱಿಂ
ನೀವೆನಗೆ ಮನೋಗತ ಕಾ।
ರ್ಯಾವಳಿಯಂ ವಂಚಿಸಲ್ಕೆ ತಕ್ಕುದೆ ನೃಪತೀ ॥೧೧೩॥

ದೇವಿಯರುಂ ವಿಶ್ವಂಭರ।
ಭೂವರನುಂ ನೋಡಿ ನೋಡಿ ನಮ್ಮರ್ವರುಮಂ ॥

1. ನಿರಾಮು. 2. ತದೆ. 3. ಕುಳ್ಳಿರ್ದ. 4. ಚನದರಸಂ. 5. ನಮಿಗೆ.
6. ರಸಹ್ಯೋಚಿತ.

ಜೀವನ ಸಖರಾದರೆನುತ್ತಿ ।
ರ್ಪಾ ವಚನವುಸತ್ಯಮಾಯ್ತು ನಿಮ್ಮಿಂ ನೃಪತೀ ॥೧೧೪॥

ಕೆಳೆಯನೆನಿಸಿರ್ಪನಜ್ಞಾ ।
ವಿಳಸಾದೊಡೆ ವಿಳಸದಾತ್ಮ ಕಾರ್ಯಾಕಾರ್ಯಂ ॥
ಗಳನುಸಿರದಿರ್ಪನಜ್ಞಾ ।
ವಿಳನೆನಿಸುವನಾತನೆಲೆ ಮಹೀಶ ಮನೋಜಾ ॥೧೧೫॥

ಉ॥ [1]ತಾನ್ನೆಗಟ್ಟ್ವಿರ್ಪ ಕಾರ್ಯವಿಃನಿತಾದೊಡಮಾತ್ಮ ಸಖಂಗೆ ಪೇಟ[3]ಯುಂ ।
ಮನ್ನಿಸಿ ಕೇಳ್ದೊಡೊಂದು ಸುಖಮಂತದು ಸಿದ್ಧಿಸುವೊಂದುಪಾಯದೊ ॥
ಳ್ಪನ್ನೆಜ[3] ಕಂಡು ಸೂಚಿಸಲನಂತ ಸುಖಂ ನೃಪ ಪುಷ್ಪಚಾಪ ನೀ ।
ವಿನ್ನೆನಗೀಗಳಿಂತುಸಿರವೇಟ್ಟುದು ಹೃದ್ಗತಮಪ್ಪ ಕಾರ್ಯಮಂ ॥೧೧೬॥

ಕಂ॥ ಸಮಸಂದ ಮನೋಗತ ಕಾ ।
ರ್ಯಮನಜ್ಞಾಯಲ್ ಮನಮನಿತ್ತು ಸಚಿವ ತನೂಜಂ
ಸಮುಚಿತಮಂ ನುಡಿಯುತ್ತಿರೆ ।
ಯುಮದೇನುಮನುಸಿರದಿರ್ದಸಾ ನೃಪ ಮದನಂ ॥೧೧೭॥

ಅಂತದಂ ಕಂಡು ಮೇಧಾವಿಳಂ ಮತ್ತಮಿಂತೆಂದಂ—

ಮ॥ ನಿಮಗಾಂ ಹೃತ್ಸಖನಲ್ಲನಾಗೆ ದಿಟದಿಂ ಚೇತೋಗತಾನೂನ ಕಾ ।
ರ್ಯಮನೇ ವಂಚಿಸಿ ಪೇಟದಿರ್ದೊಡಿದು [2]ಮೇಣೇಂ ದೋಷಮೋ ದೇವ ನಿ ॥
ಮ್ಮ ಮನೋಜ್ಞಂ ಪೆಜನುಳ್ಳೊಡೀ ತೆಜನನಾತಂಗೆಯ್ದೆ ಪೇಟಲ್ಕೆವೇ ।
ಳ್ಕುಮೆನುತ್ತುಂಚತುರೋಕ್ತಿಯಂನುಡಿದನಾಬೋಧಾಳುಮೇಧಾವಿಳಂ ॥೧೧೮॥

ಅಂತು ನುಡಿದ ಮೇಧಾವಿಳನ ವಚನಕ್ಕೆ ಚಕಿತ ಚಿತ್ತನಾಗಿ ಮಹೀನಾಥ ಕಂದರ್ಪದೇವನಿಂತೆಂದಂ—

ಕಂ॥ ನೀನಲ್ಲದೆ [3]ಚೇತಸ್ಸಖ ।
ನೇನೆನಗಿನ್ನನ್ಯನೊಳನೆ ಮೇಧಾವಿಳ ಮ ॥

1. ತಾನ್ನೆಗಳ್ದಪ್ಪ. 2. ಮೇಣಿಂ. 3. ಚೇತಸ್ಸು.

ತ್ತಾನಿದನುಸಿರಲ್ ನಾಣ್ಚಿಯೆ ।
ಮೌನಂಗೊಂಡಿರ್ದೆನಿರ್ದೆನೇಂ ನಿನ್ನೆಡೆಯೊಳ್ ||೧೧೯||

ಮ|| ಇನಿತೊಂದಾಗ್ರಹದಿಂ ಕರಂ ಬೆಸಗೊಳ್ಳುತಿರ್ದಪ್ಪೆ ನೀನೆನ್ನನಿ ।
ನ್ನಿನಗಾಂ ವಂಚಿಸಲುಂಟೆ ಪೇೞ್ವೆನಿದನಸ್ಮದ್ಭ್ರಾಂತಿಯಂ ಚಿತ್ರ ಭಾ ||
ಮಿನಿಯಪ್ಪೀ ಕುಸುಮಾವಳೀ ಸತಿಯ ಸಂಗಕ್ಕಂಗ[1]ಜಾನಂದ ಸೌ ।
ಖ್ಯ ನಿಕಾಯಕ್ಕೆ ಮನಂ ಪೊಪೞ್ದೆಳಸಿ ತಾನಿರ್ದತ್ತು ಮೇಧಾವಿಳಾ ||೧೨೦||

ಕಂ|| ಕುಸುಮಾಯುಧ ಚಿತ್ರಕನಾ ।
ಕುಸುಮಾವಳಿಯೆಸೆವ ರೂಪ ರೂಪ ಚಿತ್ರಮನೆನ್ನೀ ॥
ಮಿಸುಪ ಮನಃಪಟದೊಳ್ ಚಿ ॥
ತ್ರಿಸಿದನಿದಂ ಸಖ ಸಮಂತು ನಿನಗೇವೇೞ್ವೆಂ ||೧೨೧||

ಕಂ|| ಇಂತಿದು ಪಟಚಿತ್ರ ವಧೂ ।
ಭ್ರಾಂತಿಯೆ ಕೆಲವಾನುದಿವಸದಿಂ ಮರೆಗುಮೆನಿ ॥
ಪ್ಪಂತಲ್ತು ಸಖ ಮದೀಯ ಮ ।
ನಂತೊಡರ್ದುದುತಳ್ತು [ನಾಡೆ]ಕುಸುಮಾವಳಿಯೊಳ್ |೧೨೨||

ಎಲೆ ಮೇಧಾವಿಳ ಪೇಱತೇಂ ।
ವಿಳಸತ್ಕುಸುಮಾವಳೀ ವಧೂಟಿಯ ಸಂಗಂ ॥
ಸಲೆ [2]ಸಮನಿಸದೊಡೆ ಜೀವನ ।
ಕಳೇವರಂಗಳ ವಿಯೋಗಮದು ಸಮನಿಸುಗುಂ ||೧೨೩||

ನೆಟ್ಟನೆ ತನ್ನಯ ಮನಮಂ ।
ತೆಟ್ಟುಂತೆಱೆದು[3]ನಿರ್ವ ನೃಪಮನೋಜನ ಮಾತಂ ॥
ತೊಟ್ಟನೆ ತಾಂ ಕೇಳ್ದಚ್ಚರಿ ।
ವಟ್ಟಂ ಮೇಧಾವಿಳಂ ನಿಜಾಭ್ಯಂತರದೊಳ್ ||೧೨೪||

ಉ|| ಇನ್ನೆಗಮೇಕೆ ನೀಮೆನಗೆ ನೇಮಿಸದಿರ್ದಿರಿದೇನಗಾಧ[4]ಮೋ
ನಿನ್ನಿಮಿಷಾರ್ಧದಿಂ ನೆಱೆ ಜಗತ್ರಯದೊಳ್ ಸಲೆ ನೋಡಿ ನಾಡೆ ರೂ ||

1. ಮಾಸಂಗ. 2. ಸಮನಿಸಿದೊಡೆ. 3. ನೀರ್ವ. 4. ಮೋ। ನಿಮಿಷಾರ್ಧದಿಂ.

ಪೋನ್ನತಿಯಪ್ಪ ಕಾಂತೆ ಕುಸುಮಾವಳಿಯಂ ಪದೆಪಿಂದೆ ತರ್ಪೆನೇ
ನುನ್ನೆವಮಿಲ್ಲದಿಂ ಕೞಿಪು ಜೇಗದೊಳೆನ್ನನಿಳೇಶ ಮನ್ಮಥಾ ॥೧೨೫॥

ಆ ಸಖನ ಸಮ್ಯಗ್ವಚನಮಂ ಕೇಳ್ದು—

ಕಂ॥ ನೀನೆನ್ನನಗಲ್ದಿಂ[1]ದೆನಿ ।
ತಾನುಂ ಬೇಗದೆ ತೊೞಲ್ದು ತಂದಪೆ [2]ಸಂದ ॥
ಬ್ಜಾನನೆ ಕುಸುಮಾವಳಿಯಿ ।
ರ್ಕಾನೆಲೆ ಸಖ ನಿನ್ನಗಲ್కೆಯಂ ಸೈರಿಪೆನೇ ॥೧೨೬॥

ಆವಗಮಾನುಂ ನೀನುಂ ।
ಭಾವಿಸೆ ನೆಱೆ ಸಮುಮುದಾದಿಯಾಗಿಂಪುವರಂ ॥
ನಾವಗಲ್ದಿರ್ಪೆವೆ ಪೇೞ್ ಮೇ ॥
ಧಾವಿಳ ನೀನಗಲ್ದ ನಾನದೆಂತಿರ್ದಪೆನೋ ॥೧೨೭॥

[3]ಕುಸುಮಾವಳಿಯಿಂ ಸಮನಿಸಿ ।
ದಸಮಾಸ್ತ್ರ ವ್ಯಥೆಗೆ ಸೈರಿಸಲ್ಕಾರ್ಪೆಂ ಭಾ ॥
ವಿಸುವೊಡೆ ಮೇಧಾವಿಳ ಸೈ ।
ರಿಸಲಾರ್ಪೆನೆ ನಿನ್ನಗಲ್ಕೆಯಂ ನಿಮಿಷಾರ್ಧಂ ॥೧೨೮॥

ನಿನ್ನ ವಿಯೋಗದಿನಾಂ ನಿಮಿ ।
[4]ಷನ್ನಿಲಲಿನ್ನಱಿಯೆನಲ್ತೆ ಮೇಧಾವಿಳ ನೀ ॥
ನೆನ್ನ ವಿಯೋಗದೆ ಸೈರಿಸು ।
ವನ್ನನೆ ಪೇೞೆಂತು ಪೋಗಿ ತಂದಪೆನೆಂಬೈ ॥೧೨೯॥

ಮ॥ ಅದಱಿಂದಾರುಮನಿಲ್ಲಿ ವಂಚಿಸಿಯೆ ನಾನುಂ ನೀನುಮೊಂದಾಗಿ ಬೇ ।
ಗದೊಳೀಗಳ್ ಪೊಱಮಟ್ಟು ನೋೞ್ಪಮಿರದೆಲ್ಲಾ ದ್ವೀಪದೊಳ್ ಲೋಕ ಲೋ ॥
ಕದೊಳಂತಾ ಕುಸುಮಾವಳೀ ಯುವತಿ ತಾನಾರಾದೊಡಂ ಕಾಣ್ಬರಿಂ ।
ತಿದು ಮಂತ್ರಂ ಬಗೆಗೊಳ್ ನಿವಾರಿಸದಿರಿಂತೆನ್ನಾಣೆ ಮೇಧಾವಿಳಾ ॥೧೩೦॥

---

1. ದಿನಿ. 2. ನೆಂದ. 3. ಕುಸುಮಾವಳಿಯಂ. 4. ಷನೀಸೀಲಲನೆಮರೆಯನಲ್ತೆ.

ಆ ಮಹೀಶ ಮನ್ಮಥನೆಂದುದಂ ಮನದೊಳೊಡಂಬಟ್ಟು ಮೇಧಾವಿಳಂ ಮತ್ತಮಿಂತೆಂದಂ—

ಕಂ॥ ಬರಲೆತ್ತಾನುಂ ತಡೆಯು।
ತ್ತಿರೆಯುಂ ದೇವಿಯುಮಿಳೇಶನುಂ ಮತ್ಪಿತನುಂ॥
ಪಿರಿದುಂ ತಾವೆನ್ನಂ ಜಱೆ।
ವರಿದಂ ನೆಱೆಯಱಿದು ಪೊಱಮಡೆಲೆ ನೃಪಮದನಾ ॥೧೩೧॥

ಮ॥ ಅದನೊಂದಂ ಮಱೆ ಸಿನ್ನನಾಂ ಜಱೆಯಲಂತಾಗೀಯೆನೆಂಬುಕ್ತಿ ಬೋ।
ಧದೆ ಮೇಧಾವಿಳನಂ ಮನಂಗೊಳಿಸಿ ತಾನೆಂತಾನುಮೊಂದಾಗಿ ಪೋ॥
ಪುದನಾಳೋಚಿಸಿ ತತ್ಪರೀತ ಪರಿವಾರ ಸ್ತ್ರೀಯರಂ ಕಾಣಲೀ।
ಯದೆ ಪೋಗಲ್ ಬಗೆದಂತದಂ ನೆಗೆಲ್ದನಾ ಭೂಪಾಲ ಪುಷ್ಪಾಯುಧಂ ॥೧೩೨॥

ಇಂತು ಬಗೆದೊಂದು [1]ಪೊಟ್ಟಱೆಯೊಳ್—

ಚಂ॥ ಮನವಿನಿತಾಗ್ರಹಂ [2]ಪುದಿಯೆ ತತ್ಸುದತೀ ತತಿ ಕಾಣದಂತೆ ಮೆ।
ಲ್ಲನೆ ಪವನಂಜಯಾಶ್ವಮನದಂ ತೆಗೆದೇಱಿಯುಮೊಲ್ಲೆನೊಲ್ಲೆನೆಂ॥
ದೆನೆ ತನತಾಜ್ಞೆಯಿಟ್ಟು ಸಖನಂ ಪೆಱಗೇಱಿಸಿಕೊಂಡು ಭೋಂ।
ಕನೆ ಪೊಱಮಟ್ಟನಿಂತು ವಿಮಳಾಪುರಿಯಂ ನರನಾಥ ಮನ್ಮಥಂ ॥೧೩೩॥

ಕಂ॥ ಅನಱಿವೆಂ ಕುಸುಮಾವಳಿ।
ತಾನಿರ್ಪೆಡೆಯಿತ್ತಲೆಂದು ಕೊಂಡೊಯ್ವಂತಾ॥
ಯಾನ ರಯಮೆಸೆಯೆ ತೆಂಕ।
ಣ್ಗಾ ನಿರುಪಮ ದಿವ್ಯ ವಾಜಿ ನಡೆದತ್ತಾಗಳ್ ॥೧೩೪॥

ಕಂ॥ ಅಂಬುಜಮುಖಿ ಕುಸುಮಾವಳಿ।
ಯಂ ಬಿಡದೆಂತಾದೊಡೀಕ್ಷಿಪೆಂ ತ್ರಿಜಗದೊಳಾ॥
ನೆಂಬಿನಿತಾಗ್ರಹ ದೂತಿಯು।
ಬೆಂಬಱಿಯನೆ ಭೂಪ ಕಂತು ಪೋಗುತ್ತಿರ್ದಂ ॥೧೩೫॥

1. ಪೊಟ್ಟರೊಳ್. 2. ಪುದಿದು.

ಪವನಂಜಯನೆಂಬಭಿಧಾ ।
ನವನಾ ನೃಪ ನುನ್ಮಥಂಗೆ ತೋಱುತ್ತಿರ್ಪಂ ॥
ತೆವೊಲೆನಸುಂ ಮಾರುತನಂ !
ಜವದಿಂ ಪಿಂತಿಕ್ಕೆ ಪೋಗುತಿರ್ದುದು ತುರಗಂ ॥೧೩೬॥

ತ್ವರಿತೆಯಿನಿಪ್ಪಾ ಭೂಪ ।
ಸ್ಮರನಾಗ್ರಹ ದೂತಿಯೊಡನೆ ಮತ್ಸರಿಸಿದವೋಲ್ ॥
ಪಿರಿದು ಪವನಂಜಯಾಹ್ವಯ ।
ಮಿರಿದೆಯ್ದುವುದಾ ಕ್ಷಣಕ್ಕೆ ಯೋಜನ ಶತಮಂ ॥೧೩೭॥

ಚಂ॥ ಇದು ಪಥಮಿರ್ಪುದೆಂದಱಿದು ಪೋಗದೆ [1]ಮೇಣ್ ಪಥಮಲ್ತಿದೆಂದು ಮಾ ।
ಣದೆ ಪವನಂಜಯಾಶ್ವಮದು ಪೋಪುದೆ ತತ್ಪಥಮಾಗೆ ತಾನಪಾಂ ॥
ಗದೆ ಸಖನಂ ಪುನಃಪುನಮಭೀಕ್ಷಿಸಿ [ಪೇಱುತುಮಂತದಲ್ಲಿ] ಕಾ ।
ಣ್ಬುದು [2]ನಗಮುಕ್ಕುಮೆಂದೆನುತೆ ಪೋಗುತುಮಿರ್ದನಿಳೇಶ ಮನ್ಮಥಂ ॥೧೩೮॥

ಕಂ॥ ಈಗಳೆ ಕಾಣ್ಬುದು ತಡವಿನಿ ।
ತಾಗದೆ ತತ್ಸತಿಯನೆಂದು ತಾನಡಿಗಡಿಗಾ ॥
ವೇಗದೆ ಸಖನಂ ಬೆಸಗೊಳು ।
ತಾಗಳ್ ಪೋಗುತ್ತುಮಿರೆ ಮಹೀಶ ಮನೋಜಂ ॥೧೩೯॥

ಮ॥ಸ್ರ॥ ಕರಿಕುಂಭ ಶ್ರೇಣಿಯಂ ಪಾಯ್ದುಗಿಬಗಿವ ಮಹಾರಾವ ಸಂರಂಭ ಸಿಂಹೋ ॥
ತ್ಕರದಿಂ ಸಿಂಹಂಗಳಂ ಘಾತಿಸುವ ಕಟು[3]ರವಾಷ್ಟಾಪದಾನೀಕದಿಂ ಭೀ ॥
ಕರಮಪ್ಪಷ್ಟಾಪದಾನೀಕಮನೆ ಪಿಡಿದು ತುಂಡಾಗ್ರದಿಂ ಖಂಡಿಪುಗ್ರೋ ।
ದ್ಧುರ ಭೇರುಂಡಂಗಳಿಂ ಭೀಷಣ ರಸಮಯಮಾಗಿರ್ದುದತ್ತೊಂದಗೇಂದ್ರಂ ॥೧೪೦॥

ಕಂ॥ ಮೃಗಮಯದಿಂ ಖಜಮಯದಿಂ ।
ಖಗಮಯದಿಂ ಭುಜಗಮಯದಿನಿಂದುಗೆ ತಾರಾ ॥
ಳಿಗೆ ನಭಕೆ ಪಣ ವಧೂ ವಾ ।
ಟಿಗೆ ಸಮನೆನಿಸಿರ್ದುದತುಳ ರಂಧ್ರ ನಗೇಂದ್ರಂ ॥೧೪೧॥

1. ಪೆಣ್ಬದದಮತ್ತಿದೆಂದು. 2. ನಮುಗ. 3. ವರ.

ಮ|| ಧೃತ ಪಂಕಾರ್ದ್ರಮಯಾಳಿಕಂ ಧೃತ [1]ವಿಶೀರ್ಣಾಗ್ರೋಚ್ಚ ಶೃಂಗಂ ಚಳಾಂ ।
ಚಿತ ನಾಳಂ ಪ್ರಕಟ ಪ್ರಕಂಪ ಕಕುದಂ ಪ್ರಾಭತ್ಸಿತಾಂಗಂ ಪ್ರಲಂ ||
ಬಿತ ಲೋಲದ್ಗಳ ಕಂಬಳಂ ಕ್ಷತ ರಣೋದ್ಯತ್ಕಂಧರಂ ಸಾಲಸೋ ।
ದ್ಧತ ಯಾನಂ ಬರುತಿರ್ದುದುದ್ಧತ ಘನ ಧ್ವಾನೋತ್ಕರಂ ಶಾಕ್ವರಂ ||೧೪೨||

ಅದಂ ಕಂಡಿದೇ ಹರ ವೃಷಭನೆಂದು ನೀಡುಂ ನೋಡುತ್ತುಂ ಪೊಗೆವೋಗೆ—

ಮ||ಸ್ರ|| ತರು ಕಾಂತೋದ್ಘೃಷ್ಟ ಘೂತ ವ್ರಣ ಕಿಣ ವಿಪುಳ ಸ್ಕಂಧ ನಾಭಂ [2]ಗುರೂದ್ಭಾ।
ಸುರ ಶೃಂಗಂ ಲಾಲಿತಾಕಾರ ರುಚಿರ ನಯನಂ ಕುಬ್ಜ ಪುಷ್ಪಾತ್ತ ಚಾತು ||
ಶ್ಚರಣಂ ಬದ್ಧೋದರಂ ಪ್ರೋತ್ಕಟತರ ವಿಗಳತ್ಫೇನ [3]ಸೃಕ್ವಂ ಲಿಹನ್ಮಂ ।
ದರ ಯಾನಂ ತಾಂ ಬರುತ್ತಿರ್ದುದು ಪರಿವೃತ ಪಂಕಾರ್ದ್ರ ಕಾಯಂ
ಲುಲಾಯಂ ||೧೪೩||

ಇದು ಕೃತಾಂತನಂಧಕಾಸುರನೊಳೋಸರಿಸದೆ ಕೊಟ್ಟು ಪೋ[ದುದಿ]ರಲಾ ಪುರ್ದೆಂದು ನೋಡುತ್ತುಂ ಪೋಗೆ ವೋಗೆ—

ಉ|| ಆನಕ ನಿಸ್ವನೋಚ್ಚಲಿತ ಕಂಧರನುದ್ಧ ವಿಕೀರ್ಣ ಲೋಹ ಸೂ ।
ಚೀ ನಿಭ ಕೇಸರ ಪ್ರಸರನಾಯತ ಭಂಗುರವಂತನುನ್ಮದಾ ||
ಪೀನನುದಗ್ರ ಮಾಂಸಳ ಮಹಾದ್ಭುತ ಫೇನ ಕಳೇವರಂ ಸಮು ।
ತ್ತಾನಿತ ಕೇಸರಂ ಬರುತುಮಿರ್ದುದು ಭೀಕರನೊಂದು ಸೂಕರಂ ||೧೪೪||

ಆ ಕ್ರೋಡನಂ ಕಂಡಾದಿಕ್ರೋಡನಾಕಾರದ ಸಾಕಲ್ಯ ಶೋಭೆಯೊಳ್ ಸಾಧೃಶ್ಯಮಾದುದೆಂದಭೀಕ್ಷಿಸುತ್ತುಂ ಮುಂದೆ ಪೋಗೆವೋಗೆ—

ಮ||ಸ್ರ|| ಇದು ದಿಗ್ಮಾತಂಗವೋ ಪೇಟಿನೆ ಕರಟ ಗಳದ್ದಾನ ಧಾರಾ ಯುಗಂ ನೀ ।
ಳ್ದೊದವಲ್ ಮೆಯ್ [4]ಪೋರ್ದ ನೀಲಾಚಲಮನಿಟಿಸೆ ತತ್ಪಾದ ವಿನ್ಯಾಸ
ವೋರಂ ||
ದದಿನುರ್ವಿ ಕಂಪಮಂ ಪುಟ್ಟಿಸೆ ನಡೆದು ಬಜುತ್ತಿರ್ದು[5]ದತ್ಯಂತ ಲೋಲ ।
ದ್ವಿದಿತೋದ್ಯತ್ಕರ್ಣತಾಳದ್ವಯಮೆಸೆವಚತುರ್ದಂತರುಂದ್ರಂಗಜೇಂದ್ರಂ
||೧೪೫||

1. ವಿಸ್ತೀರ್ಣ. 2. ಗುರೋದಾ. 3. ಶ್ರುಕ್ಷಾಂವಿಹಸ್ಮಂ. 4. ಪೊಷ್ಟ. 5. ದತ್ಯಾಂಶು

ಆ ಕರೀಂದ್ರನೊಳ್ ಸುರೇಂದ್ರನ ಕರೀಂದ್ರಮಾದೊಡಂ ಕೈಯಿಕ್ಕಿದೊಡೆ [1]ಕಕ್ಕದಿರದೆಂದು ನೀಡುಂ ನೋಡುತ್ತುಂ ಪೋಗೆವೋಗೆ—

ಕಂ॥ ಕಡು ಕೊರ್ಬಿದ ಮೆಯ್ಯೊಡ್ಡಿಂ।
ಬಿಡದುಗುವ ಮದ ಪ್ರವಾಹದಿಂದೊಂದಿ ಬಜು॥
ತ್ತಡವಿಯೊಳೊಂದಿಭನೆಸೆದುದು।
[2]ನಡೆಗೊಂಡ ಕಳಿಂಗ ನಗಮಿದೆಂಬವೊಲಾಗಳ್ ॥೧೪೬॥

ಅದಂ ಕಂಡು ಕರಿಯೋ ಕಳಿಂಗಗಿರಿಯೋ ಪೇಟೆಂದುಪಲಕ್ಷಿಸುತ್ತುಂ ಪೋಗೆವೋಗೆ—

ಮ॥ ಪ್ರಕಟಾಭೀಳ ಮುಖಂ ದ್ವಿಪಾರ್ಶ್ವ ಸಮ ವೀಕ್ಷಾಕ್ಷಿದ್ವಯಂ ಹಸ್ತಿಮ।
ಸ್ತಕ ಮಸ್ತಿಷ್ಕ ನವ ವ್ರಣಾರುಣಿತ ದಂಷ್ಟ್ರಂ ನವ್ಯ ರಕ್ತಾರ್ದ್ರ ಮಾ॥
ಕ್ತಿಕ ಜಾಲ ಗ್ರಥಿತೋಚ್ಚ ವಕ್ತ್ರ ನಖರಂ ಲಂಬೋಲ್ಲಸತ್ಕೇಸರ।
ಪ್ರಕರಂ ಪೋಗುತುಮಿರ್ದುದೊಂದುತಟದೊಳ್ ಪ್ರೋತ್ಕಂಠಕಂಠೀರವಂ॥೧೪೭॥

ಆ ಕೇಸರಿಯ [3]ಭಾಸುರಮಪ್ಪ ರೌದ್ರ ಭಾವಮಂ ಭೂಪ ಮನೋಭವಂ ಭಾವಿಸುತ್ತುಂ ಪೋಗೆವೋಗೆ—

ಉ॥ ಗಾಳದ ಡೊಂಕಿಯುಗ್ರಮನೆ ಬಾಳರಸಂ ಪಿಡಿದಿರ್ದ [4]ವಾದ್ಯಮಂ।
ಜಾಳಿಸಿ ಜಾರುವಂ ಬಿಸಿಲೊಳಿಕ್ಕುವ ಜೆಂಕಿಯೊಳೊಡ್ಡಿ ಕಾಸಿ ಕೊಂ॥
ಡಾಳಿಸಿ [5]ಸಂದು ಕೋಲ ನುಡಿಗಟ್ಟುವ ಕೆಂಗಜಿಯಂ ಸರಂಗಳೊಳ್।
ಮೇಳಿಸಿ ಸುತ್ತುಮಿರ್ಪ ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ॥ ॥೧೪೮॥

ಮ॥ಸ್ರ॥ ತಿರುವೊಯ್ಲಿಂದಾದಮುಂದಬ್ಬರಿಸಿ ಮೆರೆವ ಮುಂಗೈಗಳಿಂ ನವ್ಯ ಮಾತಂ।
ಗ ರದಾಘಾತ ಕ್ಷತಂ ಕಣ್ಗೊಳಿಪಗಲುರದಿಂ ತಾಳಮಂ ಕಾನನಕ್ಕು॥
ಬ್ಬರಮಾಗಳ್ ಬೀಱುವಾ[6] ಭೀಳತ ರವ ಘನದಂತಾಗೆ ತಾನಿರ್ದನಾ ಬೇ।
ಡರೊಳೊರ್ಬಂ ತೂಗುತುಂ ಕೂರ್ಸರಲನರುಣ ನೇತ್ರಾರವಿಂದಂ ಪುಳಿಂದಂ
॥೧೪೯॥

1. ತಕ್ಕದಿರ. 2. ನಡೆಗೊಂಡು. 3. ನೂಪುರ. 4. ವಾರ್ದಮಂ. 5. ಸೆಂದು 6. ಭೀಳತ

ಅವನಂ ಕಂಡು ಕಾಲನಿವನೆಂದು ಕಂದರ್ಪದೇವಂ ಕಲ್ಪಿಸುತ್ತುಂ ಪೋಪಾಗಳ್—

ಚಂ॥ ಅರೆ ಬಟಂದಂ ಪೊದಟ್ಟಿ[1]ಸೆವಿನಂ ಹರಿನೀಲ ಮರೀಚಿ ಮಾಲೆಯಿಂ।
ಸರಸಿಜ ಸೂನು ತಾನೆನಿಸು[7]ವಂತಿರೆ ಕೋಮಳ ಕಾಳಿಮ ಪ್ರಭಾ ॥
ಪರಿಕರದಿಂ ತಟಿಲ್ಲತೆಯ ಪಾಲನೆ ಸೂಸುವಪಾಂಗ ಕಾಂತಿಯಿಂ।
ನೆರೆದಿರು[2]ತಿರ್ದರಲ್ಲಿ ಶಬರಾಂಗನೆಯರ್ ಪಿರಿದೊಂದು ಲೀಲೆಯಿಂ ॥೧೫೦॥

ಅದಲ್ಲದೆಯುಂ—

ಕಂ॥ ಮನಸಿಜನ ವಶೀಕರಣಾಂ।
ಜನಮಂಜನ ಪುತ್ರಿಕಾಳಿ ಕಾಳಿಮಮುಂ ತಾಂ ॥
ತನಿಗೆದಱುವ ತನು ರುಚಿ ಮೋ।
ಹನಮಯಮಾಗಿರ್ದರೆಸೆವ ಶಬರಾಂಗನೆಯರ್ ॥೧೫೧॥

ಚಂ॥ ಬಿಸಿವ ಕೆಸರ್ಗಳೊಳ್ ನಲವಿನಿಂ ನಡೆದಾಡುವ ಬಿಟ್ಟಿ ಕೇಸರಿ।
ಪ್ರಸರದ ಬಾಯ್ಗಳೊಳ್ ಕರಮನಾಱಿಸಿ ನೀಡುವ ಸೂಕರಂಗಳೇ ॥
ನೊಸಲೊಳೆ ತೋರ್ಪ ಮೆಲ್ಮಿದುಳನಂದೆಡಗೈಗಳಿನುರ್ಚಿಕೊಂಡು ಚ।
ರ್ಚಿಸುವ ವಿನೋದದಿಂದೆಸೆದುದಾ ಶಬರಾಳಿಯ ಬಾಳಕ ವ್ರಜಂ ॥೧೫೨॥

ಕಂ॥ ಆ ಶಬರ ಶಿಶುವ್ರಾತದ।
ಶೈಶವದ ವಿನೋದದೊಂದು ಜಾತಿತ್ವಮನು ॥
ವಿಶ್ಶ ಮನೋಜಂ ನೋಡಿ ನಿ।
ಜಾಶಯದೊಳ್ ತನಗಾಗೆ ವಿಸ್ಮಯಂ ಸ್ಮಿತನಾದಂ ॥೧೫೩॥

ಇಂತು ವಿಸ್ಮಯ ಸ್ವಾಂತನಾಗಿಯಾ ಗಿರಿವರದ ತಪ್ಪಲಿಂ ತಳದಾಗಳ್—

ಮ॥ ನಮಿತೋದ್ಯತ್ಕಣಿಶ ಪ್ರಕೀರ್ಣ ಕಳಮ ಪ್ರಖ್ಯಾತ ಕೇದಾರ ಜಾ।
ಲಮಯಂ ನಿರ್ಮಳ ವಾರಿ ಪೂರ ವಿಳಸತ್ಪುಂಡ್ರಾಬ್ಜ ಷಂಡ ಪ್ರತಾ ॥
ನಮಯಂ ಸ್ವಾದು ರಸಪ್ರಸಿದ್ಧ ಫಲಭೂಜ ವ್ಯಾವೃತಾರಾಮ ರ।
ಮ್ಯಮಯಂ ತಾನೆನಿಸಿರ್ದುದೊಂದು ವಿಷಯಂಸಾಕಲ್ಯಶೋಭಾಶ್ರಯಂ ॥೧೫೪॥

1. ವಂಗಡ. 2. ತಿರ್ದುದಲ್ಲಿ.

ಆ ವಿಷಯ ಶೋಭೆಯಂ ನಯನ ವಿಷಯಕ್ಕೊಲಗಿಸುತ್ತೆ ಲೀಲೆಯಿಂ ಪೋಗುತ್ತುಮಿರೆ—

ಚಂ॥ ತಳಿರ್ಗಳನೊಂದು ಕೊಂಬು ನನೆವೂದುಱುಗಲ್ಗಳನೊಂದು ಕೊಂಬು ಪೂ ॥
ಗಳ[1]ನಡರ್ದೊಂದುಕೊಂಬು ಮಿಸುಪಾ ಮಿಡಿದೊಂಗಲನೊಂದು ಕೊಂಬು ಕಾ॥
ಯ್ಗಳಗಮನೊಂದು ಕೊಂಬು ಹದಮೋರೆಗಳೋಳಿಯನೊಂದು ಕೊಂಬು ಪ।
ಣ್ಗಳನೆಸೆವೊಂದು ಕೊಂಬು ತಳೆದಿಂತು ಮನೋಹರಮಾಯ್ತು ಮಾಮರಂ ॥೧೫೫॥

ಮ॥ ಬೆಳೆದೀ ನನ್ನ ಮಹೋನ್ನತಿಕ್ಕೆಗೆ ನಭಶ್ರೀಭಾಮೆ ತಾನಿಂಬುಗೊ ।
ಟ್ಟೆಳೆನುತ್ತುಂ ಪ್ರಸವ ಪ್ರಸಾಧನಮನೀಯುತ್ತಿರ್ಪುವೆಂಬಂತೆ ಕ ॥
ಣ್ಗೊಳಿಸುತ್ತಿರ್ಪಿನಮಿಾಳ್ದು ನೇವರಿಸುತುಂ [2]ಮೇಘಾಧ್ವಮಂ ತದ್ವಿನೂ
ತ ಲಸಚ್ಚೂತ ಮಹೀಜದಾ ಕುಸುಮ ಮಾಲಾಕೀರ್ಣ ಶಾಖಾಳಿಗಳ್ ॥೧೫೬॥

ಚಂ॥ ಫಲಭರಮಾ ಮದೀಯ ಸುತೆ ತಾಂ ಫಲ ಪುಷ್ಪ ವಿಶೋಭೆವೆತ್ತುದೇ ।
ಮಲಯುಜಮಾವಗಂ ಪ್ರಸವದೊಪ್ಪಮ [ನೆಂತುಮದ]ಪ್ಪುಕೆಯ್ದುದೇ ॥
ಪಲಸೆನುತುಂ ಕರಂ ಪಱಿದು ನುಣ್ದಳಿರಿಂದಲರಿಂ ಫಲಂಗಳಿಂ ।
ಸಲೆ ತುಱುಗಿರ್ದ ಚೂತಮಿದು ಭೂತಳ ಕಲ್ಪ ಕುಜಾತಮಲ್ಲವೇ ॥೧೫೭॥

ಕಂ॥ ಅವಿರಳ ಪತ್ರ ಪ್ರಸವ।
ಪ್ರವಾಳ ಸಮುದಯ ಸಮುದ್ಭವಾಭಿನವ ಬಹೂ ॥
ತ್ಸವದಿಂದಿರ್ದುದು ಮನ್ಮಥ।
ನ ವಿಚಿತ್ರದ ಛತ್ರಮೆನಿಸಿ ಚೂತ ಕುಜಾತಂ ॥೧೫೮॥

ಚಂ॥ ಇನಿತಭಿವರ್ಣಿಸುತ್ತೆ ಸಹಕಾರ ಮಹೀರುಹಮಂ ಪ್ರಧಾನನಂ।
ದನನೆಲೆ ದೇವ ನೋಡಿರಿದರೊಂದು ವಿಚಿತ್ರಮನೆಂದು ತೋಱೆ ತ ॥
ರ್ಜನಿಯಿನಿದರ್ಕೆ ದತ್ತ ನಯನಾಂಬುಜನಾಗಿ ನಿಜಾಶ್ವ ರತ್ನಮಂ।
ಮನವೊಸೆದಲ್ಲಿ ತಾಂ ನಿಲಿಸಿ ನೋಡಿದನಾ ನರನಾಥ ಮನ್ಮಥಂ ॥೧೫೯॥

ಆ ಸಹಕಾರ ಮಹೀರುಹದ ಶೋಭಾವಿಚಿತ್ರತೆಯನಭೀಕ್ಷಿಸಿ—

1. ನುಮದರ್ದೊಂದು. 2. ಮೇಘಾಧ್ವಯ.

ಮ॥ಸ್ರ॥ ಎಸೆವಾಮ್ನಾಯಂಗಳಂತಾವಗಮತಿಶಯ ಶಾಖಾಮುಮಂ ಖ್ಯಾತ ಗಂಧ।
ರ್ವ ಸಭಾಶ್ರೀಯಂತೆ ಸಂವೇಷ್ಟಿತ ಬಹು ಕಳಕಂಠಾಭಿಶೋಭಾಮಯಂ ರಾ॥
ಕ್ಷಸ ರಾಜಾಸ್ಥಾನದಂತಗ್ಗದ ಸುಖಮಯಮಾಗಿರ್ದುದೀ ಚೂತಮೆಂದೀ।
ಕ್ಷಿಸುತಿರ್ದಂ ತಾನಲಂಪಿಂ ಕೃತಿರತಿರಮಣಂ ಸಾಹಸೋದ್ದಾಮಭೀಮಂ
॥೧೬೦॥

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾ ಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ಸಾಹಸ ಮರುತ್ಸುತ ವಿರಹ
ವರ್ಣನಂ ಕುಸುಮಾವಳೀದರ್ಶನೋತ್ಸುಕ
ಪ್ರಯಾಣವರ್ಣನಂ
ದಶಮಾಶ್ವಾಸಂ

---

## ಏಕಾದಶಾಶ್ವಾಸಂ

---

ಕಂ॥ ಶ್ರೀ ಕಂದರ್ಪ ನರೇಂದ್ರನಿ।
ದೇ ಕಂದರ್ಪಂಗೆ ವಿಜಯ ಸಹಕಾರಮೆನು॥
ತ್ತಾ ಕೋಮಳ ಸಹಕಾರಾ।
ನೋಕಹಮಂ ನೋಡುತಿರ್ದನಿರ್ದಾ ಪದದೊಳ್ ॥೧॥

ಚಂ॥ ಒಳಱುವ ವತ್ಸಧೇನು ತತಿಯಿಂ ಘನ ರೋದನ ಬಾಲಕಾ[ಳಿಯಿಂ]।
ವಳಿತ ನಿತಂಬ ವೃದ್ಧ ವನಿತಾವಳಿಯಿಂ ಜಡ ಯಾನ ಗರ್ಭಿಣೀ॥
ಕುಳದಿನುಪೇತ ಭಾರ ಶಿರದಿಂದಿರದೋಡಿ ಬರುತ್ತುಮಿರ್ದುದಾ।
ಕುಳ ಭಯದಿಂದೆ ಕಿಟ್ಟಿಲೆ ಕಿಱುಂದಲೆಯಾಗಿ ತದೀಯ ಭೂಜನಂ ॥೨॥

ಮ॥ ಕರಯುಷ್ಟಿ ವ್ಯಸನಾತಿವೃದ್ಧ ತತಿಯಿಂ ಯಾನೋದ್ಭವ ಸ್ಫೋಟಕೋ।
ತ್ಕರ ಭಿನ್ನಪ್ರಣ ಲಗ್ನಪಾದ ವನಿತಾ ಸಂದೋಹದಿಂ ದಾಮನೀ॥
ಪರಿಯುಕ್ತ ಪ್ರಚುರೋರು ಕಂಠ ಮಹಿಷೀ ಗೋವೃಂದದಿಂದಾಗಳಿಂ।
ತಿರದೆಟ್ಟೋಡಿ ಬರುತ್ತುಮಿರ್ದುದು ಭಯಂಬೆತ್ತಾ ಧರಿತ್ರೀ ಜನಂ ॥೩॥

ವನಿತಾಸಂತತಿ ಬಾಯ್ವಿಡುತ್ತೆ ಪಶುಗಳ್ ಗಾಳ್ಮೀಳೆನುತ್ತಂಧರ।
ಪ್ಪನಿತುಂ ಬಟ್ಟೆಯೊಳಂತುಮಿಂತೆಡಪಿ ಬೀೞುತ್ತೆಯ್ದೆ ಪಿಂತಪ್ಪರಂ॥
ಕನಲುತ್ತೊರ್ವರನೊರ್ವರಲ್ಲಿ ಕೆಡೆಮೆಟ್ಟುತ್ತೆಟ್ಟಿರುತ್ತಿರ್ಪ ತ।
ಜ್ಜನ ಕೋಳಾಹಳಮಂ ಕ್ಷಿತೀಶ ಮದನಂ ಕಂಡಂ ಪುರೋಭಾಗದೊಳ್ ॥೪॥

ಕಂ॥ ಶಿಶುಗಳ ಸತಿಯರ ವೃದ್ಧರ।
ಪಶುಗಳ ಸಂಕ್ಲೇಶಮಂ ನಿರೀಕ್ಷಿಸಿ ಕರುಣಾ॥
ವಶ ಚಿತ್ತನಿಳಾಧಿಪ ಕುಸು।
ಮಶರಂ ತಾಂ ತತ್ಪ್ರಜಾಳಿಗಭಿಮುಖನಾದಂ ॥೫॥

ಮ॥ ಪಳಿತ ಶ್ಮಶ್ರು ಮಹೋಚ್ಚ ಕೂರ್ಚ ವದನಂ ಪ್ರವ್ಯಕ್ತ ನಾನಾ ಶಿರಾ।
ವಿಳ [ದೇಹಂ] ಶಿಥಿಲ ತ್ವಗಾಕಲಿತನಾಕಂಪೋತ್ತಮಾಂಗಂ ಭಯಾ॥

ಕುಳ ಚಿತ್ರಂ ಕರಯಷ್ಟಿ ವಿನ್ಯಸನ[1]ಬದ್ಧೋರ್ವೀತಳಂ ತಾಂ ಕೃಷೀ।
ವಳನೊರ್ವಂ ಬರುತಿರ್ದನಾ ಜನದ ಯಾನೋತ್ಥಾನ ಸಂರಂಭದೊಳ್ ॥೬॥

ಆ ಕೃಷೀವಲನಂ ಕಂಡು—

ಕಂ॥ ಜನಮಿನಿತದೇಕೆ ಭಯದಿಂ।
ತನತನಗೋಡುತ್ತುಮಿರ್ಪುದೀ ತೆಱನಂ ಪೇ॥
ೞೆ[3]ನುತಮೆ ಕೃಷೀವಲನನಾ।
ಜನನಾಥ ಮನೋಜನಂತಪಂ ಬೆಸಗೊಂಡಂ ॥೭॥

ಚಂ॥ ನೆಱೆ[3] ಮನಮಂ ಭಯಂ ಪುದಿದು ಪೋಪುದಱಿಂ ಪೆಱತೊಂದನೇನುಮೆಂ।
ದಱಿಯದೆ ತತ್ಕೃಷೀವಲನಿಳಾಧಿಪ ಮನ್ಮಥನಂ ನಿರೀಕ್ಷಿಸುತ್ತೆ [ತಾ॥
ನೆ]ಱಗಿದನೆಯ್ದೆ ಮುನ್ನಱಿದನಂದದೆ ತಾನೆನೆ ಪೇಳದಾರನೇ।
ನಱಿಯಿ[2]ಸುತಾರನೇನೆಱಗಿಸುತ್ತಿರದಾಕೃತಿ ಸನ್ಮಹಾತ್ಮರಾ ॥೮॥

ವಿನಮಿತನಾಗಿ ನಿಂದು ನಿಜ ನಿಶ್ವಸಿತೋಚ್ಚತೆಯಂ ತಱಿಂಬಿ ಮೆ।
ಲ್ಲನೆ ನಿಟಿಲಾಗ್ರ ಘರ್ಮ ಜಲಮಂ ಬೆರಲಿಂ ಬಱಿಯುತ್ತುಮಾಗಳೊ॥
ಯ್ಯನೆ ತನುವಿಂ ಬೞಿಲ್ಕೆ ಪೆಱಪಿಂಗೆ [ಸಮಂತು] ಮಗುಳ್ದು ನೋಡುತುಂ।
ಜನಿತ ಭಯಪ್ರಸಂಗಮನೆಸೂಚಿಪುದಂಬಗೆದಂ[ಬಗೆಯೊಳ್] ಕೃಷೀವಲಂ ॥೯॥

ಮ॥ ಇದು ವಿಖ್ಯಾತಿಯ ಪುಷ್ಕಳಾಖ್ಯ ವಿಷಯಂ ಸಾಶ್ಚರ್ಯದಿಂ ಶೋಭಿಸಿ।
ರ್ಪುದು ತಾಂ ಪದ್ಮ[3]ಪುರಂ ಧರಾಧಿಪತಿಯಪ್ಪಂ ವಜ್ರಜಂಘೋರ್ವಿಪಂ॥
ಮುದಮಂ ತಾಳ್ದಿರೆಯೊರ್ವ ಸಿಂಹಬಲನೆಂಬಂ ವೈರಿ ಭೂಪಂ ಮಹೋ॥
ನ್ಮದನೀಗಳ್ ಮುಳಿಸಿಂದೆ ಬಂದು ಪುರಮಂ ಮುಯ್ವೆರ್ಚಿ ಮುತ್ತಿರ್ದಪಂ ॥೧೦॥

ಮ॥ ಮುಳಿಸಿಂದೀಗಳೆ [4]ಕೊಳ್ವನಾತನದು ಸಂಕೋಚಕ್ಕೆ ಬಂದಿರ್ದುದಾ।
ರಳವಲ್ಲಾ ಭಯದಿಂದೆ ನಾಡನಿತುಮೋಡುತ್ತಿರ್ದುದೇವೇೞ್ವೆನೀ॥
ಗಳಿದಂ ದೇವನಿರಲ್ಕೆ ಬಾರದೆನುತುಂ ಪೇೞ್ದಂತು ತದ್ವ್ಯಗ್ರದಿಂ।
ತಳರ್ದಂ ವೃದ್ಧ ಕೃಷೀವಲಂ ಸ್ವಜನಮಂ ತಾನೆಯ್ದುವೌತ್ಸುಕ್ಯದಿಂ ॥೧೧॥

ಆ ವಾರ್ತಾಕೀರ್ಣ ಕರ್ಣನಾಗಿ—

---

1. ಜಂಘೋರ್ವೀ. 2. ಸಿದಾರ. 3. ಪುರಂದರಾ. 4. ಕೊಂಬ.

ಮ॥ ಜನತಾ ಕ್ಲೇಶಮನಿಂತಿದಂ ಸೆಱೆಯೆ ಕಾಣುತ್ತಿರ್ದುಮಾನಿಲ್ಲಿ ಸು।
ಮ್ಮನಿರಲ್ ಕ್ಷತ್ರಕುಲಕ್ಕೆ ತಕ್ಕುದೆ ಸಮಂತಾತಂ ಭುಜಾ[1]ಶೌರ್ಯದು॥
ರ್ಕಿನೊಳಿನ್ನಾರಳವಲ್ತು ಸಿಂಹಬಲನೆಂಬೀ ಮಾತು[2]ಗೇಳ್ದಿಂತು ಪೋ।
ಪೆನೆನುತ್ತುಂ ನೃಪ ಚಿತ್ತಜಂ ಮುಳಿಸನಾಗಳ್ ತಾಳ್ದಿದಂ ಚಿತ್ತದೊಳ್ ॥೧೨॥

ಮುನಿರಾಜಂ ದಯೆಯಿಂದಮಿತ್ತ ಪಲವುಂ ದಿವ್ಯಾಸ್ತ್ರ ಶಸ್ತ್ರಂಗಳೊ।
ಳ್ಪನದಂ ನೋಡುವೆನೊರ್ಮೆಯುಂ ವಿಕಸನ ಶ್ರೀಸಂಗಮಾಕಾಂಕ್ಷೆಯಿಂ॥
[3]ತನಿಗೆತ್ತುತ್ತೆಸೆವೆನ್ನ ದೋರ್ದ್ವಯದ ತೀಡಂ ರೂಢಿಪೆಂ ಸಂಗರಾ।
ವನಿಯೊಳ್ ಬೇಗದೊಳೀಗಳೆಂದು ಬಗೆದಂ ಭೂಪಾಲ ಪುಷ್ಪಾಯುಧಂ ॥೧೩॥

ಅದನಱಿದು ಮೇದಾವಿಳನಿಂತೆಂದಂ—

ಮ॥ ಕದನ ಕ್ರೀಡೆಯ [4]ಪೋಟೆತ್ತೆ ನಮ್ಮ ವಿಷಯ ವ್ಯಾಸಂಗಮೇ ದೇವ ಸಾ।
ಲ್ವುದೆನಲ್ಕೇಂ ಸಖ ನೀನಿದಂ ನುಡಿವರೇ ಪೇೞಿಂತಿದಂ ಕಂಡು ಪಿಂ॥
ಗಿದವಂ ಕ್ಷತ್ರಕುಲ ಪ್ರಸೂತನೆ ರಣ ಕ್ರೀಡಾರ್ಣವಂ ಬಂದೊಡೀ।
ಸದೆ ಮದ್ಬಾಹುಗಳೇಕೆ ನಿಲ್ವುವೆನುತಿರ್ದಂ ಭೂಪ ಪುಷ್ಪಾಯುಧಂ ॥೧೪॥

ಆ ಸಮಯದೊಳ್—

ಚಂ॥ ಮಿಳಿರ್ವ ಚಲತ್ಪಟಾಂಚಲಮಯ ಧ್ವಜರಾಜಿತನಸ್ತ್ರ ಶಸ್ತ್ರ ಸಂ।
ಕುಳ ಮಿಳಿತಂ ಮರುಜ್ಜವ ಜಯೋದ್ಧತ [5]ವಾರಣ ಯುಕ್ತಮಾಗೆ ಕ॥
ಣ್ಗೊಳಿಸುವ ಚರ್ಮ ನಿರ್ಮಿತ ವರೂಥಮನೇಱಿ ಬರುತ್ತುಮಿರ್ದನಾ।
ಕಳಿತ ಭಯೋತ್ಕರಂ ವಿಗತ ಪೌರುಷನೊರ್ವನದೊಂದು ಬೇಗದಿಂ ॥೧೫॥

ಇಂತು ಬರ್ಪುದಂ ಕಂಡು—

ಕಂ॥ ಸರಥನದೊರ್ವಂ ದೂರದೆ।
ಬರುತಿರ್ದಪನವನೊಳಱಿವೆನಾಹವ ವಾರ್ತಾಂ॥
ತರಮನೆನುತ್ತುಮವುಂಕಿದ।
ನಿರದಾ ಪವನಂಜಯಾಶ್ವನಂ ನೃಪ ಮದನಂ ॥೧೬॥

---

1. ಶೌರ್ಯವಕ್ಕಿ. 2. ಗೆಳ್ದಿಂತು. 3. ತನಗಿತ್ತುತ್ತೆಸೆವನ್ನದೋರ್ದಯದತಿನಂ.
4. ಪೊತ್ತೆನೆಮ್ಮ. 5. ದೋರಣ.

ಮ॥ ಎನಿತಾನುಂ ತನಗಾಗೆ ಬರ್ಪ ಹಯರತ್ನಾರೂಢ ಕಂದರ್ಪದೇ।
ವನಸಂತಾಗಳೆ ಕಂಡು ಕಂಪಿಸುತುಮಾಂ ಪುಂ ಸಾಯೆನಿಂ ಸತ್ತಿನೆಂ॥
ದು ನೆಲಕ್ಕಾ ರಥದಿಂದೆ ಪಾಯ್ದು ಬೆಮರುತ್ತುಂ ದೇವ ನೀಂ ಕಾಯ ಕಾ।
ಯೆನುತಿರ್ದಾಕಡುವಂದೆಯಿಂ ಭಯರಸಂ ಪ್ರತ್ಯಕ್ಷಮಾಯ್ತಾಜಿಯೊಳ್ ॥೧೭॥

ಕಂ॥ ಬರೆ ಕಾಣುತ್ತಮೆ ಭಯದಿಂ।
ಪರಿಕಂಪಂಗೊಳ್ವ ಭೀತನಂ ಕಂಡು ನೃಪ॥
ಸ್ಮರನಂಜದಿರಂಜದಿರೆಂ।
ಬುರುವಚನ ಪ್ರಚಯದಿಂದಮಭಯಮನಿತ್ತಂ ॥೧೮॥

ಉ॥ ಆತನ ಚಿತ್ತದೊಳ್ ಪುದಿದ ಶಂಕೆಯನಾಗಳೆ ತಾಂ ದಯಾವಚೋ।
ವ್ರಾತದಿನೆಯ್ದೆ ತೊಳ್ದಿ ಪಿರಿದುಂ ಪದೆಪಿಂ ಮೊಗಮಿತ್ತು ನೀನದಾ॥
ರಾತನದೆತ್ತಣಿಂ ಬರುತುಮಿರ್ದಪೆಯೆಲ್ಲಿಗೆ ಪೋಪೆ ನಾಮುಮೇ।
ನೇ[ತಕೆ] ಭೀತಿಗೊಳ್ವೆಯೆನುತುಂ ಬೆಸಗೊಂಡನಿಳೇಶ ಮನ್ಮಥಂ ॥೧೯॥

ಇಂತು ಬೆಸಗೊಂಡಾಗಳ್—

ಉ॥ ಒಟ್ಟಜೆಯಿಂದ ಸಿಂಹಬಲನೆಂಬ ವಿರೋಧಿ ಕಡಂಗಿ ಮುತ್ತಿದಂ।
ತೊಟ್ಟನೆ ಬಂದು ಪದ್ಮಪುರಿಯಂ ಮದಧೀಶ್ವರ ವಜ್ರಜಂಘ[1]ನೆ॥
ಟ್ಟಿಟ್ಟುವೆನೆಂದು ಪೂಣ್ದು ಪೊಱಮಟ್ಟದಿರಾಗಿಯೆ ಕಾದೆ ಕಾಳೆಗಂ।
ಗೆಟ್ಟುದು ಪುಣ್ಯದಿಂ ಬರ್ದುಕಿ ಬಂದೆನದೆನ್ನ ಪೆಸರ್ ಬಳಾಹಕಂ ॥೨೦॥

ಕಂ॥ ತಾಂ ದೋರ್ವಳನಸ್ಮತ್ಪತಿ।
ಸಂದಣಿಸಿಯೆ ಬಿಟ್ಟನತಿಬಲಂ ಸಿಂಹಬಲಂ॥
ಹಿಂದೇನಾದುದು ಕಾಳೆಗ।
ವೆಂದಱಿಯೆಂ ಬರ್ದುಕಿ ಬಂದೆನಾಯುವ ಬಲದಿಂ ॥೨೧॥

[2]ಇಂತೆಂದಾ ಕಾಂದಿಶೀಕನ ಮಾತುಗೇಳ್ದು ಮಹೀನಾಥ ಮನೋಜಂ ದರಸ್ಮಿತ ಮುಖ ನೀರೇಜನಾಗಿ—

1. ನೆರ್ಜೆಟ್ಟಿ. 2. ಇಂತೆಂದು.

ಉ॥ ಈ ರಥವಿಾ [1]ಜನಾಧಿಕದ ವಾಜಿಗಳೀ ದೊರೆವೆತ್ತ ಚಾಪವೀ ।
ಕ್ರೂರ ಶರಂಗಳೀ [2]ಬಿರುದದಿಂ ಪಿರಿದೊಪ್ಪುವ ಕೇತು ದಂಡವಿಾ ॥
ಭೂರಿ ಭುಜಂಗಳಾಗೆಯುಮರಾತಿಗಳಂ ತವೆ ಗೆಲ್ವುದಲ್ಲದಂ ।
ದಾರಣದಲ್ಲಿ [3]ಮಟ್ಟಿಗೊಡೆ ಸಗ್ಗಮದಾಗದೆ ಪೇಳ್ ವಲಾಹಕಾ ॥೨೨॥

ಕಂ॥ ಬವರದ ಕನಸನದಂ ಕಾ ।
ಣ್ಬವನಲ್ಲಾಂ ಹರಣಮುಳ್ಳೊಡಂ ಹೂಡಿ ಬರ್ದುಂ ॥
ಕುವೆನೆಂದಿಂತು ಬಳಾಹಕ ।
ನವನಿಪ ಮದನನ ಮೊಗಕ್ಕೆ ನಗೆಯಂ ತಂದಂ ॥೨೩॥

ಇನಿತುಂ ಭಯಮಂ ಬಳಾಹಕ ।
ಮನದೊಳ್ ತಳೆಯದಿರು ನೀನದಂ ಬಿಡು ಬಾ ಭೋಂ ॥
ಕನೆ ತೋಱಸಾ ರಣಮುಮ ।
ನೆನಗೆನುತುಂ ನೃಪ[ತಿ]ಕಂತು ನಯದಿಂ ನುಡಿವಂ ॥೨೪॥

ಇಂತು ನುಡಿದಾಗಳ್—

ಮ॥ ತಲೆಗಾಯೆನ್ನಯ ದೈವಮಲ್ಲಿ ಮೊದಲೊಳ್ [4]ತಳ್ತಿಲ್ಲಿ ಕಾರುಣ್ಯದಿಂ ।
ಸಲೆ ನೀಂ ಕಾಯೆ ಬರ್ದುಂಕಿದೆಂ ರಥ ಸಮೇತಂ ಪೋಗಲಿನ್ನೆಮ್ಮ ನಿಂ ॥
ತೆಲೆ ವೀರೋತ್ತಮ ಕೊಳ್ಳದಂ ಮಗುಳೆ ಬಾರೆಂದೆನ್ನದಿರ್ ಯುದ್ಧದ ।
ತ್ತಲೆ[5]ನುತ್ತಿಂತು ಬಲಾಹಕಂ ನೃಪ ಮನೋಜಂಗೆಂದನಾಶಂಕೆಯಿಂ ॥೨೫॥

ಕಂ॥ ಮನದೊಳಿನಿತಂಜುವೊಡೆ ನೀ ।
ನೆನಗಾ ಸಮರಮನೆ ದೂರದಿಂ ತೋಱಯೆ ಬಾ ॥
ಯೆನುತುಂ ಬಳಾಹಕನ ಮನ ।
ಮನೊಡಂಬಡಿಸಿದನಿಳೇಶ ಮನ್ಮಥನಾಗಳ್ ॥೨೬॥

ಮ॥ ಪದೆದಿತ್ತಾ [6]ಪವನಂಜಯಾಹ್ವ ಹಯರತ್ನಾರೂಢನಂ ಮಾಡಿ ಬೇ ।
ಗದೆ ಮೇಧಾವಿಳನಂ ವಿನೂತ ವಿಜಯಶ್ರೀ ವೇದಿಕಾ ಶೀರ್ಷಮಂ ॥

1. ಜನಾಧಿಕ. 2. ಬಿರುದನಿಂ. 3. ಮಗ್ಗಿದೊಡೆ. 4. ಕಳ್ತಿಲ್ಲಿ. 5. ಮಂತಿಂತು.
6. ಪವನಂಜಯಾಶ್ವ.

ಮುದದಿಂದೇಱುವವೊಲ್ ವರೂಥಮನದಂ ತಾನೇಱಿದಂ ವಿಕ್ರಮಾ ।
ಸ್ಪದ ಕಂದರ್ಪ ನೃಪಂ ಬಳಾಹಕಯುತಂ ತತ್ಸಂಗರೋತ್ಸಾಹದಿಂ ॥೨೭॥

ಮುನಿವೃಂದಾರಕ ದತ್ತ ಮಂತ್ರ ಮುಖದಿಂದಾಹ್ವಾನಿಸಲ್ಕಾಗಳಂ ।
ತನಲಜ್ವಾಲೆಗಳಂ ಸಮುಂತುಗುಳುತುಂ ರೌದ್ರೋರಗಾಕಾರದಿಂ ॥
ದನಿತುಂ ಫೂತ್ಕರಿಸುತ್ತೆ ಕಾಂತಿ ನಿಮಿರುತ್ತುದ್ದಂಡ ಬಾಣಾಭಿಸಾ ।
ರ ನಿಕಾಯಂ ಬರೆ ಭೂಪ [1]ಮನ್ಮಥನದಂ ತಾಂ ಕಂಡು ಮೆಯ್ವೆರ್ಚಿದಂ ॥೨೮॥

ಕಂ॥ ಬಾಣಾಸನ ಶರ ಗಣಮು ।
[2]ಕ್ಷೀಣೋಗ್ರ ಭುಜಂಗ ರೂಪದಿಂ ಬರುತಿರೆ ತಾಂ ॥
ಕಾಣುತ್ತುಮೆ ರಥದಿಂದಾ ।
ಕ್ಷೋಣಿಗೆ ಪಾಯ್ದಂ ಬಳಾಹಕಂ ಭಯದಿಂದಂ ॥೨೯॥

ಜಗದೀಶ ಮನ್ಮಥಂ ನಸು ।
ನಗುತಂಜದಿರಂಜದಿರ್ ಬಲಾಹಕ ನೀಂ ಪ ।
ನ್ನಗ ಸಮಿತಿಯೆಂದು ಮನದೊಳ್ ।
ಬಗೆಯದಿರಿನಿತುಂ ಮದೀಯ ದಿವ್ಯಾಸ್ತ್ರಂಗಳ್ ॥೩೦॥

ಉ॥ ಭೀತಿಯನುಂಟುಮಾಡುಗುಮಿವಂಗೆ ಶರಾಸನ ಬಾಣ ಜಾಲಮಿಂ ।
ತೀ ತೆಱದಿಂದಮಿರ್ದೊಡಮಿವೆಂದು ವಿಗುರ್ವಣ ರೂಪಮಂ ಸಮಂ ॥
ತಾತುರದಿಂ ವಿಸರ್ಜಿಸಿಯೆ ತೋಱು ಬಳಾಹಕ ಬೇಗದಿಂದೆ ಬಾ ।
ಬಾ ತಡವಾಗಲಾಗದು ವರೂಥಮನೇಱೆನೆ ಭೂಪ ಮನ್ಮಥಂ ॥೩೧॥

ಕಂ॥ ಘನ ಸಾಮರ್ಥ್ಯಮದಿಂತುಟು ।
ತನಗಿಲ್ಲದೊಡೇಕೆ [3]ತೋಱಿಸೆಂಬನೆ ಸಮರಾ ॥
ವನಿಯಂ ಮೋಣಮರನೊ ಖಚ ।
ರನೊ ತಾನೆನುತುಂ ಬಳಾಹಕಂ ವೀಕ್ಷಿಸಿದಂ ॥೩೨॥

ಚಂ॥ [4]ಮನುಜನೆನುತ್ತುಮಿನ್ನೆವರಮಾಂ ಬಗೆದಿರ್ದೆನೆಲೈ ಮಹಾತ್ಮ ನೀ ।
ನನಿಮಿಷ ಖೇಚರಾವಳಿಯೊಳಾವನದಂ ಕೃಪೆಯಿಂ ನಿರೂಪಿಸು ॥

---

1. ಮನ್ಮಥನವಂ. 2. ಕ್ಷೀಣಾಗ್ರ. 3. ತೋಱಿಸೆಂಬೆನೆ. 4. ಮನೋಜ.

ತ್ರಿನಗಭಯಂಗುಡಲ್ ಸರಿಯೊಳೇಱುವೆಲ್ಲದೊಡೇಱಲಪ್ಮೆನಿಂ ।
ತನುವಿಸಿಯುಂ ವರೂಥಮನೆನುತ್ತಮೆ ಕೈಮುಗಿದಂ ಬಳಾಹಕಂ ॥೩೩॥

ಅಂತು ಕೇಳ್ದಾಗಳ್—

ಕಂ॥ ಈ ವಿಭು ತಾಂ ಕಂದರ್ಪ ಮ ।
ಹೀವರನನುಪಮ ಕೃಪಾಳು ನೀನಂಜದಿರಿ ॥
ನ್ನೇವೈಸದಿರೆಂದಾ ಮೇ ।
ಧಾವಿಳನುಸಿರಲ್ ಬಲಾಹಕಂ ಮುದನಾದಂ ॥೩೪॥

ಚಂ॥ ಇನ್ನೆನಗಿಲ್ಲ ಭೀತಿ ಭವದೀಯ ದಯೋನ್ನತಿಯಾಯ್ತು ದೇವ ತೇ ॥
ಱನ್ನೆಱೆ ಚೋದಿಪೆಂ ಸಮರದೊಳ್ ನಿಮಗಾಂಪವನಾವನಂತದ ॥
ರ್ಕೆನ್ನಧಿನಾಥನಂ ನಿಱಿಸಿಯುಜ್ಜುಗಮಂ ಬಗೆಗೊಳ್ವುದೆಂದು ತಾಂ ।
ಬಿನ್ನವಿಸುತ್ತುಮಾ ರಥಮನೇಱಿದನಾ ಕ್ಷಣದಿಂ ಬಳಾಹಕಂ ॥೩೫॥

ಉ॥ ಆ ಪವನಂಜಯಾಶ್ವನ ರಯಕ್ಕೆ ರಯಂ ದಲಿದೆಂಬ ವಿಸ್ಮಯಂ ।
ಭೂಪ ಲತಾಂತ ಬಾಣನ ಮನಕ್ಕೆಸಿತಾಗೆಯುಮಾಗಳುದ್ಘ ಶೋ ॥
ಭಾ ಪುರಿಯಪ್ಪ ಪದ್ಮಪುರದತ್ತಲೆ [1]ಚೋದಿಸಿದಂ ಬಳಾಹಕಂ ।
[2]ಚಾಪಳ ವೃತ್ತಿಯಗ್ಗಳಿಸಿ[3]ದಾತ್ಮ ಮನೋರಥಮಂ ವರೂಥಮಂ ॥೩೬॥

ಚಂ॥ ಅದೆ ಮುಗಿಲಂ ತುಱುಂಬುವ ಪತಾಕೆಗಳೆತ್ತಿದ ಕೊತ್ತಳಂಗಳಿಂ ।
ಪುದಿದುದೆ ದೇವ ಪದ್ಮಪುರಮಾ ಪುರಮಂ ಸಲೆ ಸುತ್ತಿ ಮುತ್ತಿ ಸಾ ॥
ರದೆ ಸರಿಗೇಱ ಸೇರುವುದೆ ಸಿಂಹಬಳೋಗ್ರ [4]ಪದಾತಿಯೆಂದು ತೋ ।
ಱದನವನೀಶ ಕಂತುಗಱವಂತಿರೆ ತರ್ಜನಿಯಿಂ ಬಳಾಹಕಂ ॥೩೭॥

ಉ॥ ದೂರದೆ ಕಾಣುತುಂ ಕರಿ ಘಟಾವಳಿ ಗಂಡಮೃಗಾಳಿ ತದ್ಗುಹಾ ।
ಗಾರದಿನೇಳ್ವವೋಲ್ ಹೃದಯದಿಂದೊಗೆದುರ್ಬಿದ ಕೋಪ ಭೀಕರಾಂ ॥
ಗಾರಕನಾಗಳಂತೆ ತಲೆದೋಱರೆ ಕಣ್ಗಳ[5]ನೋವದೀಂಟುವಂ ।
ತಾ ರಿಪುಸೈನ್ಯ ಸಂಕುಳಮನೀಕ್ಷಿಸಿದಂ ನರನಾಥ ಮನ್ಮಥಂ ॥೩೮॥

1. ಬೋಧಿಸಿದಂ. 2. ಚಾಳಿಪ. 3. ದತ್ತು. 4. ಪದವಿಯೆಂದು.
5. ನೋವದೆಂಟು.

ಚಂ॥ ಕವಿದು ಕಡಂಗಿ ಪೇೞಱಿವೆ ಭೋಂಕನೆ ಪಾಯ್ವ ಪಯೋಧಿಯೊಳ್‌ಮುೞುಂ।
ಗುವ ಬಡಬಾಗ್ನಿಯಂ ನೆನೆಯಿಸುತ್ತುಮುದಗ್ರ ಪಟು ಪ್ರತಾಪ ವೈ॥
ಭವನೆನಿಸಿರ್ಪ ಸಿಂಹಬಲ ಭೂಪನ ಭೀಕರ ವಾಹಿನೀ ಮಹಾ।
ರ್ಣವದೊಳಗಾಬ್ದಿ ಪದ್ಮಪುರಮಂ ನೆಱೆ ಕಂಡನಿಳೇಶ ಮನ್ಮಥಂ ॥೩೯॥

ಕಂ॥ ಕುಪಿತಾರುಣ ಲೋಚನದಿಂ।
ರಿಪು ಬಲಮಂ ಪೀರ್ವ ತೆಱದೆ ಕಂದರ್ಪ ಧರಾ॥
ಧಿಪನೀಕ್ಷಿಸುತಿರೆಯಿರೆ ಪ।
ದ್ಮಪುರೋಪಾಂತೋರ್ವಿಗೆಯ್ದೆ ವಂದತ್ತು ರಥಂ ॥೪೦॥

ಉ॥ ಎತ್ತಿಡುತಿರ್ಪ ಡೆಂಕಣಿಗಳಾರ್ದುಱೆ ಪಾಯಿಪ ಗೆಗ್ಗೆ ಗೋಂಟೆಯಂ।
ಪತ್ತಿಪ ಸುಮ್ಮನೋವದಡರ್ದೇಱುವ ವೀರ ಭಟರ್ ವಿಜೃಂಭಮಾ॥
[1]ನುತ್ತಿರೆ ಪೊಯ್ವ ಲಗ್ಗೆವಱೆ ಬೊಬ್ಬಿಱುವಬ್ಬರವಾಗಳದ್ಭುತಂ।
ಬೆತ್ತುದು ದುರ್ಗಮಂ ಮುಸುಱು ಕಾದುವರಾತಿ ಬಲಾತಿ ಸಂಭ್ರಮಂ ॥೪೧॥

ಚಂ॥ ಬಿಡುವುರಿಯೆಣ್ಣೆ ಸಂದಣಿಸಿ ನೂಂಕುವ ಪಾಸಱೆ ಸೂಸುತಿರ್ಪ ಕೆಂ।
ಗಿಡಿ ಮಣಲೆತ್ತಿ ಹೊತ್ತಿ ಕವಿದಿಕ್ಕುವ ಪೆರ್ಗೊಡವಾವಿನೋಳಿ ಸಂ॥
ಕಡಿಯೆಡೆಗೆಯ್ದೆ ವಂದಿಡುವ ಡೆಂಕಣಿ ಮುಟ್ಟೆವರಲ್ಕೆ ಬಿಟ್ಟು ಮುಂ।
ಗೆಡುಪುವ ಕಟ್ಟು ಗಾಲಿಗಳಿನದ್ಭುತಮಾದುದು ಕೋಂಟೆಗಾಳೆಗಂ ॥೪೨॥

ಅಳಿವ ಪದಾತಿಯಂ [2]ಬಗೆಯದರ್ಣವ ವೀಚಿಗಳಂತೆ ಮೇಲೆ ಮೇ।
ಲಳುರ್ದು ಕಡಂಗಿಯಾರ್ದುಲಿದು ಸಂಧಿಸಿ ಸಿಂಹಬಳಾವನೀಶನಾ
ಬಳದ ಭಟರ್ಕಳೋವದಡರ್ದೇಱುಕೊಳುತ್ತಿರೆ ಪೋಯ್ತು ಕೋಂಟೆಯಂ।
ದೊಳಱು ಬಿಗುರ್ತು ಬಾಯ್ಬಿಡುತುಮಿರ್ದುದು ತೊಟ್ಟನೆ ತತ್ಪುರೀಜನಂ ॥೪೩॥

ಅದಂ ಕಂಡಾಗಳ್—

ಮ॥ ಭ್ರುಕುಟಿ ಭ್ರೂಯುಗ ಭಾಳಮುದ್ಧತ ಘನ ಸ್ವೇದೋದಬಿಂದು ಪ್ರಕೀ।
ರ್ಣ ಕಪೋಲ ದ್ವಯಮಪ್ಪಿನಂ ಕಲುಷಮಂ ಕೈಕೊಂಡು ಕೊಂಡಂ ಕುಭೃ।
ನ್ಮಕರಾಂಕಂ ಭುಜದಂಡದಿಂ ಜಯವಧೂ ಜನ್ಮಾಬ್ಧಿಸೀ ಕಾಂಡಮಂ।
[3]ಪ್ರಕಟೋಗ್ರಾಹಿತ ಕಾಲದಂಡಮನುದಗ್ರೋಚ್ಚಂಡ ಕೋದಂಡಮಂ ॥೪೪॥

1. ಗುತ್ತಿರೆ. 2. ಬಗೆಯದವರ್ಷ. 3. ಪ್ರಕಟಾಗ್ರಾಹಿತ.

ಮ॥ಸ್ರ॥ ಧನುವಂ ಕೊಂಡೊತ್ತಿ ತನ್ಮಾರ್ಗಿಯನಟನಿಗೆ ಹಸ್ತಾಗ್ರದಿಂದೆತ್ತಿ ಕಂದ ।
ರ್ಪ ನೃಪಾಲಂ ಕಾಯ್ಪಿನಿಂದೇಱುಪುವ ಸರಭಸಕ್ಕುರ್ವಿ ತರ್ಗಿತ್ತು ನಾಗೇಂ॥
ದ್ರನ ಭೋಗಂ ಬಳ್ಕಿ ಸುಯ್ಲಿಕ್ಕಿದುದು ಪರಿಹತಕ್ಕುದ್ಧ ಘಾತಕ್ಕೆ ಬೆನ್ನೊ ।
ಡ್ಡಿನ ಪೊಂಗಳ್ ದಕ್ಕಿ ಕೂರ್ಮಂ ಕುಸುರಿನೊಳರೆ ಮಟ್ಟಿರ್ದುದಬ್ಜೋ
ದ್ಭವಾಂಡಂ ॥೪೫॥

ಉ॥ ಝೂಡಿಸಿದಂತುರುಳ್ದು ರು ಭಟರ್ ಸರಿಗೇಱುತೆ ಕೋಂಟೆಯುಗ್ರದಿಂ ।
ನಾಡೆ ಕಲಂಕಿತಾಂಗೊಳಗಿನಂಬುವಿನಂತೆ ಬಲಂ ಸುರುಳ್ದುದ ॥
ಲ್ಲಾಡಿದನಲ್ಕಿ ಸಿಂಹಬಲ ಭೂವರನಾಕ್ಷಣದಿಂದೆ ಕರ್ಣಸಂ ।
ತಾಡಿತ ಭೂಪ ಮನ್ಮಥ ಧನುರ್ಗುಣ ಟಂಕೃತ ಘೋರ ಘೋಷದಿಂ ॥೪೬॥

ಉ॥ ಒರ್ವನೆ ತಾನಿಳೇಶ ಕುಸುಮಾಯುಧ [1]ನಲ್ಲಿ ನೋಡೆ ಸಾ ।
ಸಿರ್ವರೆನಲ್ಕೆ ತೋಱುತಿರೆ [2]ಕಂಡು ಸಮುದ್ಗತ ಭೀತಿಯಿಂದಮಾ ॥
ಪೆರ್ವಲಮೆಯ್ದೆ ಸುತ್ತುಱದು ಮುತ್ತಿಗೆಯಂ ನೆಱೆ ಬಿಟ್ಟು ಬಂದು ಸೈ ।
ತೊರ್ವುಳಿಗೊಂಡು ಸಾರ್ದುದಿರದಾಗಳೆ ಸಿಂಹಬಳಾವನೀಶನಾ ॥೪೭॥

ಕಂ॥ ಪದುಳಿಸಿ [ನುಡಿ]ದು ನಿರೀಕ್ಷಿಸು ।
ತಿದಿರೊಳ್ ಕಂಡೊರ್ವನೊರ್ವನಿವನೋಡುಗುವೋ ॥
ವದೆ ಕವಿ ಕವಿಯೆನುತುಂ ಕವಿ ।
ದುದು ಕಡುಪಿಂ ಸಿಂಹಬಲನ ಬಲಮಾ ಕ್ಷಣದಿಂ ॥೪೮॥

ಚಂ॥ ಮುಳಿದು [3]ಮಹಾ ಸಮಿರಾರಣನ ಮೇಲೆ ಘನಾವಳಿ ನೂಂಕುವಂತೆ ಗೊಂ ।
ದಳಿಸಿ ಕಡಂಗಿ ನೂಂಕುವರಿಸೈನ್ಯಮನೋವದೆ ದಿವ್ಯ ಬಾಣಮಂ ॥
ಘಳಿಲನೆ ತೊಟ್ಟು ಬಿಟ್ಟು ನೆಱೆ ಪೂಣ್ಬಡಿಸಲ್ ಬಿರಿದೋಡು[4]ತಿರ್ದರಾ ।
ಗಳೆ ನರನಾಥ ಕಂತುವಿನ ಕೂರ್ಗಣೆಗಳ್ಕಿ ತದೀಯ ಸೈನಿಕರ್ ॥೪೯॥

ಆ ಸಮಯದೊಳ್—

ಚಂ॥ ಅಡರ್ದೊಡಬೀಳುತಿರ್ದರಿಭಟಾವಳಿ ತೊಟ್ಟಗೆ ಕೋಟೆಯುಗ್ರದಿಂ ।
ಕೆಡೆದು ಕೆರಳ್ದು ಮತ್ತುಱದೆ ಭೋಂಕನೆ ನೂಂಕುವ ನೂಂಕಿದಾಗಳಾ ॥

---

1. ಕಣ್ಣೆಕೂಡೆ. 2. ಕಂತು. 3. ಮಹತ್ಸಮಿರಾರಣ. 4. ತಿರ್ದುದಾ.

ಪಡೆ ನೃಪ ಕಂತು ಬಾಳ ಹರಿಯಂ ನೆಱೆ[ತೋರ್ಪೊ]ಡೆಯೋಡುವಂದಮಂ ।
ತಡೆಯದೆ ವಜ್ರಜಂಘನವನೀಕ್ಷಿಸಿ ವಿಸ್ಮಯಮುತ್ತು ಚಿತ್ತದೊಳ್ ॥೫೦॥

ಹಳವಿಗೆ ನಮ್ಮದೀ ರಥಮಿದಪ್ಪೊಡೆ ನಮ್ಮದು ವಾಜಿ ನಮ್ಮವ ।
ಗ್ಗಳಿಕೆಯೊಳಲ್ಲಿ ಚೋದಿಸುವವಂ ನೆಱೆ ನಮ್ಮ ಬಳಾಹಕಂ ತಳ ॥
ತ್ತಳಿಸುವ ಕಾಯ ಕಾಂತಿಯ ಮಹಾತ್ಮನದಾವನೊ ದೇವನೊಳ್ ಸಮಂ ।
[1]ಗಳೆನುತೆ ವಿಸ್ಮಯಂಬಡುತುಮೀಕ್ಷಿಸಿದಂ ಪದೆದಾ ಧರಾಧಿಪಂ ॥೫೧॥

ಮ॥ ಅರಿ ಸೈನ್ಯಾರ್ಣವದೊಳ್ ಮುಳುಂಗುತಿರೆ ಕಂಡೀ [2]ಭಕ್ತರೊಳ್ ಸಂದನು ।
ದ್ಧರಿಸಲ್ ಮಾನವನಲ್ತು ಮತ್ಸುಕೃತ ದೈವಂ ತಾನೆ ದಲ್ [3]ನೋಟಿಪ್ಪೊಡೀ
ನರನೇಕಾಕಿಯುಮಾಗೆ ಸಿಂಹಬಲ ಭೂಭೃತ್ಸೇನೆ[4]ಗಾತಂಕಮಂ ।
ಪಿರಿದುಂ ಮಾಡಿದನಿಂತು ಮಾಳ್ಪನೆ ಜವಂ ತಾನಾದೊಡಂ ಯುದ್ಧದೊಳ್ ॥೫೨॥

ಉ॥ ಈ ಪುರುಷಂ ಮದೀಯ ಸುಕೃತೋನ್ನತ ದೈವಮೆ ತಪ್ಪದೀಗಳಾ ।
ನೀ ಪುರುಷಾರ್ಥಿಯಪ್ಪನ ಸಹಾಯದೆ ಕಾದುವೆನಿಂತು ಕಾವದಂ ॥
ದೀ ಪುರವಲ್ಲಿ ಸೋಲದೊಡೆ ಸಿಂಹಬಲಂ ಬಿಡನೆಂಬ ಭೀತಿಯಿಂ ।
ಭೂಪತಿ ವಜ್ರಜಂಘನಿರದಾಗಳೆ ತಾಂ ಪೊಱಮಟ್ಟು ದುರ್ಗದಿಂ ॥೫೩॥

ಕಂ॥ ತನಗುಳ್ಳ ಬಲಂಬೆರಸಾ ।
ಜನನಾಥಂ ವಜ್ರಜಂಘನಾ ಪುರಮಂ ಭೋಂ ॥
ಕನೆ ಪೊಱಮಟ್ಟಂ ಭೂವರ ।
ಮನಸಿಜನಿರ್ದೆಡೆಗೆ ತಡೆಯದಂದೆಟ್ಟಿಂದಂ ॥೫೪॥

ಮ॥ ಬರುತಿರ್ಪಾಳ್ದನನಾ ಬಳಾಹಕನವಂ ತಾಂ ಕಂಡು ಕಂಡಂತೆ ಸಾ ।
ದರದಿಂದಾನತನಾಗಿ ದೇವ ನೆಱೆ ನಮ್ಮಂ ಕಾಯಲೆಟ್ಟಿಂದವನೀ ॥
ವರ ಕಂದರ್ಪ ನರೇಂದ್ರನೆಂದಱಪೆ ಕೇಳುತ್ತೆಯ್ದಿವಂದಂಘ್ರಿ ಪಂ ।
ಕರುಹಾಲೀಢ ಲಸತ್ಕಿರೀಟ ಮುಖನಾದಂ ವಜ್ರಜಂಘೋರ್ವಿಪಂ ॥೫೫॥

ಚಂ॥ ವಿನಮಿತನಾಗಿ ನಿಂದತುಳ ಭೀತಿಯುತಾತ್ಮಕನಪ್ಪ ವಜ್ರಜಂ ।
ಘನ ಮುಖಮಂ ನಿರೀಕ್ಷಿಸಿ ನರೇಂದ್ರ ಮನೋಜನುದಾತ್ತ ವಾಕ್ಯದಿಂ ॥

1. ತೆನುತಂ. 2. ಪೊತ್ತರೊಳ್. 3. ಮಾಟಿಪ್ಪೊಡೀ. 4. ಗಾತಂಕರಂ.

ಮನಕೆ ಪೊಡರ್ಪನೊಂದಿಸಿ ಬೞಿಕ್ಕೆ ಬಳಾಹಕ [1]ಚೋದಿಸತ್ತ ಭೋಂ।
ಕನೆ ರಥಮಂ ದಲೆಂದು ಬೆಸಸುತ್ತಿರೆ ಪೊಣ್ಮಿದುದತ್ತಲದ್ಭುತಂ ॥೫೬॥

ನೆಱೆ ನಿಜ ಸೇನೆ [2]ಪೂಣ್ಗೊಳೆ ನಿರೀಕ್ಷಿಸಿ ಸಿಂಹಬಲಂ ಕರಂ ಕೆರ।
ಳ್ದುಱದೆನಗಾನಲಾರ್ಪ ಜವನಾವನೊ ತಾನಿವನೊರ್ಬನೆನ್ನನಿ॥
ನ್ನಱಿಯದೆ ಬಂದಿದಿರ್ಚಿದನೆನುತ್ತೆ ನಸುಂ ಕವಿಯೆಂದೊಡೆಯ್ದೆ ಗುಂ।
ಗುಱಿ ಗಿರಿಗೊರ್ವೆ ದಲ್ ಕವಿವವೋಲ್ ಕವಿದಂ ನರ ಸೈನ್ಯ ಸಂಕುಳಂ ॥೫೭॥

ಗಱಿ ನೆೞಲಿಂ [3]ಜಗತ್ತ್ರಯಿ ತಮೋಮಯಮಾಗಿಸುತುಂ ಕಡಂಗಿ ಬ।
ರ್ಪಱಿಕೆಯ ಬಿಲ್ಲ ಬಿಲ್ಲಣಿಯನಲ್ಲಿ ಸರಲ್ ತಿರು ಬಿಲ್ ಕರಂ ಕರಂ॥
ಪಱಿಯೆ ಪೆಗಲ್ಮೊಗಂ ಬಸಿಱುರಂ ತೊಡೆ ತೋಳ್ [4]ಶತ ರಂಧ್ರಮಾಗಲೆ।
ಟ್ಟಱದೆ ಮಹೀಶ ಕಂತು ತವೆ ತೂಳ್ದಿದನಾಜಿಯೊಳಸ್ತ್ರ ಕೋಟಿಯಂ ॥೫೮॥

ಬಲ ಜಲದಾಗ್ರದಿಂದಿರದೆ ಪಾಯ್ವ ತಟಿಲ್ಲತಿಕಾ ನಿಕಾಯದಂ।
ತಲಗಿನ ಬೆಳ್ಪ ತಳ್ತು ನಿಮಿಱುತ್ತಿರೆ ನೂಂಕುವ ಕೊಂತಕಾಱರಂ ॥
ಮಲೆವಿದಿರೋಳಿ ಬೀಳ್ವ ತೆಱದಿಂ ಪಡಲೊಡ್ಡಿಯೆ ಬೀಱಿಬೆಚ್ಚನೊ।
[5]ತ್ತಲಿಸಿ ನಿಶಾತ ಬಾಣ ತತಿಯಿಂದವನೀಶ ಮನೋಜನಾಜಿಯೊಳ್ ॥೫೯॥

ಅತುಳತರೌರ್ವ ವಹ್ನಿಗಡರ್ದೇಱುವ ವಾರ್ಧಿ ತರಂಗದಂತೆ ಸಂ।
ಗತಿವಡೆದೋವದೆಯ್ದೆ ತಲೆಮುಟ್ಟನದೊರ್ವೆಯೆ [6]ನೂಂಕುವದ್ಧನಾ॥
ಯುತಮವನೀಶ ಕಂತುವಿಸೆ ನಟ್ಟು ತುಱುಂಗಿದ ಬಾಣ ಜಾಲದೀ।
ಕ್ಷಿತಿಗೊಱಗಿತ್ತು ಬೆಂಗಱಿಗಳುಣ್ಮಿದ ಕೂರ್ಮ ಸಮಾಜವೆಂಬಿನಂ ॥೬೦॥

ಚಂ॥ ಗಡಣಿಸಿ ಮೇಲೆ ನೂಂಕುವ ತುರಂಗ[7]ಬಲಂಗಳನಾ ನೃಪಾಂಗಜಂ।
ಬಿಡದಿಸೆ ನಾಡೆ ಮೆಯ್ ಗಱಿಮಯಂ ದಲೆನಲ್ ನೆಱೆ ನಟ್ಟು ಧಾತ್ರಿಯಂ॥
ನಡೆ ನಿಶಿತೋಗ್ರ ಬಾಣ ಗಣಮಂತವಱಿಂ ವಿಗತಾಸುವಾಗಿಯುಂ।
ಕೆಡೆಯದೆ ವಾಜಿ ರಾಜಿ ಶರ ವಾಜಿಗಳಂದದಿ[8]ನಿರ್ದುವಾಜಿಯೊಳ್ ॥೬೧॥

ಇರದೆ ಕಡಂಗಿ ನೂಂಕಿದ ಮದೇಭ ಘಟಾವಳಿ ಮುಟ್ಟೆಸಲ್ ಮಹೀ।
ವರ ಕುಸುಮಾಸ್ತ್ರ [ನಸ್ತ್ರ] ಗಣದಿಂ ಗಱಿಗೂಡುಗಳಾಗೆ ಬಿರ್ದುವಾ ॥

---

1. ಜೋಡಿಸುತ್ತ. 2. ಪುಣ್ಗೊಳೆ. 3. ಜಗತ್ರಯು. 4. ಸಕ. 5. ತ್ತರಿಸಿ.
6. ಕೂಂನುವದ್ದಣಾಯಿತರ. 7. ದಳಂ. 8. ಬಿರ್ದು.

ಸುರಪತಿ ಕೋಪದಿಂ ತಿರುಪೆ ತತ್ಕುಲಿಶೋದ್ಗತ ವಾತ ಘಾತದಿಂ ।
ಧರಣಿಗೆಱಂಕೆಗೂಡಿ ಕೆಡದುನ್ನತ ನೀಳ ನಗಂಗಳೆಂಬಿನಂ ॥೬೨॥

ಘನ ಪಥಮಂ ಪಳಂಚಲೆಯೆ ಕೇತುಗಳುದ್ಗತ ಚೀತ್ಕೃತೋತ್ಕಟ ।
ಧ್ವನಿ ದೆಸೆಯಂತಮಂ ಪುದಿಯೆ ನೂಂಕುವ ತೇರ್ಗಳ ವಾಜಿ ಸೂತ ಕೇ ॥
ತನ ರಥ ಚಕ್ರ ಚಕ್ರಮುಖ ನೇಮಿಯ ಸತ್ವರ ಕೂರ ರಾಣಿಯೆಂ ।
ಬಿನಿತುಮನಾ ನೃಪಾಸಮಶರಂ [1]ಶರಕೋಟಿಯಿನೆಚ್ಚು ತೂಳ್ದಿದಂ ॥೬೩॥

ಆಗಳ್—

ಕಂ॥ ಪೊಡರೊಳಡರ್ವ ಪತಂಗದ ।
ಪಡೆಯಂತೆ ಮಹೀಶ ಮದನನಸ್ತ್ರಾನಲನಿಂ ॥
ಮಡಿವ ನಿಜ ಬಲಮನೀಕ್ಷಿಸಿ ।
ಕಡು ಮುಳಿಸಂ [ತಳೆದು]ಸಿಂಹಬಲನಿಂತೆಂದಂ ॥೬೪॥

ಉ॥ ಭಾವಿಸಿ ವಜ್ರಜಂಘನವನೆಲ್ಲಿವನೆತ್ತಣಿನಕ್ಕೆ ಬಂದನಿ ।
ನ್ನಾವನೋ ತಾನದಟೊರ್ವನೆ ವಿಗುರ್ವಿಸುವೆನ್ನಯ ಸೈನ್ಯಮಂ ಸಮಂ ॥
ತೋವದೆ ಕೊಂದನೆಂದು ಕಿನಿಸುತ್ತವೆ ಸಿಂಹಬಲಂ ಪ್ರತಾಪ ರೌ ।
ದ್ರಾವಹ ಚಂಡ ವಿಕ್ರಮ ಬಲಾಗ್ರಣಿಯಾಸ್ಯಮನಿಂತು ನೋಡಿದಂ ॥೬೫॥

ಕಂ॥ ದೇವರ್ ಮುಳಿಸಂ ತಳೆವಂ ।
ತಾವಸಿವಂ ಜವನೆ ನಿಮ್ಮ ಚರಣಾಂಬುರುಹ ॥
ಕ್ಕೀ ವೇಗದೆ ಪಿಡಿತಂದಾ ।
ನೀವೆನೆನುತ್ತೆೞ್ದು ಚಂಡವಿಕ್ರಮನಾಗಳ್ ॥೬೬॥

ನುಡಿವೇೞ್ದು ಪೊಣ್ಕೆಯೊಡನೆಡೆ ।
ಪಿಡಿದಾಗಳೆ ಮನಮನತುಳ ಕೋಪಾನಲನಿಂ ॥
ತಡರ್ದೇಱಲೇಱಿದಂ ಪಡೆ ।
ನಡೆ ನಡುಗಲ್ ಚಂಡವಿಕ್ರಮಂ ನಿಜ ರಥಮಂ ॥೬೭॥

ಮ॥ ಮಸಕಂ ಕೈಮಿಗೆ ಚಂಡವಿಕ್ರಮ ಭಟಂ ಬಿಲ್ಗೊಂಡು ನೀಟ್ದೆತ್ತಿಯೇ ।
ಱಿಸಿ ಪ್ರೊಯ್ದಾ ತಿರುವೊಯ್ಲ ಟಂಕೃತಿ ರವಕ್ಕಾಕಂಪಿಸುತ್ತುರ್ಬಿ ತ್ರೈ ॥

---

1. ಚತ.

ಲ ಸಮಾಜಂ ಸಿಡಿದಿತ್ತು ವಾರಿಧಿ ತುಳುಂಕಾಡುತ್ತದೆತ್ತಂ ದಿಶಾ ।
ಪ್ರಸರಂ [1]ಬೊಬ್ಬಿರಿವಂದವಾದುದಗಿದರ್ ದೇವಾದ್ಯರೇನದ್ಭುತಂ ॥೬೮॥

ಕಂ॥ ಸಿಡಿಲ ರವಮೆಱಗಿ ಕಿವಿಯಂ ।
ಪೊಡೆದಹಿಯಂತಳ್ಕಿ ವಜ್ರಜಂಘಂ ಸೆಡೆದಂ ॥
ಪಡೆ ಪೆಱಱ ಸರಿದುದಾ ಜೇ ।
ವಡೆಯ ಪಟುಧ್ವನಿ[ಗೆ] ಚಂಡವಿಕ್ರಮ [2]ಭಟನಾ ॥೬೯॥

ಉ॥ ದೇವ ಜವಂಗೆ ಬಲ್ಲಿದನಿವಂ ನೆಱೆ ನೋಟ್ಪೊಡೆ ಚಂಡವಿಕ್ರಮಂ ।
ಗಾವನುಮಾಜಿಯೊಳ್ ತೊಡರ್ವನಿಲ್ಲೆನುತುಳ್ಕುವ ವಜ್ರಜಂಘನಂ ॥
ಭೂವರ ಕಂತುವೀಕ್ಷಿಸಿ ಮುಗುಳ್ನಗುತಂಜದಿರೇಱಕೊಳ್ ಭಯ ।
ವ್ಯಾವೃತ[3]ನಾಗಲೆಂದು ತೆಗೆದೇಱಸಿದಂ ನೆಗಱ್ದ ವರೂಥಮಂ ॥೭೦॥

ಆ ನರನಾಥನ ರಥದೊಳೇಱಕೊಳ್ವ ವಜ್ರಜಂಘನಂ ಕಂಡು—

ಉ॥ ಅಕ್ಕಟ ವಜ್ರಜಂಘ ನಿನಗೀ ಪುರುಷಂ ಬಲಮೆಂದು ನಚ್ಚಿದೈ ।
ಮೊಕ್ಕಳವಿಾಗಳಾಂ ಮುಱಯೆ ಕಾವನೆ ಕಾವೊಡೆ ಕಾಯಲಿನ್ನಿವಂ ॥
ತಕ್ಕನೆನುತ್ತುಮಾರ್ದು ದೊಣೆಯಂ ಧುರದುರ್ಚಿದನೆಚ್ಚನೊಂದು ಲೆ
ಕ್ಕಕ್ಕದು ಕೋಟಿಯಾಗೆ ನಡುವಸ್ತ್ರ ಸಮಾಜದೆ ಚಂಡವಿಕ್ರಮಂ ॥೭೧॥

ಕಂ॥ ಜಗಮೆ ದಲಸ್ತ್ರಾತ್ಮಕಮಾ ।
ಯ್ತುಗಿದನವಂ ವಜ್ರಜಂಘನಾ ಬಲಮನಿತುಂ ॥
ಮಿಗೆ ಪೆಣ್ಬೆತ್ತುದು ಶರ ರುಚಿ ।
ತಗಹದೊಳಿರ್ಪಂತೆ ಭೂಪ ಮನ್ಮಥನಿರ್ದಂ ॥೭೨॥

ಆ ನೃಪ ಕಂತುವಾಗಳವನತಿ ಬಳನೆಂದಱದು—

ಮ॥ ದೊಣೆಯಿಂದಾಗಳೆ ಮಂತ್ರ[4]ಪೂತ ಶರಮಂ ತಾನುರ್ಚಿಕೊಂಡಾ ಧನು ।
ರ್ಗುಣದೊಳ್ ತೊಟ್ಟು ಕಡಂಗಿ ನೀಱ್ದು ತೆಗೆದಾಕರ್ಣಾಂತಮಾಟೋಪದಿಂ ॥
ರಣ ಲೋಲಂ ನೃಪ ಕಂತುವಾರ್ದಿಸೆ ಶಿಖಿ ಜ್ವಾಲಾಳಿಯಂ ಸೂಸುತುಂ ।
ಗಣನಾತೀತಮೆನಲ್ಕೆ ಮಾರ್ಗಣ ಗಣಂ ಪಾಯ್ದುತ್ತು ಸಂಭನ್ನದಿಂ ॥೭೩॥

1. ಹೊಂಬಿರಿ. 2. ಭಟನೋ. 3. ನಾಗದೆಂದು. 4. ಘಾತ.

ಚಂ॥ ದೆಸೆಗುರಿವಗಾಲಿಯಂ ಕೆದಱುತುಂ ಕವಿದೆಯ್ದೆ ವಿರೋಧಿ ಸೈನ್ಯ[1]ಮಂ ।
ದಸುವಿಡೆ ನಟ್ಟು ಪಾಯ್ದು ರಥ ವಾಜಿಗಳಂ [2]ಧ್ವಜಮಂ ವರೂಥಮಂ ॥
ಮಸಕದಿನಂತು ತಾಗೆ ದವ ಶಂಕೆಯನುಗ್ರ ಶರಂಗಳಾಗಳು ।
ಬಿಸುವರಿ ಚಂಡವಿಕ್ರಮ ಭಟಾಗ್ರಣಿ ಬೞ್ಕುವಿನಂ ರಣೋರ್ವಿಯೊಳ್ ॥೭೪॥

ಕಂ॥ ಬಿಡುವರಿ ಬಾಣಂಗಳ್ ಬಿಡ ।
ದಡಸುವುದಂ ಕಂಡು ಚಂಡವಿಕ್ರಮನಾಗಳ್ ॥
ಕಡು ಮುಱಿದಂ ಶರ ಹತಿಯಂ ।
ಪಡೆದ ಮೃಗಾರಾತಿಯಂತಿರಾದುದು ಧುರದೊಳ್ ॥೭೫॥

ಚಂ॥ ಮುಳಿದಿಸೆ ಚಂಡವಿಕ್ರಮ ಭಟಂ ನಿಶಿತಾಸ್ತ್ರ ಗಣಂಗಳಿಂದಮಂ ।
ಘಳಿಲನೆ ತೊಟ್ಟು ತಾನಿಸೆ ನೃಪಾಂಗಜನುಗ್ರ ಶರಂಗಳಿಂ ಸಮಂ ॥
ತಳುರ್ದು ಪಳಂಚಿ ಬಾಣ ತತಿ ದಳ್ಳುರಿ ಮಿಳ್ಳಿಸೆ ನೀೞ್ದು ಮಧ್ಯದೊಳ್ ।
ಜಳಜಭವಾದ್ಯರೆರ್ದೆಯೊಳ್ ನೆಗೆದೊಂದುರಿ ಲಿಂಗದಂಪದಿಂ ॥೭೬॥

ಕಂ॥ ಧರೆ ಪೊತ್ತುವಿನಂ ಕಿಡಿಗಳ ।
ಸರಿ ಭೋರೆನೆ ಸುರಿಯುತಿರೆ ಪಳಂಚುವ ಬಾಣೋ ॥
ತ್ಕರ ಯುದ್ಧಂ ನೆನೆಯಿಸಿದುದು
ನಿರಂತರಂ ವಿಲಯ ಕಾಲದಭ್ರಾವಳಿಯಂ ॥೭೭॥

ಅದಂ ಕಂಡು—

ಮ॥ ಸಿಡಿಲಂ ಸೀಳ್ವ ಕುಲಾಚಲ ಪ್ರಚಯಮಂ ಕಿೞ್ತುರ್ವಿಯಂ ಮೀಂಟುವೇ ।
ೞ್ಕಡಲಂ ಕೂಡೆ ಕಲಂಕುವೊಂದು ಕಡುಪಂ ಕೈಕೊಂಡ ಕಾಲಾಂತಕಂ ॥
ಗಡ ತಾನೆಂದೆನೆ ಚಂಡವಿಕ್ರಮ ಭಟಂ ಪ್ರೋಚ್ಚಂಡ ನೇತ್ರಂಗಳಿಂ ।
ಕಿಡಿ ಸೂಸುತ್ತಿರೆ ಕಾಯ್ದು ತೊಟ್ಟು ತೆಗೆದೆಚ್ಚಂ ನಾಗ ಪಾಶಾಗ್ರದಿಂ ॥೭೮॥

ಚಂ॥ ವಿಷದುರಿ ನೀೞ್ದು ಮುಂಬಱಿಯೆ ಕಣ್ಗಿಡಿಗಳ್ ಕೆದಱಲ್ಕೆ ಭೋರೆನು ॥
ತ್ರಸದಳಮಾಗೆ ಪನ್ನಗ ಶರಾವಳಿಗಳ್ ಕವಿತಂದು ಸೇನೆಯಂ ॥
ಮುಸುಱೆ ವರೂಥ ಹಯ ಕೇತುಗಳಂ ಬಿಗಿದೊತ್ತಿ ಕಟ್ಟೆ ಬಂ ।
ಧಿಸಿದುವು ವಜ್ರಜಂಘನನಡುರ್ತುಱಿಪಾಗಳೆ ಭೂಪ ಕಂತುವಂ ॥೭೯॥

1. ಮೆಯ್ಯುದಸುವಿಡೆ. ರಥಮಂ.

ಕಂ॥ ಅವನೀಶ ಕಂತುವಂ ಸು।
ತ್ತಿ ವರೂಥಂಬೆಱಸಿ ಬಿಗಿದುವಾಗಳ್ ಬೆಸೆಗಳ್॥
ಕಿವುಡುಗೊಳುತಿರ್ಪ ಫೂತ್ಕೃತಿ।
ರವದೆ ವಿಜೃಂಭಿಸುತುಮಿರ್ದು[1]ವಹಿ ಬಾಣಂಗಳ್ ॥೮೦॥

ಚಂ॥ ನಡು ಪೊಡೆ ಜಾನು ಜಂಘೆ ನಡು ತೋಳುರಮಂಘ್ರಿ ಕಿರೀಟ ಕಂಠಮೆಂ।
ಬೆಡೆಗಳನಗ್ರ ಪನ್ನಗ ಶರಾವಳಿ [2]ತಾಂ ಬಿಗಿದೊತ್ತಿ ಸುತ್ತಿಯುಂ॥
ಮಿಡುಕದೆ ನಟ್ಟು ನಿಂದು ಫಣಿಭೂಷಣಮಂ ನೆಱೆ ತಾಳ್ದಿದಾ ಮೃಡಂ।
ಗಡಮೆನಿಪಂತಿರಿರ್ದನವನೀವರ ಮನ್ಮಥನಾ ವರೂಥದೊಳ್ ॥೮೧॥

ಅಂತಿರ್ದಾಗಳ್—

ಕಂ॥ ಆನಿಂತಹಿ [3]ನೀಡದೊಳಿರೆ।
ತಾನೀಗಳೆ ವಜ್ರಜಂಘನೞಿವಂ ಬೞಿಕಂ॥
ಏನಂ ಮಾಡಿದೊಡಂ ಫಲ।
ಮೇನೆಂದು ಮಹೀಶ ಕಂತು ಮನದೊಳ್ ನೆನೆದಂ ॥೮೨॥

ಚಂ॥ ಸ್ಮರಿಯಿಸಿ ತಾರ್ಕ್ಷ್ಯ ಮಂತ್ರಮನಿಳೇಶ ಮನೋಭವನಾಗಳಂತದ।
ರ್ಕಿರದರಿಯಂ ತಗುಳ್ದುಗುೞುತುಂ ತಲೆದೋರ್ಪ ತದ್ಭಯಂ॥
ಕರ ಗರುಡಾಸ್ತ್ರದೊಂದು ಮಸಕಕ್ಕೆ ನಿಜಾಂಗಮನೊತ್ತಿ ಸುತ್ತಿ ಪೂ।
ತ್ಕರಿಪುರಗಾಸ್ತ್ರ ಕೋಟಿ ಪೞಿವಿಟ್ಟುದು ತೊಟ್ಟನೆ ದಗ್ಧ ರಜ್ಜುವೋಲ್ ॥೮೩॥

ಕಂ॥ ತೊಟ್ಟನೆ ನೃಪಾಸಮಾಸ್ತ್ರಂ।
ತೊಟ್ಟಸೆ ಗರುಡಾಸ್ತ್ರಮುರಿಯನುಗುೞುತ್ತುಂ ಬೆ॥
ನ್ನಟ್ಟಿ ನೆಱೆ ನುಂಗಿ ನೊಣೆದುದು।
ನೆಟ್ಟನೆ ತಾನರಿ ಭಟೋರಗಾಸ್ತ್ರಾವಳಿಯಂ ॥೮೪॥

ಮ॥ ಮುನಿದಾಗಳ್ ನೃಪ ಕಂತುವಿನ್ನಿವನನಾಂ ಕೊಂಡಾಡಲೇಕೆಂದು ತೊ।
ಟ್ಟನೆ ತೂಣೀರ ಮುಖಕ್ಕೆ ನೀಡೆ ಕರಮಂ ತಾಂ ಭುಭುರ್ಗಿಲ್ಲಂದಗಿ॥
ಲ್ಲೆನುತುಂ ದಳ್ಳುರಿ ಮಿಳ್ಳಿಸುತ್ತಿರೆ ಕರಂ ಬ್ರಹ್ಮಾಸ್ತ್ರಮೆಟ್ಟಿಂದು[4]ದಿಂ।
ತೆನಸುಂ ಭೂತಳಮುಳ್ಕಿ ತಲ್ಲಣಿಸೆ ದಿಕ್ಪಾಲರ್ ಭಯಂಗೊಳ್ವಿನಂ ॥೮೫॥

---

1. ಮಹಿತ. 2. ಯಂ. 3. ನಡದೊಳಿರೆ. 4. ಮಿಂತೆನಸುಂ.

[1]ಗದಮುಂ ಮಾಣ್ಬರೆ ಲೋಕಮಾ ಕ್ಷಣಮೊಳೆಟ್ಟಿಂದಸ್ತ್ರಮುಂ ಕೊಂಡು ಕೋ।
ಪ ದವ ಜ್ವಾಲೆ ನಿಜಾಕ್ಷಿಯಿಂ ನಿಮಿರೆ ಕಂದರ್ಪಾವನೀಕಾಂತನೋ॥
ವದೆ ತಾಂ ತೊಟ್ಟಸೆ ಚಂಡವಿಕ್ರಮ ಶಿರಃಕಂಜಾತಮಂ ಕೊಂಡು ಪಾ।
ರಿದುದಾ ಸಿಂಹಬಲಾವನೀಶ ವರ ಧೈರ್ಯಂ ಪಾಱೆ ತದ್ವೇಗದಿಂ ॥೮೬॥

ಚಂ॥ ಪಡೆಪಱಿಡೆಯ್ದಿ ಬಾಯ್ವಿಡುವ ಪದ್ಮಪುರೀ ಜನದುದ್ಘ ಭೀತಿ ಬೇ।
ಗದೆ ನೆಱೆ ಪಾಱೆ ತದ್ಬಲದೊಳುಣ್ಮಿದ ಶಂಕೆ ತೆರಳ್ದು ಪಾಱೆ ತ॥
ಳ್ತೊದವಿದ ವಜ್ರಜಂಘನ ಮನೋಭಯ[ಮಾಗಳೆ] ಪಾಱೆ ಕೊಂಡು ಪಾ।
ಱಿದು[2]ದಲೆ ಚಂಡವಿಕ್ರಮ ಶಿರೋಬ್ಜಮನಬ್ಜ ಭವಾಸ್ತ್ರಮಾಜಿಯೊಳ್ ॥೮೭॥

ಅವನಿಪ ಕಂತುವೆಚ್ಚ ಭವ ಬಾಣಮದೋವದೆ ಕೊಂಡು ಚಂಡವಿ।
ಕ್ರಮನ ಶಿರಕ್ಕೆ ತನ್ನ ಶಿರಮಂ ತವೆ ತೆಲ್ಲಟೆ[3]ಗೊಳ್ಗುಮೆಂದು ಧೈ॥
ರ್ಯವನುಱಿದಲ್ಕಿ ಸಿಂಹಬಳನಾಗಳೆ ಗಾಳಿಗೆಜಂಕೆ ಮೂಡಿದಂ।
ತೆವೊಲಿರದೋಡಿದಂ ನಿಜಪುರಕ್ಕುಳಿದಾತ್ಮ ಬಲೋಪಯುಕ್ತದಿಂ ॥೮೮॥

ಚ॥ ನಿಮಿರ್ದು ನಭಕ್ಕೆ ಪಾಱುವ ತದೀಯ ಶಿರೋಬ್ಜದ ನಾಳಮೆಂಬ ವಿ।
ಭ್ರಮದೆ [4]ನವಾಸ್ರ ಧಾರೆ ನೆಗೆದಟ್ಟಿಯುಮೋಕುಳಿಯಂ ಮರುತ್ಪಥ॥
ಪ್ರಮದೆಯಮೇಲೆ ನೀಟ್ಟು ರಣಭೈರವನೊತ್ತುವ ವಾರಿಯಂತ್ರ ದಂ।
ಡಮಿದೆನೆ ಚಂಡವಿಕ್ರಮ ಕಬಂಧಮುಗುರ್ಚಿಸಿತಾಹವೋರ್ವಿಯೊಳ್ ॥೮೯॥

ಸಮನಿಸಿತೆನ್ನಭೀಷ್ಟಮೆನುತಂಗುಳಿಯೆತ್ತಿದನಾ ಬಳಾಹಕಂ।
ಪ್ರಮದದೆ ವಜ್ರಜಂಘನೆನಸುಂ ನೆಲೆವೆರ್ಚಿದನಾಗಳಂತೆ ಸಂ।
ಭ್ರಮುಮುಮರ್ದೆಯ್ದೆ ನಿರ್ಭಯದಿ ನೊರ್ಬುಳಿವಂದುದು ಸೇನೆ ಚಿತ್ತದೊಳ್।
ನಿಮಿರ್ದನುರಾಗದಿಂ ನೆರೆಯೆ ನರ್ತಿಸುತಿರ್ದುದು ತತ್ಪುರೀ ಜನಂ ॥೯೦॥

ಆ ಮಹೀಶ ಮಕರಧ್ವಜಂ ಗೆಲ್ದ ಸಮರಾಂಗಣಂ ಜಲ ತಟಾಕದಂತೆ ಜರ್ಝರಿತ ವಾರಣಾವಳಿ ಯುತಮುಂ ಪ್ರವಾಹ ವಾಹಿನಿಯಂತೆ ಭಿನ್ನ ಪುಷ್ಕರ ಪರಿಕಲಿತಮುಂ ಮಹಾಸೀಲ ಮುಖ ಸರಸಿಯಂತೆ ವಿಸ್ತೀರ್ಣ ಸ್ಯಂದನ ಮಯಮುಂ ಶಿಶಿರಮಯ ದ್ರುಮಾವಳಿಯಂತೆ ವಿಗಳಿತ ಪತ್ರ ಪತ್ರಾನನಮುಂ ವಿಪುಳತರ ವಿಪಿನಾಂತರದಂತೆ ವಿಪಳಿತ ಭಲ್ಲಜಾಲಮುಂ ವರ್ಷಾಕಾಲದಂತೆ ವಿಮುಕತರವಾರಿ ನಿಹಿತ

1. ಗದಗದಪೂಜೆರೆ. 2. ದರೆಬೆಂದ. 3. ತಲೆ. 4. ನವಾಸ್ತ್ರ.

ಮಹೀತಳಮುಂ ಸಾಗರದಂತೆ ಶೋಣಾಂಬು ಪ್ರವಾಹ ಪರಿಯುಕ್ತಮುಂ ಕುವಲಯ ಷಂಡದಂತೆ ನವೋತ್ಪಲ ಪ್ರಕರೋಪೇತಮುಂ ಜನಿತೋತ್ಕಳಿಕಾರ್ಣವದಂತೆ ನರ್ತಿತ ಕಬಂಧ ಸಂದೋಹಮುಂ ಪಶ್ಚಿಮಾಶಾ ಮಂಡಲದಂತೆ ಜಂಬುಕ ವ್ಯಾಕೀರ್ಣಮು ಮಾಗಿರ್ಪುದಂತುಮಲ್ಲದೆಯುಂ—

ಚಂ॥ ಸಲೆ ಸಮವರ್ತಿಯಾಯ್ತು ಮಱೆಗಾಲದ ಮೇದಿನಿಯಂದದಿಂ ಶಿವಾ।
ಕಲಿತಮುದಾಯ್ತು ಶೀತಕರ ಶೇಖರ[ನಂದ] ದಿನಪ್ರತರ್ಕ್ಯ ಜಾಂ॥
ಗಲ ಯುತಮಾಯ್ತು ಭಾರತ ಮಹೀತಳದಂದದಿನಪ್ರ ಪೂರಮಾ।
ಯ್ತುಲಘುತರಾಮರೇಂದ್ರ ಕುಲಿಶಾಯುಧ[1]ದಂದದಿನಾ ರಣಾಂಗಣಂ ॥೯೧॥

ನೆರೆದು ನಿಶಾಚರಾವಳಿ ನಿರೀಕ್ಷಿಸಿ ಸಂಗರ ರಂಗವಲ್ಲ ಭಾ।
ಪುರೆ ನಮಗಾವಗಂ ತವಿಲನೆಯ್ದದ ನಲ್ಲುಣಿಸಿತ್ತನಿಂದು ಚ॥
ಚ್ಚರಮನುರಾಗಮುಣ್ಮೆ ನೃಪಮನ್ಮಥನೆಂದರಬೇವು ಹೋಯೆನು।
ತ್ತುರುತರ ಸಂಭ್ರಮಂಬೆಱಸು ನರ್ತಿಸುತಿರ್ದುದು ಮೆಚ್ಚಿ ಬಿಚ್ಚತಂ ॥೯೨॥

ಮ॥ ತಣಿವನ್ನಂ [2]ರುಧಿರಾಂಬುವಂ ಪದಪಿನಿಂದೀಂಟುತ್ತು [3]ಮಲ್ಲೊಕ್ಕ ಮೆ।
ಲ್ಲಣಿನಂ ಗಟ್ಟನೆ ನುಂಗಿ ಬಾಯ್ಸವಿದು ದರ್ರೆಂದೆಂಬಿನಂ ತೇಗಿ ನ॥
ಲ್ಲುಣಿಸಿಂ ಸೊರ್ಕೆಡೆಗೊಂಡು ಜೊಂಪಿಸಿ ಕರಂ ತೂಗಾಡುತುಂ ಕೂಡೆ ತಿಂ।
ತಿಣಿಯಿಂ ನರ್ತಿಸುತಿರ್ದುದಾ ಸಮರದೊಳ್ ಬೇತಾಳ ಭೂತ ವ್ರಜಂ ॥೯೩॥

ಉ॥ ಭೂವರ ಮನ್ಮಥಂ ರಣಮನೀಕ್ಷಿಸಿ ಭೋಂಕನೆ ದಿವ್ಯ ಚಾಪ ಬಾ।
ಣಾವಳಿಯಂ ವಿಸರ್ಜಿಸಿ ಮುಗುಳ್ದು ಬರುತ್ತಿರೆ ವಜ್ರಜಂಘ ನೀ॥
ನಾವಗಮಿಂತು ಸೈತಿರೆನುತುಂ ಕಡೆಗಣ್ಣೊಳೆ ನೋಡಿ ತಂದು ಮೇ।
ಧಾವಿಳನಾಗಳಂತೆ ಪವನಂಜಯ ವಾಜಿಯನಂದು ಸಾರ್ಚಿದಂ ॥೯೪॥

ಕಂ॥ ಇರದೆ ವರೂಥಮನಿಳಿದ।
ಚ್ಚರಿಯಿಂ ತಾನೇಱೆ ನೃಪ ಮನೋಜಂ ಮಿತ್ರಂ॥
ಬೆಱಸಾ ಪವನಂಜಯನಂ।
ಪುರಮಂ ಕೆಲಕಿಕ್ಕಿ ತಳರಲುದ್ಯತನಾದಂ ॥೯೫॥

---

1. ನಂದದಿ. 2. ರುಚಿರಾಂಬು. 3. ಮೂಲೋಕ.

ಅದನಱಿದಾಗಳ್—

ಮ॥ ಇರದೆಯ್ತಂದೆಡೆವೊಕ್ಕು ನೀವೆನಗೆ ಬಂಧುಗ್ರಾರಿಯಂ ತೂಳ್ದಿ ಸಂ।
ಗರದೊಳ್ ಕೊಂಪುದಱಿಂದೆ ಜೀವಮುಳಿದೆನ್ನೀ ರಾಜ್ಯದೊಳ್ ದೇವ ತ॥
ತ್ಪುರಿಗೆಟ್ಟಿಂದು ಪವಿತ್ರಮಾಗಿಸೆನುತುಂ ದಂಡ ಪ್ರಣಾಮಾಂಗನಾ।
ಗಿರೆ ಸಂರಂಭದೆ ವಜ್ರಜಂಘ ನೃಪನಂತಾಗಳ್ ಪುರೋಭಾಗದೊಳ್ ॥೯೬॥

ಕಂ॥ ಪವನಂಜಯಾಶ್ವ[1]ನಡಿವೊದ।
ಲವಸಿಯೊ[2]ಳೊಱಗಿರ್ದ ವಜ್ರಜಂಘನನಾಗಳ್॥
ಭುವನೇಶ ಕಂತು ಕಂಡ।
ಗ್ರ ವಿಲೋಚನದಿಂದೆ ನೋಡಿದಂ ಸಖ ಮುಖಮಂ ॥೯೭॥

ಇಂತು [3]ನೋಡಿದಾಗಳ್—

ಕಂ॥ ಮನ್ನಿಪುದು ವಜ್ರಜಂಘನ।
ಬಿನ್ನಪಮಂ ದೇವ ಮಾಟ್ಪುದೀತಂಗಾನಂ॥
ದೋನ್ನತಿಯನೆಂದು ಸಚಿವ ಸು।
ತನ್ನುಡಿದುದನಪ್ಪುಕೆಯ್ದು ನೃಪ ಕಂದರ್ಪಂ ॥೯೮॥

ಬಂದಪೆವೇೞ್ ನಿನ್ನಯ ಪುರಿ।
ಗೆಂದೆನೆ ನರನಾಥ ಮನ್ಮಥನ ವಚನಕ್ಕಾ॥
ನಿಂದು ಕೃತಾರ್ಥನೆನುತ್ತಿರ।
ದಂದೆೞ್ದಂ ವಜ್ರಜಂಘ ನೃಪನುತ್ಸವದಿಂ ॥೯೯॥

ಆಗಳಾ ಪದ್ಮಪುರಿಯಂ ಕೈಗೆಯಿಸವೇೞ್ದು ಬಳಾಹಕನಂ ಕಳಿಪಿ ವಜ್ರಜಂಘಂ ನಿಜ ವಾಜಿರತ್ನಮಂ ಮೇಧಾವಿಳಂಗಿತ್ತು ವೇತ್ರಾವಳಿ ಕರನಾಗಿ ದೇವ ಬಿಜಯಂಗೆಯ್ಯಿಮೆನೆ ಮಹೀಶ ಮನ್ಮಥಂ ತದೀಯ ಸೇನಾ ಸಮನ್ವಿತಂ ಪುರಾಭಿಮುಖನಾಗಿ —

ಉ॥ ಬಂದೆಡೆವೊಕ್ಕು ಕಾದಿ ಪಗೆಯಂ ಮುದಧೀಶ್ವರ ವಜ್ರಜಂಘನಂ।
ತಾಂ ದಯೆಯಿಂದೆ ಕಾದ [4]ವಿಭುವೀ ನೃಪ ಮನ್ಮಥನೆಂದು ತತ್ಪುರೀ॥

1. ನಡೆವೊದ. 2. ಳೆಱಗಿರ್ದ. 3. ನುಡಿದಾಗಳ್. 4. ವಿಭುವಂ.

ಸೌಂದರಿ ತೋಱಿಸಲ್ ಗಗನ ಲಕ್ಷ್ಮಿಯನಂಟುವ ನುಣ್ಬೆರಲ್ಗಳಿಂ ।
ಬಂದದೆ ನಾಡೆ ಕಣ್ಗೊಳಿಪುವಾ [ಗುಡಿ]ಗಳ್ ನಿಮಿರ್ದಂಬರಂಬರಂ ॥೧೦೦॥

ಚಂ॥ ಮದಧಿಪ ವಜ್ರಜಂಘ ನೃಪನಂ ನೆಱೆ ಕಾದ ಮಹಾತ್ಮನೀತನೆಂ ।
ದೊದವಿದ ಲೀಲೆಯಿಂ ಕ್ಷಿತಿಪ ಕಂತುವನೀಕ್ಷಿಪ ಶತ್ಪುರೀ[1]ರಮಾ ॥
ಸುದತಿಯು ನೀಟ್ಟಿ ಕಣ್ಬೆಳಗಿದೆಂಬಿನಮಾ ಮಣಿ ತೋರಣಂಗಳ ।
ಗ್ರದೆ ಪೊಳೆವಿಂದುಕಾಂತ ಮುಕುರದ್ಯುತಿ ತಳ್ತೆಸೆದಿತ್ತು ನಾಡೆಯುಂ ॥೧೦೧॥

ಇಂತೆಸೆವ ಪದ್ಮಪುರಿಯಂ ಪೊಕ್ಕು ಬರ್ಪಾಗಳ್ —

ಚಂ॥ ಕರ ಧೃತ ವೇತ್ರನಾಗೆ ನಲವಿಂ ನಡೆತರ್ಪನೆ ವಜ್ರಜಂಘನ ।
ಚ್ಚರಿಯ ನಿಜಾಶ್ವ ವಲ್ಗನ ಚಲನ್ಮಣಿ ಕುಂಡಲ ಯುಗ್ಮಚುಂಬಿತ ।
ಸ್ಫುರಿತ ಕಪೋಲ ಕುಂಡಲನೆ ತಾಂ ನೆಱೆ ನಮ್ಮಧಿನಾಥ ರಾಜ್ಯಮಂ ।
ಪಿರಿದೊಲವಿಂದೆ ಕಾದ ವಿಭುವೆಂದು ನಿರೀಕ್ಷಿಪುದಾ ಪುರೀ ಜನಂ ॥೧೦೨॥

ನಿಮಿರೆ ತುಱುಂಗಿ ಮೆಟ್ಟುವ ತುರಂಗಮನೇಱಿಯೆ ಕಂತು ಬರ್ಪ ವಿ ।
ಭ್ರಮಮುಮದರ್ಾ ಮಹಾಪುರುಷನಿಂ ಸ್ಥಿರಮಾದುದು ವಜ್ರಜಂಘ ಭೂ ॥
ರಮಣ ವಧೂ ವಿತಾನ ಕಟಕಂ ದಿಟ[ಮಿಾಗಳದಿಂ]ನೆನುತ್ತೆ ಸಂ ।
ಭ್ರಮದೊಳಡುರ್ತು ನೋಡುವುದು ವಿಸ್ಮಯ ಭಾಜನಮಾ ಪುರೀ ಜನಂ ॥೧೦೩॥

ಉ॥ ಮೇಲಮರ್ದೆತ್ತಿ ಬಿತ್ತರಿಪ ಬೆಳ್ಗೊಡೆಯಾ ನೆಟಿಲೊಳ್ ನಖ ಪ್ರಭಾ ।
ಮಾಲಿಕೆ ನೀಟ್ಟಿ ಮುಂಬರಿಯೆಯುಂ ಹಯ ಕಂಧರ ಮೂಲ ಲಾಲಿತಾ ॥
ಸ್ಫಾಲನ ಹಸ್ತನಾಗಿ ಬರುತಿರ್ಪನೆ ನಮ್ಮಯ ವಜ್ರಜಂಘನಂ ।
ಲೀಲೆಯೊಳಿಂದು ಕಾದ ವಿಭುವೆಂದು ನಿರೀಕ್ಷಿಪುದಾ ಪುರೀ ಜನಂ ॥೧೦೪॥

ಮ॥ ಮನುಜಂ ಕೊಳ್ವನೆ ಚಂಡವಿಕ್ರಮನನಾ ಮಾತಿರ್ಕೆ ಮಾಣ್ ನಮ್ಮ ಭೂ ।
ಪನ ಪೂರ್ವಾರ್ಜಿತ ಪುಣ್ಯದೇವತೆಯೆ ಮರ್ತ್ಯಾಕಾರಮಾಯ್ತಲ್ಲದೊ ॥
ರ್ಬನೆ ತಾನತ್ತಣಿನಕ್ಕೆ ಬಂದು ರಣದೊಳ್ ತೂಳ್ದಿಕ್ಕಿದಂ ಚೋದ್ಯಮೆಂ ।
ದೆನುತುಂ ನೋಡುತುಮಿರ್ದುದಾ ಪುರಜನಂ ಕಂದರ್ಪ ರಾಜೇಂದ್ರನಂ ॥೧೦೫॥

1. ಶಮಾ.

ಮ॥ ತರುಣಂ ತಾನಿವನೆೊರ್ಬ[1]ಮರ್ತ್ಯನೆನೆ ನೋಡಿನ್ನುಂಟೆ ಮರ್ತ್ಯಂಗೆ ಬಿ।
ತ್ತರಿಪೀ ರೂಪ ವಿಳಾಸವಿಾ [2]ವಿಪುಳ ಬಾಹಾ ಶೌರ್ಯವಿಾ ತೇಜದೆ ॥
ಚ್ತರವಿಾ ಸ್ಥೈರ್ಯ ಮಹತ್ತ್ವವಿಾ ಪುದಿದ ಗಂಭೀರತ್ವಮೆಂದಾದವ ॥
ಚ್ಚರಿವಟ್ಟೀಕ್ಷಿಸುತಿರ್ದುದಾ ಪುರಜನಂ ಕಂದರ್ಪ ರಾಜೇಂದ್ರನಂ ॥೧೦೬॥

ಚಂ॥ ರಭಸದಿನೆಯ್ದಿ ನೋಡುವ ಸಮಸ್ತ ಜನಕ್ಕೆ ಜಯಂತನಾವಗಂ।
ಸುಭಟ ಜನಕ್ಕೆ ಸಾಹಸ ಮರುತ್ಸುತನಾರ್ಯ ಜನಕ್ಕೆ ಸತ್ಕಳಾ ॥
ಪ್ರಭು ವನಿತಾಜನಕ್ಕೆ ಕುಸುಮಾಯುಧನಾಗೆ ಸಮಂತು ತೋಱುತುಂ।
ವಿಭವದೆ ಪೊಕ್ಕನಾ ಪುರಮನಂದು ನರೇಂದ್ರ ಮುಕುಂದ ನಂದನಂ ॥೧೦೭॥

ತೊಲತೊಲಗೆಂದೆನುತ್ತಿರದೆ ಮುಂದೆ ಬರುತ್ತಿರೆ ವಜ್ರಜಂಘನಾ।
ವಿಲುಳಿತ ಹಸ್ತ ನೇತ್ರಮನೆ ತೂಗುತುಮೆಯ್ದೆ ಪುರೀ ಜನಾ[3]ಳಿ ತಾಂ ॥
ಬಱಿಬಱಿಸಂದು ಬೆಳ್ಗಱಿಯ ತುಂಬಿಗಳೆಂಬಿನೆಗಂ ಬರಲ್ಕೆ ದೋ।
ರ್ವಳ ಪವಮಾನ ಸೂನು ಬರುತಿರ್ದನುದಂಚಿತ ರಾಜ ವೀಥಿಯೊಳ್ ॥೧೦೮॥

ಕಂ॥ ಪುರ ಜನದಾ ನೃಪನಂತಃ।
ಪುರ ಜನದ ಮನೋನಿವಾಸಮುಂ ಪಿರಿದಾನುಂ ॥
ಪರಮೋತ್ಸವ ಲಕ್ಷ್ಮಿ ಪುಗು।
ತ್ತಿರೆ ಪೊಕ್ಕಂ ರಾಜ ಸದನಮಂ ನೃಪಮದನಂ ॥೧೦೯॥

ಇಂತು ಮಹೀಶ ಮದನನಂ ನೃಪ ಸದನಾಂತರ್ನಿವೇಶಿತನಂ ಮಾಡಿ ಮಜ್ಜನ ಭೋಜನ ಕ್ರಿಯೆಗಳನರಸಂಗೆ ಸಮನಿಪೆನೆಂಬುಜ್ಜುಗದಿಂ ವಜ್ರಜಂಘಂ ಪಚನಾಗಾರಕ್ಕೆ ಪೋಪುದುಮಿತ್ತಲ್—

ಮ॥ ಸಮರ ಶ್ರಾಂತಿ ನಿವಾರಣಚ್ಛಲದೆ ಶಯ್ಯಾತಳ್ಪಮಂ ಪೊರ್ದೆ ಚಿ।
ತ್ತಮನಾಗಳ್ ಕುಸುಮಾವಳೀ ಯುವತಿ [4]ಪೊರ್ದಲ್ ಪಾರ್ದು ತಾನಿಲ್ಲಿ[5]ಪೊ ॥
ರ್ದೆ ಮನೋಜಂ ನನೆಯಂಬಿನಿಂದಿಸೆ ತದಸ್ತ್ರಾಘಾತ ಜಾತಾನಿಲಂ।
ನಿಮಿರ್ದೋರೆಂತಳುರಲ್ಕೆ ಹೃತ್ಕುಟಿಯನಾ ಕಂದರ್ಪ ರಾಜೇಂದ್ರನಾ ॥೧೧೦॥

---

1. ಮರ್ತ್ಯನವ. 2. ವಿಹಳ. 3. ವಳೀ. 4. ಪೋದಲ್.
5. ಪೊ॥ ರ್ದೆಮನೋಜಾನನೆಯೆಂಬಿನಿಂದೆಸೆ.

ಕಂ॥ ಜಗಮಂ ಸೋಲಿಸಲೆನ್ನಿಂ ।
ದ್ವಿಗುಣಂ ತಾನಾದನಿವನನಾನಿಸುವೆಂ ಮೆ ॥
ಯ್ಯಗಿವಂತೆನುತುಂ ನನೆಯಂ ।
ಬುಗಳಿಂ ಮದನಂ ಮಹೀಶ ಮದನನನೆಚ್ಚಂ ॥೧೧೧॥

ಕಂ॥ ಅದನರಿದಾ ಮೇಧಾವಿಳ ॥
ನೊದವಿದ ಶಿಶಿರೋಪಚಾರ ಚಯದಿಂ ಭೂಭೃ ॥
ನ್ಮದನನ ಮದನ ದವಾಗ್ನಿಯ ।
ನದುಪುವ [1]ತತ್ಕ್ರಿಯೆಯೊಳಿರ್ದನಿರ್ದಾ ಪದದೊಳ್ ॥೧೧೨॥

ಸವನಿಸಿದುದು ಮಧ್ಯಂದಿನ ।
ಮವಸರವಿದು ಸವನ ಭೋಜನ ಕ್ರಿಯೆಗಳ್ಗಂ ॥
ದವನಿಪ ಕಂತುಗೆ ತಾಂ ಬಿ ।
ನ್ನವಿಪುಜ್ಜುಗದಿಂದೆ ವಜ್ರಜಂಘಂ ಬಂದಂ ॥೧೧೩॥

ಆ ಸಮಯದೊಳ್—

ಚಂ॥ ಅಳುರ್ವ ಮನೋಭವಾನಳನಳುರ್ಕೆಗೆ ಕರ್ಬೊಗೆಯೇಳ್ವ ಗಾತ್ರದಿಂ ।
ಕಳಕುಳಮೆಯ್ದೆ ತಳ್ತ ಮನದಿಂ [2]ಬಹುಳಾಶ್ರುವನಪ್ಪುಕೆಯ್ದು ಬಿ ॥
ರ್ಚಟಿದ ವಿಶಾಲ ನೇತ್ರ ಯುಗದಿಂ ನೃಪ ಮನ್ಮಥನಿರ್ಪ ಭಂಗಿಯಂ ।
ಘಳಿಲನೆ ವಜ್ರಜಂಘನದನೀಕ್ಷಿಸಿ ವಿಸ್ಮಯದಂತನೆಯ್ದಿದಂ ॥೧೧೪॥

ಆ ರಾಜಮನೋಜನ ಬಾಧಾತಿರೇಕಮಂ ಕಂಡು ಬೆಸಗೊಳಲಮ್ಮದೆ ಕಿಱಿದಾನುಂ ಪೊಳ್ತುವರಮಿರ್ದು ವಜ್ರಜಂಘಂ ಮೆಲ್ಲನೆ ಮೇಧಾವಿಳಂಗಿಂತೆಂದಂ—

ಕಂ॥ ಭಾವನ ಕೋಪೋಪಚಯಮಿ ।
ದಾವಂದದಿನಾಯ್ತು ನೃಪಮನೋಜಂಗೆಲೆ ಮೇ ॥
ಧಾವಿಳ ಪೇಟೆನಗಿದನೆಂ ।
ದೋವಿಯೆ ಬೆಸಗೊಂಡನಿಂತು ಪದ್ಮಪುರೀಂದ್ರಂ ॥೧೧೫॥

ಅದರ್ಕೆ ಮೇಧಾವಿಳನಿಂತೆಂದಂ—

1. ತತ್ಕ್ರಿಯೆಯನಿರ್ದ. 2. ಬಹುಳಾಶ್ರಮ.

ಮ॥ ನಿನಗಾಂ ಪೇೞದೆ ವಜ್ರಜಂಘ ಪುಸಿಯಲ್ಕಿನ್ನನ್ಯನೇ ಪೇೞ್ವೆನೆಂ ।
ತೆನೆ ಭೂನಾಥ ಮನೋಜನೊರ್ಮೆ ವಿಪುಳೋದ್ಯಾನಕ್ಕೆ ಪೋಪಲ್ಲಿ ತೊ ॥
ಟ್ಟನೆ ಕಂಡಂ ಕುಸುಮಾವಳಿ ಪ್ರಕಟ ನಾಮಂ ಬೆತ್ತ [1]ತಚ್ಚಿತ್ರ ಭಾ ।
ಮಿನಿಗತ್ಯಾಕುಳನಾಗಿ ಸೋಲ್ತನೊಗೆದಿರ್ಪೀಯಂದಮಾ ದೂಸಱಿಂ ॥೧೧೬॥

ಉ॥ [2]ಲೋಕದೊಳೊಂದಪೂರ್ವಮೆನೆ ಮೋಹಿಪ ಮೋಹನ ಚಿತ್ರ ರೂಪಮು ।
ಪ್ಪಾ ಕುಸುಮಾವಳೀ ವಿದಿತ ನಾಮದ ಭಾಮೆಯನೀಕ್ಷಿಪೀಪ್ಸೆಯಿಂ ॥
ದಾಕುಳನಾಗಿ ಭೂಪ ಮದನಂ ಬರುತಿರ್ದನದಲ್ಲದಿಂತು ಪೇ ।
ೞೀಕೆ ಜಗತ್ಪ್ರಭೂ ಭ್ರಮುಮೆನುತ್ತುಸಿರ್ದಂ ನೆಱೆ ಮಂತ್ರಿನಂದನಂ ॥೧೧೭॥

ಅದಂ ಕೇಳ್ದು—

ಕಂ॥ ಎನಗಿದು [ವೆ] ಚಿತ್ರಮಿಾ ನೃಪ ।
ಮನೋಭವಂ ಸೋಲ್ತು [ಬಂದುದೀ] ಚಿತ್ರದ ಭಾ ॥
[3]ಮಿನಿಗಾಗವೇೞ್ಕುಮೆಂದೊ ।
ಯ್ಯನೆ ಶೀರ್ಷಾಂದೋಳನಾಗೆ ಪದ್ಮ ಪುರೀಂದ್ರಂ ॥೧೧೮॥

ಆ ಭಾವಮಂ ಕಂಡು ಮೇಧಾವಿಳನಿದೇನೆಂದು ಬೆಸಗೊಂಡಾಗಳ್—

ಚಂ॥ [4]ಜನಪ ಕುಮಾರಿಯೊರ್ಬ ಕುಸುಮಾವಳಿಯೆಂಬಳಪೂರ್ವ ರೂಪ ಮೋ ।
ಹಿನಿ ಗಡ ತಾಂ ಸ್ವಯಂವರ ಪರಾಙ್ಮುಖ ಚಿತ್ತೆ ಗ [ಡಾ ಸಮಸ್ತ ಭೂ] ॥
ವಿನುತ ಕಳಾ ಪ್ರಗಲ್ಭೆ ಗಡ ದಕ್ಷಿಣದೇಶದೊಳೆಂದು ಕೇಳ್ದೆನಾ ।
ನೆನುತವೆ ವಜ್ರಜಂಘನುಸಿರ್ದಂ ನೃಪಕಂತು ಸಖಂಗೆ ಭೂಪತೀ ॥೧೧೯॥

ಇಂತು [5]ಪೇೞ್ದಾಗಳ್—

ಉ॥ ಮುನ್ನಮೆ ದಕ್ಷಿಣಾಭಿಮುಖವಾಗಿಯೆ ತಂದಧಿದೈವದೊಂದು ಪಾಂ ।
ಗನ್ನೆನೆದಂದದಿಂ ಬಯಲೆನಿಪ್ಪುದೆ ನಿಶ್ಚಯ ರೂಪಮಾದ ಸೈ ॥
ಪನ್ನೃಪಕಂತು ಪೊ[6]ತ್ತುದೆನಸುಂ ನಗೆಯಾಗದೆ ನಾಡೆ ಸತ್ಯಮಾ ।
[7]ಯ್ತೆನ್ನೆನೆ ಮೆಚ್ಚುತುಂ ಸಚಿವಸೂನು ಮಹಾ ಮುದನಾಗುತಿರ್ಪಿನಂ ॥೧೨೦॥

---

1. ತಚಿತ್ತ. 2. ಲೋಕದೊಳಪೂರ್ವ. 3. ಮಿಸಿಯಾಗ. 4. ಜನಕ.
5. ಕೇಳ್ದಾಗಳ್. 6. ಪೊಲ್ತ. 7. ಯ್ತಂನೆರೆ.

ಚಂ॥ ಹೃದಯದೊಳೊಂದಿ ನಿಂದ ಕುಸುಮಾವಳಿ ಶಯ್ಯೆಗೆ ವಂದು ತನ್ನನ ।
ಪ್ಪಿದ ತೆಱನಾಗೆ ತದ್ವದನವೀಕ್ಷಣ ಕಾಂಕ್ಷೆ ನಿಮಿರ್ಕೆವೆತ್ತು ನೋ ॥
ಡಿದ ನೃಪಕಂತು ಮಂಚದೊಳೆ ಕಾಣದೆ ನಿದ್ರೆಯಿನೇೞ್ದನಂತೆ ಬಾ ।
ಷ್ಪದ ಪನಿಯಂ ಬೆರಲ್ಗೊನೆಯಿನೊತ್ತುತೆ ವೀಕ್ಷಿಸಿದಂ ಸಖಾಸ್ಯಮಂ ॥೧೨೧॥

ಇಂತು ಮೊಗಮಂ ನೋಡಿ—

ಕಂ॥ ಆವುದು ಕಾರಣಮೆಲೆ ಮೇ ।
ಧಾವಿಳ ನಿನ್ನಯ ಮುಖ ಪ್ರಸನ್ನದ್ಯುತಿ ಶೋ ॥
ಭಾವಿಳಮಾದುದು ಪೇೞೆಂ ।
ದಾ ವಸುಧಾಧಿಪ ಮನೋಭವಂ ಬೆಸಗೊಂಡಂ ॥೧೨೨॥

ಉ॥ ಈ ವಿಷಯಕ್ಕೆ ದಕ್ಷಿಣ ದಿಶಾವನಿಯಲ್ಲಿ ಮಹಾಪ್ರಸಿದ್ಧ ಧಾ ।
ತ್ರೀವರ ಪುತ್ರಿಯೊರ್ಬ ಕುಸುಮಾವಳಿಯಿರ್ದಪಳೆಂದು ಕೇಳ್ದ ವಾ ॥
ರ್ತಾವಳಿಯಂ ಸಮಂತು ನೆಱೆ ಸೂಚಿಸೆ ನಮ್ಮಯ ವಜ್ರಜಂಘಸಾಂ ।
ಭಾವಿಸೆ ಕೇಳ್ದು ಸಮ್ಮದಮನೆಯ್ದಿದೆನಿಂತು ನರೇಂದ್ರ ಮನ್ಮಥಾ ॥೧೨೩॥

ಇಂತು ಬಿನ್ನವಿಸೆ ಮೇಧಾವಿಳ ವಚನ ಭಾವೋದ್ದೀಪನ ಪಿಂಡಮಾಗೆ ಚಿತ್ತದೊಳ್ ಚಿತ್ತ ಪ್ರಿಯಳಂ ಕಿಱದಾನುಂ ಪೊೞ್ತು ಭಾವಿಸುತ್ತುಮಿರ್ದ ಮಹೀಶ ಮನ್ಮಥಂ ಮೆಲ್ಲನೆ ವಜ್ರಜಂಘನ ಮೊಗಮಂ ನೋಡಿದಾಗಳ್—

ಮ॥ ಕರ ಕಂಜಾತ ಯುಗೈಕ ಕುಟ್ಮಲಕೃತಂ ತಾನಾಗೆ ದೇವ ಪ್ರಭಾ ।
ಸುರ ಮಧ್ಯಂದಿನ ಲಕ್ಷ್ಮಿಯಂ ನೆರೆದನಂಭೋಜ ಪ್ರಿಯಂ ಪೊೞ್ತು ಪೋ ॥
ಯ್ತಿರದಿಂ ಮಜ್ಜನ ಮಂದಿರಕ್ಕೆ ಬಿಜಯಂಗೆಯ್ಯಲ್ಕೆ ವೇೞ್ಕುಂ ನೃಪ ।
ಸ್ಮರ ನೀವೆಂದು ಸಮಂತು ಬಿನ್ನವಿಸಿದಂ ತದ್ವಜ್ರಜಂಘೋರ್ವಿಪಂ ॥೧೨೪॥

ಕಂ॥ ಆ ವಿಷಯಕ್ಕೆ ಮೊಗಸದಾ ।
ಭೂವರ ಪಂಚೇಷು ಮಂಚದಿಂದೆೞ್ದಂ ಚೇ ॥
ತೋವಿಹಿತ ಕಾರ್ಯಮಂ ಪರಿ ।
ಭಾವಿಸಿ ನುಡಿವಂಗದಾವುದಾಗದುದುಂಟೇ ॥೧೨೫॥

ಆಗಳಂತೆ ನೃಪಕಂತು ವಜ್ರಜಂಘನ ಬಿನ್ನಪಮಂ ಮನದೇಗೊಂಡು ಸ್ನಾನಾಹಾರ ವ್ಯಾಪಾರನಾಗಿ—

ವ॥ ಹರಿಪೀಠಾಗ್ರಿಮ ಭೂಷಣಾಗಿಸಿ ಸಮುದ್ಯದ್ಭಕ್ತಿಯಿಂ ಭೂವರ ॥
ಸ್ಮರನಂ ತತ್ಪದ ಪೀಠಪಾರ್ಶ್ವದೆಡೆಯೊಳ್ ತಾಂ ಬಂದು ಕುಳ್ಳಿರ್ದು ಬಿ ॥
ತ್ತರಿಪಾತ್ಮೀಯ ಸಮಸ್ತ ತತ್ಪರಿಜನೋಪೇತಂ ಸಮುದ್ಭೂತ ಹ ।
ರ್ಷ ರಸೋತ್ಕರ್ಷದಿನಾಗಳೋಲಗಿಸುತಿರ್ದಂ ವಜ್ರಜಂಘೋರ್ವಿಪಂ ॥೧೨೬॥

ಕಂ॥ ಲೀಲೆಯೊಳಾ ವರ ವನಿತಾ ।
ಜಾಲಂ ಮಾಧುರ್ಯ ಗೇಯದಿಂ ಕರ ವೀಣಾ ॥
ಲಾಲಿತ ವಾದನ ಚಿತ್ರದಿ ।
ನೋಲಗಿಸುತ್ತಿರ್ದುದಿಂತು ನೃಪ ಮನ್ಮಥನಂ ॥೧೨೭॥

ತತ್ಸಮಯದೊಳ್—

ಉ॥ ಆ ಕುಸುಮಾವಳೀ ಸತಿಯ ದೇಶಮುಮಂ ಪುರಮಂ ಸಮಂತುಮಾ ।
ಲೋಕಿಸಿ ಬಂದು ಭೂಪ ಮದನಂಗುಸಿರ್ದೆನ್ನಯ ಮಿತ್ರ ನಾಮಮಂ ॥
ಲೋಕದೊಳಿಂತಿದಂ ಪ್ರಕಟಮಾಗಿಪೆನೆಂದೊಲವಿಂದೆ ಪೋಪವೋಲ್ ॥
ಕೋಕನದ ಪ್ರಿಯಂ ತಡೆಯದೆಯ್ದಿದನಂದಪರಾಚಲೇಂದ್ರಮಂ ॥೧೨೮॥

ಕಂ॥ ಸರಭಸದೆ ನರ್ತಿಪಾ ಹರ ।
ಕಿರೀಟ ಗಂಗಾಂಬು[1]ಶೀಕರಂ ಸೂಸೆ ನಭೋಂ ॥
ತರಮಂ ತಳ್ತುದೆನಲ್ ಬಿ ।
ತ್ತರಿಸಿದುದಂಬರದೊಳೊಗೆದ ತಾರಾ ನಿಕರಂ ॥೧೨೯॥

ಕಂ॥ ಅತುಳ ಕರ ಧೂತ್ಕೃತಾನಿಲ ।
ಹತಿಯಿಂ ನೆಱೆ ಸೂಸೆ ಪತ್ತಿದಿನ[ವಾಹ] ಮುಖೋ ॥
ದ್ಗತದ [2]ನೊರೆವನಿಗಳೆನೆ ಮಾ ।
ರುತ ಪಥದೊಳ್ ತುಱುಗಿ ಮಿಱುಗಿದುವು ತಾರಗೆಗಳ್ ॥೧೩೦॥

ಮ॥ ನೆಗೆದೋರಂತಳುರ್ವತ್ಯ[ದ]ಗ್ರ ಬಡಬಾಗ್ನಿ ಜ್ವಾಲೆಗಳ್ಗಳ್ಕುತುಂ ।
ತೆಗೆದಾಗಳ್ ಮೊಗಮಂ ನಿಲಲ್ ನೆರೆಯದಿಂದಾ್ರಸಾ ಪಯೋರಾಶಿಯಂ ॥
ಮಿಗೆ ಮೇಗಣ್ಗಡರುತ್ತುಮಿರ್ಪ ಕಮಠಂ ತಾನೆಂಬಿನಂ ಶೋಣ ರೋ ।
ಚಿಗಳಂಸೂಸುತುಮಿಂದುಬಿಂಬವೊಗೆದತ್ತೈಂದ್ರೀನಗೇಂದ್ರಾಗ್ರದೊಳ್ ॥೧೩೧॥

---

1. ಶೀಕಣಂ. 2. ನೊರೆವಸೀಗಳೆನೆ.

ಉ॥ ಮುನ್ನಮೆ ಪೋಗಿ ಪಾರ್ದಿಸುತುಮಿರ್ದಪನಾ ನೃಪ ಕಂತುವಂ ಮನೋ ।
ಜನ್ನನೆಯಂಬಿನಿಂ ಬಿಡದೆ ಬೆಂಬಲವಾಗಿರವೇೞ್ಕುಮೆಂದು ಕೋ ॥
ಪನ್ನೆಲೆವೆರ್ಚೆ ಬಂದನೆನಿಪಂದದಿನಂದುದಯಾಚಲೇಂದ್ರದಿಂ ।
ದಿನ್ನಸುಗೆಂಪುವೆತ್ತೊಗೆದುದರ್ಣವ ತೋಷಕರಂ ಸುಧಾಕರಂ ॥೧೩೨॥

ಆ ಸಮಯದೊಳ್—

ಕಂ॥ ಮನಮುೞಿದು ವಜ್ರಜಂಘಂ ।
ಜನನಾಥ ಮನೋಜ ಸಾಲ್ವುದಿಂತಿರವಿನ್ನೆ ॥
ಟ್ಟನೆ ಶಯ್ಯೆಗೇೞೆಮೆಂದತಿ ।
ವಿನಯದೆ ಬಿನ್ನವಿಸಿ ಬೇಗದಿಂ ಬೀೞ್ಕೊಂಡಂ ॥೧೩೩॥

ಇಂತು ವಿಸರ್ಜಿತ ಸೇವಕ ಸಮಾಜನಾದಾಗಳ್—

ಚಂ॥ ಸಚಿವ ಸುತ ಪ್ರಕೋಷ್ಠ ಪುಟ ಪೀಠ ಪರಿಸ್ಥಿತ ಹಸ್ತನಾಗೆ ತಾಂ ।
ರುಚಿರ ವಿಚಿತ್ರ ಚಿತ್ರ ಮಯದಾ ನೃಪಗೇಹದ ರತ್ನ ಭೂಮಿಕಾ ॥
ನಿಚಯಮನಾಗಳೀೞ್ ನಡೆ ಪಾಡುತುಮಾ ಕುಸುಮಾವಳೀ ವಧೂ ।
ಪಚಿತ ವಿಳಾಸಮಂ [1]ಪದೆದು ಭಾವಿಸುತಿರ್ದನಿಳೇಶ ಮನ್ಮಥಂ ॥೧೩೪॥

ಆ ಸಮಯದೊಳ್—

ಕಂ॥ ಸುದತೀ ವಾರ್ತಾಂತರಮಂ ।
ಪದೆಪಿಂ ನೆಱೆ ಪೇೞ್ವ ಸಚಿವ ಸುತನಂ ಚೇತೋ ॥
ಮುದನಾಗಿಯದನೆ ಬೆಸಗೊಳು ।
ತದನೆ ವಿಚಾರಿಸುತುಮಿರ್ದನಾ ನೃಪ ಮದನಂ ॥೧೩೫॥

ಮ॥ ಸುತನಪ್ಪಿಂದುಮರಾಳನಂ ತಣಿಯಿಸಲ್ಕೆಟ್ಟಿಂದುದೋ ತತ್ತನೂ ।
ದ್ಗತಮಾಗಿರ್ಪ ಕಳಂಕ ಪಂಕಮನದಂ ಪ್ರಕ್ಷಾಳನಂಗೆಯ್ಯಲು ।
ನ್ನತಿವೆತ್ತುರ್ವಿದುದೋ ಸುಧಾರ್ಣವಮೆನಿಪ್ಪೊಂದಂದದಿಂ ಸಾಂದ್ರ ಶೋ ।
ಭಿತಮಾಗಿರ್ದುದು ಪರ್ಬಿ ಪಜ್ಜಳಿಸುತುಂ ಚಂದ್ರಾತಪಾಡಂಬರಂ ॥೧೩೬॥

ಕಂ॥ ಬಳಸಿದ ಪಾಲ್ಗಡಲೊಳ್ ಪ ।
ಜ್ಜಳಿಪ ಸಿತದ್ವೀಪದೆಸಕಮಂ ನೆನೆಯಿಸೆ ಕ ॥

1. ಪಡೆದು.

ಣ್ಗೊಳಿಸಿರ್ದುದು ಪೊಸವೆಳ್ದಿಂ ।
ಗಳ[1] ಪೊಳೆಪಿಂದಿಂತು ಪದ್ಮಪುರಮಾ [2]ಪದದೊಳ್ ॥೧೩೭॥

ಅದಂ ಕಂಡು ಮೇಧಾವಿಳನಿಂತೆಂದಂ—

ಉ॥ ಆವಗಮೆಯ್ದೆ ಗೊಂಟುಗೊಳಿಸಿತ್ತಳಕಾಪುರಿಯಿಂ ಸಮಗ್ರ ಶೋ ।
ಭಾವಳಿಯಿಂದೆ ನಮ್ಮ ವಿಮುಳಾಪುರಿ ದೇವ ಸಮಾನಮೆಂತದ ॥
ರ್ಕೆ ವರ ವಜ್ರಜಂಘಪುರಿ ನಾವಿದನೀಕ್ಷಿಪೆವೀಗಳೆಂದು ಮೇ ।
ಧಾವಿಳನಿಂತು ಬಿನ್ನವಿಸೆ ತಾಂ ಮನಮಿತ್ತನಿಳೇಶ ಮನ್ಮಥಂ ॥೧೩೮॥

ವಾಸವ ವೈರಿ ಮತ್ತೆ ಮಗುಟ್ದೆನ್ನೊಳೆ [3]ಕೀಳ್ಮನದಟ್ಟು ಪುಟ್ಟಿಯು ।
ಭ್ಯಾಸ ನಿಮಿತ್ತದಿಂದಿರದೆ ಬರ್ಕುಮೆನುತ್ತಮೆ ತಕ್ಕೆವಂದು ಕೈ ॥
ಲಾಸಮನಂತಮಾಯ್ತೆನೆ ಮಿಯತ್ತಳಮುಂ ತುಡುಕುತ್ತುಮಿರ್ಪವೋಲ್ ।
ಭಾಸುರಮಾಗೆ ಸಾಂದ್ರ ಶಶಿಕಾಂತದ ದೇವ ನಿವಾಸ ಕೋಟಿಗಳ್ ॥೧೩೯॥

ಚಂ॥ ಪೊಳೆಪೆನಸುಂ ಪೊದಟ್ದಿದ ಚಂದ್ರಿಕೆಯೊಳ್ ಪೊಸ ಸಂಜೆಗೆಂಪು ಸಂ ।
ಗಳಿಸಿತೆನಲ್ಕೆ ರತ್ನ ಕಲಶಂಗಳ [4]ತಣ್ಬೆಳಗುಣ್ಮೆ ಪೊಣ್ಮೆ ಪ ।
ಜ್ಜಳಿಪ ನವೇಂದುಕಾಂತ ಕೃತಮಪ್ಪ ವಿಚಿತ್ರದ ಯಾಮಿಕಾಳಿಯಿಂ ।
ತಳತಳಿಸುತ್ತೆ ಕಣ್ಗೊಳಿಸುತಿರ್ದುವು ಪಣ್ಯವಧೂಟಿ ವಾಟಿಗಳ್ ॥೧೪೦॥

ಮಿಳಿರೆ ಸೆಱಂಗು ಮಿಳ್ಳಿಸೆ ಕುರುಳ್ ತೊನೆಯುತ್ತಿರೆ ತಾರ ಹಾರಮು ।
ಜ್ಜಳಿಪ ಮೊಗಂ ತಳತ್ತಳಿಸೆ ಲೋಚನ ಚಂದ್ರಿಕೆ ಬಳ್ಳಿಗೊಂಡು ಗೊಂ ॥
ದಳಿಸೆ ಪೊದಟ್ದೆ ಮೆಯ್ಯ ತನಿಗಂಪೆನಸುಂ ಪಱದೇಟೆ ಕಾಂತೆ ನಿ ।
ರ್ಮಳ ದಶನಾಂಶು ನೀಟ್ದೆಸೆಯೆ ರಾಗದೆ ಪಾಡುತುಮುಯ್ಯಲಾಡಿದಳ್ ॥೧೪೧॥

ಮತ್ತೊಂದೆಡೆಯೊಳ್—

ಚಂ॥ [5]ಅಲರವತಂಸಮಂ ದ್ವಿಗುಣಿಸುತ್ತಿರೆ ನೀಟ್ದ ವಿಲೋಚನಾಂಶುವಾ ।
ತಿಲಕದ ಚೆಲ್ವನಿಮ್ಮಡಿಸೆ ಭಾಳಪುಟಂ ಮಣಿಹಾರ ಕಾಂತಿಯುಂ ॥
ಸಲೆ ನೆಲೆವೆರ್ಚಿಸಲ್ಕೆ ಕುಚ ಮಂಡಲ[6]ಮೊಳ್ನಡು ರತ್ನ ಕಾಂಚಿಗ ।
ಗ್ಗಳಿಪ ವಿಶಾಲಮಂ ಕುಡೆಯುಮೊತ್ತಗೆ ನಿಂದವಳೊಪ್ಪಿದಳ್ ॥೧೪೨॥

1. ಪೊಳೆದಿಂತು. 2. ಪಥದೊಳ್. 3. ಕೇಳ್ವೆನದರ್ಥಿ. 4. ಕಣ್ಬೆಳಗು.
5. ಅನವರತಂ. 6. ಮುಳುದೆ.

ಲಲನೆಯ ವಕ್ತ್ರ ಶೋಭೆಯನೆ ನೋಟ್ಪುಜಿಪಿಂದಮುಳೇಂದು ದರ್ಪಣ ।
ಚ್ಛಲದೊಳೆ ಕೈಗೆವಂದನೆನೆ ಕನ್ನಡಿಯಂ ಪಿಡಿದಿಂತು ಬಾಗಿಲೊಳ್ ॥
ಗಳಿತ ವಿಳಾಸ[1]ಮುಗ್ಗಳಿಸಿ ಕಣ್ಗೊಳೆ ನಿಂದು ವಿಟರ್ಗೆ ಕಂತು ಕಾ ।
ಯ್ದಲಗಿಡುವಂತೆ ಚಾಪಳ ಕಟಾಕ್ಷದಿನೀಕ್ಷಿಸುತೊರ್ವಳೊಪ್ಪಿದಳ್ ॥೧೪೩॥

ಮ॥ ಕಡೆಗಣ್ಣೋ ಕುಸುಮಾಸ್ತ್ರನುರ್ಚಿದಲಗೋ [2]ಹೃದ್ಭೂ ಧನುರ್ಮಧ್ಯಮೋ ।
ನಡುವೋ ಪೆರ್ಮೊಲೆಯೋ ಮನೋಜ ಕೃತಕಾದ್ರಿ ದ್ವಂದ್ವಮೋ ತಾಂ ಬಳ ॥
ಲ್ಮುಡಿಯೋ ಕಂತು ಪತಾಕಮೋ ಮದನ ಮಾತಂಗಾತುಳಾಲಾನಮೋ ।
ತೊಡೆಯೋಪೇಱೆನೆ ಮೋಹಿಸುತ್ತಬಲೆನಿಂದಿರ್ದಳ್ ನಿಜದ್ವಾರದೊಳ್ ॥೧೪೪॥

ಅವಳಂ ನೋಡುತ್ತುಂ ಪೋಗೆವೋಗೆ—

ಚಂ॥ ತೊಳಗುವ ಪಾಟಲಾಧರದ [3]ಚಂದನ ಗಂಡದ ಕೇತಕೀ ಲಸ ।
ದ್ದಳ ನಖದಬ್ಜ ವಕ್ತ್ರದ ರಥಾಂಗ ಕುಚಂಗಳ ಭೃಂಗ ಕುಂತಳಾ ॥
ವಳಿಯಲರ್ಗಣ್ಣ ಪಲ್ಲವ ಕರಂಗಳ ಸಂಗತಿವೆತ್ತ ಚೆಲ್ವು ಕ ।
ಣ್ಗೊಳಿಸೆ ಮನೋಜನಿರ್ಪ ವನಿತಾ ವನಮೆಂಬಿನಮೊರ್ಬಳೊಪ್ಪಿದಳ್ ॥೧೪೫॥

ಆ ವನಿತೆಯತ್ಯಾಶ್ಚರ್ಯ ರೂಪಮಂ ನೋಡುತ್ತುಂ ಪೋಗೆವೋಗೆ—

ಮ॥ ತರವೇಟ್ಟಿಟ್ಟದ ದೂತಿ ಬಾರದಿರೆ ನಲ್ಲಂ ಬಾರನೇಕೆಂದವಳ್ ।
ಕರ ವಿನ್ಯಸ್ತ ಕಪೋಲ ಮಂಡಲೆ ನಿಮೇಷ ತ್ಯಕ್ತ ನೇತ್ರಾಬ್ಜೆ ಧೂ ॥
ಸರ ವಕ್ತ್ರಾಬ್ಜೆ ಸಕುಂಚಿತಾಂಗುಳಿಮಯೋತ್ತಾನೈಕ ಪಾದಾಬ್ಜೆಯಾ ।
ಗಿರುತಿರ್ದಳ್ ಮರವಟ್ಟವೋಲ್ ಸುದತಿ ಚಿಂತಾಭ್ರಾಂತಿಯಿಂ ಬಾಗಿಲೊಳ್ ॥೧೪೬॥

ಮತ್ತೊಂದೆಡೆಯೊಳ್—

ಮ॥ ಇನಿಯಂ ಬಂದಪನೀಗಳೆಂದು ತನುವಂ ಕೈಗೆಯ್ದು ಸಮ್ಮೋಹ ಮೋ ।
ಹನ ಗೇಹಾಂತರಮಂ ವಿಳಾಸಮೆನಸುಂ[ಮೆಯ್ವೆರ್ಚೆ] ಮೆಯ್ವೆರ್ಚೆ ಲೋ ॥
ಚನ ರು[ಕ್ಚಂದ್ರಿಕೆ] ಚಂದ್ರಿಕಾಕೃತಿಯೆನಿಪ್ಪಂತಿರ್ದಳಿರ್ದಳ್ ಮನೋ ।
ಜನ ಕೂರ್ವಾಳೆನೆ ಬಾಲೆ ತನ್ನಯ ಗೃಹಾಗ್ರ ಸ್ಥಾನದೊಳ್ ತಾನವಳ್ ॥೧೪೭॥

1. ಮುಗ್ಗಳಿಸೆ. 2. ಹೃದ್ಭ್ರೂ. 3. ವಂದನಗಂಡದ.

ಅವಳ್ ತನ್ನ ವಾಸಕ ಸಜ್ಜಿಕಾಭಿಧಾನಮನಭಿನಯಿಸುತ್ತಿರ್ದಳೆಂದು ನೋಡುತ್ತುಂ ಪೋಗೆವೋಗೆ—

ಮ॥ ಪ್ರಿಯ ವಾಮಾಂಕ ಪುಟಾಸನ ಸ್ಥಿತೆಯದೊರ್ಬಳ್ [1]ಭಂಗಿಯಿಂ ನೀವಿ ಜೀ ।
ವಿಯನುಜ್ಜೀವಿಸಿ ಪೊಯ್ದು ನೋಡಿ ನಿಜವಾಮೋತ್ತುಂಗ ವಕ್ಷೋಜದೊಳ್ ॥
ನಯದಿಂದಿಟ್ಟು ಮನಕ್ಕೆ ರಾಗ ರಸಮಂ ತಳ್ಪೊಯ್ಯುತುಂ ರಾಗ ಸಂ ।
ಚಯಮುಣ್ಮುತ್ತಿರೆ ಬಾಜಿಸುತ್ತುಮೆಸೆದಳ್ ವೀಣಾ ಕಳಾ ಪ್ರೌಢಿಯಂ ॥೧೪೮॥

ಅವಳ ವಿಪಂಚೀ ವಾದನ ಪ್ರೌಢಿಯಂ ನೋಡುತ್ತುಂ ಪೋಗೆವೋಗೆ—

ಮ॥ ಶಕುನೀನಾದಮನಾದಮಾ ಕುಹರಣಂ ಮಿಕ್ಕುಣ್ಮೆ ತತ್ಪಶ್ಚಿಮಾಂ ।
ಗ ಕರಾಸ್ಫಾಲನ ತಾಲು ಶೀತ್ಕರಣ ಮಂಜೀರೋಜ್ಝಣತ್ಕಾರಮಂ ॥
[2]ಚಕನಚ್ಚಿತ್ಕೃತಿ ಯೋಗ ತಾಡನ ಪಟು ಧ್ವಾನೋತ್ಕರಂ ಪೊಣ್ಮೆ ಕಾಂ ।
ತೆ ಕರಂ ಕಾಂತನೊಳಿಂತು ಸಂಭ್ರಮದೆ ಕಂತು ಕ್ರೀಡೆಯಂ ಮಾಡಿದಳ್ ॥೧೪೯॥

ಆ ನಿತಂಬಿನೀ ಪ್ರಕಟ ಸಂಭೋಗ ಕೇಳೀ ಕೋಳಾಹಳಮಂ ಕೇಳುತ್ತುಂ ಪೋಗೆವೋಗೆ—

ಮ॥ ನಸುಗೆಂಪಾದಲರ್ಗಣ್ ಬೆಳರ್ಪೊಗೆದು ಬೀಗಿರ್ಪೋಷ್ಠಮಾ ಘರ್ಮದಿಂ ।
ಬಸಿವಂಗಂ ಪಣೆಗೊಂಡು ಪತ್ತಿದಳ[3]ಕಾನೀಕಾಂ ನಖಾಂಕ ವ್ರಣೋ ॥
ಲ್ಲಸಿತೋತ್ತುಂಗ ಕುಚಂ ಸಡಿಲ್ದ ಮುಡಿ ಚೆಲ್ವಂ ಬೀಱೆ ನಿಂದಿರ್ದಳಾ ।
ಱುಸುತುಂ ಮೇಲುದಱಿಂ ಲತಾಂಗಿ ಸುರತಾಂತ ಶ್ರಾಂತಿಯಂ ಬಾಗಿಲೊಳ್ ॥೧೫೦॥

ಮತ್ತಮೊಂದೆಡೆಯೊಳ್—

ಮ॥ ನಡೆಯಂದಂ ಮುಸುಕಿಟ್ಟ ಭಂಗಿಯೆನಿತಾನುಂ [4]ಪೊಲ್ತು ಪೋಗುತ್ತುಮಿ ।
ರ್ದೊಡೆ ಕಂಡೊರ್ಬನನೊರ್ಬಳಾತನೆ ದಿಟಂ ತನ್ನಾತನೆಂದೇೞ್ದು ಹ ॥
ತ್ತುಡಿಯಂ ಚೇಗಡೆ ಪೋಗಿ ಪಾಯ್ದುಮದುರ್ಪ ತಳ್ಕೈಸುತ್ತೆ ಹಿಮ್ಮೆಟ್ಟಿ ಸಂ ।
ಗಡಮಿರ್ಪಾಳಿಯರಂ ಕರಂ ನಗಿಸಿದಳ್ [5]ತತ್ಕಾಂತ ವಿಭ್ರಾಂತಿಯಿಂ ॥೧೫೧॥

1. ಪಂಗಿಯಿಂ. 2. ಚಕನಂಚಿತ್ಕೃತಿ. 3. ಜಾಸಿಕುಂ. 4. ಪೊತ್ತು.
5. ತತ್ಕಾಂತೆ.

ಚಂ॥ ಮುಳಿದಿರದೆೞ್ದು ತನ್ನಯ ಮನಃಪ್ರಿಯನಂ ಪ್ರಿಯ ವಾಕ್ಕೃತಾನದಿಂ ।
ತಿಳಿಪುವದೊಂದು ಪಾಂಗಱಿಯದಾಗಳೆ ಬಾಗಿಲೊಳಡ್ಡಮಿರ್ದು ಕೋ ॥
ಮಳೆ ನಡುಗುತ್ತೆ ಪೆರ್ವೊಲೆಗಳೊಳ್ ಬಿಡದಿಕ್ಕುವ ಬಾಷ್ಪಬಿಂದು ಸಂ ।
ಕುಳಮೆನಿತಾನುಮಾ ಕ್ಷಣದಿನಾ ಮುನಿಸಂ ತೊಳೆದತ್ತು ಚಿತ್ತದೊಳ್ ॥೧೫೨॥

ಅವಳ ಮುಗ್ಧಭಾವ ಸಾತ್ತ್ವಿಕ ಸ್ನೇಹಮಂ ಮೆಚ್ಚುತ್ತುಂ ಪೋಗೆವೋಗೆ—

ಮ॥ ಇನಿಯಂ ಕಾಲ್ಗೆಱಗಿರ್ಪುದಂ ತಿಳಿಯವೇೞ್ಕೆಂದಾಳಿಯರ್ ಪೇೞೆ ತಾ !
ನಿನಿತಂ ಕೇಳದೆ ಕಾಯ್ದು ನೂಂಕಿದೊಡೆ ಬೇಸತ್ತೆೞ್ದು ಪೋಗುತ್ತುಮಿ ॥
ರ್ದನನಾಗಳ್ [1]ನಿಱಿಯಲ್ಲರಲ್ಚುತಿರೆ ಮುಂದಿಂಗಡ್ಡವಂದಾಕೆ ಭೋಂ ।
ಕನೆ ಪಾದಾನತೆಯಾಗಿ ನಿಲ್ಲದವನಂ ಕೊಂಡೆಯ್ದಿದಳ್ ಶಯ್ಯೆಗಂ ॥೧೫೩॥

ಅವಳ ಮರುಳ್ತನಕ್ಕೆ ನಗುತುಂ ಪೋಗೆವೋಗೆ ಮುಂದೆಡೆಯೊಳ್—

ಮ॥ [2]ಸಿರಿಗಿಂಬಾಗಿರೆ ಬಾಗಿಲೊಳ್ ಬೊಜಗನೀಗಳ್ ಸಂದು ನಿಂದಿರ್ದಪಂ ।
ಕರೆ ನಿಮ್ಮಕ್ಕನನಕ್ಕುಮಕ್ಕು [3]ಪೊಸತೆಂದಿಂತೊತ್ತೆಯಂ ಕೊಟ್ಟು ನೋ ॥
ಡಿರೆ ಪೋಗಂ ಶನಿ ಪತ್ತಿದಂತಿರಿರುತಿರ್ಪಂತಿತ್ತುದೇನೆಂದು ಚೆ ।
ಚ್ಚರದಿಂ ಕುಂಟಣಿ [4]ಗೆಂಟನಿಂದೊರೆದಳಾತಂ ನಾಣ್ಚಿ ಪೋಪನ್ನೆಗಂ ॥೧೫೪॥

ಅವಳೀ ಕಿವರಿತನಕ್ಕಂ ನಗುತ್ತುಂ ಪೋಗೆವೋಗೆ ಮುಂದೊಂದೆಡೆಯೊಳ್–

ಚಂ॥ ಬಲಿದುದು ಸಾಂದ್ರ ಚಂದ್ರಿಕೆಯಿದೆಂಬಿನಮುಜ್ಜ್ವಲ ಕಾಂತಿ ಶೋಭೆಯಂ ।
ಸಲೆ ತಳೆದಿಂಬುವೆತ್ತ ಶಶಿಕಾಂತದ ಪಾಸಱೆಯೊಳ್ ವಿಳಾಸಮು ॥
ಗ್ಗಳಿಸೆ ಲತಾಂಗ ಕಾಂತಿ ದೆಸೆಯಂ ಪುದಿಯುತಿರಲಿ[5]ರ್ದರಲ್ಲಿ ತ ।
ವ್ಮೊಲವಿನೊಳುನ್ಮದ ಪ್ರಮದೆಯರ್ ಪದೆದಾ ಮಧುಪಾನ ಕೇಳಿಯೊಳ್ ॥೧೫೫॥

ಹೃದಯವಲಂಪುವೋಗೆ [6]ಪದೆದೀಂಟದ ಮುನ್ನಮೆ ತನ್ನ ಕಂಪಿನಿಂ ।
ಮದದ ಪೊಡೞ್ಕೆಯಂ ಮನಕೆ ಮಾೞ್ಪ ವಿನೂತನ ವೃಕ್ಷಧಾನ್ಯ ಸಾ ॥
ರದ ಮಧುವಿಂಗೆ ತೀವಿ ಮಧುಪಾವಳಿಗಳ್ ಸುಱಿಗೊಳ್ವ ಚಂದ್ರಕಾಂ ।
ತದ ಪಿರಿದಪ್ಪುದೊಂದು ಘಟಮಂ ತಳೆದೊಪ್ಪಿದುದಾ ಶಿಲಾತಳಂ ॥೧೫೬॥

---

1. ಪಿಱಿಯಲ್ಲರಲ್ಚು. 2. ಸಿರಿಗಿಬಾರಗೆ. 3. ಹೋಸತಿಚಿ.
4. ಗೆಂಟರಿಂದೊರೆದಳಾ. 5. ಲಿರ್ದುದಲ್ಲಿ. 6. ಪದೆದೀಂಟದ.

ಕಂ॥ ಮಿಱುಪ ಶಶಿಕಾಂತ ಘಟಮದು
ಪೊಱಪೊಣ್ಮೆಯೆ ತೋಱುತಿರ್ಪ ತನ್ಮಧುವಿಂದಂ ॥
ನೆಱೆ ನೀಲ ರತ್ನ ಘಟವೆಂ ।
ಬೆಱಕಮನೊದವಿಸುತುಮಿರ್ದುದಾ ಪಾಸಱೆಯೊಳ್ ॥೧೫೭॥

ಚಟ್ಟಱಿಂದು ಘಟಮನರ್ಚಿಸಿ ।
ನೆಟ್ಟನೆ ¹ಪೊಸ ಪೂಗಳಿಂದಮನಿತುಂ ಮಧುವಿಂ ॥
ಬೊಟ್ಟಿಟ್ಟು ಮದ್ಯಪಾನದ ।
²ಗೊಟ್ಟಿಗೆ ಚಷಕಮನೆ ಕೊಂಡು ಕಾಂತೆಯರೆಸೆದರ್ ॥೧೫೮॥

ಚಂ॥ ಮೊಗೆಮೊಗೆದೀಂಟುತುಂ ಬಿಸಿಯೆನಲ್ ³ಬೆರಲೌಂಕಿ ಕೆಂಪು ನೆ।
ಟ್ಟಗೆ ನಿಲೆಯುಟ್ಟ ನೆಯ್ಗಡಲೆಯುಂ ಮೆಲುತುಂ ಮಗುಳೆತ್ತಿ ಮತ್ತೆ ಮ ॥
ತ್ತುಗೆ [ನೆಱೆ] ಪೀರುತುಂ ತಣಿದು ತೇಗಿಯುದೋಯೆನುತುಂ ಮದಂ ಮನ ।
ಕ್ಕೊಗೆದು ವಿರಾಜಿಸಿತ್ತು ಮಧುಪಾನದೊಳಾ ನವ ಕಾಮಿನೀ ಜನಂ ॥೧೫೯॥

ಚಂ॥ ಇರದೆ ಮನಕ್ಕೆ ಸೊಕ್ಕಡರೆ ಪೊಂಪುೞಿ ವಕ್ತ್ರದೊಳುಣ್ಮೆ ಜೊಂಪಮಾ ।
ವಱಿಸೆ ಲತಾಂಗದೊಳ್ ನೆಗೆದು ಕಣ್ಮಲರೊಳ್ ನಸುಗೆಂಪು ಪೊಣ್ಮೆ ತ ॥
ಚ್ಚರಣ ಸರೋಜದೊಳ್ ತಡತಡಂದೊಡರ್ದಾ ರಸನಾಗ್ರದೊಳ್ ತೊದ।
ಟ್ವಿರಸಿದ ⁴ಮಾತಿನಿಂದೆಸೆದರಂಗನೆಯರ್ ಮಧುಪಾನ ಕೇಳಿಯೊಳ್ ॥೧೬೦॥

ಮಿಸುಪ ಕಪೋಲದೊಳ್ ನೆಗೆಯೆ ಘರ್ಮ ಪಯಃಕಣ ಮಾಲೆ ಕಣ್ಗಳೊಳ್ ।
ಪಸರಿಸೆ ಪಾಟಲಾಂಶು ಚಷಕಂ ಕರದಿಂದೆ ನೆಲಕ್ಕೆ ಬೀೞೆ ಮೆಯ್ ॥
ಬಸವೞಿದೆತ್ತಿ ಕೈಯನೊಲೆದಾಡುತುಮಾ ಬಯಲಂ ಮಲಂಗಿ ಝೋಂ।
ಪಿಸುತುಮುದೊರ್ಬಳೊಪ್ಪಿದಳವಳ್ ಮಧುಪಾನದ ಸೊರ್ಕಿನುರ್ಕಿನಿಂ ॥೧೬೧॥

ಕಂ॥ ಸದಮಳ ಘಟದೊಳಗಣ ಮಧು ।
ವದು ನೆೞೆ ಪೊಱಪೊಣ್ಮೆ ತೋಱೆ ಪಱಿದಿದೆ ಪೋಗು ॥
ತ್ತಿದೆ ಮಧುವೆಂದೆಯ್ತಂದಾ ।
ಮದಿರೋನ್ಮದೆ ಸುದತಿ ಕೈಯನೊಡ್ಡಿದಳೊರ್ವಳ್ ॥೧೬೨॥

---

1. ಪೂಸಕೇಸರ್ಗಳಿಂದ. 2. ಗೋಷ್ಠಿಗೆ. 3. ಬೆರಳಿಂಕೆ. 4. ಮಾತನಾಡುತ್ತೆಸೆದ.

ಚಂ॥ ಪೊಳೆವ ನಿಜಾಸ್ಯ ಮಂಡಲಮನಾ ಚಷಕಾಸವದಲ್ಲಿ ಕಂಡು ಕೋ।
ಮಳೆ ನಡೆ ನೋಡಿ ತನ್ನ ಮಧುಪಂ ವಿಧು ಪೊಕ್ಕಿರುತಿರ್ದ[1]ನೀತನಂ ॥
ಘಳಿಲನೆ ನೂಂಕೆನಲ್ ಕೆಲದೊಳಿರ್ದಮೃತದ್ಯುತಿ ವಕ್ತ್ರೆ ನೋಡಿ ತಾಂ।
ಪೆಳರಿದಳೊರ್ಬನಲ್ತು ಸಖಿ ಚಂದ್ರಮರಿರ್ಬರೆನುತ್ತೆ ಪತ್ತವಳ್ ॥೧೬೩॥

ಕಂ॥ ತನಿಸೊರ್ಕು ತೊಡರ್ದು ಝೊಂಪಿಸೆ।
ತನು [ವಂ ಸವಿ] [2]ಗುಡುತಿರಲ್ಕೆ ಬಯಲಂ ವೊಗೆದಾ ॥
ನನದ ಕೆಳಗಣ್ಗೆ ಚಷಕಮು।
ನೆನಸುಂ ಕೊಂಡೊಯ್ಯುತಿರ್ದಳಿಂತಿವಳೊರ್ವಳ್ ॥೧೬೪॥

ಮ॥ ಮುಡುಹಂ ಪೊಯ್ದು ಕೊಳುತ್ತುಮೆಯ್ದೆ ಧರೆಯಂ ತಾಳಕ್ಕೆ ಮೆಟ್ಟುತ್ತೆ ಸೊ।
ರ್ಕಿಡೆಗೊಂಡಾ ನಳಿದೋಳ ತೂಕಮೆನಸುಂ ಚೆಲ್ವಾಗೆ ಪೂಗಳ್ ಬಟ ॥
ಲ್ಮುಡಿಯಿಂದಲ್ಲುಗೆ ನೂಪುರ ಧ್ವನಿ ಪೊದಟ್ದು ರ್ಬೆ(ಟಿ ಕಾಂತಾ ಜನಂ।
ಗೆಡೆಗೊಂಡಾಡುತುಮಿರ್ದುದಿಂತು ಮಧು ಪಾನ ಕ್ರೀಡೆಯೊಳ್ ನಾಡೆಯುಂ ॥೧೬೫॥

ಅವಂದಿರ ಸೊರ್ಕಂ ಮುಗ್ಧಭಾವಮುಮಂ ನೋಡುತ್ತುಂ ಮಗುಟ್ದು ಬಂದು ರಾಜ ಮಂದಿರಮಂ ಪೊಕ್ಕಾಗಳ್—

ಮ॥ ಪೆಸರಿಂದಂ ಪೊಣರ್ವಕ್ಕಿಯೆಂದೆನಿಪ ಕೋಕ ದ್ವಂದ್ವಮಂ ತಾನಗ।
ಲ್ಚಿಸಿದಂ ನೀಡಿ ಕರಂಗಳಿಂದಮುದಱಿಂ [3]ದೋಷಾಕರೋಗ್ರಾಖ್ಯೆಯಾ ॥
ಯ್ತು ಸುಧಾ ಸೂತಿಗೆನುತ್ತುಮಾತನ [4]ಕರಸ್ಪರ್ಶಕ್ಕಣಂ ಪೇಸಿದಂ।
ತೆ ಸಮಂತಾ ನೃಪ ಕಂತುವಿಂದುಗಗಿದಾದಂ ಪೊರ್ದಿದಂ ಶಯ್ಯೆಯಂ ॥೧೬೬॥

ಉ॥ ಆವಗಮಾ [5]ನಿಶಾವಧಿವರಂ ಕುಸುಮಾವಳಿ[6]ಯೊಂದು ವಾರ್ತೆಯಂ।
ಭಾವಿಸಿ ಮತ್ತೆ ಮತ್ತೆ ಮಗುಟ್ದಾ [ಬಗೆಯಂ] ಪದೆಪಿಂದೆ ಪೇಟುತುಂ ॥
ಭೂವರ ಕಂತುಗಂಗಭವ ತಾಪಮನಾಗಿಸದಿರ್ದನಲ್ತೆ ಮೇ।
ಧಾವಿಳನಾತನನ್ನನೆ ಸಖಂ ಪೆಱನೇಂ ಸಖನೆಂಬ ಲೆಕ್ಕಮೇ ॥೧೬೭॥

1. ನಿಂತನಿ. 2. ಗೂಡುತಿರಲ್ಕೆ. 3. ದೋಷಾಕರೋಗ್ರಾಸ್ಯೆ. 4. ಕರಸ್ಪರ್ಶತ್ಕಣ.
5. ನಿಶಾವಧಿಪರಂ. 6. ಯೊಂದು.

ಚಂ॥ ನಿನಗೆಲೆ ಭೂಪ ಮನ್ಮಥ ದಿಟಂ ಕುಸುಮಾವಳಿ ಕಾಂತೆಯಪ್ಪಳೆಂ।
ದಿಸಿಯಳ ಮೆಯ್ಯ ಸಂಟಿ ನೆಜ ಸೂಱುಳಲಾಟಿಸೆ ತನ್ನ ಕೈಗಳಂ॥
ಮನಮೊಸೆದಿಕ್ಕುತಿರ್ದನೆನೆ ಪುಂಬಜಱದಾ ಕಿರಣೋತ್ಕರಂ ಕರಂ।
ವನಜಮನೆಯ್ದೆ ಸೋಂಕುತಿರೆ ತಾನುದಯಾದ್ರಿಯನರ್ಕನೇಱದಂ ॥೧೬೮॥

ಆ ಸಮಯದೊಳ್—

ಕಂ॥ ತರಿಸಿ ಪವನಂಜಯಾಶ್ವಮ।
ನರಸಂ ತಾನೇಱ ಸಖ ಯುತಂ ಪೊಱಮಡೆಯುಂ॥
ಪ್ಪರದಿಂದೆ ವಜ್ರಜಂಘಂ।
ಪಿರಿದುಂ ಬಲ ಸಹಿತಮಿರದೆ ತಾಂ ಪೊರಮಟ್ಟಂ ॥೧೬೯॥

ಮ॥ ಸಲೆ ಕಾಣುತ್ತಿರದಲ್ಲಿ ತನ್ನ ಹಯಮಂ ತಂದೇಱ ಕೊಳ್ಳೆಱಕೊ।
ಳ್ಳಲೆ ಮೇಧಾವಿಳ ದೇವ ನೀನೆನೆ ಸಮಂ ತಾನೊಲ್ಲೆನೇಕೆಂಬೆ ನಿ॥
ಸ್ತುಲ ಸತ್ತ್ವಂ ಪವನಂಜಯಾಶ್ವನಿದಿರೊಳ್ ಬರ್ಪಶ್ವಮೊಂದಿಲ್ಲ ಭೂ।
ತಲದೊಳ್ ಭಾವಿಸೆ ವಜ್ರಜಂಘ ಪೆಱತೇ[1]ನಾನೊಲ್ಲೆನೀ ವಾಜಿಯಂ ॥೧೭೦॥

ಸ್ಥಿರದಿಂದಿರ್ಪುದು ವಜ್ರಜಂಘ ಮಗುಳ್ದಾವೇಱತ್ತಿರ್ಪೆವೀ ಮಾರ್ಗದೊಳ್।
ನಿರುತಂ ನಿಲ್ಲೆನೆ ದೇವ ನಿಮ್ಮಡಿಗಳಿರ್ಪಲ್ಲಿರ್ಪೆನಾನಲ್ಲದಿ॥
ಲ್ಲಿರೆ[ನೆಂದೆಱಗೆ ಬಿಡದೆ] ಮೆಚ್ಚುತುಂ ನಿಲಿಸಿದಂ ತನ್ನಾಜ್ಞೆಯಿಟ್ಟಾಗಳಂ।
ತಿರಿದಾ ವೇಗದೆ ದಕ್ಷಿಣಾಭಿಮುಖನಾದಂ ಭೂಪ ಪುಷ್ಪಾಯುಧಂ ॥೧೭೧॥

ಚಂ॥ ಪದಪಿನೊ[2]ಳೆಯ್ದೆ ಕೂಡು ನೃಪ ಮನ್ಮಥ [3]ನೀಂ ಕುಸುಮಾವಳೀ ಮಹಾ।
ಸುದತಿಯನೆಂದು ಧಾತ್ರನೊಸೆದಟ್ಟಿದ ಘೋಟಕ ರೂಪ ದೂತನಂ॥
ದದೆ ಪವನಂಜಯಾಶ್ವನತಿ ವೇಗದೆ ಪೋಗುತುಮಿರ್ದುದಾಗಳ।
ಗ್ಗದ ಪವಮಾನನಂ ಮಿಗುತೆ ತದ್ವಿಷಯೋಪಚಿತಾಧ್ವ ಮಧ್ಯದೊಳ್ ॥೧೭೨॥

ಅಂತು ಕತಿಪಯ ಪ್ರಯಾಣಂಗಳಂ ಪೋಗೆವೋಗೆ—

ಚಂ॥ ಪವನ ವಿಘಾತಿಯಿಂ ಪಿರಿದು ಶಕ್ರ ಶರಾಸನ ಯೂಥ ಯುಕ್ತದಿಂ।
ದವಸಿಗೆ ಬಿಟ್ಟ ಕಾರ್ಮುಗಿಲ ಪೊತ್ತುಮಿದೆಂಬಿನಮುಲ್ಲಸದ್ಬಹು॥

1. ನಂವಲ್ಲೆ. 2. ಳೊಯ್ದು ಕೊಡು. 3. ನಂ.

ಚ್ಛವಿಯ ತಳಿರ್ಗಳಿಂ ತುಱುಗಿ ಕತ್ತಲಿಸುತ್ತುಮನೇಕ ವೃಕ್ಷದಿಂ।
ದವಿರಳಮಾಗೆ ರಮ್ಯಕ ವನಂ ಪುದಿದಿರ್ದುದುದಗ್ರ ರಮ್ಯದಿಂ ॥೧೭೩॥

ಉ॥ ಸ್ವೈರಿಸದಿಂದ್ರ ನಂದನಮನತ್ತಲೆ ನೂಂಕುವವೋಲ್ ಪೊದಟ್ಟು ನೀ।
ಳ್ದಾ ರುಚಿರೋಚ್ಚ ಶಾಖೆಗಳ ಸಂದಣಿಯಿಂ ಪಱದೋವದುತ್ತರಾ॥
ಶಾ ರಮಣೀಶ ಚೈತ್ರರಥಮಂ ಕೆಲಕೊತ್ತುವವೋಲ್ ಸಮಂತು ವಿ।
ಸ್ತಾರಿಸಿ [1]ಪರ್ಬುಗೊಂಡ ನಿಡುಗೊಂಬುಗಳಿಂದೆಸೆದಿರ್ದುದಾ ವನಂ ॥೧೭೪॥

ಚಂ॥ ಪೊಳೆವ ಪೊದಟ್ಕೆವೆತ್ತ ಕಳಿಕಾ ನಿಕರಂಗಳ ರಮ್ಯದಿಂದೆ ನು।
ಣ್ದಳಿರ್ಗಳ[2]ನೊತ್ತಿ ನಿಂದ ಮಧುವೇಱದ ಪೂಗಳ ರಮ್ಯದಿಂದೆ ಕಾ॥
ಯ್ಗಳ ಪರಿರಮ್ಯದಿಂದೆ ರಸಮುಣ್ಮುವ ಪಣ್ಗಳ ರಮ್ಯದಿಂದೆ ಕ।
ಣ್ಗೊಳಿಸಿದುದಿಂತು ರಮ್ಯಕವನಂ ಪೆಸರನ್ವಿತಮಾದುದೆಂಬಿನಂ ॥೧೭೫॥

ಅಲರ್ಗಳ ಕಂಪನೆತ್ತಿ ನಯದಿಂ ನೆಱೆ[3] ತಾಳ್ದಿ ಸರೋಜ ಷಂಡ ಮಂ।
ಡಲದ ತುಷಾರ ವಾಃಕಣಮನಾಂತು ಕುಜಂಗಳ ತಣ್ಣೆಲಲ್ಗಳೊಳ್॥
ಸುಳಿಸುಳಿದಾಡಿ ಕೋಮಲ ಲತಾಳಿಗೆ ಲಾಸ್ಯದಗುರ್ವನಾಗಳ।
ಗ್ಗಳಿಸುತುಮಲ್ಲಿ ತೀಡಿದುದು ಭೃಂಗ ರವಾಕುಲಮಾ ವನಾನಿಲಂ ॥೧೭೬॥

ಮ॥ಸ್ರ॥ ಸ್ಮರ ರಾಜ್ಯೋದ್ಯಚ್ಛುಭಶ್ರೀ ನಿಳಯಮೆನೆ ವನಂ ರಮ್ಯಮಾದತ್ತು ಭೃಂಗೀ।
ಸ್ವರ [3]ಗೀತ ಧ್ವಾನದಿಂದಂ ಶುಕ ಪಿಕ ನಿನದಾತೋದ್ಯದಿಂದಂ ಮಯೂರೋ॥
ತ್ಕರ ಲೀಲಾ ಲಾಸ್ಯದಿಂದಂ ಸುರುಚಿರ ನವ ಚಾಂಪೇಯದಾ ಕುಟ್ಮಳೋದ್ಭಾ।
ಸುರ ದೀಪಾನೀಕದಿಂದಂ[4] ವಿಕಸಿತ ನವ ಪುಷ್ಪೋಪಹಾರೌಘದಿಂದಂ ॥೧೭೭॥

ಉ॥ ಲೋಳತೆಯಿಂದೆ ಪುಷ್ಪವತಿಯುಂ ಮಧು ಭಾಜನೆಯುಂ ಮದೋತ್ಕ ಚಂ।
ಡಾಳಿಯ ಸಂಗಮಂ ಬಿಡದ ಪದ್ಮಿನಿಯುಂ ಸಲೆ ಸೋಂಕುತಿರ್ಪನೆಂ॥
ದೇಳಿಸಿ ನಾಡೆ ಪೇಸಿ ಪುಗಲೀಯದಿದೆಂಬಿನಮಾ ರವಿ ಪ್ರಭಾ।
ಮಾಳಿಗೆ ದುಃಪ್ರವೇಶಮಿನಿತಾಯ್ತು ನಿರಂತರದಿಂ ವನಾಂತರಂ ॥೧೭೮॥

ಇಂತುಮಾ ರಮ್ಯಕ ವನಂ ಹರಿಯುಕ್ತಮಪ್ಪುದಱಿಂ ಅನಂತ ಸುಪರ್ಣೋಪೇತಮುಂ ವನಮಾಲಾ ವಿಭೂಷಿತಮುಂ ತುಷಾರಮಪ್ಪುದಱಿಂ ಶಿಖಿಸಮೇತಮುಂ ಸುಪ್ರಾಣಾಂಚಿತಮುಂ [5]ವಿಳಸತ್ಕುಲೀನಮಪ್ಪುದಱಿಂ ವರ ವಂಶಾಭಿರಮ್ಯಮುಂ ವಿಶ್ರುತೋದ್ದಾಮಮುಂ ವಿಭ್ರಾಜಿತ ಬಭ್ರುವಪ್ಪುದಱಿಂ ಪದ್ಮ

1. ಬರ್ಪು. 2. ನೆತ್ತದಿಂದ. 3. ದೇವ. 4. ವನಪತ್ತ. 5. ವಿಳಸಲ್ಕುಳಿ.

ವಾಸೋದ್ಭಾಸುರನುಂ ಸುರುಚಿರ ಚಕ್ರ ಬಂಧುರಮುಂ ಪ್ರಸನ್ನ ಪುಷ್ಕರಮಪ್ಪುದಱಿಂ ವಿಶಾಖಾ ಸಮನ್ವಿತಮುಂ ವಿಚಿತ್ರ ಮೃಗಕುಜ ಯುಕ್ತಮುಂ ಸಾಶ್ಚರ್ಯ ಶೋಭಾ ದಶಾನನಮಪ್ಪುದಱಿಂ ಸಖ ಸೇವ್ಯ ವಿಭವಮುಂ ಸಮುತ್ಸಾರಿತ ವಿಭೀಷಣಮುಮಾಗಿರ್ಪುದು ಅಂತುಮಲ್ಲದೆಯುಂ—

ಚಂ॥ ಲತೆಗಳ ಜನ್ಮಭೂಮಿ ಪುಳಿನಂಗಳ ಪೆರ್ಗಣಿ ಮತ್ತ ಭೃಂಗ ಝುಂ ।
ಕೃತಿಗಳ ಬೀಡುವಾಣಮುಲರ್ಗಂಪುಗಳಾಲಯಮುತ್ಕ ಕೋಕಿಲ ॥
ಶ್ರುತಿಗಳ ಮಂದಿರಂ ಶಿಖಿ ನಿಕಾಯದ ನಾಟಕಶಾಲೆ ತಣ್ಪಿನು ।
ನ್ನತ ಕುಟಿ ಸಾಲ ತಣ್ಣೆಲ ತಾಯ್ಪನೆ ತಾನೆನಿಸಿರ್ದುದಾವನಂ ॥೧೭೯

ಮತ್ತಮಲ್ಲಿ—

ಮ॥ ಬಿಸಜಾತೋದ್ಭವನಾತ್ಮ ಹಸ್ತ ಕುಶಲತ್ವಂ ವಿಶ್ವಲೋಕಕ್ಕೆ ಭಾ ।
ವಿಸೆ ಭದ್ರಪ್ರದಮಾಗಲೆಂದು ಬಹುಭದ್ರವ್ರಾತದಿಂ ಮಾಡಿದಂ ।
ತೆಸಕಂ ಬೆತ್ತ ಸಮಸ್ತ ಭದ್ರಮಯದಿಂ ತಾಂ ಸರ್ವತೋಭದ್ರಮೆಂ ।
ಬ ಸರೋಜಾಕರಮಿರ್ದುದಲ್ಲಿ ಜನ ನೇತ್ರಾನೀಕ ಲೀಲಾಕರಂ ॥೧೮೦॥

ಇವು ಶುಭ್ರಾಂಬುರುಹಂಗಳಿಂತಿವು ಲಸದ್ರಕ್ತಾಂಬುಜಾತಂಗಳಿಂ ।
ತಿವು ನೀಲೋತ್ಪಲ ಸಂಕುಲಂಗಳಿವು ತತ್ಪತ್ರಂಗಳೆಂಬೊಂದು ಭೇ ॥
ದವಭೇದಂ ಬಳೆಯಲ್ಕೆ ಪ್ರಜ್ವಲಿಸಿದತ್ತಾ ಸಾರ ಕಾಸಾರದೊ ।
ಪ್ಪುವ ಚಂದ್ರೋಪಲ ಸಾಂದ್ರ ಚಂದ್ರ ಬಹು ಸೋಪಾನ ಪ್ರಭಾ ಮಂಡಲಂ
॥೧೮೧॥

ಹಿಮರುಗ್ಬಿಂಬ ಕಳಂಕ ಪಂಕಮನದಂ ಪ್ರಕ್ಷಾಳಿಸಲ್ಕೆಂದು ರಾ ।
ಹು ಮುಖಂ ಮುಟ್ಟದದೊಂದಪೂರ್ವ ವಿಳಸತ್ಪೀಯೂಷಮಂ ತಂದು ತ ।
ನ್ನ ಮನಃಪ್ರೇಮದಿನಿಲ್ಲಿ ಪಂಕಜಭವಂ ತೀವಿಟ್ಟನೋ ತಾನೆನಲ್ ।
ಕಮನೀಯಂ[1]ಬಿಡಿದಿರ್ದುದಾ ಕೊಳನಪಾರ ಸ್ವಚ್ಛ ವಾಃಪೂರದಿಂ ॥೧೮೨॥

ಇರದೆಟ್ಟಿಂದು ದಶಾನನಂ ಮುಗುಟಿ[3] ತಾಂ [2]ಕಿಟ್ಟಿಯುಗ್ಗಮೆಂದೊಲ್ಲದೀ ।
ಶ್ವರ ಸದ್ಮಚ್ಛಲದಿಂದೆ ತಾರಕ ನಗಂ ಬಂದಿರ್ದುದೆಂಬಂತಿರಂ ॥
ಬರಮುಂ ತುಂಬಿಪ ಚಂದ್ರಕಾಂತ ರಚನಾಶ್ಚರ್ಯಂ ವಿರೂಪಾಕ್ಷ ದೇ ।
ವರ ದೇವಾಯತನಂ ವಿರಾಜಿಸುವುದಾ ಪದ್ಮಾಕರೋಪಾಂತದೊಳ್ ॥೧೮೩॥

1. ಬಿಡದಿರ್ದುದಾ. 2. ಕಿಳ್ತಿಯುದ್ದಮೆಂದಲ್ಲ.

ಕಂ॥ ತೊಳಗುವ ತತ್ಸರಸಿಯ ಶಿವ।
ನಿಳಯದ ಚೆಲ್ವಂ [1]ನಿರೀಕ್ಷಿಸಲ್ಕೊರ್ಮನದಿಂ॥
ದಿಳಿದಂ ಪವನಂಜಯನಂ।
ಘಳಿಲನೆ ತಾನಲ್ಲಿ ಮುದದಿನವನಿಪ ಮದನಂ ॥೧೮೪॥

ಮ॥ ಭರದಿಂ ಮಂತ್ರಿ ಸುತಂ ಹಯಾಗ್ರಣಿಯನಂದು [2]ಕ್ಷಾಳನಂಗೆಯ್ದು ತ।
ದ್ವರ ವಾಕ್ಪೂರದೆ ತೃಪ್ತನಾಗಿಸಿ ತದೀಶಾ ವಾಸದಗ್ರ ಪ್ರಭಾ॥
ಸುರ ಚೂತ ದ್ರುಮ ಮೂಲದೊಳ್ ನಿಯಮಿಸಿಟ್ಟುತ್ಕೃಷ್ಟ ದೂರ್ವಾ ತೃಣೋ।
ತ್ಕರಮಂ ಕೂಱಿಸಿಯಿಂದೆ ಕೊಯ್ದದಱ ಮುಂದಣ್ಗಾ ಕ್ಷಣಂ ಸಾರ್ಚಿದಂ ॥೧೮೫॥

ಪರಮ ಪ್ರೇಮದ ಪೆಂಪಿನಿಂ ಹೃದಯದೊಳ್ ತಾಳ್ದಿರ್ದುದೆಂಬಂತೆ ಬಿ।
ತ್ತರದಿಂ ಮಾರ್ಪೊಱೆಯುತ್ತಿರಲ್ಕೆ ನಿಜ ಶೋಭಾಕಾರಮಾಗಳ್ ಮಹೀ॥
ವರ ಪುಷ್ಪಾಯುಧನಿಂತು ತತ್ಸರಸಿಯಂ ಪೊಕ್ಕಲ್ಲಿ ಪಾದಾನನಾಂ।
ಬುರುಹ ಕ್ಷಾಳಿತನಾಗಿ ತಾಂ ಪಡೆದನಂಭಃಸ್ವಾದು ಸಂಪತ್ತಿಯಂ ॥೧೮೬॥

ಮ॥ಸ್ರ॥ ಪೆಸರ್ವೆತ್ತಾ ಪದ್ಮಸದ್ಮಾಂತಿಕ ಧರೆಯ ವಿರೂಪಾಕ್ಷ ದೇವರ್ಗೆ ಭ।
ಕ್ತಿ ಸಮೇತ ಸ್ವಾಂತದಿಂ ಬಂದೆಱಗಿ [3]ಸನಿಯದೊಳ್ ನಿಂದು ತದ್ದೇವ ಸದ್ಮಾ॥
ಗ್ರ ಸಮುದ್ಯನ್ಮಂಟಪ ದ್ವಾರದೆ ಮಣಿ ರಚಿತಾಶ್ಚರ್ಯ ನಿರ್ವ್ಯೂಹದೊಳ್ ಶೋ।
ಭಿಸುತುಂ ಕುಳ್ಳಿರ್ದನಾ ಸತ್ಕೃತಿ ರತಿರಮಣಂ ಸಾಹಸೋದ್ದಾಮ ಭೀಮಂ ॥೧೮೭॥

ಇದು ಕಮನ ಕುಧರೇಂದ್ರ ನಂದನಾ ಲೋಲಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾ ಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ಸಮರ ವರ್ಣನಂ
ರಮ್ಯಕ ವನ ಪ್ರವೇಶ ವರ್ಣನಂ
ಏಕಾದಶಾಶ್ವಾಸಂ

---

1. ನಿರೀಕ್ಷಿಸಲ್ಕಂಮನಂದಂ. 2. ಪ್ಪಲಣಂ. 3. ಕಡೆಯದೊಳಂದು.

## ದ್ವಾದಶಾಶ್ವಾಸಂ

ಕಂ॥ ಶ್ರೀ ನಿರುಪಮ ನಿಜ ತನು [1]ಕಿರ।
ಣಾ[2]ನೀಕದೆ ಭುವನ ಭವನ ನಿರ್ಮಲ ರುಚಿಯಂ ॥
ತಾನಿರ್ಮಡಿಸುತ್ತಿರ್ದಂ ।
ಮಾನಧನಂ ಮಾನವೇಂದ್ರ ಮಕರ [3]ಪತಾಕಂ ॥೧॥

ಅಂತು ಕುಳ್ಳಿರ್ದು ಕಂದರ್ಪದೇವಂ ಮೇಧಾವಿಳ ಪ್ರದತ್ತ ಕರ್ಪೂರ ತಾಂಬೂಲ ಗೃಹೀತನಾಗಿ ತತ್ಸರಸೀ ಶೋಭೆಯಂ ನೋಡುತ್ತುಮಿರ್ಪಾಗಳ್—

ಚಂ॥ ವನರುಹ ಷಂಡ ಲಕ್ಷ್ಮಿಯನಭೀಕ್ಷಿಸಲಾ ವನಲಕ್ಷ್ಮಿ ಬರ್ಪವೋಲ್ ।
ವಿನುತ ಲತಾಂಗಿ ಚಾರು [4]ಕಳಿಕಾ ನಖಿ ಮತ್ತ ಮರಾಳ ಯಾನೆ ಪಾ ॥
ವನ ಪಿಕ ನಾದೆಯೊರ್ವ ಕಳಭಾಷಿಣಿಯೆಂಬ ವಧೂಟಿಯಾಗಳಿಂ ।
ತನುಪಮಮಪ್ಪ ತತ್ಸರಸಿಗೆಟ್ಟಿಱಿತಿರ್ದಳಪೂರ್ವ ಶೋಭೆಯಿಂ ॥೨॥

ಕಂ॥ ಎಳಲತೆಗೆ ಲತೆಯು ಕಳಿ ಸಂ ।
ಗಳಿಸಿದವೋಲ್ ಕೆಳದಿ ಕನಕಲತೆಯೆಂಬಾ ಕೋ ॥
ಮಳೆವೆಱಸು ಬರುತ್ತಿರ್ದಳ್ ।
ಕಳಭಾಷಿಣಿ ತತ್ಸರೋಜ ಷಂಡಕ್ಕಾಗಳ್ ॥೩॥

ಚಂ॥ ಅನಿಮಿಷ ಕಾಂತೆಯೋ ಖಚರ ಕಾಮಿನಿಯೋ ವನದೇವಿಯೋ ದಿಶಾಂ ।
ಗನೆಯರೊಳೊರ್ವಳೋ ಬಗೆವೊಡಿಂತಿವಳಾವಳೆನುತ್ತುಮಾಗಳಾ ॥
ವನಿತೆಯ ರೂಪಮಂ ಪೊೞೆವ ಮೆಯ್ವೆಳಗಂ ನಡೆ ನೋಡಿ ವಿಸ್ಮಯಂ ।
ಜನಿಯಿಸೆ ಮಂತ್ರಿಸೂನು ನೃಪಕಂತುಗೆ ತರ್ಜನಿಯಿಂದೆ ತೋಱಿದಂ ॥೪॥

ಆಗಳ್—

ಚಂ॥ ಪರಿವೃತ ನಾಳ ಕಾಂಡಪಟಿಯಾಗಿ ಸರೋಜ ಗೃಹಕ್ಕೆ ಬರ್ಪ ನೀ ।
ರ ರುಹ ವನಾಧಿದೇವತೆಯೊ ತಾನೆನುತುಂ ಕಮನೀಯ ಕಾಂತಿ ಬಿ ॥

1. ಕರ. 2. ನೀಕದೇವನಭವನ. 3. ಪತ್ರಾಕ್ಷಂ. 4. ಕಳಿಕಾನನೆ.

ತ್ತರಿಪ ಲತಾಂಗ ಸೌರಭದ ಲೋಭದೆ ಸುತ್ತಿ ಮದಾಳಿ ಮಂಡಲಂ।
ಬರೆ ಬರುತಿರ್ದ ಕಾಂತೆಯನಭೀಕ್ಷಿಸಿದಂ ನರನಾಥ ಮನ್ಮಥಂ ॥೫॥

ಇಂತು ನೋಡುತಿರ್ಪಾಗಳ್—

ಚಂ॥ ಕತಿಪಯ ಘರ್ಮ ವಾಃಕಣ ಗಣೋದ್ಗತ ಭಾಳ ಕಪೋಲ [1]ದೇಶೆ ಪೊ।
ಕ್ಕತಿಶಯ ಪದ್ಮ ಷಂಡಮನದಂ ಪರಿಧೌತ ಪದಾಸ್ಯೆಯಾಗಿ ವಿ॥
ಶ್ರುತೆ ಕಳಭಾಷಿಣಿ ವ್ಯವಹೃತ ಶ್ರಮೆಯಾದ ಬಱಿಕ್ಕಮಲ್ಲಿಯೊಂ।
ದತುಳ ಸಿತಾಬ್ಜಮಂ ತಳೆದುಕೊಂಡೆನಸುಂ ಪೊಱಮಟ್ಟಳಲ್ತ್ತಯಿಂ ॥೬॥

ಆಗಳ್ ಕನಕಲತೆಯೆಂಬ ಸಖಿ—

ಚಂ॥ ಘಳಿಲನೆ ಕಂಡು ನಮ್ಮರಸಿಯಂ ಕುಸುಮಾವಳಿ ದೇವಿಯಂ ಮರು।
ಳ್ಗೊಳಿಸಿದ ಚಿತ್ರದನ್ನನೆ ತದೀಯ ಶಿವಾಲಯ ಮತ್ತವಾರಣ॥
[2]ಸ್ಥಳದೊಳಪೂರ್ವ ಸತ್ಪುರುಷನೀಯಿರುತಿರ್ದನೆ ನೋಡು ನೋಡು ನೀಂ।
[3]ತಳರದೆನುತ್ತುಮಾಂತ ಕಳಭಾಷಿಣಿಗಾಗಡೆ ನಿಂದು ತೋಱದಳ್ ॥೭॥

ಕಂ॥ ಕನಕಲತೆ ತೋಱೆಯುಂ ತೊ।
ಟ್ಟನೆ ಕಂಡಾ ಚಿತ್ರಪುರುಷನನ್ನನೆ ತಾನೀ॥
ತನೆ ಆತನಪ್ಪನೆಂದಱ।
ದೆನಸುಂ ಭಾವಿಸುತುಮಿರ್ದಳಾ ವಧು ಮನದೊಳ್ ॥೮॥

ಅಂತು ಭಾವಿಸಿ—

ಚಂ॥ ಎಲೆ ಸಖಿ ನಿನ್ನ ಮಾತು ದಿಟಮಾದಪುದೀತನೆ ತಪ್ಪದಪ್ಪನೀ।
ಸುಲಲಿತ ಮೂರ್ತಿ ಮಾನವರ್ಗಿದೆಲ್ಲಿಯದಾ ಸುರರೊಳ್ ವಿಯಚ್ಚರಾ॥
ವಲಿಯೊಳದಾವನೋ ನುಡಿಸುವಂ ಮೊಗವಿಾಯಲಿ ಕಾಯ್ದು ತಾಪವಿಾ।
ಯಲಿ ನಡೆ ಪೋಪಮೆಂದು ಕಳಭಾಷಿಣಿ ತಾಂ ತಳರಲ್ಕೊಡರ್ಚಿದಳ್ ॥೯॥

ನುಡಿಸದಮುನ್ನಮಿರ್ದೆಡೆಗೆ ಪೋಗದೆ ನಮ್ಮಯ ಮಾತಿಗಿಂಬುಗೊ।
ಟ್ಟೊಡೆ ಕುಸುಮಾವಳೀ ವಿರಹ ವೃತ್ತಕಮಂ ಬಗೆಗೊಳ್ವ ಭಂಗಿಯಿಂ॥
ನುಡಿವಮದರ್ಕೊಡಂಬಡೆ ಕೃತಾರ್ಥರೆ ನಾವಿದು ನಮ್ಮ ದೇಸೆಯೊಳ್।
ಗಡಣಿಸೆ ನಾಡೆ ಕೌತುಕಮೆನುತ್ತುಮವಳ್ ತಳರ್ದಳ್ ಪ್ರಮೋದದಿಂ ॥೧೦॥

---

1. ದೆಸೆ. 2. ಸ್ಥಳದೊಳೆಪೊರ್ವ. 3. ತಳರದೆನುತ್ತವಾಂತ.

ಅನುನಯದಿಂದಮಿಂತು ಕಳಭಾಷಿಣಿ ಭೋಂಕನೆ ಬಂದು ತನ್ನ ಕೈ।
ಯನುಪಮ ಶುಭ್ರ ವಾರಿಜವನಾಗಳೆ ಕಾಣ್ಕೆಯನಿತ್ತು ಚಿತ್ತ ಸಂ॥
ಜನಿತ ಘನ ಪ್ರಮೋದ ಭರದಿಂದಿರದಾ ನರನಾಥ ಪುಷ್ಪ ಚಾ।
ಪನ ಪದ ಪಂಕಜಕ್ಕೆಱಗಿದಳ್ ಘಳ ವಿಶ್ರುತ ಕಲ್ಪವಲ್ಲಿವೋಲ್ ॥೧೧॥

ಇಂತೆಱಗಿದ ಕಾಂತೆಯಂ ಮೇಧಾವಿಳ [1]ಭೀರುವನಾಸನಾಸೀನೆಯಾಗಿಸೆಂದು [2]ನೇಮಿಸಿ ನೃಪಮದನನಾಕೆಯ ಮನಕ್ಕೆ ಮುದಮನೊದವಿಸಿ—

ಉ॥ ತೊಟ್ಟನೆ ಬಂದಳಸ್ಖಲಿತದಿಂ ನೆಱೆ[3] ಮುನ್ನಱೆ[3]ದೊಂದು ಮಾಱ್ಕೆಯಿಂ।
ನೆಟ್ಟನೆ ಕಾಣ್ಕೆಗೊಟ್ಟು ಪೊಡವಟ್ಟಳಪೂರ್ವಮಿದೆಂದು ವಿಸ್ಮಯಂ॥
ಮುಟ್ಟೆ ಮಹೀಶ ಪುಷ್ಪಶರನಾ ವನಿತಾ ವಿಳಸನ್ಮುಖೇಂದುವಂ।
ನಿಟ್ಟಿಸುತಿರ್ದು ಮೆಲ್ಲನೆ ಕಟಾಕ್ಷದಿನೀಕ್ಷಿಸಿದಂ ಸಖಾಸ್ಯಮಂ ॥೧೨॥

ಅದನಱಿದಾಗಳ್—

ಕಂ॥ ಅಱಿವಂತು ಕಾಣ್ಕೆಯಂ ಕೊ।
ಟ್ಟೆಱಗಿಸೆ ನೆಗೞ್ದೀ ಮಹಾನುಭಾವನದಾರೆಂ॥
ದಱಿಯದೆಲೆ ಕಾಂತೆ ಪೇೞೀ।
ತೆಱನಂ ನೀನೆಂದು ನುಡಿಸಿದಂ ಸಚಿವಸುತಂ ॥೧೩॥

ಅನಱಿವೆಂ ಪೆಱತೇನಾ।
[ಶ್ರೀ] ನಿಧಿ ಕಂದರ್ಪ ದೇವನೀ ವಿಭುಪದಱಿಂ॥
ದಾನಂದದೆ ಕಾಣ್ಕೆಯನಿ।
ತ್ತಾನೆಱಗಿದೆನೀಗಳೆಂದು ಮಾನಿನಿ ನುಡಿದಳ್ ॥೧೪॥

ಅದರ್ಕೆ ಸಚಿವಸುತಂ ಮತ್ತಮಿಂತೆಂದಂ—

ಕಂ॥ ಕಂದರ್ಪ ದೇವನೀ ವಿಭು।
ವೆಂದಱಿದೀ ತೆಱನನಬಲೆ ನೀನೀಗಳ್ ಪೇ॥
ೞೆಂದೆನಲಮಾತ್ಯಸುತನದ।
ನಂದಾ ಲಲಿತಾಂಗಿ ಪೇೞಲುದ್ಯತೆಯಾದಳ್ ॥೧೫॥

ಅದೆಂತೆಂದೊಡೆ—

1. ಭರವಾಸಂ. 2. ನೆಮಿಸೆ. 3. ವಂದು.

ಮ॥ ಕ್ಷಿತಿಯೊಳ್ ತಾಂ ಪೆಸರ್ವೆತ್ತುದೀ ವಿಷಯಮೆಂದುಂ ನಾಮದಿಂ ಚಂದ್ರಕಾ।
ವತಿಯೆಂದೆಂಬುದು ಚಕ್ರವಾಳವೆ ಪುರಂ ಚಂದ್ರಧ್ವಜಂ ತತ್ಪುರೀ ॥
[1]ಪತಿ ವಿಖ್ಯಾತಿಯನಾಂತ ಚಿತ್ರಮತಿಯೆಂಬಳ್ [2]ಪಟ್ಟದಾ ದೇವಿ ವಿ।
ಶ್ರುತನೆಂಬಂ ವರ ಮಂತ್ರಿಯಿಂತೆಸೆವನಸ್ಮತ್ಸ್ವಾಮಿ ಸಾಮ್ರಾಜ್ಯದಿಂ ॥೧೬॥

ಚಲ ಗೋತ್ರಾಹಿತನಿಂದ್ರನಗ್ನಿಯವಿನೀತಂ ನಿಷ್ಕೃತಾತ್ಮಂ ಯಮಂ।
ಸಲೆ ನಕ್ತಂಚರನಲ್ತೆ ನೈರುತಿ ಜಡಂ ವಾರ್ಧೀಶ್ವರಂ ವಾಯು ಸಂ॥
ಚಲನುನ್ಮತ್ತ ಮನಂ ಕುಬೇರನಭವಂ ತಾನುಗ್ರನೆಂದೇೞಿಪಂ।
ಪಲವುಂ ಸದ್ಗುಣ ವೃಂದದಿಂ ಮದಧಿಪಂ ಚಂದ್ರಧ್ವಜಕ್ಷ್ಮಾಧಿಪಂ ॥೧೭॥

ಉ॥ ತನ್ನೃಪ ಕಾಂತೆ ಚಿತ್ರಮತಿ ದೇವಿ ವಿಚಿತ್ರ ಕಳಾ ಪ್ರಗಲ್ಭ ಸಂ।
ಪನ್ನತೆಯಿಂ ಶ್ರುತೇಶ್ವರಿ ಪರೀವೃತ ಸಚ್ಚರಿತಾತುಳ ಪ್ರಭಾ॥
ವೋನ್ನತಿಯಿಂದರುಂಧತಿ ನಿರಂತರ ಸಂಪದುದಗ್ರ ಸೌಖ್ಯ ಶೋ।
ಭಾನ್ವಿತದಿಂ[3]ದುಮಾರಮಣಿಯೆಂದೆನೆ ತಾಂ ಪಡೆದಳ್ ಪ್ರಸಿದ್ಧಿಯಂ ॥೧೮॥

ಇಂತಿರುತಿರ್ದು—

ಕಂ॥ ಎನಗೇಕ[4]ಪತ್ಯಮಂ ತಾ।
ನನುನಯದಿಂ [5]ದೈವಮಿನ್ನೆಗಂ ಕರುಣಿಸದೆಂ॥
ದೆನುತುಂ ಪಲುಂಬುತಿರ್ದಳ್।
ಮನದೊಳ್ ಚಿತ್ರಮತಿ[ದೇವಿ]ಯಿರುಳುಂ ಪಗಲುಂ ॥೧೯॥

ಇಂತು ಪಲುಂಬುತಿರ್ದೊಂದು ದಿವಸದೊಳ್—

ಕಂ॥ ಎನಸುಂ ಮಹಾಷ್ಟ ಸಿದ್ಧಿಗ।
ಳನೆ ಪಡೆದರ್ ಪಲಬರಿಲ್ಲಿ ಚಿತ್ರಕ ವನ ಮ॥
ಧ್ಯನಿವಾಸೆಯಪ್ಪ ಕಾತ್ಯಾ।
ಯಿನಿ ದೇವಿಯೊಳೆಂದು ದೇವಿ ತಾಂ ಮಿಗೆ ಬಗೆದಳ್ ॥೨೦॥

ಉ॥ [6]ಆಯತ ಚಿತ್ತೆ ಚಿತ್ರಮತಿ ದೇವಿ ನಿಜೋನ್ನತ ಭಕ್ತಿಯಿಂ ವಿಶೋ।
ಭಾಯತಮಪ್ಪ ಚಿತ್ರಕ ವನಕ್ಕೆ ದಿನಂಪ್ರತಿ ಬಂದು ಬಂದು ಕಾ॥

---

1. ಪರಿ. 2. ಪಟ್ಟಮಾದೇವಿ. 3. ದಮಾರಮಣಿ. 4. ಪತ್ಯಳಂ. 5. ದಯ್ವು.
6. ದೀಯತ.

ತ್ಯಾಯಿನಿ ದೇವಿಯಂ ಕ್ರಮ ಸಮನ್ವಿತಮಾಗೆ ಸಮಗ್ರ ಸೌರಭ ।
ಶ್ರೀಯ ಪೊದಟ್ಕೆವೆತ್ತ ಕುಸುಮಾವಳಿಯಿಂದಮೆ ನಿಚ್ಚಮರ್ಚಿಪಳ್ ॥೨೧॥

ಕಂ॥ ಮಿಗೆ ದಿನದಿನಂಗಳೊಳ್ ನೆ ।
ಟ್ಟಗೆ ರಚನಾಶ್ಚರ್ಯದಿಂದೆ ಕಾತ್ಯಾಯನಿ ದೇ ॥
ವಿಗೆ ವಿವಿಧ ಕುಸುಮಮಯ ಪೂ ।
ಜೆಗಳಂ ಚಿತ್ರಮತಿ ದೇವಿ ನೆಗಟುತ್ತಿರೆಯುಂ ॥೨೨॥

ಪ್ರತ್ಯಕ್ಷಮಾಗೆ ದಯೆಯಿಂ ।
ಕಾತ್ಯಾಯಿನಿ ದೇವಿ[ಚಿತ್ರಮತಿ ದೇವಿ]ಗೆ ತಾ ॥
ನಿತ್ತಳ್ ಪ್ರಸೂನ ಮಾಲೆಯ ।
ನತ್ಯಧಿಕ ಮನೋಹರಾಂಶು ಮಾಲೆಯನಾಗಳ್ ॥೨೩॥

ಆ ಕುಸುಮಾವಳಿವೆರಸು ಬಂದು ಚಿತ್ರಮತಿ ಚಿತ್ರಧ್ವಜಂಗಱಿಪಿದಾಗಳ್—

ಉ॥ ದೇವಿ ಸಮಂತು ಕೂರ್ತು ಸಿನಗಾ ಪರಮೇಶ್ವರಿ ಕೊಟ್ಟ ಪುಷ್ಪ ಶೋ ।
ಭಾವಳಿ ಮಾಲೆಯಿಂದೆ ಸುಕುಮಾರಿ ಕುಮಾರಿಯೊರ್ಬಳಪ್ಪಳೆಂ ॥
ದಾವೃತ ಹರ್ಷನಾಗಿ ನರ ನಾಥನದಂ ಪದೆಪಿಂದೆ ಪೇೞೆ[3] ಸಂ ।
ಭಾವಿಸಿ ಕೇಳ್ದು ಚಿತ್ರಮತಿ ತಾನನುರಾಗಮನಾಗಳೆಯ್ದಿದಳ್ ॥೨೪॥

ಅಂತು ಸಂತಸಮನೆಯ್ದುತ್ತುಮಿರೆ—

ಚಂ॥ ಜನಿಯಿಸಿದತ್ತು ಚಿತ್ರಮತಿದೇವಿಗೆ ಗರ್ಭಮದಿಂತು ನಾಡೆಯುಂ ।
ಜನಿಯಿಸೆ ಸೊಂಪನಾಳ್ದಿಸೆವ [1]ಬೆಳ್ವೆಳಗಾನನ ಚಂದ್ರ ಬಿಂಬದೊಳ್ ॥
ಜನಿಯಿಸೆ ನುಣ್ಪುವೆತ್ತ ಪೊಸ[2]ಕರ್ಪು ಕುಚಂಗಳ [3]ಚೂಚುಕಂಗಳೊಳ್ ।
ಜನಿ[ಯಿಸೆ] ಬಿಣ್ಪುಗೊಂಡಲಸಮಾ ನಿಜ ನಿರ್ಮಳ ಚಿತ್ತವೃತ್ತಿಯೊಳ್ ॥೨೫॥

ಕಂ॥ ತನಗೊಗೆದ ಗರ್ಭ ದರ್ಪದೆ ।
ತನುಮಧ್ಯಂ ತನ್ನನೊತ್ತಿತೆಂಬ ವಿಷಾದಂ ॥
ಘನಮಾಯ್ತು ತನ್ನೊಳೆನೆ ಕ ।
ರ್ಪಿನೊಳೆಸೆದುದು ತೋರ್ಪ ಬಾಸೆ ತನ್ನೃಪಸತಿಯಾ ॥೨೬॥

1. ಬೆಳ್ವನ. 2. ಕರ್ಪೂರ 3. ಭೂಭುಜಂ.

ನೆರೆಯ ಸಿರಿಯಂ ನಿರೀಕ್ಷಿಸು ।
ತಿರಲಾರದೆ ಪೋಪ ಖಳನವೋಲ್ ಪೋದುದು ಬಿ ॥
ತ್ತರಿಸುವ ವಳಿತ್ರಯಂ ಸುರು ।
ಚಿರ ಗರ್ಭದ ಕೊರ್ಬಿನಿಂ ಕ್ಷಿತೀಶಾಂಗನೆಯಾ ॥೨೭॥

ಅಡರ್ದ ಕಟಿ ಭರದೆ ಮುನ್ನಮೆ ।
ಸೆಡೆವಂಘ್ರಿಗಳಂ ಪೊದಟ್ಟಿ ಗರ್ಭದ ಭರದಿಂ ॥
ತಡದಡಿಸುವಂತೆ [1]ಮಾಂದ್ಯಂ ।
ತೊಡರ್ದುದು ತಾನಿಂತು ಯಾನದೊಳ್ ಮಾಸಿಸಿಯಾ ॥೨೮॥

ಮ॥ ಲಲಿತೋದ್ಯಾನದೊಳಂ ವಿಹಾರಿಸುವ ವಾರಿ ಕ್ರೀಡೆಯಂ ಮಾಡುವು ।
ಜ್ಜ್ವಲ ಚಂದ್ರಾತಪ ಶೋಭೆಯೊಳ್ ಸುಳಿವ ದಿವ್ಯಾಮೋದಮಂ ಕೊಳ್ವ ಕೋ॥
ಮಲ ವೀಣಾರುತಿಗೇಳ್ವ ಪೂವಸೆಗಳೊಳ್ ಪಟ್ಟಿರ್ಪ ಸೌಖ್ಯಾಳಿ ದೋ ।
ಹಲ ಕೇಳೀ ಮುದಮಂ ಸಮಂತು [2]ತಳೆದಳ್ ತತ್ಕಾಂತೆಯಿಂತಾವಗಂ ॥೨೯॥

ಅಂತನೇಕ ಸುಖ ದೋಹಳ ಕೇಳಿಗಳನಾಚರಿಸುತ್ತೆ ಚಿತ್ರಮತಿದೇವಿ ಸನ್ಮುಹೂರ್ತದೊಳ್ ಪ್ರಸನ ಸಮಯೋಪಯುಕ್ತೆಯಾಗಿ—

ಚಂ॥ ಸ್ಮರ ಶರಲಕ್ಷ್ಮಿ ಮೋಹಿಸುವ ಪೂಗಣೆಯಂ ಪಡೆವಂತೆ ವಿದ್ರುಮೋ ।
ತ್ಕರ ವನಲಕ್ಷ್ಮಿ ಕಲ್ಪಲತೆಯಂ ಪಡೆವಂತೆ [3]ಜಗನ್ಮನೋಹರ ॥
ಸ್ಫುರದಮೃತಾಂಶುಲಕ್ಷ್ಮಿ ವಿಳಸತ್ಕಳೆಯಂ ಪಡೆವಂತೆ ಭೂಪ ಸೌಂ ।
ದರಿ ಪಡೆದಳ್ ವಿಚಿತ್ರತರ ರೂಪ ವಿಭಾಸುರೆಯಂ ಕುಮಾರಿಯಂ ॥೩೦॥

ಕಂ॥ ವನಿತಾಕೃತಿಯಂ ಲೋಕಮು ।
ನನಿತಂ ಮೋಹಿಸಲನಂಗ ಮಧ್ಯಮ ಬಾಣಂ ॥
ಜನಿಯಿಸಿದಂತವನೀಶಾಂ ।
ಗನೆಗುದಯಿಸಿದಳ್ ಸುರೂಪವತಿ ಸುತೆಯಾ[4]ಗಳ್ ॥೩೧॥

ಇಂತುದಯಿಸಿದ ಕುಮಾರಿಯಂ ಚಂದ್ರಧ್ವಜ ನರೇಂದ್ರಂ ನೋಡಿ—

. ಮಾಢ್ಯಂ. 2. ತಳರ್ದಂ. 3. ಜಗಂಮನೋ. 4. ದಳ್.

ಚಂ॥ ವರ ಕುಸುಮಾವಳೀ ಚರಿತ ಪೂಜೆಗಳಿಂ ಪದೆದರ್ಚಿಸಲ್ ಮಹೇ ।
ಶ್ವರಿ ಮನವೊಲ್ದು ದೇವಿ ಕುಸುಮಾವಳಿಯಂ ನಿನಗಿತ್ತ ದೂಸಱಿಂ ॥
ನಿರುಪಮ ಪುತ್ರಿಯಂ ಪಡೆದೆಯಿಾ ಸುತೆಗಾ ಪೆಸರೊಪ್ಪುಗುಂ ದಲೆಂ ।
ದುರು ಮುದದಿಂದವಿತ್ತನರಸಂ ಕುಸುಮಾವಳಿಯೆಂಬ ನಾಮಮಂ ॥೩೨॥

ಕಂ॥ ಇಂತು ಪೆಸರಿಟ್ಟು ನೃಪನುಂ ।
ಕಾಂತೆಯುಮನುರಾಗಮಾಗೆ ಕುಸುಮಾವಳಿಯಂ ॥
ಸಂತತಮಭೀಕ್ಷಿಸುವ ಬಿನ ।
ದಂ ತಮಗೆ ಸಮಂತು [1]ಪುದಿಯೆ ಸಲಹುತ್ತಿರ್ದರ್ ॥೩೩॥

ಚಂ॥ ರತಿಪತಿಯಾಜ್ಞೆಯಂತೆ ಕುಸುಮಾಸ್ತ್ರನ ಮೋಹನ ಕಲ್ಪವಲ್ಲಿಯಂ ।
ತತನುವ ತೇಜದಂತೆ ಮಕರ ಧ್ವಜ[2]ನಗ್ಗದ ವಶ್ಯ [3]ಸಸ್ಯದಂ ॥
ತತಿ ಕಮನೀಯಮಾಗಿ ಮಿಗೆ ಮೋಹಿಸುತುಂ ಬಳೆಯುತ್ತುಮಿರ್ದಳ ।
ಪ್ರತಿಮ ವಿಳಾಸ ರೂಪೆ ಕುಸುಮಾವಳಿ ದೇವಿ ಶಿಶು ಪ್ರಭಾವದೊಳ್ ॥೩೪॥

ವಿಮಳತೆವೆತ್ತ ಚಿತ್ರಮತಿಯಾಸ್ಯ ಮಯೂಖಮನುರ್ವಿ ತೋಱಿಸು ।
ತ್ತಮೆ ನಡೆ ನೋಡೆ ಕಲ್ತುಳಖಿಳ ಶ್ರುತಿ ನಾದಮನಾದಮಾಲಿಸು ॥
ತ್ತಮೆ ನುಡಿಗಲ್ತುಳಾ ಶಿಶು ಸಮಾಜದೊ[4]ಳೊಲ್ದೆಡೆಯಾಡೆಯಾಡಿಸು ।
ತ್ತಮೆ ನಡೆಗಲ್ತುಳಲ್ತೆ ಕುಸುಮಾವಳಿದೇವಿ ವಿಶಾಲ ಲೀಲೆಯಿಂ ॥೩೫॥

ಕಂ॥ ವಿಮಳೇಂದು ಕಳೆಯ ಬಳವಿಗೆ ।
ಕಮಳಾಹಿತವೆಂದು ಪಟುದು [5]ಕಮಳೋತ್ಸವಮಂ ॥
ಸಮನಿಸೆನಸುಂನಿಮಿರ್ಚುೞ ।
ತ್ತಮೆ ಕುಸುಮಾವಳಿ ಸಮಂತು ಬಳೆಯುತ್ತಿರ್ದಳ್ ॥೩೬॥

ಸಮಸಂದಾ ಸೌಂದರ್ಯೋ ।
ತ್ತಮ ಲಕ್ಷ್ಮಿ ನಿಜಾಂಗದೊಂದು ಬಳವಿಗೆಯೊಳ್ ತಾಂ ॥
ನಿಮಿರ್ದಿರೆ ಕುಸುಮಾವಳಿಯ ।
ಷ್ಟಮ [6]ವರ್ಷೋಚಿತ ವಯೋ ವಿರಾಜಿತೆಯಾದಳ್ ॥೩೭॥

---

1. ಪುದಿದು. 2. ನಗ್ರದ. 3. ನಸ್ಯ. 4. ಳಾಡೆ. 5. ಕುಸುಮಾವಳಿಯಂ॥ ಕಮಳೋತ್ಸವಮನೆಸಸುಂ। ನಿಮಿರ್ಚುೞ. 6. ವರ್ಷಂಚಿತೋಪಯೋ.

ಆ ಸಮಯದೊಳ್ ಕುಸುಮಾವಳಿ ದೇವಿಗೆ ಸಮ ಸ್ವರೂಪೆಯರಪ್ಪ ಪರಿಕರ ಕನ್ಯಕಾ ಸಹಸ್ರಮನಿತ್ತು ನಿಖಿಳ ವಿದ್ಯಾಭ್ಯಾಸದೊಳ್ ನಿಯೋಜಿಸಿ ಚಂದ್ರಧ್ವಜಂ ನಡುಪುತ್ತುಮಿರೆ—

ಉ॥ ಆ ಪರಿವಾರ ಕನ್ಯೆಯರೊಳಾಂ ಕಳಭಾಷಿಣಿಯೆಂಬಳುದ್ಧ ಸೇ ।
ವಾ ಪರಿವೃತ್ತಿಯಿಂದಮನಿಬರ್ವೆರಸೋಲಗಿಸುತ್ತುಮಿರ್ಪೆನಿ ॥
ರ್ಪಿ ಪರಮೋಲ್ಲಸತ್ಪರ[1]ಭವೋನ್ನತಿಗೆನ್ನನಭೇದ ಭಾವದಿಂ ।
ಚಾಪಳ [2]ಚಾರು ನೇತ್ರೆ ಕುಸುಮಾವಳಿದೇವಿ ಸಮಂತು ಮನ್ನಿಪಳ್ ॥೩೮॥

ಮತ್ತಮಾ [ದೇವಿ] ವಿವಿಧ ವಿದ್ಯಾಭ್ಯಾಸದೊಳ್ ವಿದಿತ ಚಿತ್ತೆಯಾಗಿ—

ಮ॥ ಶ್ರುತವಿದ್ಯಾ ಸಮುದಾಯದೊಳ್ ಸರಸ ವೀಣಾವಾದ್ಯ ಮಾಲಾ ವಿಚಿ ।
ತ್ರತೆಯೊಳ್ ಚಿತ್ರಕಳಾ ಕಳಾಪದೊಳನೇಕಾಶ್ಚರ್ಯ ವಿಜ್ಞಾನ ಸಂ ॥
ತತಿಯೊಳ್ ತಾಂ ಕ್ಷಿತಿಯೊಳ್ ದ್ವಿತೀಯದ ವರಶ್ರೀ ದೇವಿಯೆಂಬಂತೆ ಸಂ ।
ಗತಿವೆತ್ತಳ್ ಕುಸುಮಾವಳೀ ಸುದತಿ ಸತ್ಪ್ರಾಗಲ್ಭ್ಯ ಸಂಪತ್ತಿಯಿಂ ॥೩೯॥

ಕಂ॥ ಮಿಸುಪ ಶಶಿಕಲೆಯನುಜ್ಜ್ವಲ ।
ಶಶಿ [ಸು]ಪ್ರಭೆ ಪೊರ್ದುವಂತೆ ಪೊರ್ದಿದುದಭಿರಾ ॥
ಜಿಸುವ ನವ ಯೌವನೋನ್ನತಿ ।
ಕುಸುಮಾವಳಿ ದೇವಿಯೆಸೆವ ಮೂರ್ತಿಯನಾಗಳ್ ॥೪೦॥

ಚಂ॥ ಸ್ಮರನಮಳೇಂದು ಕೋಮಳ ಕಳಾವಳಿಯಿಂ ಕಮನೀಯ ಮೂರ್ತಿಯಂ ।
ವಿರಚಿಸಿ ಸಾಂದ್ರ ಚಂದ್ರಿಕೆಯ ನುಣ್ಬೆಳಗಂ ಪೊರೆಯೆತ್ತಿ ಕೊಂಡಲಂ ॥
ಕರಿಸಿ ವಸಂತ ಗಂಧವಹನಿಂದಸುವಂ ಪೊರೆದೊಂದಪೂರ್ವ ಸೌಂ ।
ದರಿಯೆನೆ ಯೌವನೋದಯದೊಳಾ ಕುಸುಮಾವಳಿದೇವಿ ರಾಜಿಪಳ್ ॥೪೧॥

ಉ॥ [3]ಓವದೆ ಲೋಕಮೆಲ್ಲಮನನಾಕುಳದಿಂ ನೆಱೆ[3] ಗೆಲ್ದೆನೆಂಬ ದ ।
ರ್ಪಾವಿಲದಿಂ[ದೆ] ದರ್ಪಕನೆ[4]ನೆಂಬಭಿಧಾನಮನಾಂತ ಕಂತುವಂ ॥
ಚಾವಳಿಪಂತೆ ಸೋಲಿಸುವ ಕೆಯ್ತುದೆ ಪುಟ್ಟಿದಪೂರ್ವ ಮೋಹನ ।
ಶ್ರೀವಧು ತಾನೆನಲ್ಕೆ ಕುಸುಮಾವಳಿ [5]ಸುಂದರಿಯಿಂದು ಪೊಂಗುವಳ್ ॥೪೨॥

---

1. ಭಯೋನ್ನತಿಗೆನ್ನನೆ. 2. ದಾತು. 3. ಒಪ್ಪದೆ. 4. ನಿಂಬಭಿ.
5. ಸುದತಿಯಂದಿಂದಂಗಚಿಪೊಂಗುವಂ.

ಚಂ॥ ಎನಗಧಿಪಂ ನಿರಾಕೃತಿಯನಾಂತುದು ತಾಂ [1]ಹಿತಮಲ್ತ್ರದಲ್ಲದೀ ।
ಕನ್ನೆಯ ರೂಪನೀಕ್ಷಿಸಲೊಡಂ ಸಲೆ ಸೋಲ್ತುೞಿವಂ ಮನೋಜನೊ ॥
[2]ಲ್ದಿನ್ನುಮನೆಂದೆನು[ತ್ರಿ]ರತಿ ವಿಸ್ಮಯಮುತ್ತಳೆನಲ್ ವಿಚಿತ್ರ ಭಾ ।
ವೋನ್ನತಿವೆತ್ತುದಿಂತು ಕುಸುಮಾವಳಿ ದೇವಿಯ ರೂಪವಿಭ್ರಮಂ ॥೪೩॥

ಕಂ॥ ಅನುದಿನ[3]ಮಡಿಯೂಡಿಸಿಕೊ ।
ಳ್ವನಿತಚ್ಚಿಗಮೆಂತುಮಿಲ್ಲ ಚರಣದ ಶುಭ ಲಾಂ ॥
ಛನದರುಣಾಂಬುಜ ಶೋಭೆಗ ।
ಳೆನೆ ಸೊಗಯಿಪುವಾ ತನೂದರಿಯ [4]ಕೇಸಡಿಗಳ್ ॥೪೪॥

ಉ॥ ಕುಂದದ ಸತ್ಕಳಾವಳಿಯನುಜ್ಜ್ವಲಿತಾಂಶುವನೀಗಳೆಯ್ದಿಸೆ ।
ಮ್ಮಿಂದುಗೆ ದೇವಿ ನಿನ್ನ ವದನೇಂದುವಿನೆಂದೆನುತುಂ ಪದಕ್ಕೆ ಸಾ ॥
ರ್ತಂದೆಱಗಿರ್ದ ತಾರಗೆಗಳೆಂಬಿನಮಾ ನಖ [5]ರಾಜಿ [ರಾಜಿ]ಸಿ ।
ತ್ತೊಂದಿದ ಕಾಂತಿಯಿಂದೆ ಕುಸುಮಾವಳಿ ದೇವಿಯ ಮಂಗಳಾಂಘ್ರಿ[6]ಯಾ॥೪೫॥

ಕಂ॥ ಸೌಂದರ್ಯ ಕಂದದೊಳ್ ಸಮು ।
ಸಂದುಣ್ಮಿದ ಕುಡಿಗಳಂತಿರೆಸೆದುವು ಪೊಲ್[3]ಪಿಂ ॥
ದೊಂದಿ ಕುಸುಮಾವಳಿಯ ಚರ ।
ಣೇಂದೀವರದೆಸಟ್ಗಳೆನಿಪ ಲಲಿತಾಂಗುಳಿಗಳ್ ॥೪೬॥

ಅವಿರತಮತಿ ಕಠಿನಂ ಕಾಂ ।
ತಿ ವಿವರ್ಜಿತಮೆಂದು ಕಮಠನಂ ಸುಸ್ನಿಗ್ಧ ॥
ಚ್ಛವಿಯಿಂದ[7]ಮೇಳಿಸುತ್ತಿಸೆ ।
ವುವು ಕುಸುಮಾವಳಿಯ ಮಿಸುಗುವಾ ಮೇಂಗಾಲ್ಗಳ್ ॥೪೭॥

ಸತತಂ ಶಿಲೀಮುಖಾಸ್ಪದ ।
ಮತನುವ ತೂಣೀರಮೆಂದು ಪೞಿಕೆ[8]ಯ್ವ ಪದ ॥
ದ್ವಿತಯದ ಪದೆಪಿಂ ಜಂಘಾ ।
ದ್ವಿತಯಂ ಮಿಗೆ ಮಿಸುಪುವೆಸೆವ ಕುಸುಮಾವಳಿಯಾ ॥೪೮॥

---

1. ಹಿತಮಲ್ಲಮಾಡುದಿ. 2. ಲ್ದಿನ್ನಮು. 3. ಮಡಿಯಾಡಿ. 4. ಕೇಸರಿ.
5. ರಾಜಸು. 6. ಗಳ್. 7. ಮಾನಿಸುತ್ತೆ. 8. ಯ್ದಮಳ.

ಪದಪಂಕ ಮಿಳಿತವೆಂದಾ ।
ಮದನ ಗಜಾಲಾನ [1]ಯುಗಳವುಂ ಮಿಗೆ ಪೞಿಸಿ ॥
ಪ್ಪಿದುವು ಕುಸುಮಾವಳಿಯ ಸೊಂ ।
ಪೊದವಿದ ವೃತ್ತೋರು ಕಾಂಡ ಯುಗಮುಮಳತೆಯಿಂ ॥೪೯॥

ಅತುಳ ಕುಚ ಕಮಲ ಪೂಜಾ ।
ದೃತ ವರ ತನು ಮಧ್ಯ ರತ್ನಲಿಂಗ ಶಲಾಕಾ ॥
ಯತ ಪೀಠಮೆನೆ ಪೊದೞ್ದಾ ।
ನಿತಂಬಮೆಸೆದತ್ತು [2]ಮಿಸುಗಿ ಕುಸುಮಾವಳಿಯಾ ॥೫೦॥

ಚಂ॥ ಪ್ರತಿದಿನ ವರ್ಧಮಾನ ವಿಭವಂಬಡೆದಿರ್ದಪುವೀ ಲಸತ್ಕುಚ ।
ದ್ವಿತಯಮಿದಿತ್ತಲೀ ಜಘನಮಾವಗಮುರ್ಬಿದ ಕೊರ್ವುವೆತ್ತುದಾ ॥
ನತಿ [3]ಕೃಶ ವೃತ್ತಿಯಾದೆನೆನುತುಂ ಪಿರಿದುಂ ಬಡ[ವಾದ]ವೋಲ್ ಮಹೀ ।
ನುತ ಕುಸುಮಾವಳೀ ಸತಿಯ [4]ತಾಂತ ವಿಯತ್ತನು ಮಧ್ಯಮೊಪ್ಪುಗುಂ ॥೫೧॥

ಕಂ॥ ವಿಳಸದುರು ಕುಚ ಭರಕ್ಕಾ ।
ಸೆಳೆ ನಡುವಿನ ಕೃಶತೆಗಂಜಿ ನಳಿನಾಸನನಿ ॥
ಟ್ಟೆಳ ನೀಲ ದಂಡದೊತ್ತೆನೆ ।
ತಳತಳಿಪುದು ನೀಟ್ಟು [5]ಬಾಸೆ ಕುಸುಮಾವಳಿಯಾ ॥೫೨॥

ಲಾವಣ್ಯ ಜಲನಿಧಿ ದ್ವೀ ।
ಪಾವನಿಯೊಳ್ ತೃಷಿತ ಪಥಿಕ ಪುಷ್ಪಾಯುಧ ಖಾ ॥
ತಾವಟವೆನಲೆಸುಂ ಕುಸು ।
ಮಾವಳಿಯ ಗಭೀರ ನಾಭಿ ಮಂಡಳಮೆಸೆಗುಂ ॥೫೩॥

ಕಮನಾಂಗ ಕಲ್ಪ ಲತಿಕೆಯ ।
ವಿಮಳಾಮೃತ ಭರಿತ ಪೃಥುಳ ಫಳಯುಗಮೆನೆ ಚೆ ॥
ಲ್ವಮರ್ದೆಸೆದುವಸಮ ರೂಪೋ ।
ತ್ತಮೆ ಕುಸುಮಾವಳಿಯ ಮಿಸುಪ ಕುಚಕಲಶಂಗಳ್ ॥೫೪॥

---

1. ದುಸಮಯಂ. 2. ಮಿಸುನಿ. 3. ಕೃಷಿವೃತ್ತಿಯಾದನೆನಿತಂ 4. ಕಾಂತಿ.
5. ಭಾಷೆ.

ಉ॥ [1]ತಾವೆನಸುಂ ಕುಜನ್ಮನಿನಿತಾಗಿಯುಮುನ್ಮುಖ ವೃತ್ತಿಯಿಂದಮಿಂ ।
ತಾವಗಮಿರ್ಪುವೆಂದು ಲತಿಕಾವಳಿಯಂ ನಿಜ ಭಂಗುರಾತಿ ಶೋ ॥
[2]ಭಾವಿಳ ಭಂಗಿಯಿಂ ಪಱಿಯುತುಂ ನಗುತಿರ್ಪುವು ತನ್ನಖಾಂಶು ಮಾ ।
ಲಾವಳಿಯಿಂ ಪೊದೞ್ದು ಕುಸುಮಾವಳಿ ದೇವಿಯ ಬಾಹು ವಲ್ಲಿಗಳ್ ॥೫೫॥

ಕಂ॥ ಜೀವನ ರುಹವಾಗಿರ್ದುಮ ।
ಜೀವನಮೆಂದಿಂತು ಕಂಬುವಂ ನಗುವುದು ಶೋ ॥
ಭಾವಹ ಸಚ್ಛವಿಯಿಂ ಕುಸು ।
ಮಾವಳಿ ದೇವಿಯ [3]ನವೀನ ಕಂಬು ಗ್ರೀವಂ ॥೫೬॥

ಚಂ॥ ಅಡಿಗಡಿಗೆಯ್ದಿ ಬಾಯ್ದುಡುಕೆ ರಾಹುವಿನಿಂ ಕಡುಗುಂದಿ [4]ಕಂದು ತ ।
ಳ್ತಡರ್ದುದದಲ್ಲದಿಂದು ಪಱದಾದನೆನುತ್ತಿಱಿಕೆಯ್ದು ಪದ್ಮಜಂ ॥
ಪಡೆದಸಿದೊಂದಪೂರ್ವ ವಿಧುವಂ ವದನಚ್ಛಲದಿಂದೆನಲ್ಕೆ ನೂ ।
ರ್ಮಡಿ ಮಿಗೆ ರಾಜಿಸಿತ್ತು ಕುಸುಮಾವಳಿಯಾಸ್ಯ ಸುಧಾಂಶು ಮಂಡಳಂ ॥೫೭॥

ಕಂ॥ ಪೊಳೆವ ಮುಖ ವಿಭ್ರಮಾರ್ಣವ ।
ದೊಳಗುಣ್ಮಿದ ಸುಪ್ರವಾಳ ರುಚಿಯೆನೆ ಪೊಸ ಕೆಂ ॥
ಬೆಳಗಿಂ ಪೊದಱ್ದು ಕುಸುಮಾ ।
ವಳಿ ದೇವಿಯ ಮಿಸುಗುವಧರ [ಮಾ]ರಂಜಿಸುಗುಂ ॥೫೮॥

ಮಿಸುಗುವ ತದ್ವದನ ವಿಳಾ ।
ಸ ಸುಧಾಬ್ಧಿಯೊಳಮಱ್ಗಿಳಾಗಿ ನೆಗೆದಿಂದುಗಳೆಂ ॥
ಬೆಸಕಮನೆ ಬೀಱುತುಂ ರಂ ।
ಜಿಸಿದುವು ಕುಸುಮಾವಳೀ ಕಪೋಲ ಪುಟಂಗಳ್ ॥೫೯॥

[5]ಅವತಂಸ ಲಕ್ಷ್ಮಿಗುತ್ತಂ ।
ಸವೆನಿಪ್ಪ ವಿಳಾಸದಿಂ ಲಕಾರಾವರ್ತ ॥
ಪ್ರವಿದಿತ ಶೋಭೆಯನಮರ್ದಿ ।
ರ್ಪುವು ಕುಸುಮಾವಳಿಯ ಮಿಸುಪ ಕರ್ಣ ದ್ವಿತಯಂ ॥೬೦॥

---

1. ತಾನೆನಸಂತು. 2. ಭಾವುಳಭಂಗಿಯಾ. 3. ವಿನ.
4. ಕುಂದುತ।ಳ್ತೊದರ್ದವದಲ್ಲ. 5. ಅಮತಂನ.

ಚಂ॥ ನೆಱೆಯೆ ವಿಚಿತ್ರಮಾಗಿ ಪಡೆದಾಕೃತಿಯಂ ನಡೆ ನೋಡುತಿಂತು ಕ।
ಣ್ದೆಱೆವೆಡೆಯಲ್ಲಿ ಪದ್ಮಜನ ಕೆಯ್ಯೆರಡುಂ ಶ್ರವಣ ದ್ವಯಾ[ಂತಕಂ॥
ದು]ಱೆ ಜಗುಟ್ಟಿತ್ತೆನಲ್ಕೆ ವಿವರಂ ನಿಮಿರ್ದುಜ್ಜ್ವಲ ಕಾಂತಿ ಮಾಲೆಯಂ।
ಕಱೆವುವಗುರ್ವನಾಟ್ಟಿ ಕುಸುಮಾವಳಿ ದೇವಿಯ ಚಾಪಲಾಕ್ಷಿಗಳ್ ॥೬೧॥

ಕಂ॥ ಮಿಗೆ ನಿಮಿರ್ದು ಕಣ್ಗಳಿವ್ವೆಡೆ।
ಸುಗುವೆಂದಜನಿಟ್ಟ ಮಧ್ಯ ಮಣಿದಂಡದವೋಲ್॥
ಸೊಗಯಿಪ್ಪುದು ಚೆಲ್ವಂ ನೆ।
ಟ್ಟಗೆ ಕುಸುಮಾವಳಿಯ ಮಿಸುಪ [1]ನಾಸಾ ಮುಕುಳಂ ॥೬೨॥

ಮ॥ ಮೊದಲೊಳ್ ತಾಂ ಜಡವೃತ್ತಿಕಾ ಜನಿತಮಾಗಿರ್ದುಂ ಗುಣಂ ತನ್ನೊಳಿ।
ಲ್ಲದುದಾ ಕರ್ಬಿನ ಬಿಲ್ಲದೇವುದೊ ಮನೋಜಂಗೆಂದು ಪದ್ಮೋದ್ಭವಂ।
ಪದೆಪಿಂ ಭ್ರೂಚ್ಛಲದಿಂ ಧನುರ್ದ್ವಿತಯಮಂ ಮಾಡಿಟ್ಟವೋಲ್ ಭಂಗುರಂ।
[2]ಬುದಿದಾದಂ ಕುಸುಮಾವಳೀ ವದನದೊಳ್ ವಿಭ್ರಾಜಿಕುಂ ಪುರ್ಬುಗಳ್ ॥೬೩॥

ಕಂ॥ ವನಲಕ್ಷ್ಮಿಯಂತೆ ತಿಲಕದ।
ಘನ ಶೋಭೆಗೆ ತಾಣಮಾಗ[3]ವೇಳ್ಕುಮೆನುತ್ತುಂ॥
ವನಜಭವಂ ಮಾಡಿದ[4]ನದ।
ನೆನೆ ಕುಸುಮಾವಳಿಯ ಭಾಳ ಮಂಡಲಮೆಸೆಗುಂ ॥೬೪॥

ಅಳಕಚ್ಛಲದಿಂ ಷಟ್ಪದ।
ಕುಳಮಾವರಿಸಿರ್ದುವಾಸ್ಯ ವನಜಮನೆನೆ ಕ॥
ಣ್ಗೊಳಿಸಿದುವೆನಸುಂ ಕುಸುಮಾ।
ವಳಿ ದೇವಿಯ ನಿಟಿಲ ಕುಟಿಲ ಕುಂತಳ ಪಟಲಂ ॥೬೫॥

ಮದನಾಸಿತೋರಗಂ ಕ।
ರ್ಪೊದವಿದ ತನುಕಾಂತಿ ಮಿಳಿರೆ ಮಂಡಳಿಗೊಂಡಿ॥
ರ್ದುದು ತಾನಿದೆಂಬಿನಂ ತೋ।
ರ್ಪುದು ಕುಸುಮಾವಳಿಯ ಮಿಸುಪ ಕಬರೀ ಭಾರಂ ॥೬೬॥

1. ಜಿತಾ. 2. ಪುದಿದಾ. 3. ವೇಳ್ಪವೆನುತ್ತುಂ. 4. ದನೆ.

ಇಂತು ರೂಪಾತಿಶಯಂಬೆತ್ತ ಕುಸುಮಾವಳಿಯಂ ಚಂದ್ರಧ್ವಜಂ ನೋಡಿ—

ಮ॥ ಪಡೆಪಿಂದೀ ಕುಸುಮಾವಳೀ ತರುಣಿಯಂ ನಾನಾ ಕಳಾ ಲಕ್ಷ್ಮಿ ಪೊ।
ರ್ದಿದುದೀ ಯೌವನಲಕ್ಷ್ಮಿ ಪೊರ್ದಿಪುದಣಂ ತಾನೀಗಳುದ್ವಾಹ ಲ॥
ಕ್ಷ್ಮಿ ದಿಟಂ ಪೊರ್ದುವ ಪೊೞ್ತೆಂದು ಬಗೆದಾಗಳ್ ವಿಶ್ರುತಾಮಾತ್ಯನಂ।
ಮುದದಾಳೋಚಿಪ ಕೆಯ್ತದಿಂ ಬರಿಸಿದಂ ಚಂದ್ರಧ್ವಜೋರ್ವೀಶ್ವರಂ ॥೬೭॥

ಆಗಳ್ ಬಂದ ವಿಶ್ರುತಾಮಾತ್ಯಂಗಿಂತೆಂದಂ—

ಕಂ॥ ಆವಗಮನ್ಯಕ ನೃಪ ತತಿ।
ತಾನೆಱೆದಟ್ಟುವುದು ನಮ್ಮ ಕುಸುಮಾವಳಿಯಂ॥
ನಾವಾರ್ಗೆ ಕುಡುವುದೆಂದವ।
ನೀವಲ್ಲಭನಿಂತು ಮಂತ್ರಿಯಂ ಬೆಸಗೊಂಡಂ ॥೬೮॥

ಅಂತು ಬೆಸಗೊಳ್ವುದುಂ—

ಉ॥ ಭೂತಳದಲ್ಲಿ [1]ಭಾವಿಸುವೊಡೀ ಕುಸುಮಾವಳಿ ದೇವಿಯೊಂದು ರೂ।
ಪಾತಿಶಯಕ್ಕೆ ಸಾಟಿಯ ನೃಪಾತ್ಮಜರೆಂತುಮದಿಲ್ಲ ದೇವ ಸಂ॥
[2]ಪ್ರೀತಿಯೊಳೆಲ್ಲರಂ ಬರಿಸಿ ಮಾಳ್ಪುದು ನಾವೆನಸುಂ ಕುಮಾರಿಗಿಂ।
ತೀ ತೆಱದಿಂ ಸ್ವಯಂವರಮನೆಂದೆನೆ ವಿಶ್ರುತ ಮಂತ್ರಿ ರಾಗದಿಂ ॥೬೯॥

ಆ ವರಮಂತ್ರಿ ವಿಶ್ರುತನ ಬಿನ್ನಪಮಂ ಬಗೆಗೊಂಡು ಬೇಗದಿಂ।
ಭೂವರನಾ ಸ್ವಯಂವರಕೆ ತಕ್ಕನಿತುಂ ವಿಭವಂಗಳಂ ವಿಶೋ॥
ಭಾವಹಮಾಗೆ ಮಾಡಿ ಬರಿಸಲ್ ಬರುತಿರ್ದುದು ಕೂಡೆ ನಾಡೆ ನಾ।
ನಾ ವಿಷಯ ಪ್ರಸಿದ್ಧಿಯ ಕುಲೋದ್ಭವ ವಿಕ್ರಮ ಭೂವರೋತ್ಕರಂ ॥೭೦॥

ಲೀಲೆಯೊಳಾಗಳಂತೆ [3]ಬರುತಿರ್ದುದಡಂಗ ಕಳಿಂಗ ವಂಗ ಬಂ।
ಗಾಳ ಮತಂಗ ಮಾಳವ ವರಾಳ ತೆಲುಂಗ ತುರುಷ್ಕ ಗೌಳ ನೇ॥
ಪಾಳ ಸುರಾಷ್ಟ್ರ ಬದ್ಧಹರ ಬರ್ಬರ ಘೂರ್ಜರ ಪಾರಿಯಾತ್ರ ಪಾಂ।
ಚಾಲಮಿವಾದಿಯಾದಖಿಳ ದೇಶ ವಿಭಾಸುರ ಭೂಪತಿ ವ್ರಜಂ ॥೭೧॥

---

1 ಭಾವಿಪೊಡೀ. 2. ಪ್ರೋಕ್ತಿಯೊಳೆಲ್ಲರುಂ. 3. ಬರುತಿರ್ದುದುಅಂಗ.

ಆ ಸಮಯದೊಳ್ ಚಿತ್ರಮತಿ ಮಹಾದೇವಿ ಕುಸುಮಾವಳಿ ದೇವಿಸಹಿತಂ ಕಾತ್ಯಾಯಿನೀ ದೇವಿಗೆ ಚಿತ್ರಪೂಜೆಯಂ ಮಾಡಲೆಂದು ಚಿತ್ರಕೋದ್ಯಾನಕ್ಕೆ ವಂದಾಗಳ್—

ಕಂ॥ ಅರಸಿ ಪರಮೇಶ್ವರಿಯು ಮಂ ।
ದಿರಮಂ ತಾನೆಸೆವ ಕುಸುಮಪೂಜಾ ನಿಕರಂ ॥
ಬೆರಸಿಂತು ಪೊಕ್ಕಳುಣ್ಮಲ್ ।
ಸರಭಸದಿಂದುಚಿತ ವಾದ್ಯ ನಿಚಯ ನಿನಾದಂ ॥೭೨॥

ಮತ್ತಮಾಗಳ್—

ಚಂ॥ ಅರಸಿ ಮಹೇಶ್ವರೀ ಪದ ಪಯೋಜಮನರ್ಚಿಸುವನ್ನೆಗಂ ನಿರಂ ।
ತರಮೆಸೆವೀ ವನಾತಿಶಯಮಂ ಕಳಭಾಷಿಣಿ ಕೂಡೆ ನೋಳ್ಪಮೆಂ ॥
ದುರು ಮುದದಿಂದೆ ಕೈವಿಡಿದು ತಾಂ ಕುಸುಮಾವಳಿ ದೇವಿ ಕನ್ಯಕಾ ।
ಪರಿಕರ ಯುಕ್ತದಿಂ ತಳರ್ದು ನೋಡುತುಮೊಯ್ಯನೆ ಪೋಗೆಪೋಗೆಯುಂ ॥೭೩॥

ಮದನನ ಮೋಹನಾಂಗದನುಲೇಪ ನಿಮಿತ್ತದೆ ತಂದು ಚೈತ್ರನೊ ।
ಟ್ಟಿದ ಕಮನೀಯ ಕುಂಕುಮದ ಪುಂಜಮಿದೆಂಬಿನಮಾ ವನಾಂತರಾ ॥
ಳದೊಳರುಣ ಪ್ರಭಾ ಪಟಳಮಂ ಕೆದಱುತ್ತೆನಸುಂ ವಿರಾಜಿಸಿ ।
ರ್ದುದು ಪುದಿದೊಂದು ಕೆಂದಳಿರ ಸಂದಣಿಯಿಂದದಶೋಕ ಭೂರುಹಂ ॥೭೪॥

ಆ ಕಂಕೇಲ್ಲಿ ಕುಜಾತಮಂ ಕಂಡು—

ಉ॥ [1]ಶ್ರೀ ರತಿನಾಥ ಭೂಪತಿಗೆ ಚೈತ್ರನತೀವ ವಿಚಿತ್ರಮಾಗೆ ವಿ ।
ಸ್ತಾರಿಪ ಶೋಣ ರತ್ನ ರುಚಿಯಂ [2]ತೆಗೆದೇಱಿಸಿ ಮಾಡಿದೊಂದು ಗೂ ॥
ಡಾರಮೊ ಪೇೞಿದೆಂದು ಕುಸುಮಾವಳಿಯಂದು ವಿಸ್ಮಯ ।
ಸ್ಮೇರ [3]ಮುಖಾಬ್ಜೆಯಾಗಿ ನಡೆ ನೋಡುತುಮಿರ್ದಳಶೋಕ [4]ಶಾಖಿಯಂ ॥೭೫॥

ಕಂ॥ ಕಿಸುದಳಿರಿಂ ಚೈತ್ರಂ ಪಡೆ ।
ದೆಸೆವ[5]ಸುಗೆಗೆ ಪಡೆಯುತಿರ್ದಳಂತಾ ಕ್ಷಣದಿಂ ॥
ಕುಸುಮಾವಳಿಯಂ ಕೋಮಳೆ ।
ಕುಸುಮಾವಳಿ ದೇವಿ ಲೋಲ ಲೋಚನ ರುಚಿಯಿಂ ॥೭೬॥

---

1. ಶ್ರೀರವಿನಾಥ. 2. ತೆಗೆದಿರಿಸಿ. 3. ಮನೋಜ್ಞೆ. 4. ಶಾಖೆಯಂ. 5. ಸುತೆಗೆ.

ಇಂತು ನೋಡುತಿರ್ಪಾಗಳ್—

ಚಂ॥ ಅತನು ವಿಚಾರಿಸಲ್ಕತನುವಂತಿರಲಿನ್ನೆಲೆ ಧಾತ್ರ ಧಾತ್ರಿಗ ।
ಪ್ರತಿಹತನಪ್ಪ ಪುಷ್ಪಶರನಂ ಪಡೆಯಿನ್ನನನೆಂದು ತಾನೆ ಭಾ ॥
ರತಿ ಮನದಟ್ಟುಯಿಂ ಬರೆದ ತಿಟ್ಟಮೆನಲ್ ಪಟ ಚಿತ್ರಮೊಂದು ಚಿ ।
ತ್ರತೆವಡೆದಿರ್ದುದಾ ಪೊಚಿವಶೋಕ ಮಹೀಜದ ಕಂಠ ಶಾಖೆಯೊಳ್ ॥೭೭॥

ಮ॥ ನುತ ಸೌಂದರ್ಯ ಕಳಾಪ ಭಾಸುರತೆ ಸವ್ಯ ಸ್ನಿಗ್ಧ ರೇಖಾ ವಿಚಿ ।
ತ್ರತೆ ವರ್ಣಾತಿಶಯ ಪ್ರಸನ್ನತೆ ನವೀನಾಂಕಚ್ಛವಿ ವ್ಯಕ್ತ ಶೋ ॥
ಭತೆ ಸಮ್ಮೋಹನಮಾಗೆ ಚಿತ್ರ ಪಟಮೊಂದಾಶ್ಚರ್ಯಮಂ ಭಾವ ಸಂ ।
ಗತಿಯಿಂ ಕಟ್ಟಿರುತಿರ್ದುದಾ ಮಿಸುಪ ಕಂಕೇಲ್ಲಿ ದ್ರುಮ ಸ್ಕಂಧದೊಳ್ ॥೭೮॥

ದರ ಹಾಸಂ ಮುಖದಿಂ ತುಳುಂಕುತಿರೆ ಚೆಲ್ವೆತ್ತಂ ಸಮಸ್ತಾಂಗದಿಂ ।
ದಿರದುಣ್ಮುತ್ತಿರೆ ತಾಂ [1]ಸಚೇತನಮೆನಿಪ್ಪಾ ಭಾವಮಂ ಬೀಱುವ ॥
ಚ್ಚರಿ ಮೆಯ್ವೆರ್ಚಿರೆ ತೋರ್ಪ ಚಿತ್ರದ ಪಟಂ ಕಂದರ್ಪದೇವಾಹ್ವಯಾ ।
ಕ್ಷರ ಪಂಚಾಂಚಿತಮಾಗಿ ಪಜ್ಜಳಿಸುತಿರ್ದತ್ತಾ ತರು ಸ್ಕಂಧದೊಳ್ ॥೭೯॥

ಕಂ॥ ವಸುಧೆಯೊಳಡಂಗಿರದೆ ನೆಗೆ ।
ದೆಸೆವ ಕಡಾರಮನೆ ಬಡವನಡಿಮೊದಲೊಳಭೀ ॥
ಕ್ಷಿಸಿ ಕಾಣ್ಬ ತೆಱದೆ ತೊಟ್ಟನೆ ।
ಕುಸುಮಾವಳಿದೇವಿ ಚಿತ್ರಪಟಮಂ ಕಂಡಳ್ ॥೮೦॥

ಚಂ॥ ನಿರುಪಮಿತ ಪ್ರದೇಶ ಪರಿಶೋಭೆಯನಾ ಸಮುದಾಯ ಶೋಭೆಯಂ ।
ಸುರುಚಿರ ವರ್ಣ ಶೋಭೆಯನುಪೇತ[2]ವರಾಂಗ ಶೋಭೆಯಂ ॥
ವರತರ ಮೂರ್ತಿ ಶೋಭೆಯನಭೀಕ್ಷಿಸುತಿರ್ದುವಲಂಪಿನಿಂ ತನೂ ।
ದರಿ ಕುಸುಮಾವಳೀ ವಿಲುಳಿತಾಕ್ಷಿಗಳಾ ಪಟ ಲೇಖ್ಯ ಚಿತ್ರದೊಳ್ ॥೮೧॥

ಬರೆ ತೆಗೆವಂದದಿಂದವಯವಂಗಳೊಳೆಯ್ದೆ ಪಳಂಚುವಂದದಿಂ ।
ದಿರದೆ ಮುಸುಂಕುವಂದದಿನಲಂಪಿನೊಳಾವರಿಪಂದದಿಂ ಕರಂ ॥

1. ಸಸೇಚನ. 2. ವನಾಂಕ.

ಪರಿವರ್ಧಿಪ್ಪವಂದದಿನಭೀಕ್ಷಿಸುತಿರ್ದುವು ಲೇಖ್ಯ ಚಿತ್ರಮಂ ।
ಪಿರಿದನುರಾಗದಿಂದೆ ಕುಸುಮಾವಳಿ ದೇವಿಯ ಚಾಪಲಾಕ್ಷಿಗಳ್ ॥೮೨॥

ಮಿಗೆ ಸೊಗಯಿಪ್ಪ ತತ್ಪಟದ ಚಿತ್ರ ವಿಶೋಭೆಯನೀಕ್ಷಿ[1]ಸಲ್ಕವಾಂ ।
ತೊಗೆದುವು ತಾಮೆನಲ್ಕೆ ಕುಸುಮಾವಳಿ ದೇವಿಯ ಕೋಮಲಾಂಗದೊಳ್ ॥
ನೆಗೆದುವು ನಾಡೆ ಘರ್ಮಜಲ ಬಿಂದುಗಳೊಳ್ ಪೊಱಮ್ಪ[ದಮಾ ಮುದ] ।
ಶ್ರುಗಳಿರದುಣ್ಮಿದಾ ಮನದ ಸೊಲ್ಲಮನಾಗಳೆ ಸೂಚಿಪಂದದಿಂ ॥೮೩॥

ಉ॥ ಕಂತು ನವೀನ ರಾಗ ರಸಮುತ್ಕಟಮಾಗೆ ಮನಕ್ಕೆ ತೋಳ್ಗಳೋ ।
ರಂತಮರ್ದಪ್ಪಲವ್ವಳಿಸಲುಚ್ಚ ಕುಚಂ ತೊನೆವಂತೆ ಗಾತ್ರವೆ ॥
ತ್ತಂ [2]ತನಿಗೆತ್ತಲಾ ಕ್ಷಣದಿನಾ ಪಟ ಚಿತ್ರದಮೇಲೆ ಪಾಯ್ದು ವಿ ।
ಭ್ರಾಂತಿ ಕರಂ ಪೊದಳ್ದು ಕುಸುಮಾವಳಿ ಮೂರ್ಛೆಯನಾಗಳೆಯ್ದಿದಳ್ ॥೮೪॥

ತಾನಿದು ಚಿತ್ರಮಲ್ತೆ ಪಟ ಚಿತ್ರಮನೀಕ್ಷಿಸಿ ಸೋಲ್ತು ಮೂರ್ಛೆಯಾ ।
ಯ್ತಾ ನೃಪ ಕಂತುಗತ್ತ ಕುಸುಮಾವಳಿಗಿತ್ತಲ್[3]ಇರ್ದುವೇಕೆಯು ॥
ದ್ಯಾನದೊಳಾ ಪಟ ದ್ವಿತಯಮಾ ತೆಱನಂ ಮುನಿನಾಥ ಪೇಳಿಮೆಂ ।
ದಾನತನಾಗಿ ಬಿನ್ನವಿಸಿದಂ ಮಣಿಕುಂಡಲ ಭೂಮಿಪಾಲಕಂ ॥೮೫॥

ನೀಂ ಬೆಸಗೊಳ್ವುದಪ್ಪುದೆನುತುಂ [4]ಫಲವೃತ್ತಿ ಪರಿ ಪ್ರಸನ್ನ ನೇ ।
ತ್ರಾಂಬುಜನಾಗಿ [5]ಕೇಳ ಮಣಿಕುಂಡಲ ತದ್ವನದಲ್ಲಿ ಕಟ್ಟಿ ಚಿ ॥
ತ್ರಂಬಡೆಯುತ್ತೆ ಚಿತ್ರ ಪಟಮಿರ್ಪುದು ಪೂರ್ವ ಭವಾನುಯಾತಮೆಂ ।
ತುಂ ಬಗೆಗೊಂಡದಂ ತಿಳಿವೆಯಪ್ಪೊಡೆ ಪೇಳ್ದಪೆವಾ ಪ್ರಪಂಚಮಂ ॥೮೬॥

ಅದೆಂತೆಂದೊಡೆ—

ಉ॥ ಧಾರಿಣಿಯೊಳ್ ಕಡಂಗಿ ಕವಿಗುಂ ಜಲರಾಶಿಗಳೆಂದು ಮುನ್ನಮಂ ।
ಭೋರುಹಗರ್ಭನಿಕ್ಕಿದ ಸಮುಚ್ಛ್ರಿತದಾಯತ ಸೇತುವೆಂಬ ವಿ ॥
ಸ್ತಾರದೆ ಪೂರ್ವ ಪಶ್ಚಿಮ ಪಯೋನಿಧಿ ವೇಲೆಯೆ [6]ಸೀಮಮಾಗೆ ನೀ ।
ಳ್ದು ರುಚಿರ ಶೋಭೆ ಶೋಭೆವಡೆದಿರ್ಪುದು ತಾಂ ವಿಜಯಾರ್ಧ ಪರ್ವತಂ॥೮೭॥

---

1. ಸಲ್ಪವಾಂ. 2. ತಸಿಗಿತ್ತ. 3. ವಿಪ್ಪಮೇಕೆ. 4. ಪಲವೃತ್ತಿಪಂಪ್ರಸನ್ನ.
5. ಕೇಳು ಮುಂಡಳ. 6. ಸಮು.

ಉ॥ ಕ್ಷೋಣಿಗೆ ಜೆಲ್ವುವೆತ್ತ ವಿಜಯಾರ್ಧ ಮಹೀಧರದಲ್ಲಿ ದಕ್ಷಿಣ ।
ಶ್ರೇಣಿಯೆನಿಪ್ಪುದೊಂದು ವಿಷಯಂ ಪುರಮಂತದು ಪುಷ್ಪ ಖೇಟಮ ॥
ಕ್ಷೀಣ ವಿಶೋಭೆಯಿಂ ಸೊಗಯಿಸಿರ್ದುದು ತತ್ಪುರ ವಲ್ಲಭಂ ಘನ ।
ತ್ರಾಣ ಭುಜ ಪ್ರತಾಪ ಖಚರಾಗ್ರಣಿಯುಗ್ಗದ ರತ್ನಶೇಖರಂ ॥೮೮॥

ಕಂ॥ ಪ್ರಿಯಸತಿ ತಾಂ ಜ್ಯೋತಿರ್ಮಾ ।
ಲೆಯೆನಿಪ್ಪಳ್ ರತ್ನಶೇಖರಂಗಗ್ಗದ ಮಂ ॥
ತ್ರಿಯೆ ವಿದ್ಯುತ್ಪ್ರಭನೆಂಬಂ ।
ನಯ ಮಂತ್ರಾಭಿಜ್ಞನನುಪಹತ ವಿಪುಳಾಜ್ಞಂ ॥೮೯॥

ಶಾ॥ ಆ ವಿದ್ಯುತ್ಪ್ರಭನೆಂಬ ಮಂತ್ರಿಯೊಳುದಗ್ರಾತ್ಮೀಯ ಸಾಮ್ರಾಜ್ಯ ಲ ।
ಕ್ಷ್ಮೀ ವಿಸ್ತಾರತೆಯಂ ನಿಯೋಜಿಸಿ [1]ನಿಜ ಸ್ತ್ರೀಯುಕ್ತಮಲ್ಲಲ್ಲಿ ಶೋ ॥
ಭಾ ವಿಖ್ಯಾತಿಯ ತಾಣದೊಳ್ [2]ಚರಿಯಿಸುತ್ತಿರ್ಪಂ ಕರಂ [3]ಕಾಮು ರಾ ।
ಗಾವಿಷ್ಟಾತ್ಮಕ ರತ್ನಶೇಖರ ಮಹಾ ವಿದ್ಯಾಧರೇಂದ್ರಂ ನೃಪಾ ॥೯೦॥

ಅಂತು ಕಂತುಕ್ರೀಡಾ ನಿಮಿತ್ತಂ ವಿಹರಿಸುತ್ತುಮಿರ್ದು—

ಕಂ॥ ಮಣಿಶೃಂಗ ಶೈಲದಾ ಕೆಳ ।
ಗಣ ಪುಷ್ಪಕವೆಂಬ ವನದೊಳಿರ್ಪಂ ತ್ರಿಜಗ ॥
ತ್ಪ್ರಣುತ ಮಹಿಮಂ ಮಹಾ ಮುನಿ ।
ಗಣ ಪರಿಯುಕ್ತಂ ತ್ರಿಲೋಚನ ವ್ರತಿನಾಥಂ ॥೯೧॥

ಉ॥ ಆ ಮುನಿಪಂ ಸ್ವಕೀಯ[4]ಶಿವ ಪೂಜನ ಮಾತ್ರಕೆ ಮೂಜಗಂಗಳೊಳ್ ।
ತಾಮೆಸೆದಿರ್ಪನೇಕ ವಿಧ ಪುಷ್ಪದ ಗುಲ್ಮ ಲತಾ ಮಹೀರುಹ ॥
ಸ್ತೋಮಮನೆಯ್ದೆ ತಂದು ಕುಸುಮಾಕರಮೆಂಬಭಿಧಾನಮಿತ್ತು ಸು ।
ಪ್ರೇಮದಿನಂತದಂ ಸಲಹಿದಂ ಸಲೆ [5]ನಾಂಟಿಸಿ ಪುಷ್ಪವಾಟಿಯಂ ॥೯೨॥

* ಕಂ॥ ಪಿರಿದುಂ ಸಾರ್ಥಕಮಾದುದು ।
ಸಿರುತಂ ನಿಜ ನಾಮಮೆಂಬ ತೆಜದಿಂ ಕುಸುಮಾ ॥

---

1. ನಿಜಶ್ರೀ. 2. ಪರಿಯಿಸು. 3. ಕಾಮಿರಾ । ಗನಿವಿಷ್ಟಾತ್ಮಕ.
4. ಶಿವಪೂಜೆ ನಿಮಿತ್ತದೆ. 5. ಪಾಟಿಸಿ.

* ೯೩–೯೪ ನೆಯ ಪದ್ಯಗಳೆರಡೂ ಸೇರಿ ಒಂದೇ ಕಂದ ಪದ್ಯದಂತೆ ಮೂಲ ಗ್ರಂಥದಲ್ಲಿದ್ದಿತು. ಕೊನೆಯ ಭಾಗವನ್ನು ನೋಡಿದುದರಲ್ಲಿ ಹೀಗಿರಬಹುದೆಂದೂಹಿಸಿ ೨ ಪದ್ಯಗಳನ್ನಾಗಿ ಭಾಗಿಸಿದೆ.

ಕರ ಪುಷ್ಪವಾಟಿ [ಮೆಱೆದುದು ।
ಪರಿಮಳಮಂ ಬೀಱುತಿರ್ಪ ಪುಷ್ಪಾವಳಿಯಿಂ] ॥೯೩॥

ಚಂ॥ . . . . . . . . . . . . . . ।
. . . . . . . . . . . . . . . . ॥
. . . . . . . . . . . . . . . . ಗೊ ।
ತ್ರಿದನೆನಸುಂ ವಿಮಾನಮನದಂ ಖಚರಾಗ್ರಣಿ ರತ್ನಶೇಖರಂ ॥೯೪॥

ಆ ಕುಸುಮಾಕರ ಪುಷ್ಪವಾಟಿಯೊಳ್ ಪೊಕ್ಕು ರತ್ನಶೇಖರಂ ನಿಜಕಾಂತೆಯೊಳ್ ಕಂತು ಕ್ರೀಡೆಯಂ ಮಾಡಿ ದ್ವಿಗುಣೀಭೂತ ಮನೋಹರನಾಗೆ ಪ್ರತಿ ದಿನಂ ಬಂದು ಸುರತ ಸುಖಮಂ ಪಡೆದು ಪೋಗುತ್ತುಮಿರೆ—

ಕಂ॥ ಕುಸುಮಾಕರಕ್ಕೆ ಪೋಗಿಯು ।
ಮೆಸೆವಲರ್ಗಳನಲ್ಲಿ ತಾರದೆ [1]ಬರೆ ತಾ ॥
ಪಸರಿಂತು ಬರಿದೆ ವೀಕ್ಷಿಸಿ ।
ಬೆಸಗೊಂಡಂ ತ್ರಿಲೋಚನ ವ್ರತಿನಾಥಂ ॥೯೫॥

ಮ॥ ಸುರರಾರುಂ [2]ಪುಗಲಮ್ಮರಲ್ತೆ ಭವದೀಯಾನುಜ್ಞೆ[3]ಯಾದಲ್ಲದ ।
ಚ್ಚರಿ ಪೊಕ್ಕೊರ್ವನದಾನನಕ್ಕೆ ಬಿಸುಟಂ ತಾಂಬೂಲಮಂ ಮೌಳಿಯಾ ॥
ಸರಮಂ ತತ್ಕುಸುಮಾಕರಾಂತರದೊಳೀಗಳ್ ದೇವ ಪೇಟಲ್ಕೆ ಚ ।
ಚ್ಚರದಿಂ ಬಂದೆವೆನಲ್ ತ್ರಿಲೋಚನ ಮುನೀಂದ್ರಂಗಾ ಪರಿವ್ರಾಜಕರ್ ॥೯೬॥

ಅದಂ ಕೇಳ್ದು—

ಚಂ॥ ಮುಳಿದೆನಸುಂ ಮುನೀಂದ್ರನವನಾವನೊ ಪೊಕ್ಕಪನೆಂದು ನೋಡಲಾ ।
ಗಳೆ ಬರುತಿರ್ಪ ತತ್ಸಮಯದೊಳ್ ಕುಸುಮಾಕರದಿಂದೆ ಪೋಗುತು ॥
ಜ್ಜಳಿಪ ವಿಮಾನಮಂ ನಿಮಿರ್ದು ಕೋಪದೊಳೀಕ್ಷಿಸೆ ಬಿಟ್ಟನುರ್ವರಾ ।
ತಳಕೆ ಸತೀ ಸಮೇತಮಿರದಾ ಖಚರಾಗ್ರಣಿ ರತ್ನಶೇಖರಂ ॥೯೭॥

ಇಂತು ಬಿಟ್ಟನಂ ಕಂಡು—

ಉ॥ ನಾಡೆಯುಮಂಜದಿಂದು ಕುಸುಮಾಕರದೊಳ್ ಕುಸುಮಾಸ್ತ್ರ ಕೇಳಿಯಂ ।
ಮಾಡಿದೆ ರತ್ನಶೇಖರ ಮನುಷ್ಯ ಭವಾಂತರದಲ್ಲಿ ಪುಟ್ಟಿಯುಂ ॥

1. ನೆರೆ. 2. ಪೊಗಳ. 3. ಯಿಂದಲ್ಲದ.

ಕೂಡದೆಯಿರ್ವರುಂ ಮರುಗುತಿಂ[1]ತಿರಿಮೆಂದರುಣೇಕ್ಷಣಂಗಳಿಂ ।
ನೋಡಿ ಕಡಂಗಿ ತನ್ಮುನಿಪನಾಗಳೆ ಶಾಪಮನೀಯೆ ಕೋಪದಿಂ ॥೯೮॥

ಕಂ॥ ಮುನಿಪತಿಯಿಂ ಶಾಪಂಬೆ ।
ತ್ತ ನಿಜ ಸ್ವಾಮಿಯ ತದೀಯ ವಾರ್ತೆಯನಱಪ ॥
ಲ್ಕೆನಸುಂ ವಿದ್ಯುತ್ಪ್ರಭೆ ಸಚಿ ।
ವನನೆಯ್ದಿದನಶ್ರುಲೇಖನೆಂಬಡಪವಳಂ ॥೯೯॥

ಕಂ॥ ಈ ವಾರ್ತೆಯನಱಪಲ್ ಕೇ ।
ಳ್ದಾವೇಗದೆ ಬಂದನಶ್ರುಲೇಖಂ ಬೆರಸಂ ॥
ತಾ ವಿದ್ಯುತ್ಪ್ರಭನೆನಲಿ ।
ನ್ನಾವಂ ಪೇಱನ್ನನನ್ಯನಧಿಪತಿ ಭಕ್ತಂ ॥೧೦೦॥

ಇಂತು ಬರ್ಪುದುಂ ಕಂಡು—

ಕಂ॥ ಇವನಿಂದೇನಾದುದೆನು।
ತ್ತವೆ ನೋಡುತ್ತಶ್ರುಲೇಖನೆಲವೊ ತುರಂಗಾಂ ॥
[2]ಗವಿಕಾರಮಾಂಪುದೆನೆ ಶಾ ।
ಪವನಿತ್ತಂ ಕೋಪದಿಂ ತ್ರಿಲೋಚನ ಮುನಿಪಂ ॥೧೦೧॥

ಅದಂ ಕಂಡು ವಿದ್ಯುತ್ಪ್ರಭಂ ನಡುಗುತ್ತುಂ ಸ್ವಾಮಿಕಾರ್ಯಮುಂ ಬಗೆದು—

ಮ॥ ಮೊಗಮಂ ದೂರದೆ ಕಾಣುತುಂ ರಚಿರುಮಪ್ಪೌಚಿತ್ಯ ವಾಗ್ವೃತ್ತಿ ಕೈ ।
ಮಿಗೆ ನಾನಾ ವಿಧದಿಂ ಗುಣ ಸ್ತವನಮಂ ಮಾಡುತ್ತುಮೆಟ್ಟುಂದು ನೆ ।
ಟ್ಟಗೆ ಮೆಯ್ಯಿಕ್ಕಿದನಾ ತ್ರಿಲೋಚನ ಮಹಾಯೋಗೀಂದ್ರ ರುಂದ್ರಾಮಳಾಂ ।
ಘ್ರಿಗಳಗ್ರೋರ್ವರೆಯೊಳ್ ತದೀಯ ಖಚರೇಂದ್ರಾಮಾತ್ಯ ವಿದ್ಯುತ್ಪ್ರಭಂ॥೧೦೨॥

ಇಂತು ಸ್ತುತಿ[3]ಗೆಯ್ಯೆ ತದ್ವಿದ್ಯುತ್ಪ್ರಭನ ಭಕ್ತಿಗೆ ತ್ರಿಲೋಚನ ಮುನೀಂದ್ರಂ ಪ್ರಸನ್ನ ವದನಾರವಿಂದನಾಗಿ—

ಮ॥ಸ್ರ॥ ಪರಸುತ್ತೇಱಱನೆಲ್ ತಾನಡಿ ಮೊದಲಿಳೆಯಿಂದೇಱದಿರ್ದಾಶನಭ್ಯಂ ।
ತರದೊಳ್ ಪ್ರೋಣ್ಡಂಡಮುಂ ಭಾವಿಸಿ ಮುನಿಪತಿ ನೀನೆಂದುದಂಮಾಱಪ್ಪೆವಾವಿಂ

1. ತಿರೆಮೆಂದ. 2. ಗಮುಮಾಗೆಂದಾಳೆ. 3. ಗೆಯ್ಯುತಂ.

ತಿರದೆ . . . . . . . . . . . . . . . . |
. . . . . . . . . . ದೊಂದನಾಂ ಬಿನ್ನವಿಪ್ಪೆಂ ||೧೦೩||

ಮ|| ಅನುರಕ್ತಂ ಸತತಂ ಸ್ವಕೀಯ ಸತಿಗಸ್ಮತ್ಸ್ವಾಮಿ ತಾನಂತಱಂ |
ದೆನುಸುಂ ಮಾನುಷಜನ್ಮದಲ್ಲಿಯೆ ತದೀಯ ಸ್ತ್ರೀಸಮಾಯೋಗ ಜೀ |
ವನನಾಗಿರ್ಪನಿತಂ ಮುನೀಂದ್ರ ಪಿರಿದಾನುಂ ಮಾಳ್ಪುದಿನ್ನೊಲ್ದು ನೀ |
ಮೆನುತುಂ ದೀನತೆಯಿಂ ಪುನಃಪ್ರಣತನಾದಂ ಪೊರ್ದಿ ವಿದ್ಯುತ್ಪ್ರಭಂ ||೧೦೪||

ಕಂ|| ಎಲೆ ವಿದ್ಯುತ್ಪ್ರಭ ನೀಂ ಭೂ |
ತಲದೊಳ್ ನೆರೆಯಡಱನಱಪಲುಂ ನೆರೆಯಿಸಲುಂ ||
ಸಲೆ ಸತ್ಕಾರಣಮಾಗೆಂ |
ದೊಲವಿಂ ನೇಮಿಸಿದನಾ ತ್ರಿಲೋಚನ ಮುನಿಪಂ ||೧೦೫||

ಅದರ್ಕೆ ಮುದನಾಗಿ ವಿದ್ಯುತ್ಪ್ರಭಂ ಮತ್ತಮಿಂತೆಂದಂ—

ಮ|| ಪರಿಭಾವಿಪ್ಪೊಡಮಶ್ರುಲೇಖನವನಾತ್ಮ ಸ್ವಾಮಿಭಕ್ತಂ ವಸುಂ |
ಧರೆಯೊಳ್ ವಾಹಮದಾಗಿ ಪುಟ್ಟಿಯುಮಧೀಶಂಗಾಗೆ ತಾನಿರ್ಪುದಂ ||
ವರಮಿಾಯಲ್ಕೆಲೆ ದೇವ[1]ಬೇಳ್ಪುದೆನುತುಂ ವಿದ್ಯುತ್ಪ್ರಭಂ ನಮ್ರನಾ |
ಗಿರೆ ಮಂದಸ್ಮಿತನಾಗೆ ತದ್ವರಮನಂದಿತ್ತಂ ಮುನೀಂದ್ರಂ ನೃಪಾ ||೧೦೬||

ಶಾ|| ನೂತಾರೂಢಿಯ ರತ್ನಶೇಖರನೆ ತಾಂ ಕಂದರ್ಪ ಭೂನಾಥನಾ |
ಜ್ಯೋತಿರ್ಮಾಲೆಯೆನಿಪ್ಪ ತತ್ಖಚರ ರಾಜ ಸ್ತ್ರೀಯೆ ತಾಂ ರೂಪ ವಿ ||
ಖ್ಯಾತ ಶ್ರೀ ಕುಸುಮಾವಳೀ [2]ಯುವತಿಯುಂ ತಾನಶ್ರುಲೇಖಂ ಬಳೋ |
ಪೇತೋದ್ಯತ್ಪವನಂಜಯಾಶ್ವನೆ ಸಮಂತಿಂತುರ್ವಿಯೊಳ್ ಪುಟ್ಟಿದರ್ ||೧೦೭||

ಕಂ|| ಅದು ಕಾರಣದಿಂ ಭೂಚ |
ಕ್ರದೊಳಿತರ ಕ್ಷಿತಿವರರ್ಗೆ ಕೈಸಾರದೆ ಸಾ ||
ರ್ದುದು ಸಲೆ ಪವನಂಜಯ ನಾ |
ಮದ ಹಯಮುಂ ಭೂಪ ಕಂತುಗಿಂತವನಿಪತೀ ||೧೦೮||

1. ಪೇಳ್ಪುದೆನುತುಂ. 2. ಯುವತಿಯುಲ್ಲಾನುಂಶ್ರುಲೇಖಂ.

ಮ॥ ಅಱಿವಂ ತನ್ನಸಿಪ್ರೋಪದೇಶ[1]ಬಲದಿಂ ವಿದ್ಯುತ್ಪ್ರಭಂ ತಾನವರ್ ।
ನೆಱೆ ಪುಟ್ಟಿರ್ದುದನುರ್ವಿಯೊಳ್ ನೆಱಪಲೆಂದಾಕಾರ ಸಿದ್ಧಂಗಳಂ ॥
ಮಿಱುಗಲ್ ಚಿತ್ರಿಸಿಕೊಂಡು ಕೊಂಡು ವಿಪುಳೋದ್ಯಾನ ದ್ರುಮ ಸ್ಕಂಧದೊಳ್ ।
ತಱಿಸಂದೊಪ್ಪುವ ಚಿತ್ರಕಾಖ್ಯ ವನ ಭೂಜ ಸ್ಕಂಧದೊಳ್ ಕಟ್ಟಿದಂ ॥೧೦೯॥

ಉ॥ ಆ ಕಮನೀಯಮಪ್ಪ ಪಟ ಚಿತ್ರಮನೀಕ್ಷಿಸಿ ನಾಡೆ ಸೋಲ್ತು ಮೂ ।
ರ್ಛಾ[2]ಕುಲಿತಾತ್ಮನಾದನವನೀವರ ಮನ್ಮಥನತ್ತಲಿತ್ತಲಿ ॥
ನ್ನೀ ಕುಸುಮಾವಳೀ [3]ಯುವತಿಯುಂ ಪದೆದೀಕ್ಷಿಸಿ ನಾಡೆ ಸೋಲ್ತು ಮೂ ।
ರ್ಛಾಕುಲಿತಾತ್ಮೆಯಾದಳದು ಕಾರಣದಿಂ ಮಣಿಕುಂಡಲೋರ್ವಿಪಾ ॥೧೧೦॥

ಕಂ॥ ಇಂತು ಪಟ ಚಿತ್ರ ಯುಗ ವೃ ।
ತ್ತಾಂತಮನಾ ಕಪಿಲ ಮುನಿಪನಱಿಪಲ್ ನೆಱೆ ಕೇ ॥
ಳ್ದಂತೆ ಮಣಿಕುಂಡಳ ಕ್ಷಿತಿ ।
ಕಾಂತಂ ವಿಸ್ಮಯಮನೊಂದಿ ಮತ್ತಿಂತೆಂದಂ ॥೧೧೧॥

ದೇವರ್ ನೇಮಿಪುದಾ ಕುಸು ।
ಮಾವಳಿಗಂತಾಗೆ ಮೂರ್ಛೆ ಕಳಭಾಷಿಣಿ ಮೇ ॥
ಧಾವಿಳ[4]ನೇನೆಂದಳ್ ಮ ।
ತ್ತಾ ವೃತ್ತಕಮೆಂ[5]ತೆನಲ್ಕೆ ನೃಪ ಕೇಳೆಂದಂ ॥೧೧೨॥

ಅಂತು ಮೂರ್ಛಿಸೆ—

ಚಂ॥ ಕರಣ ವಿಕಾರವೊಂದಿ ಕುಸುಮಾವಳಿ ಮೂರ್ಛೆಯನೆಯ್ದಿದಂದಮಂ ।
ಪರಿಕಿಸಿ ಭೀತಿವಟ್ಟು ತೆಗೆದಲ್ಲಿ ಮಲಂಗಿಸಿಕೊಂಡು ಮೇಲುದಂ ॥
ತ್ವರಿತದಿನುರ್ಚಿ ಮೆಯ್ಗೆಱೆಯೆ [6]ಸುಣ್ಣೆಱಗಿಂದಮೆ ಬೀಸುತಿರ್ದೆನಾ ।
ಸಿರದೊಗೆವಾಸ್ಯ ನಿಶ್ವಸಿತಮಂ ಕರ ಪದ್ಮವನೊಡ್ಡಿ ನೋಡುತಂ ॥೧೧೩॥

ಇರದೆನಗಂ ಸ್ವಕೀಯ ಹೃದಯಾಬ್ಜಮನಿಂದೊಳಪೊಕ್ಕು ಚಿತ್ರದಾ ।
ಪುರುಷಮನೊಂದುಮಂದಮನದಂ ಪ್ರಕಟೀಕರಿಪಂದದಿಂ ಪತಿ ॥
ಸ್ಫುರಿಯಿಸು[7]ವೋಷ್ಠಮುಜ್ಜ್ವಳಿಪ ಘರ್ಮಜಲಂ [8]ಮುಗಿದಾಯತಾಕ್ಷಿಗ ।
ಳ್ಪೆರಸಿರುತಿರ್ದಳಿಂತು ಮರೆದಾ ಕುಸುಮಾವಳಿದೇವಿ ಮೂರ್ಛೆಯೊಳ್ ॥೧೧೪॥

---

1. ಫಲದಿಂ. 2. ಕಲಿತಾ. 3. ಯುವತಿಯುಂ. 4. ಗೇನೆಂದಳ್. 5. ದೆನಲ್ಕೆ.
6. ನಾಣ್ಣೆಱಗಿಂದಮೆ. 7. ತೋಷ್ಠ. 8. ಮುನಿದಾ.

ಅದಂ ಕಂಡು—

ಕಂ॥ ಪರಿದೀಗಳೆ ಪೋಗೀ ಸೌಂ ।
ದರಿಯಿರ್ಪೀ ತೆಱನನರಸಿಗಱಪೆಂದಾನೀ ॥
ಶ್ವರಿಯ [1]ನಿವಾಸಕ್ಕತ್ಯಾ ।
ತುರದಿಂದೀ ಕನಕ ಲತೆಯನಟ್ಟಿದೆನಾಗಳ್ ॥೧೧೫॥

ಆ ಸಮಯದೊಳ್ ನಿರ್ವರ್ತಿತ ಪೂಜಾಕೃತಿಯಾಗಿ ಚಿತ್ರಮತಿ ಮಹಾದೇವಿ ಕುಸುಮಾವಳೀ ದೇವಿಯಂ ಕಾತ್ಯಾಯನಿದೇವಿಗೆ ಪೊಡೆಮಡಿಸಲ್ವೇಡಿ ನೋಡಿ ಕಾಣದೆ ಪೊಱಗೆ ನಿಂತು ನೋೞ್ಪಾಗಳ್—

ಕಂ॥ ಕನಕಲತೆ ಪೋಗಿ ದೇವಿಗೆ ।
ವಿನತಾನನೆಯಾಗಿ ಜೇಗದಿಂ ಕಿವಿಯಂ ಸಾ ॥
ರ್ದಿನಿತಾನುಮಱಪಿದಳ್ ತೊ ।
ಟ್ಟನೆ ಕುಸುಮಾವಳಿಗೆ ತೊಡರ್ದ ಮೂರ್ಛೆಯ ತೆಱನಂ ॥೧೧೬॥

ಅದಂ ಕೇಳ್ದು ವಿಸ್ಮಯ ಸ್ವಾಂತೆಯಾಗಿ—

ಕಂ॥ ಆನೊಂದಂ ನೆಗೞ್ದಿಟ್ಟಿರೆ ।
ತಾನೊಂದಂ ನೆಗೞ್ದಳಲ್ತೆ ಪರಮೇಶ್ವರಿ ಮ ॥
ತ್ತೇನನಿದನೆನುತುಮಾಗಳ್ ।
ಮಾನಿನಿ ಚಿತ್ರಮತಿ ದೇವಿ ಭೋಂಕನೆ ಬಂದಳ್ ॥೧೧೭॥

ಚಂ॥ ಮಿಸುಪ ಸುರೇಖೆ ರೂಪು ರುಚಿ ರಂಜಿಸುವಾ ಪಟಚಿತ್ರಮಂ ನಿರೀ ।
ಕ್ಷಿಸಿ ಬೆಱಗಾಗಿ ಚಿತ್ರಮತಿದೇವಿ ಸಮಂತಿದು ನೋಡೆ ನಾಡೆ ಸೋ ॥
ಲಿಸಲಿದು ತಕ್ಕುದಲ್ತೆ ಕುಸುಮಾವಳಿ ದೇವಿಯನೆಂದೆನುತ್ತೆ ಭಾ ।
ವಿಸಿ ಪಿರಿದುಂ ಬೆರಲ್ ಮಿಡಿದು ತೂಗಿದಳಾತ್ಮ ಶಿರಸ್ಸರೋಜಮಂ ॥೧೧೮॥

ಮ॥ ಇದು ಕಾತ್ಯಾಯನಿದೇವಿ ಮಾಡಿದುದೆ ಮೇಣಂತಲ್ಲಿದಂದಿಲ್ಲಿ ಕ ।
ಟ್ಟಿದರಾರೀ ಪಟಮಂ ಪೊದೞ್ದಿಸಿತು ರೂಪಾಶ್ಚರ್ಯ ಭಾವಂ ನರ ॥
ರ್ಗದು[2] ತಾನೆಲ್ಲಿಯದೇಂ ವಿಚಿತ್ರಮೊ ಪೆಸರ್ ಕಂದರ್ಪದೇವಂ ಗಡಾ ।
ಮದನಾಕಾರವಲಿರ್ದನಕ್ಕುಮೆನುತಿರ್ದಳ್ ದೇವಿ ಮೇಧಾವಿಳಾ ॥೧೧೯॥

1. ನಿವಾತತ್ಯಾ. 2. ತಾನೆಲ್ಲಿಯದಿಂ.

ಉ॥ ಈ ಪಟಚಿತ್ರಮೋವೊ ಕುಸುಮಾವಳಿ ದೇವಿಗೆ ಕಂತುವಹ್ನಿ [1]ಸಂ।
ತಾಪಮನಾವಗಂ ಪುದಿಯಲಿರ್ದುದೊ ಮೇಣಿದು ಸತ್ಯಮಾಗೆ ಸ್ ॥
ಮ್ಯೋಪಚಿತಾತ್ಮೆಯಾಗಿಸುವ ಭಂಗಿಯೊಳಿರ್ದುದೊ ಪೇಟನುತ್ತೆ ಚಿಂ।
ತಾ [2]ವೃತ ಚಿತ್ತೆಯಾಗಿ ನೃಪಸೌಂದರಿ ತತ್ಕ್ಷಣದಿಂದೆ ಪಿಂಗಿದಳ್ ॥೧೨೦॥

ಆಗಳೆನ್ನಯ ಮೊಗಮಂ ನೋಡಿ—

ಉ॥ ಆನಿರೆ ಕಂಡು ಲಜ್ಜಿಸುಗುಮಂತದಱಿಂ ಮನಕೆಟ್ಟ ಱಕ್ಕೆಯಂ।
ಮಾನಿನಿಗಪ್ಪುಕೆಯ್ದು ಕಳಭಾಷಿಣಿ ನೀನೊಡಗೊಂಡು ಬಾ ಮೃಡಾ ॥
ಣೀ ನಿಳಯಾಂತರಕ್ಕೆ ಕುಸುಮಾವಳಿ ದೇವಿಯನೀಗಳೆಂಬಿದಂ।
ತಾನೆನಗಿಂತು ಪೇಟ್ದರಸಿ ಭೋಂಕನೆ ಪೋದಳಶೋಕ ಶಾಖಿಯಂ ॥೧೨೧॥

ಕಂ॥ ಆನಿತುಂ ಶಿಶಿರ ಕ್ರಿಯೆಗಳ।
ನನುನಯದಿಂ ತನುಗೆ ತಡೆಯದೊಡರಿಸುತುಂ ಮೆ ॥
ಲ್ಲನೆ ಕುಸುಮಾವಳಿ ದೇವಿಯ।
ಮನಕೆಟ್ಟ ಱನಲ್ಲಿ ಪಡೆದೆನಾನೆಂತಾನುಂ ॥೧೨೨॥

ಆ ಸಮಯದೊಳ್—

ಚಂ॥ ಮಿಱುಪ ತದೀಯ ಚಿತ್ರಪಟಮಂ ತೆಗೆದಾಂ ಮಡಪಿಟ್ಟೊಡಲ್ಲಿ ಕ।
ಣ್ದೆಱದು ಮದಾಲಸಾಕ್ಷಿಗಳಿನೀಕ್ಷಿಸಿ ಕಾಣದೆಯೇನುಮೆನ್ನದೇ ॥
ತೆಱನಿದು ಮಾಯಮೆನ್ನದೆ ಮದಾಸ್ಯಮನೊಯ್ಯನೆ ನೋಡುತಿರ್ದಳಿ।
ಟ್ಟಱಕೆಯ ಭಂಗಿ[ಯಿಂದೆ] ಕುಸುಮಾವಳಿ ಹೃಜ್ಜನಿತಾತಿ ಲಜ್ಜೆಯಿಂ ॥೧೨೩॥

ಅದನಱದು—

ಕಂ॥ ದೇವಿ ತಡಮಾಯ್ತು ನಿಮ್ಮಂ।
ದೇವಿ ಬರಲ್ವೇಟ್ದಳಾ ಮಹಾದೇವಿಗ[3]ನು ॥
ತ್ತಾವೇಗದೆ ಕುಸುಮಾವಳಿ।
ದೇವಿಯನೊಡಗೊಂಡು ಮೆಲ್ಲನಲ್ಲಿಂ ತಳರ್ದೆಂ ॥೧೨೪॥

ಚಂ॥ ಬನಮಿದು ಬರ್ಪೆನೀ ಬಳಸಿ ಬರ್ಪುದು ಮತ್ಪರಿವಾರ ಕನ್ಯಕಾ।
ಜನಮಿನಿತೆಂದು ತಾನಱಯದಾವುದನೀಕ್ಷಿಸದೇನುಮೆನ್ನದಾ ॥

1. ನ। ತಾಸ. 2. ಪೃತು. 3. ಮತ್ತಾ.

ನನುವಿಸಿದಂದದಿಂದೆ ಕುಸುಮಾವಳಿದೇವಿ ಬರುತ್ತುಮಿರ್ದಳಾ ।
ಮನಸಿಜನಾಡಿಪೊಂದು ನಡೆಜಂತ್ರದ ಪುತ್ರಿಕೆಯೆಂಬ ಭಂಗಿಯಿಂ ॥೧೨೫॥

ಕಂ॥ ತಾನಿಂ[1]ತೆಂದನುವಿಸಲೆಂ ।
ತಾನುಂ ಬಂದಳ್ ಭವಾನಿ ದೇವಿಯ ಭವನ ॥
ಕ್ಕೇನೆಂದಱಯದೆ ಮದನನ ।
ಮೌನ ವ್ರತೆಯಂತೆ ಚಿತ್ರಮತಿ ಸುತೆ[2]ಯಾಗಳ್ ॥೧೨೬॥

ಇಂತು ಬಂದ ಕುಸುಮಾವಳಿ ದೇವಿಯುಂ ಚಿತ್ರವತಿ ಮಹಾದೇವಿ ಕಾತ್ಯಾಯನಿ ದೇವಿಗೆ ಪೊಡೆಮಡಿಸಿಕೊಂಡು ಪುರಾಭಿಮುಖಿಯಾಗೆ—

ಉ॥ ಬಾಜಿಪ ಮಂಗಳಾನಕ ರವಂ ಕುಸುಮಾವಳಿ ಸೋಲ್ತ ಚಿತ್ರ ವಿ ।
ಭ್ರಾಜಿತ ವಾರ್ತೆ ಪೆರ್ಚಿ ನಿಮಿರುತ್ತಿರೆಯುಂ ನಡೆತಂದು ತನ್ನ ರಾ ।
ರಾಜಿಪ ಚಕ್ರವಾಳಪುರಮಂ ನಡೆದಾಗಳೆ ಪೊಕ್ಕಳಲ್ತೆ ಲೀ ।
ಲಾ ಜಿತ ಲಕ್ಷ್ಮಿ ಚಿತ್ರಮತಿದೇವಿ ನಿಜೋನ್ನತ ರಾಜಗೇಹಮಂ ॥೧೨೭॥

ತಾನರಸಂಗೆ ಬಂದರಸಿ ತತ್ಕುಸುಮಾವಳಿ ದೇವಿ ಚಿತ್ರಕೋ
ದ್ಯಾನದೊಳಾ ವಿಚಿತ್ರ ಪಟ ಪೂರಷನಂ ನಡೆ ನೋಡಿ ಸೋಲ್ತು ಮೂ ॥
ರ್ಛಾ ನಿಚಿತಾತ್ಮೆಯಾದ ತೆಱನಂ ನೆಱೆ[3] ಪೇಟ್ದೊಡೆ ಕೇಳ್ದು ವಿಸ್ಮಯಾ ।
ಪೀನ ಮನಸ್ಕನಾಗಿ ಬೆರಗಾದನಿದೇನೆನುತುಂ ನರೇಶ್ವರಂ ॥೧೨೮॥

ಅನ್ನೆಗಮಿತ್ತಲ್—

ಉ॥ ತಾನೆಸೆವೊಂದು ಚಿತ್ರ ಪುರುಷಾಕೃತಿಯಂ ನಡೆ ನೋಡಿ ಸೋಲ್ತಣಂ ।
ಮೌನದೊಳಿರ್ದಳಲ್ತೆ ಕುಸುಮಾವಳಿಯೆಂಬ ವಿಚಿತ್ರ ವಾರ್ತೆಗೇ ॥
ಳ್ದಾ ನೆರೆದಿರ್ದನೇಕ ನೃಪ ಸಂಕುಳಮಿನ್ನಿರಲಾಗದೆಂದು ಲ ।
ಜ್ಜಾ ನಿಕೃತಾತ್ಮ[3]ಮಾಗಿ ನೆಱೆಪೋದುದು ಪೋದುದು ತತ್‌ಕ್ಷಣಾರ್ಧದೊಳ್

ಮತ್ತಮಿತ್ತಲ್—

ಉ॥ ಎನ್ನ ಕರ ಪ್ರಕೋಷ್ಠ ಪುಟ ವಿನ್ಯಸನಾತ್ಮ ಕರಾಬ್ಜೆಯಾಗಿಯಾ ।
ರನ್ನದ ಕನ್ನೆವಾಡಮುನದೇಂ ಜನಿತಾತುಳ ಮಾಂದ್ಯ ವೃತ್ತಿಯಿಂ ॥

1. ತೆಂನನು ವದಿನೆಂ. 2. ಯಾದಳ್. 3. ರಾಗಿ.

ದನ್ನಡೆತಂದು ಪೊಕ್ಕು ಕುಸುಮಾವಳಿದೇವಿ ಮನೋಜ ವಿಹ್ವಲ ।
ತ್ವನ್ನೆಲಿವೆರ್ಚೆ ಬಂದು ನಿಜಶಯ್ಯೆಯೊಳಾಗಳೆ ಮೆಯ್ಯನಿಕ್ಕಿದಳ್ ॥೧೩೦॥

ಮ॥ ಎಸಿತಾನುಂ ಮರೆದೊಂವನೊಂದಿ ನೆನೆಯುತ್ತಿರ್ದಪ್ಪಳೆಂಬಂತೆ ತೊ ।
ಟ್ಟನೆ [1]ಸಿಟ್ಟಾಲಿಗಳಾಟವಚ್ಚಱಿದು ವಕ್ಷಸ್ಸ್ಪಂದನಂ ನಿಂದು ಸು ।
ಯ್ಯನಿಳಂ ವಕ್ತ್ರದೊಳೊಯ್ಯನಾಗಿ ಪುರವಟ್ಟ್ಯೋಱಂದದಿಂದಿರ್ದಳಿಂ ।
ತು ನಿತಾಂತಂ ಕುಸುಮಾವಳೀ ಯುವತಿ ಶಯ್ಯಾನಲ್ಪ ತಳ್ಪಾಗ್ರದೊಳ್ ॥೧೩೧॥

ಅಂತುಮಲ್ಲದೆಯುಂ—

ಚಂ॥ ಮನವೆನಸುಂ ತದೀಯ ಹೃದಯಾಸ್ಪದದೊಳ್ ನೆಲೆಗೊಂಡ ಕಾಂತದ ।
ರ್ಶನ ಭರದಿಂದಿರಲ್ಕಿರದೆ ತನ್ಮನಮಂ ಬಱಿಸಂದು ಕಾಮನಿ ॥
ತ್ತನುಚರ ವೃತ್ತಿಯಿಂ ಮೆಱೆಯಲಾ ಕರಣಾವಳಿ ಪೋದುದಾಗಳಿಂ ।
ಬಿನಮಖಿಳೇಂದ್ರಿಯ ಪ್ರಚಯದೆಚ್ಚಱು ಮುಟ್ಟುಗುದುದಿಂದು ಕಾಂತೆಯಾ ॥೧೩೨॥

ಕಂ॥ ಇರಲಿರಲೆಚ್ಚಱು ಚಿತ್ತಾಂ ॥
ತರದಿಂ ಪೆಱ[2]ಪಿಂಗಿಪಂತೆ ಕುಸುಮಾವಳಿಯಿ ॥
ರ್ಪಿರವಂ ಪರಿಭಾವಿಸಿ ಬೆ ।
ಚ್ಚರದಿಂದಾನೆನಸುಮಲ್ಲಿ ತಳವೆಳಗಾದೆಂ ॥೧೩೩॥

ಚಂ॥ ತನುಲತೆಯಂ ಮದೀಯ ಕರದಿಂದೆಳೆಯುತ್ತಮೆ ಪತ್ತೆ ಸಾರ್ದು ಮೆ ।
ಲ್ಲನೆ ಮೃದು ಹಸ್ತಪಲ್ಲವಮನಾಂ ಪಿಡಿದೆತ್ತುತೆ ದೇವಿ[3]ಗಿನ್ನಿದೇ ॥
ನಿಸಿವಿರಿದೊಂದು ವಿಸ್ಮೃತಿಯನೆಯ್ದುವ ಕಾರಣವಾವುದೀಗಳಂ ।
ತೆನಗದನೊಲ್ದು ನೇಮಿಸುವುದಿಂ ಭವದಂಘ್ರಿಗೆ ಭೃತ್ಯಳಲ್ಲವೇ ॥೧೩೪॥

ಕಂ॥ ಮನಮನೆಲೆ ದೇವಿ ದಯೆಯಿಂ ।
ದೆನಗೆಂತುಂ ಮುನ್ನಮಿತ್ತಿರಿತ್ತುಂ ಮತ್ತೀ ॥
ಮನದೊಳೊಗೆದಿರ್ದ ಕಾರ್ಯಮ ।
ನೆನಗುಸಿರದೆ ಸುಮ್ಮನಿರ್ಪುದುಚಿತಮೆ ನಿಮ್ಮೊಳ್ ॥೧೩೫॥

ಇಂತು ಮನಂಬುಗುವಂತೆ ಬಿನ್ನವಿಸಿದೆನ್ನ ವಚನಕ್ಕೆ ಕಣ್ದೆಱೆದು ಪರಿವೃತ [4]ವನಿತಾಜನಮಂ ನೋೞ್ಪುದುಂ ಕಾಂತೆ ಲಜ್ಜಾಸ್ವಾಂತೆಯೆಂದಱಿದು—

1. ನಟ್ಟಾಲಿ. 2. ಪೆಂಪಱಿಂ. 3. ಗಿವಿದೇ. 4. ಜನಿತಾ.

ಕಂ॥ ಪದೆದಲರ್ದೊಡವಂ ಲತಿಕಾ।
ಸ್ಪದಮಂ ನೆಱೆ ಮಾಡಿ[ಹರ್ಷದ]ತಿಶಯಮಂ ತೋ॥
ರ್ಪುದೆನುತ್ತಾ ನೆವದಿಂ ಕಳಿ।
ಪಿದೆನೀ ಕನಕಲತೆವೆಱಸು ಕನ್ಯಾಜನಮಂ ॥೧೩೬॥

ಮತ್ತಮಾಗಳ್—

ಉ॥ ದೇವಿ ಭವದ್ದೃಗಂಶುವ ಪಸಾಯಮನೀಗಳೆ ಬಂದು ನಮ್ಮ ಕೇ।
ಳೀವನ ಲಕ್ಷ್ಮಿಗೀಯೆನಲದಂ ಬಗೆಗೊಂಡಿರಪೆಟ್ಟಳಾತ್ಮ ಶೋ॥
ಭಾವಹ ಶಯ್ಯೆಯಿಂ ಪುಳಕ ಪೂರಿತ ಕೋಮಲ ಗಾತ್ರೆ ಕೋರಕ।
ವ್ಯಾವೃತಮಾಗೆ ಕಣ್ಗೊಳಿಪ ಸಲ್ಲಲಿತಾಂಗಜ ವಲ್ಲಿಯೆಂಬಿನಂ ॥೧೩೭॥

ಕಂ॥ ಚಳನದ ಮಂಜೀರದ ಮಂ।
ಜುಳ [1]ರುತಿಗೆಡೆವಿಡದೆ ಶಿಶು ಮರಾಳಾವಳಿ ಬೆಂ॥
ಬಳಿಯಂ ಬರೆ ಬಂದಳ್ ಕೋ।
ಮಳೆ ಕೇಳೀ ವನಕೆ ಲಾಲಿತಾಲಸ ಗಳಿಯಿಂ ॥೧೩೮॥

ಆಗಳೆಲರಲೆಪದಿಂದಲ್ಲುಗುವಲರ್ಗಳಂ ಕುಸುಮ [2]ಶರದ ಸರಿವಱೆ[3]ಯೆಂದು ಶಂಕೆಯನಪ್ಪುಕೆಯ್ಯುತುಂ ಕಿಸುದಳಿರ ಕಂಕೇಲ್ಲಿ ಕುಜಂಗಳಂ ಕಂತು ದವ ಶಿಖಿಯ ದಳ್ಳುರಿಯ ಬಳ್ಳಿವಳ್ಳಿಗಳೆಂದು ಬಿಱುವಾಗುತುಂ ತಮಾಲ ದ್ರುಮದ ತಿಂತಿ[ಣಿ]ಯಂ ತನ್ಮನೋಜ ಗಜ ಘಟಾ ಸಮಾಜಮೆಂದು ಸಾಧ್ವಸಮನೆಯ್ದುತುಂ ಕೈವಂದ ಮಾಕಂದ ಸಂದೋಹಮಂ ಕಂದರ್ಪ ಕೇತು ಮಿಳಿತ ಸ್ಯಂದನ ವೃಂದಮೆಂದೇವೈಸುತುಂ ಕುಟ್ಮಳಿತ ಚಂಪಕ ನಿಕಾಯಮಂ ಕಾಮನಿಸುವ ಕಾಯ್ದ [3]ಪುಣುಂಬುಗಳ ಪೊಡರ್ಕೆಯೆಂದು [4]ಪೆಡಂಮೆಟ್ಟುತುಂ ಬುರುಹಮಂ ಬಿರ್ಚಿ ಬಿಚ್ಚತಂ ನಲಿವ ಮದ ಕಳಾಪಿಗಳ ಮೊತ್ತಮಂ ಚಿತ್ತಜನ ವಿಚಿತ್ರ ಫಲಕಾಯತ ವ್ರಜಮೆಂದಾತಂಕಮನೊಂದುತುಂ ವಿಕಸಿತಂಬೆತ್ತ ಬಯಲ್ದಾವರೆಗಳಂ ಭಾವಭವನದೊಡ್ಡಣಮೆಂದು ಧೃತಿಯಱಿಯುತುಂ ಮೃದುಗತಿಯಿಂ ಸುೞಿವ ಮರಾಳ ಮಂಡಳಿಯಂ ಪುಷ್ಪಸಾಯಕನ ಭಟಾಳಿಯೆಂದು ಭೀತಿಗೊಳುತುಂ ಶುಕ ಪಿಕ ಪ್ರಕರ ಸುಕರ ಪ್ರಣಾದಮಂ ಪ್ರಸವಬಾಣನ ಬಳ ಪಟಹ ಪಟುತರ ರವಮೆಂದು ಪಾಂಗಱಿಯುತುಂ ಮಧು ಸೇವೆಗೆಱಗುವ ಮಧುಕರ ಝಣತ್ಕಾರಮಂ ಮಧುಸಖ ಧನುರ್ಜ್ಯಾ ರುತಿಯೆಂದು ಜಂಗುಜರಿಯುತುಂ ಮಲಯ ಮಾರುತನಂ ಮನಸಿಜನಾ ತಿಱುಪುವಲರ್ಗಣೆಯ ಗಱಿಯ ಗಾಳಿಯೆಂದಾಳಾಪಂಗುಂದುತುಂ ಕುಸುಮಾವಳೀದೇವಿ ಬಂದು—

1. ರತಿಗೆಡೆವಿರದೆ. 2. ಶರನ. 3. ಪುಳುಂಬಿನಂಬುಗಳ. 4. ಹೆಡವಿಸು.

ಕಂ॥ ತೊಳಗುವ ತತ್ಕೇಳೀ ವನ।
ದೊಳಗಣ ಮಣಿಮಂಟಪಕ್ಕೆ ವಂದಾ ಕುಸುಮಾ॥
ವಳಿ ಶೀತಕರೋಪಳ[ದಾ]।
ಲಲಿತ ಸ್ತಂಭಮನೆ ಸೆವ್ಮಿ ತಾಂ ನಿಂದಿರ್ದಳ್ ॥೧೩೯॥

ಕಂ॥ ಎನಗಾತ್ಮ ಗತಮನದನುಸಿ।
ರ್ವನಿತಂ ಬಗೆದಿರುತುಮೆಟ್ಟಱಿಂ ಮೆರೆದಾ ಮಾ॥
ಸಿನಿ ನೆವ್ಮಿ ತನ್ಮಣಿಸ್ತಂ।
ಭ ನಿಜಸ್ಥಿತ ಸಾಲಭಂಜಿಕೆವೊಲಿಸೆದಿರ್ದಳ್ ॥೧೪೦॥

ಚಂ॥ ಹೃದಯದ ಹತ್ತಿರಿರ್ದಪುವು ಪೀನ ಕುಚಂಗಳವಲ್ಲಿ ನಾಡೆ ಪೆ।
ರ್ಚಿದ ಮದನಾಗ್ನಿಯಿಂದೆ ಕಡುಗಂದುಗುಮೆಂದು ಮುಖೇಂದು ಮಂಡಳಂ॥
ಪದೆಪೆಡೆಗೊಂಡು ತನ್ನಮೃತ ಬಿಂದುಗಳಂ ಬಿಡುತಿರ್ದುದೆಂಬವೋಲ್।
ಸುದತಿಯ ತೋಱಗಣ್ಬನಿಗಳಿಂತುಗುತಿರ್ದುವು ಚೂಚುಕಂಗಳೊಳ್ ॥೧೪೧॥

ಮ॥ ವಿಳಸತ್ಕುಟ್ಟಿಮದಲ್ಲಿ ಮಾಪೊರ್ೞಟಿವ ತನ್ನಾಕಾರಮಂ ಮತ್ತಮೊ।
ರ್ವಳಿವಳ್ ಕೇಳ್ದಪಳೀ ರಹಸ್ಯಮನೆನುತ್ತುತ್ಸಾರಿತಂಗೆಯ್ವವೋಲ್॥
ಚಳನಾಂಗುಷ್ಠದಿನುರ್ವಿಯಂ ಬರೆಯುತುಂ ತಾನೆನ್ನ ವಕ್ತ್ರಾಬ್ಜಮಂ।
ಡಳಮಂ ನೋಡದೆ ಕಾಂತೆ ನಮ್ರ ಮುಖಿಯಾದಳ್ ನಾಡೆ ಮೇಧಾವಿಳಾ ॥೧೪೨॥

ಅದನಱಿದು—

ಕಂ॥ ಆನಿಂತು ನಿಮ್ಮ ಹೃದಯಮ।
ದೇನಲ್ಲೆನೆ ದೇವಿ ನಾಣ್ಚದುಸಿರ್ವುದು ನೀವೆಂ॥
ದೀ ನುಡಿಯನಾಗಳಂತೆನಿ।
ತಾನುಂ ಲಜ್ಜೆಯನೆ ಚಿತ್ತದಿಂ ತೊಲಗಿಸಿದೆಂ ॥೧೪೩॥

ಆಗಳ್—

ಚಂ॥ ಪುದಿದ ಮನೋಗತಾರ್ಥಮನಪಂ ನೆಱೆ ಜಿಹ್ವೆಗೆ ತಂದು ಪೇೞಲೀ।
ಯದೆ ಮೊಗಕಡ್ಡಮಿರ್ಪ ಕಡು ನಾಣ್ಚಿಕೆಯಂ ತೊಳೆವಂತೆ ತೋಱಿ ಬಾ॥
ಷ್ಪದ ಪಸಿದಂಪಱಂ ಸುಱಿಯುತುಂ ಕುಸುಮಾವಳಿದೇವಿ ನಾಡೆ ನೋ।
ಡಿದಳಸಿಮೇಷವೃತ್ತಿ ನೆಲೆವೆರ್ಚೆ ಮದೀಯ ಮುಖಾರವಿಂದಮಂ ॥೧೪೪॥

ಅಂತು ನೋಡಿ—

ಮ॥ಪ್ರ॥ ಮನದೊಳ್ ತೀವಿರ್ಪ ತದ್ವಲ್ಲಭನವಯುವಮಂ ದಾಂಟದತ್ತಿರ್ದುದೋ ತ।
ಜ್ಜನಿತಾನಂಗಾಗ್ನಿ ಧೂಮ ಪ್ರತತಿಯೊಳೆ ಪದಂಗಾಣದೇನಿರ್ದುದೋ ನಾ॥
ತನ ಚಿಂತಾ ಧ್ವಾಂತ ಕೂಪಾಧರದ[1]ತಳದೊಳೀಂ ತೊಟ್ಟನೞ್ದಿರ್ದುದೋ ತಾ।
ನೆನೆ ಪೊಣ್ಮಿತ್ತಿಲ್ಲ [2]ಮಾತಂಗನೆಯ ಪದನದೊಳ್ ನಾಡೆಯುಂ ಕ್ರೀಡೆ
ಯಿಂದಂ ॥೧೪೫॥

ಅಂತಿರ್ದುಮೆಂತಾನುಮಿಂತೆಂದಳ್—

ಚಂ॥ ನಿನಗುಸಿರಲ್ಕೆ ನಾಣ್ಚುವೆನೆ ಕೇಳ್ ಕಳಭಾಷಿಣಿ ನಾಣ್ಚುವಲ್ಲಿ ನೀ।
ನೆನಗನುರೂಪಮಲ್ಲಳೆ ವಿಭೇದ[3]ಮಡಪ್ಪೊಡೆ ನಿನ್ನೊಳೆನ್ನೊಳೆ॥
ಳ್ಪನಿತುಮದುಂಟೆ ಮನ್ಮನಮಣಂ ಮರುಳಾದುದು ತಾನಮೂರ್ತಿ[4]ವೆ।
ತ್ತಿನಿತೞನಿರ್ದೆನಾನುಸಿರದಿನ್ನುಸಿರ್ವೆಂ ನೆಱೆ ತತ್ಪ್ರಪಂಚಮಂ ॥೧೪೬॥

ಯುವತಿಯರೆಲ್ಲಿಯುಂ ಪುರುಷರಂ ನಡೆ ನೋಡಿ ಸಮಂತು ಕೂಡಿ ಸೋ।
ಲ್ತವರೊಳರಂತುಮಲ್ಲದೆನಸುಂ ಪಟಚಿತ್ರದ ರೂಪುಗೊಂಡುಮೆ॥
ನ್ನವೊಲೞಿವಲ್ಲಿ ಲಜ್ಜೆ ನೆಱೆ ಮೞ್ಗಿ ಮನಂ ಮರುಳಾದ ಕಾಮಿನೀ।
ನಿವಹ[5]ಮದೀಕ್ಷಿಸಲ್ಕೆ ಕಳಭಾಷಿಣಿ ಪೇೞ್ ಪೆಱತುಂಟೆ ಲೋಕದೊಳ್॥೧೪೭॥

ಬಗೆಗೆ ವಿಚಿತ್ರವೊಂದು ಪಟಚಿತ್ರಮನೀಕ್ಷಿಸಿ ಸೋಲ್ತಳೆಂದು ನೀಂ।
ಬಗೆಯದಿರೆನ್ನನಾನುಸಿರದಿರ್ಪೆನೆ ಕೇಳ್ ಕಳಭಾಷಿಣಿ ದೃಷ್ಟಮಾಗೆ ನೆ॥
ಟ್ಟಗೆ ತನುಗಂ ಮನಕ್ಕಮಿನಿಯಂ ನೆಱೆ ತೋಱೆ ಮನೋಜ[6]ತಾಪದು।
ಬ್ಬೆಗಮನೆ ಮಾಳ್ಪನಲ್ಲದೊಡೆ ಪೇೞ್ ಪುದಿದಿರ್ಪೆನೆ ವಿಸ್ಮೃತಿತ್ವಮಂ ॥೧೪೮॥

ಮ॥ ತರುಣೀ ಕೇಳ್ ನಿನಗೇನನೆಂದಪೆನಿದಂ ಕಂದರ್ಪದೇವ ಪ್ರಭಾ।
ಸುರ ಸಮ್ಮೋಹನ ಮೂರ್ತಿ ಸಂಕ್ರಮಿ[ಸೆ ಚೇತೋರಾಗಮುಣ್ಮಿತ್ತು ಬಿ]॥
ತ್ತರಿಸಿತ್ತಾವರಿಸಿತ್ತು ಶಂಕೆವಡೆಯಿತ್ತಸ್ಪಂದವಾಯಿತ್ತು ಬೇ।
ರ್ವರಿದುರ್ಬಿತ್ತವಲಂಬಿಸಿತ್ತು ಮಿಗೆ ಮೆಯ್ವೆರ್ಚಿತ್ತು ಮಚ್ಚಿತ್ತದೊಳ್ ॥೧೪೯॥

---

1. ಕಿಳಿದೊಳ್ತೊಟ್ಟ. 2. ಮತ್ತಂ. 3. ಮಸಪ್ಪೊಡೆ. 4. ಮಿಂ। ತಿನಿತೞಿ
5. ವನೀಕ್ಷಿಸಲ್ಕೆ. 6. ನಾಹ.

ತನುವಂ ತೊಟ್ಟನೆ ಸೋಂಕುವಂ ತೊಲಗುವಂ ಮೆಯ್ದೋಱುವಂ ಜಾಱುವಂ ।
ಮನಮಿತ್ತಂತಮರ್ದಪ್ಪುವಂ ತಡೆಯದಲ್ಲಿಂ ತಪ್ಪುವಂ ಮನ್ಮಥಾ ॥
ವನಿಯೊಳ್ ನೆಟ್ಟಗೆ ನಿಲ್ವನಾ ಕ್ಷಣದೆ ಸಾರ್ವಂ ಕಾಂತನೇವೇೞ್ವೆನಾ ।
ತನ ಕೆಯ್ತ್ತಂ ಸಖಿ ತಾಂ ಮರುಳ್ಗೊಳಿಸುತಂ[1]ತಿರ್ದತ್ತು ಮಚ್ಚಿತ್ತಮಂ ॥೧೫೦॥

ಇದನೇವೇೞ್ದಪೆನೆಯ್ದೆ ವಂದೆಳಸಿ ಮತ್ಪರ್ಯಂಕಮಂ ಪೊರ್ದುವಂ ।
ಪಡೆದಾಸೀಕ್ಷಿಸೆ ಪೋಪನೊಯ್ಯನೆ ಮುಸುಂಕಂ ಪೊಕ್ಕು ಮೆಯ್ವೆತ್ತುವಂ ॥
ಪಡೆಪಿಂದಪ್ಪುವಲಂಪು ಮಿಕ್ಕು ಭುಜವಲ್ಲೀ ಯುಗ್ಮಮಂ [ಸಾರ್ಚಿ]ಪ ।
ಕ್ಕದಿನೇೞ್ದಾಗಳೆ ಪೋಗಿ ಕಾಡುವನವಂ ಕಂದರ್ಪದೇವಂ ಸಖೀ ॥೧೫೧॥

ಕಂ॥ ಕಳಭಾಷಿಣಿ ನಿನಗಾಂ ನೆಱೆ ।
[2]ತಿಳಿವಂತಿರಲೇನನುಸಿರ್ವೆನಾತನ ಕೆಯ್ತ್ತಂ ॥
ಗಳನವನೆನುತಂ ಜಾನಿಸಿ ।
ತಳವೆಳಗಿಂ ಜರಿಯುತಿರ್ದು ಮತ್ತಿಂತೆಂದಳ್ ॥೧೫೨॥

ಉ॥ ತನ್ನಯನಕ್ಕೆ ತೋಱಿ ಮನಮುಂ ಮಿಗೆ ಮೋಹಿಸಿ ಮನ್ಮಥಾಗ್ನಿಗೆ ।
ನ್ನನ್ನೆಱೆ ಪಕ್ಕುಮಾಡಿ ಪಿರಿದುಂ ಪಟಚಿತ್ರಮುದಾಂ ಮಗುಳ್ದು ನೋ ॥
ಟ್ಪಿನ್ನೆಗಮಿಲ್ಲದೇಕಸುಕೆಯಲ್ಲಿಯೆ ತೊಟ್ಟನೆ ಮಾಯಮಾಯ್ತು ಮೇಣ್ ।
ಕೆನ್ನಮಡಂಗಿಪೋಯ್ತು ಕಳಭಾಷಿಣಿ ಪೇೞಱಿದಪ್ಪೆನಪ್ಪೊಡಂ ॥೧೫೩॥

ಆ ಚಿತ್ರಪಟಮಂ ಚಕಿತ ಮತಿಯಾಗಿ ಬೆಸಗೊಳ್ವುದುಮದನಭೀಕ್ಷಿಸಲುಪ[3]ಕ್ರಮಿಸುವುದುಂ ಕಂತು ವಿಭ್ರಾಂತಿಯೆನುತ್ತುಮಾನಿಂತೆಂದೆಂ—

ಮ॥ ಅದನಾನಾಗಳೆ ದೇವಿ ತಂದೆನೆನುತಾದಂ ತೋಱೆ ತಚ್ಚಿತ್ರ ರೂ ।
ಪದೊ[4]ಳೊಟ್ಟೈಸಿಯೆ ದಿಟ್ಟಿ ಬೀೞೆ ತನುವಂ ತಳ್ಪೊಯ್ಯೆ ಕಂಪಂ ಕಡಂ ॥
ಗಿದ ತತ್ಕಂಪಮನೊತ್ತಿ ಸಂಭವಿಸೆ ಘರ್ಮಂ ಘರ್ಮಮಂ ಬೀಱೆ ಪೊ ।
ಣ್ಮಿದ ಚಂಚತ್ಪುಳಕಂಗಳೊತ್ತರದೊಳಂತಾ ಕಾಂತೆ ತೇಂಕಾಡಿದಳ್ ॥೧೫೪॥

ಅಂತಿರ್ದು ಮೊಗಮಂ ಮೆಲ್ಲಮೆಲ್ಲನೆ ನೋಡೆ—

ಚಂ॥ ನಗೆಗೆಡೆಯಪ್ಪುದಾಯ್ತು ಕಳಭಾಷಿಣಿ ಮೇಣಿದು ಸತ್ಯಮಪ್ಪುದೇಂ ।
ಬಗೆವೊಡೆ ಚಿತ್ರರೂಪಮೆನಗೀ ಮದನಾನಲದಿಂದೆ ಬೇವುದಾ ॥

1. ತರ್ದತ್ತು. 2. ತಿಳಿವಂತೇನ. 3. ಸಮಿಸುಗಿಕಂತು. 4. ಳಿಟ್ಟೈಸೆಯೆ.

ವಗನಿದು ಸತ್ಯಮಾದುದೆನುತಂ ಬಿದಿಯಂ ಸಲೆ ಬಯ್ದು ಸುಯ್ದು ಮೆ।
ಯ್ದೆಗೆದು ಕನಲ್ದೊನಲ್ದು ಕುಸುಮಾವಳಿ ಕಣ್ಬನಿಯಂ ಕಲಿಲ್ಚಿದಳ್ ॥೧೫೫॥

ಅದನಱಿದು—

ಕಂ॥ ಇದು ದೇವತಾ ವಿಚಿತ್ರಿತ।
ಮದಱಿಂದೀ ಚಿತ್ರರೂಪ ಕಂದರ್ಪಂ ಸ।
ನ್ನಿದನಪ್ಪನಲ್ತೆ ನೀಂ ನಂ।
ಬದೆ ನೆಱೆ ಸಂದೇಹಮೊಂದವೇಡಿಂದುಮುಖೀ ॥೧೫೬॥

ಅನಿತು ನುಡಿದು ಸಂತೈಸುತಿರ್ಪಿನಮಾ ಕನ್ಯಕಾ ಜನಂ ಕುಸುಮಾಭರಣಮುಮಂ ಲತಾಮಂಟಪಮುಮಂ ವಿರಚಿಸಿದೆವೆಂದು ಬಂದು ಬಿನ್ನವಿಸೆ—

ಚಂ॥ ವಿರಚಿಸಿದಾ ವಿಚಿತ್ರ ಕುಸುಮಾಭರಣೋತ್ಕರಮಂ ಲಸಲ್ಲತಾ।
ಶರಣಮನೊಲ್ದು ನೋಡಿ ಮುದಮಂ ನೆಱೆ ಮಾಡುವು[1]ದೀಕೆಗಳ್ಗೆ ಬೆ॥
ಚ್ಚರದೊಳೆ ದೇವಿ ನೀನೆನುತುಮಾ ಕ್ಷಣದಿಂದೊಡಗೊಂಡು ಬಂದೆನಾಂ।
[2]ಪಱಿಮಱಿಯಾಡುತುಂ ಬಿಡದೆ ಮುಂಬರೆಸುಯ್ಯಲರ್ಗುನ್ಮದಾಳಿಗಳ್ ॥೧೫೭॥

ಅಂತು ಬರ್ಪುದುಮಲ್ಲಿ ಪೊಂಬಾಳೆಯ ಕಂಬಂಗಳಿಂ ಪಚ್ಚೆಯ ಪಲಗೆಗಳಿಂ ಬಕುಳದ ಬೋದಿಗೆಗಳಿಂ ಬಂಧೂಕದ ಬಾರವಟ್ಟೆಗೆಗಳಿಂ ಕೇತಕಿಯ [3]ಕಂಟವಲಗೆಗಳಿಂ ಕುರುವಕದ ಕೀಲ್ವಿಡುವಂಗಳಿಂ ಮಂದಾರದ ಮೊಳೆಸಾಲ್ಗಳಿಂ ಕಂಕೇಲ್ಲಿಯ ಕವರ್ಗಟ್ಟುಗಳಿಂ ನಂದ್ಯಾವರ್ತದ ನವಪದಂಗಳಿಂ ಚಂಪಕದ ಚುಂಚು ಲೋವೆಗಳಿಂ ಉತ್ಪಲದುಪಗೃಹಂಗಳಿಂ ಸೇವಂತಿಗೆಯ ಸೆಲ್ಲೆವನೆಗಳಿಂ ವಾಸಂತಿಯ ವೇದಿಕೆಗಳಿಂ ತಿಲಕದ ತಲೆಗಿಂಬುಗಳಿಂ ಸುರವೊನ್ನೆಯ ಹಸೆಗಳಿಂ ದಾಳಿಂಬದ ದ್ವಾರಂಗಳಿಂ ಚೂತದ ಚಂದ್ರಶಾಲೆಗಳಿಂ ಸುರಗಿಯ ಸಾಲಭಂಜಿಕೆಗಳಿಂ ಶಿರೀಷದ ಸೂಸಕಂಗಳಿಂ ಮುಚುಕುಂದದ ಮೂಲ್ಯಂಗಳಿಂ ಪೊಂದಾವರೆಯ ಪಲಗೆಗಟ್ಟುಗಳಿಂ ಮುತ್ತದ ಮತ್ತವಾರಣಂಗಳಿಂ ಪಾಟಲದ ಪತ್ರಭಂಗಂಗಳಿಂ ಲುಂಗದ ಲಂಬಣಂಗಳಿಂ ಚಂದನದ ವಂದನ ಮಾಲೆಗಳಿಂ ಗೊಜ್ಜೆಯ ಸಂಕಡಿಗಳಿಂ ಪನ್ನೀರ ನೀರ್ದಳಿಪದಿಂ ಕತ್ತುರಿಯ ಕಾಲ್ವಳಿಗಳಿಂ ಕಪ್ಪುರವಳುಕಿನ ಕಡೆಗಳಿಂ ಕಮಲದ ಸರಂಗಳಿಂ ಬಾಟದ ಬಿಜ್ಜಣಿಗೆಗಳಿಂ ಬಿತ್ತರಿಪ ಕಂಪಿನ ಕಡಾರಮುಂ ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು—

1. ದೇಕೆಗಳ್ಗೆ. 2. ಪರಿಪರಿಯಾಡುತುಂ. 3. ಕಂಠವಲಗೆಗಳಿಂ.

ಉ॥ ನೋಡುತಿರಲ್ಕೆ ಕಾಂತೆ ಲತಿಕಾಗೃಹಮಂ ನೆಱೆ ತನ್ನ ಬಾಣದೊಳ್ ।
ನೋಡಿ ನಿಶಾತಮಂ ತಳೆದ ಪೂವಿನ ಬಾಣಮನುರ್ಚಿ ನಾರಿಯೊಳ್ ॥
ಪೂಡಿ ಮನೋಜನೋವದಿಸೆ ನೊಂದು ಬಸಂಗಿಡೆ ಬಂದು ಮೆಯ್ಯನೀ ।
ಡಾಡಿವಳಾಗಳಂತೆ ಕಡುದಣ್ಪಿಡೆ ಪಾಸಿದ ಪಲ್ಲವಂಗಳೊಳ್ ॥೧೫೮॥

ಕಂ॥ ತಳಿರ್ವಸೆಯೊಳಿರ್ದ ಕುಸುಮಾ ।
ವಳಿಯೆಸೆದಳ್ ರಾಹುಗಳ್ಕಿ ರತ್ನಾಕರದೊಳ್ ॥
ಪೊಳೆವ ನವ ವಿದ್ರುಮ ಲತಾ ।
ವಳಿಯೊಳ್ ಸಂದಿರ್ದ ಬಾಲ ಶಶಿಲೇಖೆಯವೋಲ್ ॥೧೫೯॥

ಇಂತು ವಿರಹದೆ ದೇಹಧಾರಿಣಿಯಾಗಿರ್ದಳಂ ಕಂಡು—

ಉ॥ ಬೀಸುತುಮುಲ್ಲಸತ್ಪ್ರಸವ ವೀಜನಮಂ ಕುಳಿರ್ವಾವಿ ನೀರ್ಗಳಿಂ ।
ಸೂಸುತುಮಂಗವಲ್ಲಿಗಲರ್ವಚ್ಚಮನಿಕ್ಕುತೆ ಪದ್ಮ ಪತ್ರಮಂ ॥
ಭಾಸುರ ಚಂದನ [1]ದ್ರವದೊಳದ್ದಿ ಕುಚಂಗಳೊಳೊಟ್ಟುತುಂ ಸಮಂ ।
ತಾ ಸತಿಗೊರ್ಮೆಯುಂ ಬಿಡದೆ ಮಾಡಿದೆನಾಂ ಶಿಶಿರೋಪಚಾರಮಂ ॥೧೬೦॥

ಕಂ॥ ಪಗಲಿರುಳೆಂಬಿನಿತಂ ನೆ ।
ಟ್ಟಗೆ ಮರೆದಾಂ ತರುಣಿಯರ್ಸಮೇತಂ ಸಲೆ ಸಾ ॥
[2]ವಗಿಸುತ್ತಿರ್ದೆಂ ದೇವಿಯ ।
ನಗಣಿತ ಶಿಶಿರೋಪಚಾರದಿಂದಿನ್ನೆವರಂ ॥೧೬೧॥

ಆ ವಿರಹದಳುರ್ಕೆಯಿಂ ಕುಸುಮಾವಳಿ ದೇವಿ ಲಾವಣ್ಯ ಶೇಷಮಾಗಿ ಬಡವಾಗಿ—

ಕಂ॥ ಮಸೆಮಸೆದು ಕೃಶಮನೆಯ್ದಿದ ।
ಕುಸುಮಾಸ್ತ್ರನ ತೊಳಪ ತೋಳ ಬಾಳೆನೆ ಸಮ್ಮೋ ॥
ಹಿಸುವುದುರು ವಿರಹ ಕೃಶದಿಂ ।
ಕುಸುಮಾವಳಿ ದೇವಿಯೆಸೆವ ಲಲಿತ ಲತಾಂಗಂ ॥೧೬೨॥

ಮ॥ಸ್ರ॥ ಸ್ಮರ ತಾಪೋದಗ್ರದಿಂ ಬೆಳ್ಪೊಗೆದು ತನುವೆಯಾಯ್ತಂಗಮಂಗಕ್ಕೆ ತಂದಾ ।
ಚರಿಸುತ್ತಾಸಿರ್ಪ ಶೈತ್ಯ ಕ್ರಿಯೆಯೊಡನದು [3]ಬಿಣ್ಪಾಯ್ತುದಾ ಬಿಣ್ಪಿನಿಂದ ॥

1. ದ್ರವದೊಳದ್ದಿ. 2. ಪಸಿತುಸುರುತಿರ್ದೆಂ. 3. ಬಿಣ್ಪಾಯ್ತುವಾ.

ತ್ತಿರದೞ್ಗೆತ್ತೆಂಬಿನಂ ವಕ್ತ್ರದೆ ನುಡಿ ಜಡಮಾಗುತ್ತುಮಿರ್ಪಲ್ಲಿ ಮತ್ತಂ।
ಕರುಣಂ ಬರ್ಪಂತಿರಸ್ರ ಸ್ಥಗಿತ ನಯನದಿಂ ನೋಡಿದಳ್ ಕಾಂತೆಯೆನ್ನಂ॥೧೬೩॥

ಉ॥ ನೀನಿದು ದೇವ ಚಿತ್ರಿತವೆ ತಪ್ಪದು ಸನ್ನಿದಮಪ್ಪುದೆಂದು ಪೇ।
ೞ್ದೀನಿನಿತೊಂದು ಮಾತು ಕಳಭಾಷಿಣಿ ಪೋ ಪುಸಿಯಾಯ್ತು ನೋೞ್ಪೊಡೆ॥
ತ್ತಾನುಮದಾರ್ಗೆ ಸಿದ್ಧಿಸಿತು ಚಿತ್ರದ ಬೇಟಮೆನುತ್ತೆ ಸುಯ್ದು ತ
ನ್ಮಾನಿನಿ ಜಾನಿಸುತ್ತಿರದೆ ತಾಂ ಸುರಿದಳ್ ಪಿರಿದಶ್ರು ವಾರಿಯಂ ॥೧೬೪॥

ಅದಂ ಕಂಡಾನತಿ ಚಕಿತ ಚಿತ್ತೆಯಾಗಿ—

ಮ॥ ಇದನೀಗಳ್ ಪುಸಿಯೆಂದು ಕಲ್ಪಿಸದಿರಿನ್ನೆಂತಾದೊಡಂ ತಪ್ಪದ।
ಪ್ಪುದು ತಾನೇಕೆನೆ ದೇವಿ ನಿನ್ನ ನೆನಪಂ ಕಾತ್ಯಾಯನೀ ದೇವಿ ಮಾ॥
ೞ್ಪುದನೇಂ ಮಾಣ್ಬಳೆ ತನ್ನ ದತ್ತಸುತೆ ನೀನೇನಲ್ಲಳೇ ಧೈರ್ಯ ಸಂ।
ಪದೆಯಾಗಿರ್ಪುದೆನುತ್ತೆ ನಂಬಿಸಿದೆನಾನಿಂತೆಂದು ಮೇಧಾವಿಳಾ ॥೧೬೫॥

ಇಂತು ನಂಬಿಸಿ ನುಡಿದುದಂ ಬಗೆಗೊಳ್ಳದೆ ಮತ್ತಮಿಂತೆಂದಳ್—

ಉ॥ ಪೋದುದನಂತ ಕಾಲಮೆನಗೀ ಮದನಾನಳನೊಳ್ ಪೊದೞ್ದುಮೇ।
ನಾದುದು ನಿನ್ನ ಮಾತು ಕಳಭಾಷಿಣಿ ಪೇೞ್ ನಿನಗೊಂದು ತಪ್ಪನು॥
ತ್ಪಾದಿಸಲೇಕೆ ನಾಂ ಸುಕೃತ ಶೂನ್ಯೆಯೆನೆಂದತಿ ಗದ್ಗದ ಪ್ರಣಾ।
ದೋದಿತ ಕಂಠೆಯಾಗಿ ಕುಸುಮಾವಳಿ ಮೂರ್ಛೆಯನಾಗಳೆಯ್ದಿದಳ್ ॥೧೬೬॥

ಆಯಿರವಂ ನಿರೀಕ್ಷಿಸಿ ಕರಂ ವಿಪರೀತಮೆ ನೋಡಿ ದೇವಿಯಿ।
ರ್ಪಿಯಿರವಿಂತಿದರ್ಕೆ ಶಿಶಿರಕ್ರಿಯೆ ಕೊಳ್ಳದು ಪೋಗಿ [1]ತೋೞು ಕಾ॥
ತ್ಯಾಯಿನಿ ದೇವಿಯಂ ಬೞಿಕಮಾವುದನಾದೊಡೆ ಮಾೞ್ಪೆನೆಂಬಭಿ।
ಪ್ರಾಯಮನಪ್ಪುಕೆಯ್ದೆನಣಮಾ ಕ್ಷಣದಿಂ ನಯ ಚಿತ್ತ ವೃತ್ತಿಯೊಳ್ ॥೧೬೭॥

ಅಂತು ಬಗೆದಾಂ ಬರ್ಪನ್ನೆವರಂ ದೇವಿಗೆ ನೀಂ ಶಿಶಿರೋಪಚಾರಮ ನಾಚರಿಸುತಿರ್ಪುದೆಂದು ತರುಣೀ ಜನಕ್ಕೆ ಪೇೞ್ ಕನಕಲತೆವೆರಸು ಕಾತ್ಯಾಯನೀ ದೇವಿ[ಯೆಡೆ]ಗೆ ಪೋಗಿ—

ಮ॥ ಭವೆ ನಿನ್ನೀ ಪ್ರಿಯ ದತ್ತ ಪುತ್ರಿಕೆಗೆ ಚಿತ್ರಾವಸ್ಥೆ ಕೈಕೊಂಡುದೆ।
ನ್ನ ವಶಂ ತಾನಣಮಲ್ತು ದೇವಿ[2]ದಯೆಯಂ ನೀಂ ಮಾೞ್ಪುದೆಂದರ್ಥಿಸು॥

1. ದೂಱು, 2. ದಯೆಯಿಂ.

ತ್ರವೆ ಕಾತ್ಯಾಯನಿ ದೇವಿಗೀಕೆವೆರಸಾಗಳ್ ನಮ್ರೆಯಾಗಿರ್ದೆನಾ ।
ನವಧಾನಂ ಧೃತಿಯಿಂ ಕಟಲ್ಬುದ್ದು ಪಿರಿದಾನುಂ ಪೊೞ್ತು ಮೇಧಾವಿಳಾ ॥೧೬೮॥

ಕಂ ಕಂದರ್ಪ ದೇವನಂ ಪದೆ ।
ಪಿಂದಮೆ ನೀಂ ಕಾಣ್ಬೆ ಕಾಂತೆ ಪಟಚಿತ್ರಮನಾ ॥
ನಂದದೊಳೆ ಪೂಜಿಸುತ್ತುಮಿ ।
ರೆಂದೊಗೆದತ್ತೊಂದು ದಿವ್ಯನಾದಮದಾಗಳ್ ॥೧೬೯॥

ಮ॥ ಕಿವಿಯಂ ತಾಗೆ ತದೀಯ ದಿವ್ಯ ರುತಿ ಮೇಘಾರಾವಮಂ ಕೇಳ್ದ ಕೇ ।
ಕಿವೊಲತ್ಯುತ್ಸವ ಚಿತ್ತೆಯಾಗಿ ದೆಸೆಯಂ ನೋಡುತ್ತುಮೆಟ್ದ್ದ[1]ಸ್ವಯಂ ॥
ಭುವನಾ ದೇಸೆಯ ವಾಕ್ಯವೆಂದಱಿದು ಬೀೞ್ಕೊಂಡಿನ್ನಿದಾಯ್ತಿನ್ನ ಕಾ ।
ರ್ಯವೆನುತ್ತುಂ ಕುಸುಮಾವಳೀ ಸತಿಯ ಸಾರ್ಗೆಯ್ತುಂದೆನೌತ್ಸುಕ್ಯದಿಂ ॥೧೭೦॥

ಶಾ॥ ಆ ವೃತ್ತಾಂತ ಸುಧಾಂಬು ಸೇಚನದಿನಾಗಳ್ ಕಾಂತೆಯೊಳ್ ಬೆರ್ಚಿದಾ ।
ಭಾವೋದ್ಭೂತ ದವಾನಳೋತ್ಕಟಮನಾದಂ ತೂಳ್ದಿ ತದ್ದಿವ್ಯ ಶೋ ॥
ಭಾ ವಿಸ್ತಾರತೆವೆತ್ತ ಚಿತ್ರಪಟಮಂ ತಂದಾವಗಂ ಪೂಜಿಸು ।
ತ್ತಾ ವಾರ್ತಾ ಪರಮ ಪ್ರಸಂಗಮನೆ ಮಾಡುತ್ತಿರ್ಪೆನಾನೊಲ್ಮೆಯಿಂ ॥೧೭೧॥

ಕಂ॥ ಕೆಲವು ದಿನಮಿಂತು [2]ಮಿಱಿಱ[3]ಯು ।
ಮೆಲೆ ಕಳಭಾಷಿಣಿ ನೃಪಾಂಗಜಂ ನಿನ್ನಯ [3]ಕ ॥
ಣ್ಬೊಲನಪ್ಪನೆಂದು ಪೇೞ್ದನು ।
ತಲಂಪಿನಿಂ ಕಾಂತೆಯೆನ್ನನುರ್ವಿಸುತಿರ್ಪಳ್ ॥೧೭೨॥

ಮ॥ ದಿನಮಂ ಭಂಜಿಸಲಿಂತು [4]ಕಾಂತೆಯನುವಿಕ್ಕೆಟ್ತುಂದೆನೆಂದೀ ವನ ।
ಕ್ಕೆನಗಾ ದೇವಿಯ ದಿವ್ಯ ವಾಕ್ಯವೊದವಿಗಳ್ ಕಾಣೆಸೆತ್ತಿನ್ನನೀ ॥
ವನಿತಾಕಾರ ಸದೃಕ್ಷ ಚಿತ್ರಮುದಱಿಂದಾಂ ಕಂಡು ಕಂದರ್ಪ ದೇ ।
ವನೆನುತ್ತಬ್ಜದ ಕಾಣ್ಕೆಗೊಟ್ಟು ಪೊಡೆವಟ್ಟಿಂ ಬಂದು ಮೇಧಾವಿಳಾ ॥೧೭೩॥

ಕಂ॥ ಕಳಭಾಷಿಣಿ ಪೇೞ್ದುದನಾ ।
ಗಳೆ ನೆಱೆ ಕೇಳ್ದೊಯ್ಯನೊರ್ಬರೊರ್ಬರ ಮೊಗಮಂ ॥

1. ಸಧಿ. 2. ಮಿಗೆಯು. 3. ಸ॥ಣ್ಬೊಲ. 4. ಕಾಂತೆಯನುವಕ್ಕೆ.

ಘಳಿಲನೆ ವೀಕ್ಷಿಸಿ ಮೇಧಾ ॥
ವಿಳನುಂ ಕಂದರ್ಪದೇವನುಂ ಬೆಱಗಾದರ್ ॥೧೭೪॥

ಚಂ॥ ಎನಗದು ಸತ್ಯಮಾಯ್ತೊಗೆದ ದಿವ್ಯ ರವಂ ನೆಱೆ ಪೇೞಲೆನ್ನ ಮಾ ।
ತನೆ ಮಿಗೆ ಕೇಳ್ದು ಬಾಳ್ವ ಕುಸುಮಾವಳಿ ದೇವಿಗೆ ದೇವ ಸತ್ಯಮೆಂ ॥
ದೆನಿಪುದು ಬಂದು ನೀಮೆನುತುಮಾ ಕಳಭಾಷಿಣಿ ಗಾತ್ರ ವಲ್ಲರೀ ।
ವಿನಮಿತ ಗಾತ್ರೆಯಾದಳವನೀಶ ಮನೋಜ ಪದಾಬ್ಜ ಮೂಲದೊಳ್ ॥೧೭೫॥

ಮ॥ಸ್ರ॥ ಮೊದಲೊಳ್ ಕಂಡಲ್ಲಿ ನೀವೀಕೆಗೆ ಮಿಗೆ ಮೊಗಮಿತ್ತಿರ್ದಿರಿರ್ದಂದದಿಂ ಮಾ ।
ಱ್ಪುದು ದೇವರ್ ಪೂಣ್ದಿವಳ್ಗೆಂದುದನೆನುತಮೆ ಮೇಧಾವಿಳಂ ಬಿನ್ನಪಂ ಗೆ ॥
ಯ್ವುದನಾಡಂ ಕೇಳ್ದು ನೀನೆಂಬಿನಿತನಬಲೆ ದಲ್ ಮಾೞ್ಪೆವೇೞೆಂದೆನು[1]ತ್ತೊ ।
ಪ್ಪಿದನೆಟ್ಟಂ ಲೀಲೆಯಿಂದಂ ಕೃತಿರತಿ ರಮಣಂ ಸಾಹಸೋದ್ದಾಮಭೀಮಂ॥೧೭೬॥

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾ ಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ಕುಸುಮಾವಳೀ ಲಲಿತೋದಯ
ವರ್ಣನಂ ಕಮನೀಯ ರೂಪ ವರ್ಣನಂ
ಚಿತ್ರಪಟ ದರ್ಶನ ವರ್ಣನಂ
ಕುಸುಮಾವಳೀ ವಿರಹ ವರ್ಣನಂ
ದ್ವಾ ದ ಶಾ ಶ್ವಾ ಸ ಂ

---

1. ತ್ತಿ।ದನೆಟ್ಟಂ.

# ತ್ರಯೋದಶಾಶ್ವಾಸಂ

ಕಂ॥ ಶ್ರೀಪದ ನವ ನಖ ಕಿರಣ ಕ।
ಳಾಪಂ ಕುಡಿಯಿಡೆ ಮುಖೋರ್ವಿಯೊಳ್ ಕಂದರ್ಪ॥
ಕ್ಷ್ಮಾಪತಿ ಪದೆಪಿಂ ಪರಮ ವಿ
ರೂಪಾಕ್ಷ ಮಹೇಶ ವಾಸದಿಂ ಪೊಱಮಟ್ಟಂ ॥೧॥

ತಳದರ್ಾಗಳ್ ನೃಪಕಂತುಗೆ।
ಫಳಿಲನೆ ಕೈಗೊಟ್ಟು ಪರಿಚಯಂಬೆತ್ತುದಱಿಂ॥
ಕಳಭಾಷಿಣಿ ಮಿಗೆ ಮುದಮಂ।
ತಳೆದೊಯ್ಯನೆ ಕುಸಿದು ವದನಮಂ ವೀಕ್ಷಿಸಿದಳ್ ॥೨॥

ಆಕೆಯವಲೋಕ ಭಾವಮನಱಿದು—

ಕಂ॥ ಏನೆಲೆ ಕಳಭಾಷಿಣಿ ಪೇೞ।
ತೇನಾನುಮನೊಂದನೆಮಗೆ ಬಿನ್ನವಿಪಂದಂ॥
ತಾನದು ತೋಱುದು ನಿ।
ನ್ನೀ ನಯನದೆ ತುಱುಗಿ ನೋಟ್ಪ ತೆಱದಿಂದೀಗಳ್ ॥೩॥

ಎಂದಿಂತು ಸುಪ್ರಸನ್ನ ಭಾವದಿಂ ಬೆಸಗೊಂಡಾಗಳ್—

ಮ॥ ಭವದೀಯಾಂಘ್ರಿಗೆ ಬಿನ್ನವಿಪ್ಪೆಸಿದನೊಂದಂ ಮನ್ಮನಕ್ಕಾದ ಚೋ।
ದ್ಯಮನುತ್ಸಾರಿತ ಸೇವಕ ಪ್ರಚಯರಾಗಿಂತೀಗಳೀ ರಮ್ಯಕಾ॥
ಖ್ಯ ವನಕ್ಕಾವುದು ಕಾರ್ಯಮಾಗೆ ಬಿಜಯಂಗೆಯ್ದಿರ್ದುದಂ ದೇವ ಪೇ।
ೞಮೆನುತ್ತುಂ ನೃಪ ಕಂತುಗಿಂತು ನುಡಿದಳ್ ತಾನಂದು ಸಾನಂದದಿಂ ॥೪॥

ಕಂ॥ ಬಿನ್ನವಿಸಿದ ಕಳಭಾಷಿಣಿ।
ಗೆನ್ನದೆ ಹೃದ್ಗತಮನಾ ಮಹೀಶ ಮನೋಜಂ॥
ನಿನ್ನ ಮನಂ ಬಂದವೊಲುಸಿ।
[1]ರಿನ್ನದನೆಂಬಂತೆ ನೋಡಿದಂ ಸಖಿ ಮುಖಮಂ ॥೫॥

---

1. ರೆನ್ನದ.

ಉ॥ ಭಾವಿಸಿ ನೀಂ ಮಹೀಶ ಮದನಂಗಿರದಿಲ್ಲಿಯೆ ಭೃತ್ಯಳಾದೆ ಮ।
ತ್ತೇವುದು ವಂಚಿಸಲ್ಕೆ ಕಳಭಾಷಿಣಿ ಪೇೞ್ದಪೆನಾನದಂ ವಿಚಿ॥
ತ್ರಾವಹಮಂ ದಲೆಂತೆನೆ ಕರಿಂ ಕುಸುಮಾವಳಿ ದೇವಿಗಾದವೋಲ್।
ದೇವರೊಳಾಯ್ತು ಚಿತ್ರಪಟ ದರ್ಶನದಿಂ ವಿರಹ ಭ್ರಮೋತ್ಕಟಂ ॥೬॥

ಮ॥ ಅದಱಿಂದಿಂತು ಬರುತ್ತುಮಿರ್ದೆಮಿರದೆಲ್ಲಾ ದ್ವೀಪದೊಳ್ ದೇಶ ದೇ।
ಶದೊಳಾವುಂ ಕುಸುಮಾವಳೀ ಯುವತಿಯಂ ನೋಡುತ್ತುಮಿಾಯಿರ್ವರ॥
ಲ್ಲದೊಡುತ್ಸಾರಿತ ಸೈನ್ಯನಾಗಿ ಪಿರಿದುಂ ಪೇೞ್ ಬರ್ಪನೇ [1]ನೋೞ್ಪೊಡ।
ಗ್ಗದ ವಿಶ್ವಂಭರ ಭೂಪ ಚಕ್ರಿಯ ಸುತಂ ಕಂದರ್ಪ ಚಕ್ರೇಶ್ವರಂ ॥೭॥

ಕಂ॥ ಸಮನಾಗಿ ಸಮನಿಸಿದ ಚೋ।
ದ್ಯಮನೀಕ್ಷಿಸು ನೀನೆನುತ್ತುಮಡಪದೊಳಿರ್ದಾ॥
ಕಮನ ಕುಸುಮಾವಳೀ ಚಿ।
ತ್ರಮನಾಗಳ್ ತೋಱಿದಂ ನೃಪಾಂಗಜ ಮಿತ್ರಂ ॥೮॥

[2]ತೊಳಪಿದು ಚಿತ್ರ[ಮೊ ಮೋಣ್]ಕೋ।
ಮಳೆ ಕುಸುಮಾವಳಿಯೊ ತಾನೆನಿಪ್ಪಚ್ಚರಿ ಸಂ॥
ಗಳಿಸಿರಲೀಕ್ಷಿಸುತೆನಸುಂ।
ಕಳಭಾಷಿಣಿ ಕನಕಲತೆಗೆ ತೋಱಿದಳಾಗಳ್ ॥೯॥

ಉ॥ ದೇವಿಯ ವಿದ್ಧ ಚಿತ್ರ ಮಿಷದಿಂ ಮಿಗೆ ಮೋಹಿಸಿ ತಂದಳಿಲ್ಲಿಗೀ॥
ಭೂವರ ಕಂತುವಂ ಪಡೆದು ಭೂವರ ಕಂತುವ ವಿದ್ಧ ಚಿತ್ರದಿಂ॥
ದೇವಿಯನಿಂತು ಮೋಹಿಸಿದಳಾ ಪರಮೇಶ್ವರಿ ದೇವಿಯೆಂದು ಸಂ।
ಭಾವಿಸಿಯಾಗಳಂತೆ ಕಳಭಾಷಿಣಿ ಸಂತಸದಂತಮೆಯ್ದಿದಳ್ ॥೧೦॥

ಕಂ॥ ಗಾಡಿಯ ಪೋಲ್ವೆಗೆ ವಿಸ್ಮಯ।
ಮೂಡಿದಲರ್ಗಂಗಳಿಂದೆ ಚಿತ್ರಾಕೃತಿಯಂ॥
ನೋಡುತ್ತುಂ ಕಳಭಾಷಿಣಿ।
ನೀಡಿದಳಾ ಕನಕಲತೆಗೆ ಬೈತಿಡೆನುತ್ತುಂ ॥೧೧॥

---

1. ನೈಡ. 2. ತೊಳಿಪದು.

ಅನ್ನೆಗಮಿತ್ತ ಮೇಧಾವಿಳಂ ಪಲ್ಲಣಿಸಿ ತಂದ ಪವನಂಜಯಾಶ್ವನಂ ಕಳಭಾಷಿಣಿ ನೀಡುಂ ನೋಡುತ್ತುಮಿಂತೆಂದಳ್—

ಚಂ॥ ಧರೆಯೊಳಭೂತ ಪೂರ್ವಮೆನಿಪೀ ಕಮನೀಯ ತುರಂಗ ರಾಜನಂ।
ನಿರುಪಮ ರೂಪನೀ ನೃಪ ಮನೋಭವನೇಱಿ ಬರುತ್ತಿರಲ್ಕೆ ತ।
ತ್ಪುರಿಯ ಜನಂ ನಿರೀಕ್ಷಿಸುತುಮೊಂದಿ ತುರಂಗಮನೇಱಿ ಬರ್ಪ ಭಾ।
ಸ್ಕರನಿವನೆಂದೆನುತ್ತುಮತಿವಿಸ್ಮಯ ಭಾವಮನೆಯ್ದಿದಿರ್ಪುದೇ ॥೧೨॥

ಇಂತು ಕಳಭಾಷಿಣಿ ವಿಕಲ್ಪಿಸುತಿರ್ಪಾಗಳ್—

ಚಂ॥ ದನಿಯಿಡುತುಂ ಪೊದಟ್ದಿ ತನಿವಣ್ಣನಿಳಾ ಹತಿಯಿಂದಮೊಯ್ಯನೊ।
ಯ್ಯನೆ ತೊನೆದಾತ್ಮ ಚಂಚು ಪುಟಮಂ ಪೊಡೆಯುತ್ತಿರೆ ತಾನವಕ್ಕೆ ತೊ॥
ಟ್ಟನೆ ಮೊಗಮಿಕ್ಕುತುಮ್ಮಳಮನಾಂತು ಕರಂ ಮರವಟ್ಟು ನಟ್ಟವೋಲ್।
ಕೊನೆಗಱಿ ಕಂದಿ ಕೀರನಿರುತಿರ್ದುದು ತತ್ಸಹಕಾರ ಶಾಖಿಯೊಳ್ ॥೧೩॥

ಅದಂ ಕಂಡು—

ಕಂ॥ ಈ ವರ ಶುಕನಿರ್ಪಿೀ ತೆಱ।
ನಾವುದಿದಂ ನೋಡಿ ನೋಡಿಮೆಂದಾಮ್ರದೊಳು॥
ರ್ವೀವರ ಮದನಂಗಾಮೇ।
ಧಾವಿಳನಾ ಕ್ಷಣದೆ ತೋಱಿದಂ ತರ್ಜನಿಯಿಂ ॥೧೪॥

ಉ॥ ಕಾಂತೆಗೆ ಕೋಪಮುಣ್ಮಿದೊಡದಂ ತಿಱಿಪಲ್ಕಣಮಾರದೊಂದು ವಿ।
ಭ್ರಾಂತಿಯೊಳಿರ್ದುದಕ್ಕು[1]ಮೆನಸುಂ ಶುಕನೀಗಳೆಯಗ್ರ ಮಂಗಳೋ॥
[2]ದಂತಮೊಡರ್ಚೆ ಕುಂದಿದಕೆ ಪೋಕುಮಿದಲ್ಲಿಯ ನೈಜಮಕ್ಕುಮೆಂ।
ದಿಂತು ಮಹೀಶ ಕಂತು ಪರಿಕಲ್ಪಿಸುತುಂ ಪದೆಪಿಂದೆ ನೋಡಿದಂ ॥೧೫॥

ಇಂತು ನೃಪಕಂತು ನೋಡುತಿರ್ದ ರಾಜಕೀರನಂ ಕಳಭಾಷಿಣಿ ಕಂಡು—

ಕಂ॥ ಎಲೆ ನಮ್ಮ ಶುಕಂ ತಾನಾ।
ಗಲೆವೇಟ್ಕುಮಿದೆನುತುಮಲ್ಲಿ ಕಳಭಾಷಿಣಿ ನೀ॥
ನೆಲೆಗೆ ನಿರೀಕ್ಷಿಸೆನುತ್ತುಂ।
ಕೆಲಸಿರ್ದಾ ಕನಕಲತೆಗೆ ತೋಱಿದಳಾಗಳ್ ॥೧೬॥

1. ಮೆನುತುಂ. 2. ದಂತಮೊಡೆ ಕಂದಿದಕ್ಕೊಗೆ . . . . ದಲ್ಲಿಯ.

ಅವಯವದ ಭಂಗಿಯಂ ನಾ ।
ಡೆ ವಿಚಾರಿಸಿ ನೋಡಿ ಕನಕಲತೆಯಾಗಳ್ ತಾ ॥
ನವಿತಥಮಸಂಶಯಂ ನ ।
ಮ್ಮ ವಿಭಾಸಕ ಶುಕಮಿದೆಂದು ನಿಟ್ಟೆಸಿಯಱಿದಳ್ ॥೧೭॥

ಪೆಸರ್ಗೊಂಡು ಕರೆಯೆ ಜೀವಂ ॥
ಪಸರಿಸಿ ಕಣ್ದೆಱೆದು ತಾಂ ವಿಭಾಸಕ ಶುಕನೀ ॥
ಕ್ಷಿಸಿ ಬಂದು ಕನಕಲತೆಯಾ ।
ಲಸಿತ ಕರಾಂಬುರುಹದಲ್ಲಿ [1]ಕೇಗಿತ್ತಾಗಳ್ ॥೧೮॥

ಚಂ॥ ಪರಿಧೃತ ದೀನ ಭಾವದೆ ಕಟಿಲ್ದಿರುತಿರ್ದುದು ತನ್ನ ನಾಮದಿಂ ।
ಕರೆದೊಡೆ ಜೀವಮಾವರಿಸಿ ಬಂದುದು ಭೋಂಕನೆ ಕೇಳ್ದು ತಾನಿದ ॥
ಚ್ಚರಿಯೆನುತುಂ ತದೀಯ ಶುಕನಂ ನಡೆ ನೋಡಿ ನಿಜಾಸ್ಯ ಪದ್ಮಮಂ ।
ತಿರಿಪಿ ನರೇಂದ್ರ ಕಂತು ಕಳಭಾಷಿಣಿಯಾಸ್ಯಮನಿಂತು ನೋಡಿದಂ ॥೧೯॥

ಅದನರಿದು—

ಉ॥ ದೇವರ ಚಿತ್ತಮುಚ್ಚರಿಯಿದೆಂಬೊಡೆ ಬಿನ್ನವಿಪೆಂ ಮದಾಲಸ ।
ವ್ಯಾವೃತ ಪಕ್ವ ದಾಡಿಮದ ಬೀಜ ಸಮಾಜಮನಿಕ್ಕಿ ಹಸ್ತ ರಾ ॥
ಜೀವದೊಳಾಗಳುಂ ತಳೆದು ತತ್ಕುಸುಮಾವಳಿ ದೇವಿ ಜೀವದಂ ।
ತೋವುತಿರಲ್ಕೆ ತಾಂ ಬಳೆದುದಿಂತು ವಿಭಾಸಕ ನಾಮದೀ ಶುಕಂ ॥೨೦॥

ಚಂ॥ ಒಲವೆಡೆಗೊಂಡು ಕೊಂಡುಕೊನೆದೋವುವ ದೇವಿಯ ಪಾಣಿ ಪದ್ಮದಿಂ ।
ತೊಲಗದೆ ಪದ್ಮರಾಗ ನಿಭ ಚಂಚುವನೊಯ್ಯನೆ ನೀಡಿನೀಡಿ ತಂ ॥
ಬುಲಗುಟುಕಂ ಕೊಡುತ್ತೆ ಮೊಗದೊಳ್ ನುಡಿಗಲ್ತು ನಾಡೆ ಚಾ ।
ಪಲಮುಮರ್ದೀ ವಿಭಾಸಕ ಶುಕಂ ಗಟಪುತ್ತೆಸೆದಿರ್ಪುದೊರ್ಮೆಯುಂ ॥೨೧॥

ಮತ್ತಮಾಗಳ್—

ಕಂ॥ ದೇವರೆ ದೂಸಱಿನಾ ಕುಸು ।
ಮಾವಳಿ ದೇವಿಗೆ ಸಮಂತು ಸಮನಿಸಡೆನಸುಂ ॥
ಭಾವ ಭವನ ಕೊಱಚಾಟಮು ।
ದಾವರಿಸಿರೆ ಧೃತಿಯನಱವ[2]ನುತ್ಪಾಟಿಸುತುಂ ॥೨೨॥

1. ತೇಗಿತ್ತಾಗಳ್. 2. ನುತ್ಪಾದಿ.

ಚಂ॥ ಪೆಱತು ವಿನೋದ ವಾಂಛೆ ಪೆಱಪಿಂಗಿ ಮನೋಧೃತಿಯಂ ಪೊಸಬ್ದಿ [1]ಪಾಂ।
ಗುಱೆ ಪರಿಪಟ್ಟು ಲಜ್ಜೆ ಲವಮಿಲ್ಲದೆ ಬಿಟ್ಟು ತದೀಯ ಕಾಂಕ್ಷೆಯೆ ॥
ಟ್ಟಿಱು ನಿಜ ಚಿತ್ತದಿಂ ತೊಲಗೆ ಮನ್ಮಥನೇಸುವೆಸಕ್ಕೆ ತನ್ನ ಮೆಯ್ ।
ನೆಱೆ ಗಱಿಗೋಲದಾಗಿ ಕುಸುಮಾವಳಿ ತಾನಿರೆ ಸಿಮ್ಮ ದೂಸಱಿಂ ॥೨೩॥

ಕಂ॥ ಅದು ಕಾರಣದಿಂ ದೇವಿಯ ।
ಮದನಾವಸ್ಥೆಯನೆ ತಾನಭೀಕ್ಷಿಸುತಿರಲಾ ॥
ರದೆ ತನ್ನುಮನೋವುವರಿ ।
ಲ್ಲದೆ ಶುಕನಿದು ಬಂದುದಿಂತು ಭೂಪ ಮನೋಜಾ ॥೨೪॥

ಪಸುಱಿಂ ಗಿಳಿಗಳೆಱಿಂಕೆಗ ।
ಳೆಸೆದಿರ್ಪುವದಲ್ಲದೀ ಶುಕನ ಕೊನೆಗಱಿಗಳ್ ॥
ನಸುಗುಂದಿದುವೇಕೆನುತುಂ ।
ಬೆಸಗೊಂಡಂ ಭೂಪ ಕಂತು ಕಳಭಾಷಿಣಿಯಂ ॥೨೫॥

ಚಂ॥ ಪರಿಚಯದೊಂದು ಪೆರ್ಚುಗೆಯೊಳೀ ಶುಕನಾ ಕುಸುಮಾವಳೀ ತನೂ ।
ದರಿಯ ಕುಚಾಗ್ರದಲ್ಲಿ ಪಱಿತಂದೆಱಗಲ್ಕೆ ತದೀಯ ದೇಹದು ॥
ರ್ಧರ ವದನಾಗ್ನಿ ಸೋಂಕೆ ಗಱಿಗಳ್ ನಸುಗುಂದಿದುವಿಂತಿವೆಂದಿಳಾ ।
ವರ ಮದನಂಗೆ ಬಿನ್ನವಿಸಿದಳ್ ಕಳಭಾಷಿಣಿ ತತ್ಪ್ರಪಂಚಮಂ ॥೨೬॥

ಕಂ॥ ಇನಿವಿಡಿದಂಗದ ತಾಪದೊ ।
ಳನಿಯಳದೆಂತಿರ್ಕುಮೆಂದು ಮನದೊಳ್ ತಾನಿಂ ॥
ತೆನುತುಂ ಮೇಧಾವಿಳನಾ ।
ನನಮಂ ನೃಪಕುಂತು ನಾಡೆ ನೋಡುತ್ತಿರೆಯುಂ ॥೨೭॥

ಚಂ॥ ಇರುಳೊಳವೆಂತುಮಿಲ್ಲ ಪಗಲೊಳ್ ನೆಱೆ ಮೂದೆಱನಿರ್ಪುದಾಗೆಯುಂ ।
ಪರ ಮುಖ ಬಾಧ್ಯಮೆಂದು ಪಱಿಯುತ್ತಿರೆ ತನ್ನಯ ತೇಜಮಂ ನೃಪ ॥
ಸ್ಮರನ ಸಮಗ್ರತೇಜಮುದಱಿಂ ಕಡು ಲಜ್ಜಿಸಿ ಕಾಯ್ಪುಗುಂದಿದಂ ।
ತಿರೆ [2]ಬಿಸುಪಬ್ಗಿ ತಾನಪರ ವಾಸರ ಸಂಗತನಾಗೆ ಭಾಸ್ಕರಂ ॥೨೮॥

1. ಪೊಂಗುಱೆ. 2. ಮಿಸುಪಗ್ಗಿ.

ಉ॥ ಬಂದೊಲವಿಂದ[1]ಮೆನ್ನೊಳೆನಸುಂ ನೆರೆದಂ ನೆರೆದಿರ್ದು ವಾರುಣೀ ।
ಸೌಂದರಿಗಾಸೆಗೆಯ್ದು ನಿನನೆಂದು ಕರಂ ಮನದಲ್ಲಿ ಪೇಸಿ ಮಾ ॥
ಧ್ಯಂದಿನ ಲಕ್ಷ್ಮಿ ನೂಂಕೆ ಪವಮಾನ [2]ಪಥಾಂತರದಿಂ ಕೆಳಕ್ಕೆ ಬೀ ।
ಟ್ವಂದದೆ ಭಾನು ತಾನಿರದೆ ಪೊರ್ದಿದನಂತಪರಾಚಲೇಂದ್ರಮಂ ॥೨೯॥

ಆ ಸಮಯದೊಳ್—

ಕಂ॥ [3]ಸಮನಿಸುತಿರ್ಪುದು ಸಂಧ್ಯಾ ।
ಸಮಯಮಿದೆಲೆ ದೇವ ಸಾಲ್ವುದಿಂ ಬಿಜಯಂ ಗೆ ।
ಯ್ಯಿಮೆನುತ್ತಮೆ ಕಳಭಾಷಿಣಿ ।
ಸಮಂತು ಬಿನ್ನವಿಸೆ ಸಚಿವ ಸುತನಿಂತೆಂದಂ ॥೩೦॥

ಚಂ॥ ಪರಿಜನಮಂ ಪುರೀಜನಮನಾರುಮನೀಯೆಡೆಯಲ್ಲಿ ಕಾಣದಂ ।
ತಿರದೊಡಗೊಂಡು ಪೋಪಿದುವೆ ಕಾರ್ಯಮಿದಲ್ಲದೆ ಕಾಣರಾರೆನು ॥
ತ್ತುರವಣೆಯಿಂದಮೀ ತೆಱದೊಳೀ ನೃಪಕಂತುವನುಯ್ವೆಯಾದೊಡಂ ।
ಕರತಳದಲ್ಲಿ ಬಯ್ತಿನನನುಯ್ವ ಮರುಳ್ಗೆಣೆಯಾಗದಿರ್ದಪಯ್ ॥೩೧॥

ಇಂತೆಂದ ಸಚಿವ ಸುತನ ವಚನಕ್ಕಂತೆಗೆಯ್ವೆನೆಂದು ಕಳಭಾಷಿಣಿ ಪರಿಲಬ್ಧ ಪ್ರಸಾದೆಯಾಗೆ ಪವನಂಜಯಾಶ್ವನನೇಱಿ ನೃಪಕಂತುವಂ ಪೆಱಗೇಱಿಸಿಕೊಂಡು ಮೇಧಾವಿಳಂ ಪರಿಕಲಿತ ಶಿಶಿರೋಪಚಾರ ವಸ್ತು ವ್ರಾತನಾಗಿ ಬರೆ ಪುರಮಂ ಪೊಕ್ಕು ನಿಜಾಗಾರ ದ್ವಾರದೊಳ್ ತುರಂಗಮದಿಂದವನಿತಳಕ್ಕವತರಿಸಿದಾಗಳ್—

ಉ॥ ಒಟ್ಟಜೆಯಿಂದೆ [4]ಮೆಯ್ವೆಳಗು ಸಂಜೆಯ ಕಟ್ತಿಲೆಯಂ ಕಡಂಗಿ ಬೆಂ ।
ಗುಟ್ಟುತಿರಲ್ಕೆ ನಿಂದೆಸೆಯುತಿರ್ದ ನರೇಂದ್ರ ಮನೋಭವಂಗೆ ಕೈ ॥
ಗೊಟ್ಟೊಡಗೊಂಡು ಬಂದು ಕಳಭಾಷಿಣಿ ಪೊಕ್ಕಳಪೂರ್ವ ಶೋಭೆಯಿಂ ।
ದಿಟ್ಟಗೆ ಬೀರುವೊಂದು ತುಹಿನೋಪಲದೊಪ್ಪುವ ಗುಪ್ತ ಗೇಹಮಂ ॥೩೨॥

ಚಂ॥ ಪರಮ ಪಯಃ[5]ಪಯೋಧಿಯೊಳಶೇಷ ವಿಶೋಭೆಯ ಶೇಷ ತಲ್ಪದಂ ।
ತಿರೆ ವಿಲಸದ್ದುಕೂಲ ವಸನಚ್ಛದದಿಂ ಪಿರಿದುಂ ವಿರಾಜಿಸಿ ॥

1. ಮೆಮ್ಮೊಳೆನಸುಂ. 2. ಪದಾಂತರದಿಂ. 3. ಸಮನಿರಿರ್ದುದು.
4. ಮೆಯ್ವಳ ಸಂಜೆಯು. 5. ಪಯೋಧಿಯೊಳೀ.

ಪೃರುತರ ಹಂಸತೂಲ ನವ ತಲ್ಪ ಧೃತೋನ್ನತ ಮಂಚದಲ್ಲಿ ಘ।
ಳ್ಳಿರಿಸಿದಳಿಂತು ನಾಡೆ ಕಳಭಾಷಿಣಿ ಭೂಪ ಲತಾಂತ ಚಾಪನಂ ॥೩೩॥

ರಜವಿರದಾಗದೀ ಬಹುಳ ಸತ್ತ್ವನೊಳೆಂದು ನಿವಾರಿಪಂತೆ ಭೂ।
ಭುಜನ ಪದಾರವಿಂದ ರಜಮಂ ತೊಳೆದಾ ವಿಳಿತಾಂಬುವಂ ಕರಾಂ॥
ಬುಜ ಯುಗದಿಂದೆ ತಾಂ ಒಱಸಿದು ಮೇಲುದಱಿಂದಿರದಿರ್ದನೊತ್ತುತುಂ।
ನಿಜ ವಿನಯ ಪ್ರಭಾವಮನದಂ ಕಳಭಾಷಿಣಿ ತೋಱೆ ಬೀಱಿದಳ್ ॥೩೪॥

ತದನಂತರದೊಳ್—

ಚಂ॥ ದ್ರುತದೊಳೆ ಪೋಗಿ ದೇವಿಯ ಸಮೀಪದೆ ಬರ್ಪಿನಮಾ ಮಹೀಶ ಮ।
ನ್ಮಥನ ಮನಕ್ಕೆ ನಿನ್ನ ಮಧುರಾವಳಿ ವೀಣೆಯ ವಾದನ ಪ್ರಗ॥
ಲ್ಭಿತ [1]ಪದದಿಂದೆ ಕೌತುಕಮನೋಲಗಿಸೆಂದು ನಿಜಾಳಿಯಪ್ಪಳಂ।
ಚತುರಿಕೆಯಂ ಸಮಂತಿರಿಸಿದಳ್ ಕಳಭಾಷಿಣಿ ತತ್ಪದಾಗ್ರದೊಳ್ ॥೩೫॥

ಕಂ॥ ವನಿತೆ ನತೆಯಾಗಿ ನೃಪ ಮದ।
ನನ ಸಂಜ್ಞಾನುಜ್ಞೆವೆತ್ತು ಕಸ ಕಳಭಾಷಿಣಿಯಾ॥
ಕನಕಲತೆವೆಱಸು ತಾಂ ಭೋಂ।
ಕನೆ ತತ್ಪರ್ಯಂಕ ಪಾರ್ಶ್ವದಿಂ ತಳರ್ದಾಗಳ್ ॥೩೬॥

ಚಂ॥ ನಿಮಿಷಮುಗಲ್ದು ತಾನಿರದವಳ್ [2]ತಳರ್ದಿಂದಿನಿತೊಂದು ಪೊೞ್ತದೇ।
ಕೆಮ ತಡೆದಿರ್ದಳೆಂದು ಮುಳಿಸಂ ತಳೆದಿರ್ಕುಮೊ ತನ್ನ ಪೋದ ಕಾ॥
ರ್ಯಮದಣಮಾಗೆ ಮೇಣ್ ತಡೆದಳೆಂದೆನುತಿರ್ಕುಮೊ ದೇವಿ ಪೇೞೆನು।
ತ್ತಮೆ ಸಖಿಯುಕ್ತದಿಂ ಪೊಱಮಡುತ್ತಿರೆ ಭಾಮೆ ತದೀಯ ಧಾಮಮಂ ॥೩೭॥

ತತ್ಸಮಯದೊಳ್—

ಕಂ॥ ಪ್ರಕಟಿಸುತುಮಿಳೆಗೆ ನವ ಚಂ।
ದ್ರಿಕೆಯಂ ನಿಜ ಲೋಚನಾಂಶುವಿಂದ[ಲ್ಲಿಗೆ]ಮಂ॥
ಡಾಕಿನಿಯೆಂಬಳ್ ಪರಿಚಾ।
ರಿಕೆ ಬಂದಳ್ ತಾನತಿ ದ್ರುತ [3]ಗತಿಯಿನಾಗಳ್ ॥೩೮॥

ಆಕೆಯಂ ತೊಟ್ಟನೆ ಕಟ್ಟೆದಿರೊಳ್ ಕಂಡು—

1. ಪದಹಿಂದೆ. 2. ದಿರಿಮಿಂದಿನಿ. 3. ಗತಿಯಿಂದಂ.

ಉ॥ ಕಾರಣಮಾವುದಿಂದಿನಿತು ವೇಗದಿನೆನ್ನಯ ಸಾರ್ಗೆ ವಂದೆ ಮಂ ।
ದಾಕಿನಿ ದೇವಿಯೆಂತು ವಿರಹಾಗ್ನಿಯೊಳಿರ್ದಪಳಲ್ಲಿ ಸೇವೆಗಾ ॥
ರಾರಿರುತಿರ್ದಿರೇನೆನಗೆ ಕೋಪಿಸುತಿರ್ದಳಿ ಪೇೞೆನುತ್ತುಮಾ ।
ದ್ವಾರ ಮುಖೋರ್ವಿಯಲ್ಲಿ ಕಳಭಾಷಿಣಿ ತಾಂ ಬೆಸಗೊಂಡಳಂಜುತುಂ ॥೩೯॥

ಕಂ॥ ಕಳಭಾಷಿಣಿಯ [1]ಮನೋಬ್ಜಾ ।
ವಿಳ ಶಂಕಾ ಪಂಕ ಧೌತ ಕೃತ ಪೀಯೂಷಾ ॥
ತುಳ ಪೂರಮಿದೆನೆ ದಶನೋ ।
ಜ್ಜ್ವಳ ರುಚಿ ನಿಮಿರಲ್ಕೆ ಕಾಂತೆ ತಾನಿಂತೆಂದಳ್ ॥೪೦॥

ಉ॥ ನೀಂ ಪೊಱಮಟ್ಟು ಬಂದೆ ಕಳಭಾಷಿಣಿ ಬಂದ ಬೞಿಕ್ಕಮಾರೊಳೆಂ ।
ತುಂ ಪೆಱತೊಂದುಮಂ ನುಡಿಯದೇನುಮ[2]ನೀಕ್ಷಿಸದಂಗಜಾಗ್ನಿ ತಾ ॥
ಪಂ ಪಿರಿದಾಗೆ ಮಾೞ್ಪ ಶಿಶಿರ ಕ್ರಿಯೆಯಂ ಕರದಿಂ ನಿವಾರಿಸು ।
ತ್ತುಂ ಪದೆಪೞ್ಗೆ ವಿಸ್ಮೃತಿಯನೆಯ್ದಿದಳಾಗಳೆ ದೇವಿ ಶಯ್ಯೆಯೊಳ್ ॥೪೧॥

ಆಗಳ್—

ಉ॥ ಅಂತಿರುತಿರ್ದಳಲ್ತೆ ಕುಸುಮಾವಳಿ ಚಿತ್ರಿತ ತತ್ಪಟ ಚಿತ್ರ ದರ್ಶನ ।
ಭ್ರಾಂತಿಯೊಳಿಂದು ನೋೞ್ಪ ಬಗೆಯಿಂದಮೆ ಬಂದು ಮಹೀಶನುಂ ಕುಭೃ ॥
ತ್ಕಾಂತೆಯುಮಲ್ಲಿ ವಿಸ್ಮೃತಿಯನೆಯ್ದಿ ಮನೋಭವ ದಾಹದಿಂದಮೋ ।
ರಂತಿರೆ ದೇವಿಯಂ ನೆಱೆ[3] ನಿರೀಕ್ಷಿಸಿ ಭೀತಿಯನಾದಮೆಯ್ದಿದರ್ ॥೪೨॥

ಅದಂ ಕಂಡು ವಿಶ್ರುತಾಮಾತ್ಯಂ ಚಿತ್ರಕೋದ್ಯಾನದೊಳಲ್ಲದೆ ದೇವಿಯ ಮನೋಭವ ದಾಹಂ ಪೋಗದಲ್ಲಿಯೆ ಹಿಮ. ಗೃಹಮಂ ಸಮೆಯಿಮೆಂದು ಕೆಲದೊಳಿರ್ದನ್ನಂ ಕಂಡು ಪೇೞ್ದು ವನ ರಕ್ಷಣಾರ್ಥಂ ಭೀಷ್ಮಕನಂ ನಿಯೋಜಿಸಿ ಪಿರಿದಾನುಂ ಪೊೞ್ತಿರ್ದದ[3]ಮರಸಿಯರಸರುಂ ಸಚಿವಂಬೆಱಸು ಪೋಪುದುಮಿತ್ತಲ್—

ಕಂ॥ ಹಿಮ ಗೃಹಮಂ ವಿರಚಿಸುವು ।
ದ್ಯಮದಿಂ ಪರಿವಾರ ಕನ್ಯಕಾ ಜನ ಸಹಿತಂ ॥
ಕಮನೀಯ ಚಿತ್ರಕೋದ್ಯಾ ।
ನಮನಾಗಳ್ ಪೋಗಿ ಪೊಕ್ಕನತ್ಯಾತುರದಿಂ ॥೪೩॥

---

1. ಮನೋಜಾ।ವಳಿ ಶಂಕಾ ಪಂಕ ಧಾತು. 2. ನೀಕ್ಷಿಸಿದಂಗಜಾ.
3. ಮರಸೆಮರಸರು.

ರವಿಕರ [1]ಕುಳಕ್ಕನಿರ್ಭೆ ।
ದ್ಯವದೆಂದಲ್ಲಿ ತಿಮಿರ ಸಮಿತಿಯನಬ್ಜೋ ॥
ದ್ಭವನಿಂತು ಬೈತಸೆನೆ ವನ ।
ಮವಿರತಮೊಪ್ಪುವುದು ತಳ್ತು ಕತ್ತಲಿಸುತ್ತುಂ ॥೪೪॥

ಚಂ॥ ವಿನುತ ನವೇಂದುಕಾಂತ ಮಣಿ ಭದ್ರರುಚಿ ವ್ರಜಮಿಂತಿದುದ್ಧ ಪಾ ।
ವನ ಜಲಮಿಂತಿದೆಂಬಸಿತು ಭೇದಮದುಣ್ಮದೆ [2]ತಾನಭೇದಮ ॥
ಪ್ಪನುಪಮ ನಿರ್ಮಳಾಂಶು ಮಯದಿಂ ಮಿಗೆ ಕಣ್ಗೊಳಿಪಾ ಸರೋವರಂ ।
ನೆನೆಯಿಸುತಿರ್ದುದಲ್ತೆ ಸುಜನರ್ಕಳ ಸಂಗಮದೊಂದು [ಭಂಗಿಯಂ] ॥೪೫॥

ಕಂ॥ ಕರಿಯಂತೆ ಕಕುಭದಂತನ ।
ವರತಂ ಪದ್ಮ ಪ್ರಕೀರ್ಣ ಕುವಲಯ ಶೋಭಾ ॥
ಪರಿಯುಕ್ತ ಮಾಗೆ ಪಿರಿದುಂ ।
ವಿರಾಜಿಸಿತ್ತಾ ಪೊದಟ್ಟಿ ಪಂಕಜ ಷಂಡಂ ॥೪೬॥

ಆ ಸರೋಜ ಷಂಡೋಪಾಂತದೊಳ್ ಸಾರದ ಸೀರ್ಪನಿ ಬಲದಂತೆಸೆವ ತಣ್ಪುಱಿಲ ತಲದೊಳ್ ಕಂಪಿಡುವ ಬಾಳದ ಬಳ್ಳಿದಟ್ಟೆಗಳಿಂ ತಣ್ಪಿಡುವ ಕದಳಿಯ ತೊಳಪ ಕಂಭಂಗಳಿಂ ಮಧುವಿಡುವ ಮಂದಾರ ಕುಸುಮದ ಮೇಲ್ಕಟ್ಟುಗಳಿಂ ಬಿಂದುವಿಡುವಿಂದೂಪಳ ಜಳಪುತ್ರಿಕೆಗಳಿಂ ಕೆಂಪಿಡುವ ಕಂಕೆಲ್ಲಿಯ ಪಲ್ಲವಾಸ್ತರಣಂಗಳಿಂ ಸೊಂಪಿಡುವ ಪಲತೆಱದಲರೆಸಱ ಪಸೆಗಳಿಂ ಹಿಮಾನಿಲನಿಂ ನಿಮಿಱುವ ಪೊಂಬಾಳೆಯ ಸುಱಿಯೆಲೆಯ ಬಿಜ್ಜಣಂಗಳಿಂ [3]ಕುಳಿರ್ವಾಲಿ ನೀರ್ಗಳಿಂ ಪ್ರಳಯಪುಂಜದ ಜನ್ಮ ಶಾಲೆಯುಂ ಶಿಶಿರದ ಸರ್ವಸ್ವಮುಂ ಶೈತ್ಯದ ನಿಳಯಮುಂ ತುಹಿನದ ಕವರ್ಮನೆಯುಂ ಬಂದ ಹಿಮದ ಬೀಡುದಾಣಮುಮೆನಿಸಿದ ಹಿಮ ಗೃಹಮಂ ಸಮೆದು ದೇವಿ ನೀವಿಲ್ಲಿಗೆ ಬಿಜಯಂಗೆಯ್ಯಿಮೆನಲೆಂತಾನುಮೆೞ್ದು [4]ಬೆಳ್ವೇಱು ಬಾನಲ್ಗೊಂಡ ವದನ [5]ಮಂಡಲಮುಂ ಎಕ್ಕೆ ಪಾಱುವಳ್ಳೆರ್ದೆಯುಂ ಬೆಮರ್ತು ಕಂಪಿಸುವ ಕೋಮಲಾಂಗಮುಂ ಇರ್ಪಱಿದು ಬಱವಱಿದ ಬಾಯ್ದೆಱೆಯುಂ ನಿಮಿರ್ಕೆವೆತ್ತ ನಿಶ್ವಸಿತಮುಂ ಶೂನ್ಯಮಾದ ಸಾಶ್ರು ನಯನಂಗಳುಂ ಮಱೆಗೊಳಗಾದ ಮನೋವೃತ್ತಿಯುಂ ಜಡತೆಗೆಡೆಯಾದ ಯಾನಮುಂ ಬೆಱಸು ಮೆಲ್ಲನಲ್ಲಿಗೆ ವಂದು ಅಲರೆಸಱ ಪಸೆಯೊಳ್ ಮೆಯ್ಯನೀಡಾಡಿ—

1. ಕುಳಕ್ಕೆ. 2. ತಾನೆ ಭೇದ. 3. ಕುಳಿರ್ವಾರಿ. 4. ಬೆಳ್ಳಿಱು. 5. ಮಂಡಲಕ್ಕೆ ಪಾಱುವ.

ಚಂ॥ ಮುಗಿದ ಕಟಾಕ್ಷದಿಂದ[1]ಮುದಿರ್ವಶ್ರುಗಳೊಳ್ ಪೊಳೆವುತ್ತಮಾಸ್ಯದಿಂ ।
ದೊಗೆವ ನಿಜೋಚ್ಚ ನಿಶ್ವಸಿತಮೊಯ್ಯನೆ ಮಗ್ಗುಲನೋಷ್ಠ ಬಿಂಬದಿಂ ॥
ಮಿಗು ಮಿಗುತಿರ್ಪ ಮೆಯ್ದೆಗೆಯುತುಂ ವಿರಹಾನಳನೊಳ್ ಮುಳುಂಗಿ ನೆ ।
ಟ್ಟಗೆ ಬಗೆಗುಂದುತಿರ್ದಳೆನಸುಂ ಕುಸುಮಾವಳಿ ದೇವಿ ಶಯ್ಯೆಯೊಳ್ ॥೪೭॥

ಕಂ॥ ಸುಳಿಗೊಂಡ ವದನ ವಿಧು ಮಂ ।
ಡಳದಿಂ ಪೊಱಮಡುವ ಮದನ ಪಾವಕ ಧೂಮಾ ॥
ವಳಿಯೆನಿಸಿದತ್ತು ಕುಸುಮಾ ।
ವಳಿ ದೇವಿಯ ಸುಯ್ಗೆ ಬಳಸುವಳಿಗಳ ಬಳಗಂ ॥೪೮॥

ಉ॥ ತಾಪ ಹರಕ್ಕೆ ಮಾಳ್ಪ ಶಿಶಿರ ಕ್ರಿಯೆಗಳ್ ಮದನೋಗ್ರ ವಹ್ನಿಗು ।
ದ್ದೀಪನ ಪಿಂಡಮಾಗೆ ನಿಲಲಾಱದೆ ದೇಹದ ದಾಹದೇಳ್ಗೆಗಾ ॥
ಚಾಪಳ ನೇತ್ರೆ ಸುಯ್ಯೆ ಮುಖ ಸೌರಭ ಸೇವೆಗಡುರ್ತು ಸಾರ್ದ ಭೃಂ ।
ಗೀ ಪಟಳಂಗಳಾ ಕ್ಷಣಮುರಲ್ದುವೆಱಂಕೆ ಮುರುಂಟಿ ಧಾತ್ರಿಯೊಳ್ ॥೪೯॥

ಕಂ॥ ನಱುಸುಯ್ಗೆ ಸಮುಂತೆಱಗುವ ।
ಪಱಮೆಗಳಾ ಶ್ವಸಿತ ಶಿಖಿ ಶಿಖಾಳಿಯ ಸುಯ್ಲಿಂ ॥
ಗಱಿಗಳ್ [2]ಸೀದುರುಳುತ್ತಿರೆ ।
ನೆಱೆ ಪೋಲ್ತಳ್ ಕಾಂತೆ ಪೂತ ಚಂಪಕ ಲತೆಯಂ ॥೫೦॥

ಉ॥ ಸಾರೆವರಲ್ ಬಿಗುರ್ತುದು ಕರಂ ಶಿಶಿರ ಕ್ರಿಯೆಯಂ ಕಡಂಗಿ ಮಾ ।
ಳ್ಪಾ ರಮಣೀಜನಂ ಪರಿಚಯಕ್ಕೆನಸುಂ ಪರಿತಂದು [3]ಪೀನ ವ ॥
ಕ್ಷೋರುಹದಲ್ಲಿ ಕೇಗಿದ ಶುಕಂ ಗಱಿ ತೊಟ್ಟನೆ ಸೀಯೆ ನೊಂದು ಕೀ ।
ರ್ಕೀರನುತೆಳ್ದು ಪಾರಿದುದು ತನ್ವಿಯ ತಾಪ ಕಳಾಪಮದ್ಭುತಂ ॥೫೧॥

ಮ॥ಸ್ರ॥ ಅಲರ್ವೊಚ್ಚಂ ಕಂದಿ ಕಾಯ್ದಾಗಳೆ ಕರಿಮುರಿಯಾಯ್ತೊರ್ಮೊದಲ್ [4]ನಿಂದು ಕಾಂತಾ ।
ವಲಿ ಸೂಸುತ್ತಿರ್ಪ ಕರ್ಪೂರದ ಬಹುಳ ರಜಂ ಜ್ವಾಲೆಯಾಯ್ತೀವದಂಭೋ ।
ಜ ಲಸನ್ನಾಳೋತ್ಕರಂ ಚುಯ್ಲಿಡುತಮೆ ಪೊಗೆಯಾಯ್ತೊಯ್ಯನಿರ್ದಿರ್ದ ತಾಣಂ ।
ಜ್ವಲನಂ ಸಾರ್ದಂತಿರಾಯ್ತೆಂತುಟೊ ಸತಿಗೊಗೆದಸ್ತೋಕ ತಾಪಾತಿರೇಕಂ॥೫೨॥

1. ಮೀರಿದಶ್ರು. 2. ಸೇಮುರಳುತ್ತಿರೆ. 3. ಫೇನ. 4. ಕೆಂದು.

ಉ॥ ಉಕ್ಕೆಸಱಾಯ್ತು ಪೊಕ್ಕ ಸರಸೀ ಸಲಿಲಂ ಪೊಗೆಯೆಟ್ಟುದೆಯ್ದೆ ಮೆ ।
ಯ್ಯಿಕ್ಕಿದ ಪಲ್ಲವಾಸ್ತರಣದಿರ್ಪೞಿದಾಗಳೆ ಪೊತ್ತಿದತ್ತು ಗಾ ॥
ತ್ರಕ್ಕಿರದೊಟ್ಟಿದಾರ್ದ್ರ ನವ ಚಂದನ ಕರ್ದಮವೆಂದೊಡೇನೆನಲ್ ।
ಬರ್ಕುವೊ ತತ್ತನೂದರಿಯ ದೇಹದ ಕಂತು ದವಾಗ್ನಿ ದಾಹಮಂ ॥೫೩॥

ಮ॥ ಸ್ತನ ಪಾತಾಶ್ರು ಕಣಾಳಿಯಾಯ್ತುರುತರಾಯಃಪಿಂಡದೊಳ್ ಬಿಲ್ದು ಸೀ ।
ರ್ಪನಿ[1]ವೊಲ್ ಭೋಂಕನೆ ಬಂದು ಪೊಯ್ದು ತನುವಂ ತಳ್ಪೊಯ್ವ ತೆಂಗಾಳಿಗಾ ॥
ದಿಸಿತೊಂದುಷ್ಣತೆಯಿಂದೆ ಚಿತ್ರಕ ವನ ವ್ಯಾಕೀರ್ಣ ಪರ್ಣೌಘಮಂ ।
ತೆನಸುಂ ಕಂದಿದುದಾ ತನೂದರಿಯ ದೇಹೋದ್ದಾಹಮಿನ್ನೆಂತುಟೋ ॥೫೪॥

ಚಂ॥ ಎನಸುವೊಡರ್ಚುವೀ ಶಿಶಿರ ಸಂಚಯಮೆನ್ನಯ ಮನ್ಮಥಾಗ್ನಿಗಿಂ ॥
[2]ಧನ ಕುಲಮಾಗುತಿರ್ದಪುದು ಮಾನಿನಿ ತತ್ಕಣಮಾಱಿನಾಱಿನಾ ॥
ನೆನುತಮೆ ಮಾತಡಂಗೆ ತಳಿರ್ವಾಸಿನೊಳಾ ಸತಿ ಮೆಯ್ಯನಿಕ್ಕಿ ಮೆ ।
ಲ್ಲನೆ ಮುರಿದೆನ್ನನೀಕ್ಷಿಸಿದಳಶ್ರುಮಯಾಲಸ ಲೋಚನಂಗಳಿಂ ॥೫೫॥

ಮತ್ತಮಾಗಳ್—

ಕಂ॥ ಇನಿವಿರಿದನಂಗ ತಾಪದೊ ।
ಳಿನಿಯನದೆಂತಿರ್ಕುಮೆಂದು ಮೊದಲೊಳ್ ಪೊಕ್ಕಳ್ ॥
ವನಿತೆ ನಿಜ ಹೃದಯ ಸದನದೊ ।
ಳೆನೆ ಕಣ್ಗಳನಿರದೆ ಮುಚ್ಚಿ ಮೂರ್ಛಿತೆಯಾದಳ್ ॥೫೬॥

ತಱಿಸಂದು ಮಱವೆಯಿಂದಂ ।
ಕಿಱಿದಾನುಂ ಪೊಟ್ತುಮಲ್ಲಿ ದೇವಿಯರಿಂತೆ ॥
ಟ್ಟಿಱನೆಯ್ದಿರೆಯುಮಂಜಿಯೆ ।
ನಱುಸುಯ್ಗಾ ಕೈಯನೊಡ್ಡಿ ನೋಡುತ್ತಿರ್ದೆಂ ॥೫೭॥

ಆ ಸಮಯದೊಳ್—

ಚಂ॥ ಎಳಸೆ ನಿರೀಕ್ಷಿಸಲ್ ನಯನ ರಂಧ್ರದಿನಂದೊಳಪೊಕ್ಕು ಚಿತ್ತದೊಳ್ ।
ತೊಳಗೆ ವಿಚಿತ್ರ ರೂಪ ಮಿಷದಿಂದೆಸೆವಾ ನಿಜ ನಾಥನಂ ನಿರಾ ॥

---

1. ಯೊಳ್. 2. ದನುಕೂಲ.

ಕುಳದೊಳೆ ಪೋಗಲೀಯದಿರುತಿರ್ದಪಳೆಂದೆನೆ ಮೂರ್ಛೆ ಬೆಚ್ಚ ಕ।
ಣ್ಗಳನೊಳಗುಣ್ಮಿದಶ್ರುವರೆ ಬೀರ್ಚೆ ಲತಾ ಲಲಿತಾಂಗಿ ನೋಡಿದಳ್ ॥೫೮॥

ಅಂತು ನೋಡುತ್ತೆ ಮತ್ತಮಿಂತೆಂದಳ್—

ಚಂ॥ [1]ಎಡೆವಿಡದುಣ್ಮಿ ಕೆಕ್ಕೆಗಿಳಿದಶ್ರು ಕಣಾವಳಿಯಂ ನಖಾಗ್ರದಿಂ।
[2]ಮಿಡಿಯುತುಮಾಲಿಯಂ ಪುದಿದ ಬಾಷ್ಪಮನೊಯ್ಯನೆ [3]ಲೋಲ ಪಕ್ಷ್ಮದಿಂ ॥
ಕಡೆಗೆ ತೆರಳ್ಚಿ ಮೆಲ್ಲನೆ ಮುದಾಸ್ಯಮನೀಕ್ಷಿಸುತುಂ ಕಟಾಕ್ಷಮುಂ।
ತಡಱ ಪರೀತ ಸೇವಕ ವಧೂಜನಮಂ ತರಳಾಕ್ಷಿ ನೋಡಿದಳ್ ॥೫೯॥

ಅಂತು ನೋಡುತ್ತುಂ ಮತ್ತಮಿಂತೆಂದಳ್—

ಉ॥ ಸನ್ನಿಧಮಪ್ಪುದಂತದು ಮೃಡಾಣಿಯ ಸದ್ಮದೊಳಾದ ದಿವ್ಯ ನಾ।
ದನ್ನರನಾಥ ಕಂತುವನೆ ಕಾಣ್ಬುದು [ಮಾನಿನಿ] ತಪ್ಪದೆಂದು ತಾ ॥
ನಿನ್ನೆಗಮೆನ್ನನಿಂತು ಕಳಭಾಷಿಣಿ ನಂಬಿಸುತಿರ್ದಳೋವಿದೊಂ।
ದನ್ನೆವ[4]ವಿಟ್ಟಿಸುತ್ತೆ ಸುರಿದಳ್ ಕುಸುಮಾವಳಿ ದೇವಿ ಬಾಷ್ಪಮಂ ॥೬೦॥

ಎಲ್ಲಿಯು ದೇವಿ ದಿವ್ಯ ರತಿಯೆಲ್ಲಿಯದೆನ್ನ ಮರುಳ್ತನಕ್ಕೆ ತಾ।
ನಿಲ್ಲದ ಮಾತನಾಡಿ ಪಿರಿದುಂ ಕಳಭಾಷಿಣಿ ಬೋಧೆಗೆಯ್ದಳಂ ॥
ತಲ್ಲದೆ ದುಷ್ಕೃತಾತ್ಮೆಗೆನಗಪ್ಪುದೆ ವಾಂಛಿತಮೆಂದು ಸುಯ್ದು ಶುಂ।
ಭಲ್ಲಲಿತಾಂಗಿ ಕಂದಿ [5]ಕಡು ಸುಯ್ದಿರದಿಕ್ಕಿದಳಶ್ರು ವಾರಿಯಂ ॥೬೧॥

ಚಂ॥ ಅನುದಿನಮಂಗಜಾನಳನೊಳಿರ್ಪನಿತಂ ನೆಱ ನೋಂತು ದುಃಖ ಭಾ।
ಜನೆಯೆನಿಪೆನ್ನನಿನ್ನೆಗಮುವಳ್ ಸಲೆ ಸಂವರಿಸಿರ್ದಳೀಗಳಾ ॥
ಮನಮುದು ಬೇಸಱಾ ಪುದಿಯೆಯುಂ ಕಳಭಾಷಿಣಿ ಪೋದಳಕ್ಕುಮೆಂ।
ದೆನುತೆನಸುಂ ಪಲುಂಬಿ ಕುಸುಮಾವಳಿ ಕಂಬನಿಯಂ ಕಟಲ್ಚಿದಳ್ ॥೬೨॥

ಮದನ ದವ ಜ್ವಲಜ್ಜ್ವಲನ ತಾಪದಳುರ್ಕೆ ನಿಮಿರ್ಕೆವೆತ್ತುದಿಂ।
ತಿದನೆ ನಿರಂತರಂ [6]ಮನದೆ ಕೊಂಡೊಡನಾದುದು [7]ನಣ್ಪು ಜೀವ ರೂ ॥
ಪದ ಸಖಿ ಬಿಟ್ಟು ಪೋದಳೆನಸುಂ ಕಳಭಾಷಿಣಿಯೆಂದಿನಿತ್ತನಾ।
ಡಿದಳದಱಂ ಒಱಕ್ಕೆ ನುಡಿ ನಿಂದುದು ದೇವಿಯ ವಕ್ತ್ರ ಪದ್ಮದೊಳ್ ॥೬೩॥

---

1. ಎಡವಿಡದಾಕೋಕೆ. 2. ಸಿಡಿಯುತು. 3. ಪಕ್ಷ್ಮಲೋಲದಿಂ. 4. ವಿಟ್ಟವೆನುತ್ತ
5. ಸೆಡು. 6. ಪುಗೆಗೊಂಡೆಂಡ. 7. ನಪ್ಪು.

ಇಂತೆಂದು ನುಡಿದು ಮಾತಂ ಮಾಣ್ದು ಕುಸುಮಾವಳಿ ದೇವಿಯ ಭಂಗಿಯಂ ಭಾವಿಸಿ ಭಯ ಚಕಿತ ಚಿತ್ತೆಯರಾಗಿ ಚತುರಿಕೆಯುಂ [1]ಕುಂಚಿತಾಳಕೆಯುಂ ವಾಸಂತಿಕೆಯುಂ ಮಯೂರಿಕೆಯುಂ ಮಂದಾರಿಕೆಯುಂ ಮಾಳತಿಕೆಯುಂ ಮಂದಾಳಿಕೆಯುಂ ಮತಂಗಿಕೆಯುಂ ತಮಾಳಿಕೆಯುಂ ಮೊದಲಾದ ಪರಿಚಾರಿಕಾ ಜನಂ ನಿನ್ನನೆ ಬರೆ ಪಾರುತ್ತುಮಿರ್ದರೆಂದು ಮಂದಾರಿಕೆ ಪೇೞ್ದುದಂ ಕೇಳ್ದು—

ಚಂ॥ ಭಯ ಚಕಿತಾತ್ಮೆಯಾಗಿ ಕಳಭಾಷಿಣಿ ಭೂಪ ಮನೋಭವಂಗೆ [2]ದೇ।
ವಿಯ ತೆಱವೆಂತುಟೆಂಬುದನೆ ಮುಂ ಕೆಳೆಯಂ ಬೆಸಸೆಯ್ದೆ ಕೇಳ್ದು ವಿ॥
ಸ್ಮಯ ಮನನಾಗುತಿರ್ದೊಡನವಳ್ ಮಗುಳಾಗಳೆ ಪೇೞ್ದು ದೇವ ನಿ।
ಮ್ಮಯ ನಯನಾಂಶು ಭಾಜನೆಯನಾಗಿಪುದೀಗಳೆ ಬಂದು ಕಾಂತೆಯಂ ॥೬೪॥

ಎನೆ ಆ ಸಮಯದೊಳ್—

ಉ॥ ಇಂದು ನರೇಂದ್ರ ಕಂತು ಕುಸುಮಾವಳಿ ದೇವಿಯೊಳೊಂದುವೊಂದಲಂ।
ಪಿಂದಿರದೀಗಳಂತೆ ನಡೆತಂದಪನೀ ಪದದಲ್ಲಿಯಾತನಾ॥
ಸ್ಯೇಂದುವನಾನಭೀಕ್ಷಿಸಿಯೆ ನಿರ್ಮಳನಾದಪೆನೆಂದು ನೋಡಲೆ।
ೞ್ತಂದವೊಲೇಱಿದಂ ದಿವಿಜ ದಿಕ್ಕುಧರೇಂದ್ರಮ[3]ನಂದು ಚಂದ್ರಮಂ ॥೬೫॥

ಮ॥ ಅಮೃತಾಂಭೋನಿಧಿಯೆಂಬ ನಾಮಮನದಂ ತಾಳ್ದಿರ್ಪುದೌರ್ವಾಗ್ನಿ ಧೂ।
ಮ[4]ಮಿಳದ್ಗರ್ಭಮುಪೇತ ಕೃಷ್ಣನೆನಸುಂ ತಾನೆಂದು ತಾರಾಚಲೇಂ॥
ದ್ರಮಣಂ ನಗೆ ನೀೞ್ದ ತತ್ಪ್ರಹಸನ ಪ್ರದ್ಯೋತಮೊ ಪೇೞ[3]ನ।
ಲ್ಕಮರ್ದಾ ಚಂದ್ರಿಕೆಯೊಳ್ ಸಮಂತು ಪೊಱಮಟ್ಟಂ ಭೂಪ ಪುಷ್ಪಾ
ಯುಧಂ ॥೬೬॥

ಇಂತು ಬರ್ಪಾಗಳ್—

ಮ॥ಸ್ರ॥ ನೆರೆಯಳ್ ತಾನೀಯಳೆಮ್ಮಂ ಸವತಿತನಕೆ ಶೀತಾಂಶುವಂ ರೋಹಿಣೀ ಸೌಂ।
ದರಿಯೆಂದೆೞ್ತಂದು ದೂರಲ್ಕೆಱಗಿದಮಳ ತಾರಾಳಿಯೋ ಪೇೞ[3]ನಲ್ಕಾ॥
ಚರಣೋದಂಚನ್ನಖ ಶ್ರೇಣಿಯ ರುಚಿ[ನಿಜ]ಯಂ ತದ್ವನಕ್ಷೋಣಿಯಂ ಮುಂ।
ಬರಿದೆತ್ತಂ ನಾಡೆ ರಾಗಂಗೊಳಿಸುತಿರೆಯುಮಿಂತೆೞ್ತರುತ್ತಿರ್ದನಾಗಳ್ ॥೬೭॥

1. ಯುಂಚಕಾಲಿಗೆ. 2. ವೇ।ದಿಯ. 3. ನಾದ. 4. ವಿಳಸದ್ಗರ್ಭ.

ಸ್ಫುರಿತಾತ್ಮಾಂಗ ಪ್ರಭಾ ಮಾಲಿಕೆ ತರು ನಿಚಯ ಧ್ವಾಂತಮಂ ನೀಟ್ಟು
ತೂಳ್ದು ॥
ತ್ತಿರೆಯುಂ ಪಾದೋಲ್ಲಸತ್ಪಲ್ಲವ ರುಚಿ ನಿಚಯಂ ತದ್ವನ ಕ್ಷೋಣಿಯಂ ಮುಂ ।
ಬರಿದೆತ್ತಂ ನಾಡೆ ರಾಗಂಗೊಳಿಸುತಿರೆಯುಮಿಂತೆಯ್ತರುತ್ತಿರ್ದನತ್ಯಾ ।
ತುರ ಚಿತ್ತಂ ಮಿತ್ರ ಹಸ್ತ ನ್ಯಸನ ಕರತಳಂ ಭೂಪ ಕಂದರ್ಪದೇವಂ ॥೬೮॥

ಕಂ॥ ಇನಿಯಳ ತನು ಸಂಗಮನಾಂ ।
[1]ಪನುಮಿಂ ತಾನಲ್ತೆ ಬಂದನನುಪಮನೆನುತುಂ ॥
ತನು ರುಚಿ ಮುಂಬರಿಯೆ ಮನೋ ।
ಜ ನರೇಂದ್ರಂ [ಜನದಿ]ನಿಂತು ನಡೆತರುತಿರ್ದಂ ॥೬೯॥

ಮ॥ಸ್ರ॥ ಎನಸುಂ ತಾನಿರ್ಪಳೆನ್ನೊಳ್ ತೊಲಗದದರಱಿನೀ ಬಾಲೆಯಂ ಪುಷ್ಪಧನ್ವಂ ।
ಮುನಿದೆಂದುಂ ಬಾಧಿಪಂ ಬಾಧಿಸುವುದವನೆ ನಿನ್ನಾತನಿನ್ನಾತನಂ ಬಂ ॥
ದೆನುತುಂ ಭಾಸ್ವದ್ವನ ಶ್ರೀಕರೆ ಬಱಿವರುತಿರ್ಪಾ ವಸಂತಂ ಸಮಂತೆಂ ।
ಬಿನೆಗಂ ಕಂದರ್ಪ ದೇವಂ ತರುಣಿಯ ಪೆಱಗಿಂತೆಯ್ತರುತ್ತಿರ್ದನಾಗಳ್ ॥೭೦॥

ಆ ಸಮಯದೊಳ್—

ಮ॥ಸ್ರ॥ ಮನದೊಳ್ಮಂಜೇಱಿದಂತಾಳಿಯರಿರದೆಪಯೋಮಂತ್ರದಿಂ ಸೂಸುವಾ ಚಂ ।
ದನ ಶುಭ್ರಾಂಭಸ್ತು[2]ಷಾರೋತ್ಕರದ ಮುಸಕದಿಂ ನೋಡೆ ಕಣ್ಗೈಕಿಲಂ ಭೋಂ ॥
ಕನೆ ಬೀರುತ್ತುಂ ಹಿಮ ಸ್ರೋಮದ ಕಣಿ ಶಿಶಿರ ಶ್ರೀಯ ಜನ್ಮಸ್ಥಳಂ ತಾ ।
ನೆನಿಪಾ ಧಾರಾ ಲಸನ್ಮಂದಿರಮನದನಿಳಾಧೀಶ ಪುಷ್ಪೇಷು ಕಂಡಂ ॥೭೧॥

ಕಂ॥ ಕೆಳದಿಯರೊರ್ಮೊದಲೊಪ್ಪುವ ।
ಜಳ ಯಂತ್ರೋನ್ಮುಕ್ತ ತುಹಿನ ಸೂಕ್ಷ್ಮಾಂಬು ಕಣಾ ॥
ವಳಿ ಮುಸುಱುತೆ ಮೆಯ್ಯ ಕುಸುಮಾ ।
ವಳಿಯುಂಬೊಳಕೊಂಡ ಕಂಜದಂತಿರುತಿರ್ದಳ್ ॥೭೨॥

ಚಂ॥ ತನತನಗಾಳಿಯರ್ ತಳೆದು ತಜ್ಜಲ ಯಂತ್ರದಿನೊತ್ತಿ ಸೂಸುತಿ ।
ರ್ಪನುಪಮ ಚಂದನೋದಕ ತುಷಾರದ ತುಂತುರು ತಳ್ತಿರಲ್ಕೆ ತೊ ॥
ಟ್ಟನೆ ತನು ಶೀಕರಂ ನೆಗೆದ ಪಾಲ್ಗಡಲೊಳ್ ಪೊಱಿವಿಂದುಲೇಖೆಯಂ ।
ನೆನೆಯಿಸುತಿರ್ದಳಿಂತು ಕುಸುಮಾವಳಿ ದೇವಿ ಲತಾಂತ ಶಯ್ಯೆಯೊಳ್ ॥೭೩॥

1. ತನುವಿಂನಾತನಂ ಬಂದೆನು ತನ್ನನುಪಮ ರುಚಿ, 2. ಪೌಲೋಕರದ.

ಕಂ॥ ತನುವಂ ತದೀಯ ಕಂತುಗೆ ।
ಮನಮಂ ಮಿಗೆ ಭೂಪ ಕಂತುಗೊಪ್ಪಿಸಿ ತನ್ನಾ ॥
ನಿನಿ ವೌನೆಯಾದ ತೆಱದಿಂ ।
ತನಗೆಟ್ಚಱು ತೊಲಗೆ ಕುಸುಮ ತಳ್ಪದೊಳಿರ್ದಳ್ ॥೭೪॥

ಮ॥ಸ್ರ॥ ಇರದತ್ಯಾಸಕ್ತಿ ಮುಂದುಯ್ದುದು ತವಕದಿನೆಂಬಂತಿರಾತ್ಮೀಯ ನೇತ್ರ ।
ಸ್ಫುರಿತಾಂಶು ಶ್ರೇಣಿ ತಾಂ ಮುಂಬರಿಯೆ ನೃಪ ಮನೋಜಂ ತುಷಾರೋ
ಲ್ಲಸನ್ಮಂ ॥
ದಿರಮಂ ಸಾರ್ತಂದು ಬಲ್ಮುತ್ತುಗಳೊಳೆಸೆವ ಸೀಲಂಗಳಂ ಕೋದವೋಲ್[1]ಪ ।
ಟ್ಚರಣ ವ್ಯಾಮಿಶ್ರದಾ[2]ಪೂವಿನತೆರೆಯೆಡೆಯೊಳ್ ಬಂದು ನಿಂದಿರ್ದನಾಗಳ್॥೭೫॥

ಆ ಸಮಯದೊಳ್—

ಮ॥ಸ್ರ॥ ವಿಲಸಲ್ಲಾವಣ್ಯ ಶೇಷ ಸ್ಥಿತಿಯೆನಿಸಿಪ ಕೃಶಾಂಗಂ ಬೆಳರ್ಪೇಱಿದಾಸ್ಯೋ ।
ಜ್ಜ್ವಲ ಪದ್ಮಂ ತ್ಯಕ್ತಹಾರ ಸ್ತನಕಲಶ ಯುಗಂ [3]ವ್ಯಸ್ತ ಭೃಂಗಾಳಕಂ ಪ್ರ ॥
ಸ್ಖಲಿತೋದ್ಯದ್ವೇಣಿ[4]ಬಾಸುೞ್ವರದಮಳ ಕಪೋಲ ಸ್ಥಳಂ ತಾಪದಿಂದಿ ।
ರ್ಪಳಿದಾ ಬಿಂಬಾಧರಂ [5]ನೂರ್ಮಡಿಸಿತಬಲೆಯೊಳ್ ತೋರ್ಪ ಸೌಂದರ್ಯ
ದೊಳ್ಪಂ ॥೭೬॥

ಕಂ॥ ತನುತೆ ನೆಲೆಗೊಂಡು ಮೊಗಮೊ ।
ಯ್ಯನೆ ಶಬ್ದದ ಸುೞಿವನುೞಿವು ತರುಣಿ ಲಸದ್ವಾ ॥
ಹಿನಿಯಂತೆ ಕಂಠಗತ ಜೀ ।
ವನೆಯಾಗಿರ್ದಳನಿಳೇಶ ಮದನಂ ಕಂಡಂ ॥೭೭॥

ಚಂ॥ ವಿರಹದಳುರ್ಕೆಯಿಂ ತನು ತನುತ್ವಮನೆಯ್ದಿರೆ ತನ್ನ ಚೆಲ್ವು ಬಿ ।
ತ್ತರಿಸೆ ಸಹಸ್ರ ಭಂಗಿಯನೆ ಮೋಹಿಸಿ ತತ್ಕುಸುಮಾವಳೀ ವಿಭಾ ॥
ಸುರ ತರ ತಲ್ಪದೊಳ್ ತೊಳಗುತಿರ್ದಳನಾ ಕುಸುಮಾವಳೀ ತನೂ ।
ದರಿಯನಡುರ್ತು ಭೂಪ ಕುಸುಮಾಯುಧನಿಂತೆರ್ದೆಯಾಱೆ[3] ನೋಡಿದಂ ॥೭೮॥

ಆ ಸಮಯದೊಳ್ ಕಳಭಾಷಿಣಿ ದೇವ ನೀಮಿಲ್ಲಿರಿಮೆಂದು ಕುಸುಮ ಕಾಂಡಪಟದಿಂದೊಳಪೊಕ್ಕು ನೋೞ್ಪಾಗಳ್—

1. ಸಜ್ಜರಣ. 2. ಪೂವಸಿತೆರೆ. 3. ಭ್ಯಸ್ತ. 4. ಬಾನಲ್ವುರದ.
5. ನೂರ್ಮಡಿಸಿಲ.

ಮ॥ಸ್ರ॥ [1]ಸುರಿತಂದಶ್ರು ಪ್ರವಾಹಂ ಬಱತೊಣಗಿದ ಬಾಸುೞ್ಮ್ರಗಂ ಪೂಸೆಯುಂ ಕಾ।
ಯ್ದಿರದೆೞ್ದಾ ಚಂದನಾಲೇಪದ ತೆಗಳಿಕೆಗಳ್ ತಂಗದಿರ್ಪಾಱು [2]ಪ್ರುಳ್ಪಿ ॥
ರ್ದಱುಣೋಷ್ಠಂ ಬೆಚ್ಚವೋಲ್ ಮುಚ್ಚಿದ ನಯನ ಯುಗಂ ಹೃತ್ತಟ ನ್ಯಸ್ತ ಹಸ್ತಾಂ।
ಬುರುಹ ವ್ಯಸ್ತಾಳಕಂಗಳ್ವೆಱಸಲರ್ವಸೆಯೊಳ್ ಕಾಂತೆಯಿಂತಿರ್ದಳಾಗಳ್ ॥೭೯॥

ಅಂತಿರ್ದಿರವಂ ಕಂಡು ಕಳಭಾಷಿಣಿ ಪತ್ತೆ ಸಾರ್ದು—

ಕಂ॥ ಅಸಮಾಸ್ತ್ರಾನಲನಂ ಸಂ।
ದಿಸಲಭಿಷೇಚಿಸುತುಮಿರ್ದಳಮೃತಮನೆಂಬೊಂ॥
ದೆಸಕಂ ಮಿಗೆ ಕಳಭಾಷಿಣಿ।
ಮಿಸುಗುವ ದಶನಾಂಶು ನಿಮಿರೆ ನುಡಿಸಿದಳಾಗಳ್ ॥೮೦॥

ಚಂ॥ ತಡೆಯದೆ [3]ಮುನ್ನ ನಿನ್ನಭಿಮತಂ ದೊರೆಕೊಂಡಪುದಂಗಜಾಗ್ನಿಯಿಂ।
ಸೆಡೆಯದಿರೆಂದು ಸಾರಿದವೊಲಾಕೆಯ ನುಣ್ಣುಡಿ ಕರ್ಣ ರಂಧ್ರಮಂ॥
ತೊಡರ್ದೊಡಮಾಗಳಂತೆ ಕರಣೋತ್ಕರಮೆೞ್ಚಱನೆಯ್ದೆ ಬಾಷ್ಪಮಂ।
ಗುಡುಗುಡನಿಕ್ಕಿ ದೇವಿ ಕಳಭಾಷಿಣಿಯಾಸ್ಯಮನಿಂತು ನೋಡಿದಳ್ ॥೮೧॥

ಕಂ॥ ಮೊಗಮಿಾಯದೆನ್ನನೀ ಕಂ।
ತುಗೆ ನೀನಿಂತೊಪ್ಪುಗೊಟ್ಟು ಭೂವಲ್ಲಭ ಕಂ॥
ತುಗೆ ನೀಂ ಸಹಾಯಳಾದಾ।
ಬಗೆಯದೆ ಕಳಭಾಷಿಣೀ ಮದೀಯ ಪ್ರಿಯಮಂ ॥೮೨॥

ಉ॥ ಇಂದುವರಂ ಮದೀಯ ತನುಗಪ್ಪ ಮನೋಜ ದವಾಗ್ನಿ ತಾಪಮಂ।
ನಿಂದಿಸುತುಂ ಪ್ರಬೋಧಿಸುತುಮಿಾಯಸುವಂ ಪಿಡಿದಿರ್ಪೆನೀಗಳೀ॥
ದಂದುಗಮೊರ್ಮೆಯುಂ ಬಿಡದುದರ್ಕೆನಸುಂ ಮನದಲ್ಲಿ ಬೇಸಱೇ॥
ನೊಂದಿತೆ ಪೇೞದಲ್ಲದೊಡೆ ನೀಂ ಕಳಭಾಷಿಣಿಯಂತಗಲ್ವಳೇ ॥೮೩॥

ಮಾಯದ [4]ಬೇಟದೊಳ್ ನವೆವ ನಾಣಿಲಿಯೆನ್ನವೊಲನ್ಯಳಾವಳೀ।
ಮಾಯದ ಚಿತ್ರರೂಪ [5]ಮಿಷದಿಂ ಕೊರಚಾಡುವ ಭೂಪ ಕಂತುವಿಂ॥

---

1. ಸುತರಿಂದ ಸುಪ್ರವಾಹಂ. 2. ಶುಳ್ಪಿ. 3. ನಿನ್ನಮನಮಭಿಮತಂ.
4. ಬೆಟ್ಟದೊಳ್. 5. ವಿಷದಿಂ.

ದಾಯತಿಗೆಟ್ಟು [1]ಬನ್ನವಿನಿತಾಯ್ತೆನಗಿಂತಿದನೋವುವನ್ನರಾ।
ತ್ಮೀಯರದಾರ್ ಸಮಂತು ಕಳಭಾಷಿಣಿ ನೀಂ ಪೊಜಗಾಗೆ ಕಾಂತೆಯರ್ ॥೮೪॥

ಇಂತು ನುಡಿಯೆಯುಂ ಪ್ರತಿವಚನ ಪ್ರದತ್ತೆಯಾಗದ ಕಳಭಾಷಿಣಿಯುಂ ನೋಡಿ—

ಚಂ॥ ನೆಳಲವೊಲೊರ್ವೆಯುಂ ಬಿಡದೆ [2]ನೀನೆನತಾದೊಡೆಯುಂ ಮನೋಭವಾ।
ನಳನ ಪೊದಲ್ದವಸ್ಥೆಯನಿದಂ ಪರಿಗೊಂಡಳೆನಿಪ್ಪ ಭಂಗಿಯುಂ ॥
ತಳೆದಿರುತಿರ್ಪುದರ್ಕಲಸೆಯುಂ ಕಳಭಾಷಿಣಿ ಬಿಟ್ಟು ಪೋದೆ ಸಂ।
ಗಳಿಸಿದ ಬೇಟದಿಂ ಕುದಿವ ಕೋಟಲೆಗಾರೊಡಸಂದು ಪೊಂದುವರ್ ॥೮೫॥

ಉ॥ ಕೂಡುವ ಬೇಟಮಾಗದೊಡನೋವುವರೊಲ್ಮೆಯ ಮಾತನೊಲ್ದು ಮಾ।
ತಾಡುವರಿರ್ಬರೊಳ್ ಪ್ರಿಯಮನುದ್ಭವಿಸುತ್ತೆಡೆಯಾಡಿ ಕೂಟಮಂ ॥
ಮಾಡುವರೆಲ್ಲಿಯುಂ ಸಖಿಯರೆನ್ನಯ ಬೇಟಮದೆಂತುಮಿಲ್ಲಿ ಕೈ।
ಗೂಡುವುದಲ್ಲದೆಂದು ಕಳಭಾಷಿಣಿ ಬೇಸಱನಿಂತು ತಾಳ್ದಿದೈ ॥೮೬॥

ಮ॥ ನಿನಗಿಂತಾಂ ಕಳಭಾಷಿಣೀ ಮನಕೆ ನೋವಪ್ಪಂತೆ ಮಾತಾಡಿ ನೋ।
ವನದೇಕೆಯ್ದುಲನಂಗ ದಾವ ಶಿಖಿಯಿಂದೋರಂದದಿಂ ನೋವ ನೋ ॥
ವೆನಗೇನೆಯ್ದದೆ ಪೇೞೆನುತ್ತಬಲೆ ಮೆಯ್ ಕೆತ್ತಲ್ ಕರಂ ಗದ್ಗದ।
ಸ್ವನದಿಂ ಬಿಕ್ಕುತುಮಿಕ್ಕಿದಳ್ ಬಿಡದೆ ಭೋರೆಂಬಂತೆ ಬಾಷ್ಪಾಂಬುವಂ ॥೮೭॥

ಅದಂ ಕಂಡು ಕಳಭಾಷಿಣಿ ಕುತೂಹಲ ಮನಸ್ಕೆಯಾಗಿಂತೆಂದಳ್—

ಮ॥ ತಡೆದಾನಿರ್ಪವಳೇಂ ತ್ವದೀಯ ಪರ ಸೇವಾಸಕ್ತಿಯುಂ ಬಿಟ್ಟು ನೋ ॥
ಟಪ್ಪೊಡೆ ಕಾರ್ಯಮಂ ಪೇೞತುಂಟೆ ದೇವಿ [3]ತಳಿರಂ ಪಾಸಿಂಗೆ ಮೆಯ್ಗುಚ್ಚ ಪೂ ॥
ದೊಡವಂ ತಂದಪೆನೆಂದು ರಮ್ಯಕ ವನಕ್ಕಾಂ ಪೋಗೆ ಪೋದಲ್ಲಿ ನಿ।
ಮ್ಮಡಿಗಾನೆಂದುದು ಸತ್ಯಮಾಯ್ತೊಗೆದ ದಿವ್ಯಾವಾಸ ದಿವ್ಯ ಸ್ವನಂ ॥೮೮॥

ಕಂ॥ ದೇವಿ ಪೇೞತೇಂ ಭವಚ್ಚೇತೋ।
ಪರ ಕಂದರ್ಪದೇವ ದರ್ಶನಮೆನಗಾ ॥

---

1. ಬಳ್ಡುವಿಸಿ. 2. ನೀನೆನೆಸದಾದ ನಡೆಯುಂ. 3. ತಳರಿಂ.

ಯ್ತಾ ವನದೊಳಿಂತು ತಡೆದೆನ ।
ದೇವೇಟ್ವೆನೆನುತ್ತುಮಬಲೆ ತಾನಿಂತುಸಿರ್ದಳ್ ॥೭೯॥

ಮ॥ ಇನಿಯಂ ಕಣ್ಬೊಲನಾದನೆಂಬ ನುಡಿ ಕರ್ಣೋಪಾಂತಮಂ ಸೋಂಕೆ ಮೆ ।
ಯ್ಯನಿಲಂ ಸೋಂಕಿದ ಕಲ್ಪವಲ್ಲಿಯವೊಲಾಗಳ್ ಕಂಪನಂಗೊಂಡು ತೊ ॥
ಟ್ಟನೆ ರೋಮಾಂಚಮನಪ್ಪುಕೆಯ್ದು ನಯನಂ ಹರ್ಷಾಶ್ರುವಂ ತಾಳೆ ಕಾಂ ।
ತೆ ನಿಜ ಸ್ವಾಂತದೊಳಾದ ಸೌಖ್ಯಸುಧೆಯೊಳ್ ತಾನಿರ್ದಳೋಲಾಡುತುಂ ॥೮೦॥

ಇಂತು ಕಿಱಿದಾನುಂ ಪೊಟ್ತುವರಮಿರ್ದಾಗಳ್—

ಕಂ॥ [1]ತಡೆದಿರ್ದುದರ್ಕಿದೊಂದಂ ।
ನುಡಿದಾಶಿಪೆ ಮನಮನೆಲೆಗೆ ಕಳಭಾಷಿಣಿಯೆಂ ॥
ದಡರ್ದುತ್ಸವಾಶ್ರುವಂ ಸತಿ ।
ಪಿಡಿಯುತ್ತಲರ್ವಸೆಯೊಳೆಟ್ಟು ತಾಂ ಕುಳ್ಳಿರ್ದಳ್ ॥೮೧॥

ಮಾಲಿನಿ॥ ಅನೃತಮಿದು ದಲೆಂ[2]ದಿಂತೆನ್ನದಿರ್ ದೇವಿ ಕಾತ್ಯಾ ।
ಯನಿಯ ವರವದೆಂತುಂ ಸತ್ಯಮಾಯ್ತೆಂದು ತಾನಾ ॥
ಕನಕಲತೆಯ ಕೈಯಲ್ಲಿರ್ದುದಂ ಕೊಂಡು ಚಿತ್ರಾಂ ।
ಗನೆಯ ಪಟಮನಾಗಳ್ ನೀಡಿದಳ್ ನೋಡೆನುತ್ತುಂ ॥೮೨॥

ಉ॥ ತನ್ನಯ ರೂಪು ತನ್ನವಯವ ಸ್ಥಿತಿ ತನ್ನಯ ವರ್ಣ ವಿಭ್ರಮಂ ।
ತನ್ನಯ ನಾಮಮಾಗಿರೆಯುಮಾ ಪಟ ಚಿತ್ರಮನೆಯ್ದೆ ನೋಡುತುಂ ॥
ತನ್ನಯ ಚಿತ್ತದಲ್ಲಿ ಕುಸುಮಾವಳಿ ವಿಸ್ಮಯಮಿಂತಿದೇನೆನು ।
ತ್ತುನ್ನಯನ ತ್ರಿಭಾಗದಿನಭೀಕ್ಷಿಸಿದಳ್ ಸಖಿಯಾಸ್ಯ ಪದ್ಮಮಂ ॥೮೩॥

ದೇವಿ ಸಮಂತು ನಿನ್ನವೊಲದೊರ್ಮೆ ವಿಹಾರಿಸುತುಂ ವನಾಂತದೊಳ್ ।
ಭೂವರ ಕಂತುವೀ ಪಟದ ಚಿತ್ರಮ[3]ನೀಕ್ಷಿಸಿ ನಾಡೆ ಸೋಲ್ತು ಮೇ ॥
ಧಾವಿಳನೆಂಬವಂ ಬೆರಸಿದಂ ಪಿಡಿದಿಂತು ಬರುತ್ತುಮಿರ್ದುದಂ ।
ಭಾವಿಸಿ ಕಂಡೆನಿಂದೆಸೆವ ರಮ್ಯಕ ನಾಮ [4]ವನಾಂತರಾಳದೊಳ್ ॥೮೪॥

ಕಂ॥ ಕಿಱಿದಾನುಂ ಪೊಟ್ತುವರಂ ।
ನೆಱೆ ಸಾತ್ತ್ವಿಕ ಚೇಷ್ಟೆಗಳ ಪೊದಟ್ಕೆಯೊಳಿರ್ದಾ ॥

---

1. ತಡೆತಿರ್ದು. 2. ದೆನ್ನದಿರ್. 3. ನೋಡುತುಂ. 4. ವನಾಂತರದೊಳ್.

ನೞಿ ಸುಯ್ಗೆನಸುಂ ಮುಸುಕುವ ।
ಪೞಿಮೊಗಳಂ ಸುದತಿ ಸೋವುತಿರದಿಂತೆಂದಳ್ ॥೯೫॥

ಉ॥ ಬಂದುದು ಸತ್ಯಮೇಂ ಬನಕೆ ನೀಂ ತರೆ ಬಂಪನೆ ಬಂದನೇಂ ದಿಟಂ ।
ತಂದೆ ಗೆ ತಂದೆ ಗೇ ಕೆಳದಿ ಕಾಂತನನೆಂದೆನುತಂಗವಲ್ಲಿಯೊಳ್ ॥
ಸಂದಿಸೆ ಕಂಪನಂ ನಯನದೊಳ್ ತವಕಂ ತವೆ ಮಿಕ್ಕು ತಲ್ಲತಾ ।
ಮಂದಿರ[1]ದಂಟುಗೊಂಡದೆನಸುಂ ಕುಸುಮಾವಳಿದೇವಿ ನೋಡಿದಳ್ ॥೯೬॥

ಆಗಳತ್ಯಾಹ್ಲಾದದಿಂದೀಕ್ಷಿಸುವ ಕುಸುಮಾವಳೀ ದೇವಿಯ ಕಳಕಳವ ನೞಿದು ಕಳಭಾಷಿಣಿ ಮೆಲ್ಲನಿಂತೆಂದಳ್—

ಮ॥ ತರದೇಂ ಬರ್ಪುದೆ ತೊಟ್ಟನಿಲ್ಲಿಗೆ ಮಹೀಭೃತ್ಕಂತುವಂ ದೇವಿ ಮೆ ।
ಯ್ಗರೆದಾತಂ ಬರವೇೞ್ಕುಮೆಂದಿರದೆ ನಿನ್ನಂ ತಂದೆ ಚಂದ್ರಧ್ವಜಂ ॥
ಪಿರಿದುಂ ಕಾಯ್ದುಗ್ಗಮೊ ಕಾಯದಿರ್ಕುಮೊ ಸಮಂತೆಂದಾ[2]ಗಳಾನಂಜಿ ಸಾ ।
ದರದಿಂ ತಂದೆನದೊಂದು ಗುಪ್ತ ಕುಟಿಗಿಂತೀಗಳ್ ಭವತ್ಕಾಂತನಂ ॥೯೭॥

ಎಂದು ಇಂತು ಬಿನ್ನವಿಸಿದ ಕಳಭಾಷಿಣಿಯ ವಚನಕ್ಕೆ ಚಕಿತ ಮತಿ ಯಾಗಿ—

ಉ॥ ನೀನತಿ ಬುದ್ಧಿವಂತೆ ಕಳಭಾಷಿಣಿಯೆನ್ನದೆ ದುಃಪ್ರವೇಶಮೆಂ ।
ಡಾ ನೃಪ ಕಂತುಗಿಂತುಸಿರ್ವರೇನಿನನೀ ನುಡಿಗೇೞ್ದು ಜೇಸಜಂ ॥
ತಾನೊಳಕೈಯದಿರ್ದಪನೆ ಪೋದಪನೆಂಬಭಿಶಂಕೆಯಿಂ ಕರಂ ।
ಜಾನಿಸುತಿರ್ಕ್ಕಿದಳ್ ಕದಪನಾ ಕುಸುಮಾವಳಿ ಪಾಣಿ ಪದ್ಮದೊಳ್ ॥೯೮॥

ಅದಂ ಕಂಡು—

ಕಂ॥ ಇನಿತಂ ಕಲ್ಪಿಸಲೇಂ ದೇ ।
ವಿ ನರೇಂದ್ರ ಮನೋಜನಂ ಸಮಂತೀಗಳೆ [3]ತ॥
ರ್ಪೆನೆನುತ್ತಮೆ ಕಳಭಾಷಿಣಿ ।
ಕನಕಲತೆಯನಿರಿಸಿ ತಳರ್ದಳಂತಾ ಕ್ಷಣದಿಂ ॥೯೯॥

1. ದೀಂಟು. 2. ವಮಾನಂಜಿ. 3. ಬ॥ರ್ಪೆನೆನುತ್ತಮೆ.

ಅಂತು ತಳರ್ದು ಪೋಗಿ ತಂದಪ್ಪೆನೆಂಬುದಂ ಸತ್ಯಂ ಮಾೞ್ಪೆನೆಂದು ಕಂದರ್ಪದೇವನ ಸಮೀಪದೊಳ್ ನಿಂದಿರ್ಪುದುಂ—

ಕಂ॥ [1]ಎವಗೇನಿದು ಕಾರ್ಯಚ್ಛಲ ।
ಮವಳಂ ಪೆಱಪಿಂಗಿ[ದಂದಿ]ನಿಂ ಕಱುವಿಟ್ಟಾ ॥
ಯುವತಿಯ ರೂಪಮಿ[2]ದೆಂಬವೊ ।
[ಲವ]ಳಿರ್ದಳ್ ಜಾನಿಸುತ್ತೆ ಮಾನಿನಿಯಾಗಳ್ ॥೧೦೦॥

ಕುಸುಮಾಯುಧನಿಸುವೆಸನ ।
ಕ್ಕೆಸೆವಬಲಾ ರೂಪ ಲಕ್ಷ್ಯಮಂ ಬಿದಿ ನೆಱೆ[3] ನಿ ॥
ರ್ಮಿಸಿದಂದದೆ ಮಿಡುಕದೆ ಜಾ ।
ನಿಸುತಿರ್ದಂ[3]ತಾಗೆ ತನ್ನೊಳಿರದಿಂತೆಂದಳ್ ॥೧೦೧॥

ಉ॥ ತಂದಪೆನೀಗಳಿಂತು ನೃಪ ಕಂತುವನಾನೆನುತಿರ್ದು ಪೋಗಿಯೆ ।
ನ್ನಿಂದಿನಿತೊಂದು ಪೊೞ್ತು ತಡೆದಳ್ ಕಳಭಾಷಿಣಿ ಕಾಣೆಯಾಗಿ ಮುಂ ॥
ತಂದಿರವೇೞ್ದು ತಾಣದೊಳೆ ಕಾಣಳೊ ಕಾಣದುದರ್ಕೆ ನಾಣ್ಚಿ ಮೇಣ್ ।
ನಿಂದಳೊ ತಾನೆನುತ್ತಬಲೆ ಕಲ್ಪಿಸುವಳ್ ಪಲವುಂ ಪ್ರಕಾರದಿಂ ॥೧೦೨॥

ಮ॥ ತಡೆದಳ್ ತಾಂ ಸಖಿ ನಾಡೆಯುಂ ನೃಪ ಮನೋಜಂ ನಿಶ್ಚಯಂ ಬಂದನ ।
ಪ್ಪೊಡೆ ಪೇೞೇಕಿನಿತೊಂದು ಪೊೞ್ತು ತಡೆಯಲ್ಕಿನ್ನೊಳ್ ಮೃಷಾ ವಾದಮಂ ॥
ನುಡಿದುಂ ಬಾರದೆ ಪೋದಳೆಂದಬಲೆ ಭಾವೋದ್ಭೂತ ವಿಭ್ರಾಂತಿಯಿಂ ।
ನಿಡುಸುಯ್ದಳ್ ನಱುಸುಯ್ಗೆ ಸುತ್ತುವ ಮದಾಳಿಶ್ರೇಣಿ[4]ಪಾರ್ದೇೞ್ವಿನಂ ॥೧೦೩॥

ಇಂತು ಪಲುಂಬುತ್ತುಮಿರ್ದು ನಿಮಿಷಾರ್ಧಂ ವರ್ಷಾರ್ಧಮಾಗೆ—

ಮ॥ ಬರೆದಳ್ ಚಿತ್ರಮನೆನ್ನ ಪೋಲ್ವೆಯನಿದಂ ತಾನಿಂತಿದರ್ಕುರ್ವರೇ ।
ಶ್ವರ ಪುಷ್ಪಾಯುಧ[5]ನಲ್ಲಿ ಸೋಲ್ತಿದನೆ ಕೊಂಡೆೞ್ತಂದಸೆಂದೆನ್ನ ನೀ ॥
ಪರಿಯಿಂ ನಂಬಿಸಿ [6]ತೋಱಿದಳ್ ಸಖಿಯೆನುತ್ತಾ ಚಿತ್ರಮುಂ ಕೈಯನೆ ।
ತ್ತಿರದೀಡಾಡಿ ಲತಾಂಗಿ ಪೂವಸೆಯೊಳಾಗಳ್ ಮೆಯ್ಯನೀಡಾಡಿದಳ್ ॥೧೦೪॥

---

1. ಯೆವಗೇಳುಮಿದು ಕಾರಿಯಚಲ. 2. ದಂತ್ಯ. 3. ತಾನೆ. 4. ಪಾರೇಳಿಸಂ. 5. ನಲ್ತಿಪೊಲ್ತಿದನೆ. 6. ತೊದದಳ್.

ಇದು ನೀನಿರ್ಪ ನಿವಾಸಮೆಂದಱುದುಮೆನ್ನೀ ಸ್ವಾಂತಮಂ ಕಾಂತ ಮಾ ।
ಣದಿಸುತ್ತಿರ್ದಪನಲ್ತೆ ನಿನ್ನಯ ಪೆಸರ್ ತಾನಪ್ಪ ಕಂದರ್ಪನಂ ॥
[1]ತದಱಿಂದೀಗಳೆ ಬಂದು ಬಾರಿಪುದೆನುತ್ತಿರ್ದಲ್ಲಿ ಮೆಯ್ಯಿಕ್ಕುವಂ ॥
ದದಿನೀಡಾಡಿದಳಾ ಲತಾಂಗಿ ತನುವಂ ನಿರ್ವೇಗದಿಂ ಶಯ್ಯೆಯೊಳ್ ॥೧೦೫॥

ಬಿಸುಸುಯ್ ನೀಳ್ದು ಲತಾಂಗಮಿರ್ಪಟೀದು ಬಾಷ್ಪಂ ಕಾಟ್ಪಿರಂಗೊಂಡ ವ ।
ಕ್ತ್ರ ಸರೋಜಂ ಪೊಳಪೋಡಿ ಬಾಡಿ ಪುಳಿಬೇಟಿದ್ದೋಷ್ಠಂ ಕುರುಳ್ ಸೂಸುವೇ ॥
ಣಿ ಸಡಿಲ್ದೊಳ್ಪುಡೆ ಜೋಲ್ವ ಮೆಲ್ಲೆರ್ದೆ[2]ಯಿವಿಂತಾಗಲ್ಕೆ ಪಾರುತ್ತುಮಿಂ ।
ತಸಮಾಸ್ತ್ರ ವ್ಯಥೆಯಿಂ ಬಿಗುರ್ತಬಲೆ ಮೆಯ್ಯಿಕ್ಕಿರ್ದಳಾ ಶಯ್ಯೆಯೊಳ್ ॥೧೦೬॥

ಮ॥ಸ್ರ॥ ಸ್ಮರವಹ್ನಿ ಜ್ವಾಲೆ ಮೆಯ್ಯಿಂದೊಗೆದು ಪೊಗೆಯನು[3]ಳ್ಕೊತ್ತಿಯುಂ ಪುಷ್ಪ ಶಯ್ಯಾಂ ।
ತರದೊಳ್ಸುಯ್ವೆಂಕೆಸಾಲ್ ಮೇಳಿಸೆಯುಮೆಳಸುವಾಭೃಂಗ ಸಂಘಾತಮಂತ॥
ತ್ಕರಣ ವ್ರಾತಂ ಬಿಗುರ್ತಂತರದೊಳಪುಗೆಯುಂ ಕಣ್ಮಲರ್ ಬಾಷ್ಪ ಬಿಂದೂ ।
ತ್ಕರಮಂಸೂಸಿಕ್ಕೆಯುಂ ಕೋಮಲೆ ರಣರಣಕಾವಸ್ಥೆಯಿಂದಿರ್ದಳಾಗಳ್ ॥೧೦೭॥

ಇಂತಿರ್ದ ರಣರಣಕಾವಸ್ಥೆಯಂ ಕಂಡು—

ಚಂ॥ ತಳವೆಳಗಾಗಿ ಭೂಪ ಕುಸುಮಾಸ್ತ್ರನನೀಕ್ಷಿಸ ಸೇವಕಾಂಗನಾ ।
ವಳಿಯೆನದಂ ವಿಸರ್ಜಿಸಿ ಕಟಾಕ್ಷ ನಿರೀಕ್ಷಣ ಸಂಜ್ಞೆಯಿಂದಮಾ ॥
ಗಳೆ ಕಿವಿವೊರ್ದಿ ದೇವಿ ಭವದೀಯ ಮನಃಪತಿ ಬಂದನೆಂದು ನಿ ।
ರ್ಮಳ ಮಧುರೋಕ್ತಿ[4]ವೇಟಿ[3] ಕಳಭಾಷಿಣಿಯಾ ಪ್ರಸಂಗದಿಂ ॥೧೦೮॥

ಮ॥ಸ್ರ॥ ಇನಿಯಂ ತಾಂ ಬಂದನೆಂಬಾಳಿಯ ನುಡಿ ಕಿವಿಯಂ ತಾಗಿದಾವೇಗದಿಂ ಜು ।
ಮ್ಮನೆ ಘರ್ಮಂ ಪೊಣ್ಮೆಗಾತ್ರಂ ನಡುಗೆ ಮುಖ ಸರೋಜಂ ವಿವರ್ಣಕ್ಕೆ ಪಕ್ಕಾ॥
ಗೆ ನಿಜ ಸ್ವಾಂತಂ ಪ್ರಕಾಶಂಗೊಳುತಿರೆ ತೆರೆವಶ್ರೂದ ಮಿಶ್ರಾಕ್ಷಿಯಿಂ ಭೋ ।
ಕನೆ ಭೂಭೃತ್ಕಂತುವಂನೋಡಿದಳಬಲೆ ಸಮಂತೊಂದಿದಾಹ್ಲಾದದಿಂದಂ ॥೧೦೯॥

ಮ॥ಸ್ರ॥ ತಳಮಂ ತಳ್ತೂರಿ ಮೆಯ್ಯಂ ಮುರಿದಲರ್ವಸೆಯಿಂ ದೇಟುತಿರ್ಪಲ್ಲಿ ಶಯ್ಯಾ ।
ತಳಮಂ ಸಾರ್ತರ್ಪ ಕಂದರ್ಪನ ಬರವು ಕರಂ ಕ್ರೀಡೆಯಂ [5]ಬೀಱ[3] ತತ್ಕೋ॥

1. ತದಱಿಂ. 2. ಏತಾಂತಗಳ್ಗೆ. 3. ಸುಳ್ಪುತ್ತೆಯಿಂ. 4. ಯುಕ್ತಿ.
5 ಬೀರುತಂ ಕೋ.

ಮಳೆ ಪಾಯ್ದಾಲಿಂಗನಂ ಗೆಯ್ದೊಗೆದ ಪುಳಕ ಸಂದೋಹದೊತ್ತಂಬದೊಳ್
ತಾಂ ।
ಮುಳುಗಿರ್ದಾಗಳ್ ನಿತಾಂತಂ ಪಡೆದಳತನು ಸೌಖ್ಯಾಮೃತಾಸಾರದೊಳ್ಪಂ
॥೧೧೦॥

ಕಂ॥ ಅಂಗಾಂಗ ಸಂಗದಿಂದಮ ।
ನಂಗ ಸುಖಂ ಸಮನೆ ಸಮನಿಸುತ್ತಿರೆಯುಂ ಭೂ ॥
ಪಾಂಗಜನುಮನಾ ಲಲಿತ ಲ ।
ತಾಂಗಿಯು[1]ಮಾಂತಿರ್ದಳಲರ್ದ ಮಿಸುಪಲರ್ವಸೆಯೊಳ್ ॥೧೧೧॥

[2]ಅಂತವರೊರ್ಬರೊರ್ಬರ್ ಪರಸ್ಪರಾಲೋಕನಮಾತ್ರದಿಂ ಪರಮ ಸುಖ ಪೀಯೂಷ ಪರಿತೃಪ್ತರಾಗಿ ಕುಸುಮಾವಳೀ ದೇವಿಯುಂ ಕಂದರ್ಪದೇವನು ಮಿರ್ಪುದುಂ ಆ ಸಮಯದೊಳ್ ಮೇಧಾವಿಳನಿಂತೆಂದಂ—

ಮ॥ಸ್ರ॥ ಇರದೀಗಳ್ ಪೋಗಿ ನಾಮಿಂತಜಿಪಿ ಕಳಿಪೆಯುಂ ಶಿಷ್ಟರೆಟ್ಟಿಂಮ ವಿಶ್ವಂ ।
ಭರ ಭೂಪಂ ಬೇಡಿದಂ [3]ತ್ವತ್ಸುತೆಯನೊಸೆದು ಕಂದರ್ಪ ದೇವಂಗೆನಲ್ ಚ ॥
ಚ್ಚರದಿಂ ಚಂದ್ರಧ್ವಜೋರ್ವೀಪತಿ ಪದೆದಿದಿರ್ವಂ[4]ದೀವನೀ ದೇವಿಯಂ ಬಿ ।
ತ್ತರಮಾಗಲ್ ದೇವ ಕೈಕೊಳ್ವುದು ಪರಿಣಯನ ಖ್ಯಾತಿಯಂ ಪ್ರೀತಿಯಿಂದಂ
॥೧೧೨॥

ಕಂ॥ ತನಗಿಂತಾ ಮೇಧಾವಿಳ ।
ನೆನೆ ಕೇಳುತ್ತಿರ್ದು ಚಿತ್ತದೊಳ್ ಬಗೆಗೊಂಡೊ ॥
ಯ್ಯನೆ ನೋಡಿದನಾಗಳ್ ಮಾ ।
ನಿನಿ ಕುಸುಮಾವಳಿಯ ವದನಮಂ ನೃಪ ಮದನಂ ॥೧೧೩॥

ಇಂತು ನೋಡಿದಾಗಳ್—

ಕಂ॥ ತನುಲತೆ [5]ಕುಸಿದಳ್ಕಿರ್ದ ಪಾ ।
[6]ರೆ ನಿಜೋನ್ನಯನಾರವಿಂದ [ಮಾ]ದಂ ಕೊರಗಿ ॥
ರ್ದಿನಿಯಳನಮರ್ದಪ್ಪಿಕೊಳು ।
ತ್ತಿನಸುಂ ನೃಪಕಂತು ಮೆಲ್ಲನಿರುತಿಂತೆಂದಂ ॥೧೧೪॥

1. ಮಿಂತಿರ್ದ. 2. ಅಂತಾರೊರ್ಬ. 3. ತತ್ಸುತೆ. 4. ದೀವನೀ.
5. ಕುಸಿ ತಳರ್ದ. 6. ರಿನಿಜಾನಯ.

ವ॥ ಇರಲೇಂ ಬರ್ಪುದೆ ದೇವಿ ಪೇೞ್ [1]ಬಗೆವೊಡೀ ಮೇಧಾವಿಳಂ ಪೇೞ್ದವೋಲ್ ।
ಬರಿಪೆಂ ನಿನ್ನಯ ತಾತನಂ ತಡೆಯದಸ್ಮತ್ತಾತನೊಂದಾಗೆಯುಂ ॥
ಪರಮ ಪ್ರೀತಿಯವರ್ಗೆ ಪುಟ್ಟೆ ನೆಗೞ್ವೆಂ ವೈವಾಹಮಂ ನಿನ್ನೊಳಾಂ ।
ಬರೆ ಪಾರುತ್ತ್ರಮೆ ನೀನಿರೆಂದು ನುಡಿದಂ ಭೂಪಾಲ ಪುಷ್ಪಾಯುಧಂ ॥೧೧೫॥

ಚಂ॥ ಪ್ರಿಯನೊಡನೆಯ್ದಲಾ ನಯನ ಪುತ್ರಿಕೆಗಳ್ ನಿಜ ಹಾರ ಶುಕ್ತಿಜಾ ।
ಳಿಯೆ ಕಡು ಶೂಕಮೆಂದಿಡುಕುಱುರ್ದಪುವೆಂದೆನಲಶ್ರು [2]ಬಿಂದು ಸಂ ॥
ಚಯ[3]ಮುಗೆ ಮಾಣದೋಪನೊಡವೋಪುದನುಜ್ಜುಗಿಸಿತ್ತೆನಲ್ಕೆ ತ ।
ನ್ನಯ ನಿಡು ಸುಯ್ ಪೊಸಟ್ಟಿ ಕುಸುಮಾವಳಿ [4]ಮೌನದೆ ಜಾನಿಸುತ್ತಿರಲ್ ॥೧೧೬॥

ಅಂತುಮಲ್ಲದೆಯುಂ—

ಚಂ॥ ಗುಡುಗುಡನಿಕ್ಕುತುಂ ಬಿಡದೆ ಕಣ್ಬನಿಯಂ ತಲೆವಾಗಿ [5]ಮೌನದೊಳ್ ।
ತೊಡರ್ದಿರೆ ಕಂಡು ತಾಂ ನಡುಗುತುಂ ನಯದಿಂ ತೆಗೆದಪ್ಪಿ ದೇವಿ ಕೇಳ್ ॥
ತಡೆದಿರವೆಂಬುದಿನ್ನೆನಗೆ ತಾನುಚಿತಾರ್ಥಮದಲ್ತು ನಾಡೆಯುಂ ।
ನುಡಿದೊಲವಿಂದೆ ನೀಂ ಕಳಿಪು ಬೇಗದೊಳುಜ್ಜುಗಿಪೆಂ ವಿವಾಹಮಂ ॥೧೧೭॥

ಕಂ॥ ನೃಪ ಮದನಂ ತಡೆಯದೆ ಪೋ ।
ದಪೆನಾಂ ಕಳಿಪೆಂದು ನುಡಿಯೆ ನಿಶ್ಚಯದಿಂ ಪೋ ॥
ದಪನೆಂದಿಕ್ಕಿದಳಿಮ್ಮಡಿ ।
ಸಿ ಪಯೋಧರದಲ್ಲಿ ದೇವಿ ತಾಂ ಕಣ್ಬನಿಯಂ ॥೧೧೮॥

ಇಂತು ಗದ್ಗದ ನಿನದದಿಂ ಬಿಕ್ಕುತ್ತುಂ ಮೆಲ್ಲನಿಂತೆಂದಳ್—

ಮ॥ಸ್ರ॥ ಎನಗೀಗಳ್ ಪೋಪಮೇೞೆ[6]ನ್ನದೆ ವಿವರಿಸಿಯಿಂ ಪೋಪೆನೆಂದೇಕದುಂ ತೊ ।
ಟ್ಟನೆ ಪೇೞಲ್ ದೇವ ಮಚ್ಚಿತ್ತಮನಱಯದನೇ ಪಿಂಗಿ ಪಿಂತಾನಿರಲ್ ಬ ॥
ಲ್ಲೆನೆ ಒಯ್ಯಲ್ಬಾರದೆಂಬೀ ಸೆವದಿನಿರಿಸಿ ನೀಂ ಪೋಗೆಯುಂ ನಿಲ್ಕುಮೆಂತೀ ।
[6]ತನು ತಾಂ ಸೌತ್ಸುಕ್ಯಮಪ್ಪೆನ್ನಸು ಬೞವಿಡಿದೇಂ ಬಾರದೇ ನಿನ್ನ ಬೆನ್ನೊಳ್ ॥೧೧೯॥

ಇಂತೆನೆ ಕೇಳ್ದು—

1. ಬಗೆವಿಡೀ. 2. ಬಂದು. 3. ಪೊಗೆ. 4. ಮನದೆ. 5. ಮನ. 6. ತನತಾ.

ಕಂ॥ ತಾನಪ್ಪುದು ದೇವಿಯರೆಂ।
ಬೀ ನುಡಿ ನುಡಿದಂತೆ ದೇವ ನೀವೊಡಗೊಂಡ॥
ತ್ಯಾನಂದದೆ ತಳರ್ವುದು ತಡ।
ವೇನುಂ ಬೇಡೆಂದು ಸಚಿವ ಸುತನಿದನುಸಿರ್ದಂ ॥೧೨೦॥

ಅಂತೆ ಗೆಯ್ವೆನೆಂದು ಕಂದರ್ಪ ದೇವಂ ಮೇಧಾವಿಳನೊಳಾಲೋಚಿಸುತುಂ ಕುಸುಮಾವಳಿದೇವಿ [1]ಹರ್ಷಾರ್ದ್ರ ಚಿತ್ತೆಯಾಗಿರೆ ಕಂಡು—

ಕಂ॥ ಮುನಿವಂ ಚಂದ್ರಧ್ವಜನೆನ।
ಗನಿತರೊಳೇಂ ದೇವಿಯೆನ್ನನಿರವೇಟ್ಟುವೊ ಪಿಂ॥
ತೆನುತುಂ ಚಿಂತಿಸಿ ತಾನೊ।
ಯ್ಯನೆ ಕಳಭಾಷಿಣಿ ಸದೀನ ಮಾನಸೆಯಾದಳ್ ॥೧೨೧॥

ಅದಂ ಕಂಡು—

ಉ॥ ನೀನೆನೆನಗಿಂತು ಜೀವನಮೆ ದಲ್ ಕಳಭಾಷಿಣಿ ಪಿಂತೆ ನಿನ್ನನಿ।
ನ್ನಾನಿರವೇಟ್ಟೆನೇನೆನಗೆ ಮಜ್ಜನಕಂ ಮುನಿದಪ್ಪನಂತಱಿಂ॥
ದೇನಿರದೀಗಳೇ ಕೆಳದಿ ಪೋಪಮೆನುತ್ತಮೆ ನಾಡೆ ಕೂರ್ಮೆಯಿಂ।
ದಾ ನಳಿನಾಯತಾಕ್ಷಿ ನುಡಿದಳ್ ಕುಸುಮಾವಳಿ ದೇವಿ ಲೀಲೆಯಿಂ ॥೧೨೨॥

ದೇವಿಯರೆಂದವೋಲ್ ಮುನಿಗುವಿಾ ಕಳಭಾಷಿಣಿಗಾ ನರೇಶ್ವರಂ।
ನಾವದಱಿಂದಮಿನ್ನಿವಳನೀಕ್ಷಣದಿಂದೊಡಗೊಂಡು ಪೋಪುದ॥
ರ್ಕಾವುದುಪಾಯಮೆಂದು ನೃಪ ಮನ್ಮಥನಿಂತೆನೆ ದೇವ ಚಿಂತಿಸ।
ಲ್ಕೇವುದಿದರ್ಕೆ ಬಿನ್ನವಿಪೆನೆಂದು ಸಖಂ ನುಡಿದಂ ನಯೋಕ್ತಿಯಿಂ ॥೧೨೩॥

ನೀವೊಡಗೊಂಡು ದೇವಿಯರನುಯ್ವುದು ನಮ್ಮ ಪುರಕ್ಕೆ ದೇವ ಮ।
ತ್ತಾವುದಗಾಧಮಾಂ ತಡೆಯದೀ ಕಳಭಾಷಿಣಿ ಮುಖ್ಯಮಪ್ಪ ಕ॥
ನ್ಯಾವಳಿಯೆಲ್ಲಮುಂ ಪೆಱಗಣಿಂ ನೆಱೆ ತಂದಪೆನೆಂದೆನುತ್ತೆ ಮೇ।
ಧಾವಿಳನಂತೊಡಂಬಡಿಸಿದಂ ನರನಾಥ ಮನೋಜನಂ ನೃಪಾ ॥೧೨೪॥

ಇಂತು ಸಮಾಳೋಚಿಸಿ ಕಳಭಾಷಿಣೀ ನಿವಾಸದೊಳಿರ್ದ ಪವನಂಜ ಯಾಶ್ವನಂ ಪಲ್ಲಣಿಸಿ ತರಿಸೆ ಕಂದರ್ಪದೇವಂ ಕುಸುಮಾವಳಿ ದೇವಿವೆರಸು ಸಮಾ

1. ಹರ್ಷಾರ್ಥ.

ರೂಢನಾಗಿ ಮೇಧಾವಿಳನಂ ತಡೆಯಪ್ಪುದೆಂದು ನೇಮಿಸಿ ನೀನಿಲ್ಲಿಯೆ ನಿಲ್ಲೆಂದು ನಿಲಿಸಿ—

ಮ॥ಸ್ರ॥ ಕಮಳಕ್ಕುದ್ಬೋಧ ಭಾಸ್ವದ್ವಿಭವಮನೆನಸುಂ ಬೀಱುತುಂ ವಾಸರ ಶ್ರೀ ।
ರಮಣೀ ಸಂಗಾನುರಕ್ತಂ ರವಿ ಪೊಱಮಡುತಿರ್ಪಲ್ಲಿ ತಾನೇಱಿ ದಿವ್ಯಾ ॥
ಶ್ವಮನಾತ್ಮ ಶ್ರೀ ಸಮೇತಂ ತ್ವರಿತದೆ ಪೊಱಮಟ್ಟಂ ಮಹಾ ಚಿತ್ರಕೋದ್ಯಾ ।
ನಮನಾಗಳ್ ರಾಗದಿಂದಂ ಕೃತಿರತಿರಮಣಂ ಸಾಹಸೋದ್ದಾಮ ಭೀಮಂ ॥೧೨೫॥

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾ ಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ಕುಸುಮಾವಳೀ ದೇವೀ
ಶಿಶಿರೋಪಚಾರ ವರ್ಣನಂ ಕಂದರ್ಪ
ದೇವ ದರ್ಶನ ವರ್ಣನಂ
ತ್ರಯೋದಶಾಶ್ವಾಸಂ

---

# ಚತುರ್ದಶಾಶ್ವಾಸಂ

ಕಂ॥ ಶ್ರೀ ಕಂದರ್ಪ ನರೇಶ್ವರ ।
ನಾ ಕುಸುಮಾವಳಿಯ ವದನ ದತ್ತ ಕಟಾಕ್ಷಾ ॥
ಲೋಕಂ ಪೊಱಮಟ್ಟಂ ಶೋ ।
ಭಾಕರಮಾಗಿರ್ಪ [1]ಚಿತ್ರಕಾಹ್ವಯ ವನಮಂ ॥೧॥

ಚಂ॥ ತಮಗೆ ಮನೋರಥಂ ಸಮನೆ ಸಂಗಳಿಸಿರ್ದುದಱಿಂ ನಿರಂತರಂ ।
ಪ್ರಮದ ಮನಸ್ಕರಾಗಿ ಮೊಗಮಂ ಮುರಿದೊರ್ವರೊರ್ವರನಪೂರ್ವತರ ಕ್ರಿಯೆಯೊಳ್ ಮುಱುಂಗಿಸು ।
ತ್ತಮೆ ಪದೆದೊರ್ಬರೊರ್ಬರನಪೂರ್ವತರ ಕ್ರಿಯೆಯೊಳ್ ಮುಱುಂಗಿಸು ।
ತ್ತಮೆ ಬರುತಿರ್ದರಿಂತು ಕುಸುಮಾವಳಿ ದೇವಿಯುಮಾ ನರೇಂದ್ರನುಂ ॥೨॥

ಪದೆಪೆಡೆಗೊಂಡು ತತ್ಪ್ರಿಯಳ ಲಜ್ಜೆಯ ಮಾತಿನ ಚಲ್ಲವಪ್ಪ ನೋ ।
ಟದ ಸುಖದಿಂದವಿಕ್ಷಿಸದೆ ಮಾರ್ಗಮನಾ ನರನಾಥ ಕಂತುವ ॥
ಗ್ಗದ ನಿಜ ವಾಜಿರಾಜ ಪವನಂಜಯನಲ್ಲಿ ಕಡಂಗಿ ಪೋಗುತಿ ।
ರ್ದುದು ವಿಮಳಾಪುರೀ ಪಥಮದಾಗಿರೆ ತಾಂ ಬರುತಿರ್ದುದಟ್ಟೆಯಿಂ ॥೩॥

ಮ॥ ಕೆಲವಾನುಂ ಪಯಣಂಗಳಂ ಬರುತುಮಾ ಕಂದರ್ಪದೇವಂ ನಭೋ ।
ಮಿಲಿತ ಶ್ಯಾಮಮನಾತ್ಮ ರತ್ನ ಶಿಖರಾನೇಕ ಪ್ರಭಾನೀಕದಿಂ ॥
ದಲರ್ದಿ ತೋಱುವ ಚಿತ್ರಕೂಟ ಗಿರಿಸಾನು ಸ್ಥಾನದೀ ಸದ್ವನ ।
ಕ್ಕೊಲವಿಂ ಬಂದನಪೂರ್ವ ಕಂತುವೆನೆ ಚೆಲ್ವಂ ಬೀಱುತುಂ ಭೂಪತೀ ॥೪॥

ಇಂತು ಬಂದೀ ವನಮಂ ಪೊಕ್ಕಾಗಳ್—

ಕಂ॥ ಈ ವನದತಿಶಯಮಂ ಕುಸು ।
ಮಾವಳಿ ಕಣ್ಗೊಳಿಸಿ ನೋಡ್ಪಿ ತೆಱನಱಿದಾಗಳ್ ॥
ನಾವಿಲ್ಲಿರ್ಪೆವೆನುತ್ತಂ ।
ಭೂವರ ಕುಸುಮಾಸ್ತ್ರನಿಱಿದನಶ್ವಾಗ್ರಣಿಯಿಂ ॥೫॥

1. ಚಿತ್ರಕಾಹ್ವನ.

ಇಂತಿಟಿಾದು ಸಲ್ಲತಾ ಸದನದೊಳ್ [1]ಪಲ್ಲವಾಸ್ತರಣದಿಂ ಧರಣಿಗಲಂಕರಿಸಿ ಪವನಂಜಯನಂ ಪಲ್ಲಣಿಸಿ ಪರಿತೃಪ್ತ ಬಳಾಹಾರನಂ ಮಾಡಿ ಸಮೀಪ ತರು ಮೂಲ [ದೊ]ಳ್ ಮಣಿ ಸೃಂಜಯ [2]ನಿಯಮಿತಾಸಿ ಕಂದರ್ಪದೇವಂ ಕಮಲ ದಳಪುಟಕೆಯಿಂದಮಳಾಂಬುವಂ ತಂದು ತಾವಿರ್ವರುಂ ಶ್ರಮಾಪಹರಣ ಕ್ರಿಯೆಗಳನಪ್ಪುಕೆಯ್ದು ಸ್ವೀಕೃತ ಕರ್ಪೂರ ತಾಂಬೂಲರಾಗಿರ್ಪುದುಮಾ ಸಮಯದೊಳ್—

ಮ॥ಸ್ರ॥ ಮುನಿನಾಥ ವ್ರಾತವೆತ್ತಂ ತಮತಮಗೊಲವಿಂದೆತ್ತುತಿರ್ಪರ್ಘ್ಯ ಪಾದ್ಯಾಂ ।
ಬು ನಿಕಾಯೋದಗ್ರ ಪಾತಂ ಸಮನಿಸಲದಱಿಂ[3]ದಾಱಿದತ್ತೀಗಳೆಂಬಂ ॥
ತೆ ನಿಜೋಚ್ಚಂಡ ಪ್ರತಾಪ ಪ್ರಬಲಮುಡಿದು [4]ಕಣ್ಗಿಂಪುವೆತ್ತಿರ್ದುದಸ್ತಾ ।
ವನಿಭೃಚ್ಚೂತಾಗ್ರ ಭೂಷಾರುಣ ಮಣಿಯದು ತಾನೆಂಬಿನಂ ಭಾನುಬಿಂಬಂ॥೬॥

ಚಂ॥ ವರುಣನ ವಕ್ಷದೊಳ್ ಪೊಳೆವ ಪಚ್ಚೆಯ ರತ್ನ ಮಯೂಖ ಮಾಲೆ ತ ।
ಳ್ತಿರೆ ನವ ದೂರ್ವೆಗಳ್ ಸೆಗೆದ ಶಾದ್ವಲವೆಂಬಭಿಶಂಕೆಯಿಂ ಕ್ಷುಧಾ ॥
ತುರವೆಡೆಗೊಂಡು ಕೊಂಡು ರಥಮುಂ ಕಡುವೇಗದಿನುಯ್ದುದಾ ಹಯೋ ।
ತ್ಕರಮಿರದೆಂಬಿನಂ ದಿನಪನೆಯ್ದಿದನಸ್ತ ಮಹೀಧರೇಂದ್ರಮಂ ॥೭॥

ಕಂ॥ ಮೃಡ ಮುನಿಗಳ್ ತನಗರ್ಘ್ಯಂ ।
ಗುಡೆ ಕಂಡಿವರಂಗ ಸಂಗಮಾದೊಡೆ ಶಾಪಂ ॥
ಗುಡುಗುಮೆನುತ್ತುಂ ಪಾದಮ ।
ನುಡುಗಿದನೆಂಬಂತಡಂಗಿದತ್ತಿನ ಕಿರಣಂ ॥೮॥

ಚಂ॥ ಎಡೆವಿಡದಿರ್ಪ ತನ್ನ ತನು ಸನ್ನಿಧಿಯಿಂ ತಮಗಾದ ತಾಪದೊಳ್ ।
ತೊಡರ್ದಿರಲಾಱದರ್ಣವದೊಳೊರ್ಮೆದಲಾ ತುರಗಂಗಳೋಡಿ ಬಿ ।
ಟ್ಟೊಡೆ ಬಳಿಸಂದವಂ ಪಿಡಿಯಲೆಂದಿರದಾಗಳೆ ಪಾಯ್ದು ಬಿಟ್ದನೋ ।
ತಡೆಯದೆ ತಾನೆನಲ್ಕಪರ ಶೈಲದಿನಂದಿಟಿಾದಂ ದಿನಾಧಿಪಂ ॥೯॥

ಕಂ॥ ತನಗೆ ನಿಶಾಂಗನೆಯೊಳ್ ನೆರೆ ।
ವಿನಿತಾಗಳೆ ಸಮನಿಸಲ್ ವಿಯದ್ಭುಜಗಂ ತಾ ॥
ನನುರಾಗಮನೆಯ್ದಿದನೆಂ ।
ದೆನೆ ಗಗನಂ ಸೊಗಯಿಸಿತ್ತು ಸಂಧ್ಯಾ ರುಚಿಯಿಂ ॥೧೦॥

---

1. ಪಲ್ಲವಾಸ್ತರಣ ತರಣಿ. 2. ನಿಯಮಿತಾಶಿ. 3. ದಾಶಿದತ್ತೀ. 4. ಕಣ್ಗಿಂಪು.

ಮ॥ ಪಡೆದೀಗಳ್ ರವಿ ಸಂಜೆವೆಣ್ಣಿನಳಿಪಿಂ ಕೊಂಡುಯ್ದು[1]ನೊಲ್ದಿನ್ನ ಸಂ ।
ಗದಿ[2]ನಿರ್ದೆಂಬ ವಿಷಾದಮಾದಮದು ಮೆಯ್ವೆರ್ಚಲ್ ಜಗದ್ಭಾಮಿನೀ ॥
ಹೃದಯಂ ಕಟ್ಟಲಿಸಿತ್ತೆನಿಪ್ಪ ತೆಱದಿಂ ತಾನಿಂತು ತಳ್ತುರ್ಬಿ ಪ ।
ರ್ಬಿದುದೋರಂತೆ ಕರಂ ವಿಗುರ್ವಿಸಿತಮಿತ್ರಾನೀಕಮೀ ಲೋಕಮಂ ॥೧೧॥

ಕಂ॥ ವ್ಯೋಮ ಮಹಾ ಮತ್ತ ದ್ವಿಪ ।
ದಾ ಮೆಯ್ಯೊಳ್ ನೆಗೆದ [3]ಬಿಂದು ಜಾಲಕಮೆನೆ ಶೋ ॥
ಭಾಮಯಮಾಗಿರೆ ತಾರಾ ।
ಸ್ತೋಮಂ ತಳ್ತೊಗೆದುದಿಂತು ಗಗನಾಂತರದೊಳ್ ॥೧೨॥

ಕಂ॥ ಕಮಲಭವನೊಸೆದು ರಜನೀ ।
ರಮಣಿಗೆ ತಾನೆತ್ತಿ[4]ದಮಳ ಶುಕ್ತಿ ರುಹಚ್ಛ ॥
ತ್ರಮಿದೆಂಬ ತೆಱದೆ ತಾರಾ ।
ಸಮಿತಿ ಸಮಂತೊಗೆದು ಸೊಗಯಿಸಿರ್ದುದು ಗಗನಂ ॥೧೩॥

ಗಗನ ಶಬರೇಂದ್ರನಂಕದ ।
ಮಿಗಮಂ ಕಾಯ್ದು ಸೆಯ್ಯುಮದಱ ರುಧಿರಂ ಪುದಿದಂ ॥
ತೊಗೆದು ಶಶಿಮಂಡಲಂ ಮಿಗೆ ।
ಸೊಗಯಿಸಿದುದು ಸಾಂದ್ರಮಾದ ಕೆಂಪಿನ ಸೊಂಪಿಂ ॥೧೪॥

ಚಂ॥ ವಿರಹಿಗಳಂ ಮನೋಜನುರು ಕೋಪದೆ ಕೆಂಪಿಡೆ ಕಾಸಿ ಕಾಸಿ ಕೊಂ ।
ಡಿರದೆಡೆವೊಯ್ವ ಕಕ್ಕಡೆಗಳೋಳಿಯೊ ನೀಟ್ದು ವಿಯೋಗಿ ಕಾನನ ॥
ಕ್ಕುರವಣಿಪಂಗಜಾನಲನ ಕೇಸುರಿ ಮಾಲೆಯೊ ಪೇೞ[3]ನಲ್ಕೆ ಬಿ ।
ತ್ತರಿಸಿದುದಿಂದುಮಂಡಲದೊಳುಣ್ಮಿದ ಶೋಣ ಮರೀಚಿ ಸಂಚಯಂ ॥೧೫॥

ಉ॥ ಆಱಿಸುತುಂ ಚಕೋರ ಪರಿತಾಪಮನಂಬುಧಿಯಂ ಕಡಂಗಿ ನೀ ।
ರೇಱಿಸುತಂ ಲಸತ್ಕುಮುದ ವಕ್ತ್ರ ವಿಕಾಸದ ಪೆರ್ಚನೆಯ್ದೆ [5]ಕೆ ॥
ಚ್ಚೇಱಿಸುತುಂ ನವಸ್ಮಿತ ವಿಕಾಸದ ಮಲ್ಲಿಗೆಯಂ ಸಮಂತು ಕಂ ।
ಪೇಱಿಸುತುಂ ಪೊದಟ್ದು ಪೊಳಪೇಱಿತು ಚಂದ್ರಿಕೆ ಸಾಂದ್ರ ಶೋಭೆಯಿಂ॥೧೬॥

1. ನೊವೆನ್ನ. 2. ನಿರ್ದಿಂಬೆ. 3. ಬಂದು. 4. ದಮರ. 5. ಕಡ್ಚುರಿಸುತುಂ.

ಮ॥ [1]ದೆಸೆಯಂ ವ್ಯೋಮವನಾವಗಂ ಕಮಲಜಂ ಪೀಯೂಷದಿಂ ಕೂಡೆ [2]ರಂ ।
ಜಿಸಿದಂ ತಾನೆನೆ ತಳ್ತು ಪಜ್ಜಳಿಕೆವೆತ್ತಾ ಸಾಂದ್ರ ಚಂದ್ರಾತಪ ॥
ಪ್ರಸರ ಶ್ರೀಯ ವಿಳಾಸದೊಳ್ ರತಿ ಯುತಂ ಪುಷ್ಪೇಷುವಿರ್ಪಂತೆ ತಾ ।
ನೆಸೆದಿರ್ದಂ ಕುಸುಮಾವಳೀ ಸತಿಯುತಂ ಭೂಪಾಲ ಪುಷ್ಪಾಯುಧಂ ॥೧೭॥

ಆ ಚಂದ್ರಿಕೆಯ ಸಾಂದ್ರ ಶೋಭೆಯೊಳ್ ಭೂಪ ಕುಸುಮಾಯುಧಂ ಕುಸುಮಾವಳಿ ದೇವಿವೆರಸು ನಿರೀಕ್ಷಿಸುತ್ತಿರ್ದನಂತರಂ ನಿಶಾವಧಿವರಂ ಸುಖ ಸುಪ್ತರಾಗಿರ್ಪುದುಮಾಗಳ್—

ಚಂ॥ ಎನಗೆ ಮನಃಪ್ರಿಯಳ್ ಕುಮುದಿನೀ ವಧುವಾಕೆಯನೀಗಳಂತೆ ಬಂ ।
ದಿನನಿರದುಗ್ರ ಪಾದ ತತಿಯಿಂದೊದೆಯುತ್ತಿರೆ ನೋಡುತಿರ್ಪುದಾ ॥
ಯ್ತೆನುತುಮುದರ್ಕೆ ಚಿಂತಿಸೆ ಮಸುಳ್ದುದು ತನ್ನ ಕಾಯ ಕಾಂತಿಯಿಂ ।
ಬಿನ[3]ಮಿಱವೋದನಿಂದು ಪಿರಿದುಂ ತಲೆದೋಱದ ತತ್ಪ್ರಭಾವದೊಳ್ ॥೧೮॥

ಕಂ॥ ಪೊಳಪೞದು ತಾರೆಗಳ್ ಪಳ ।
ಪಳನಾದುವು ಕುವಲಯಂಗಳೆಸೞ[3]ಸಕಂಗೊ ॥
ಟ್ಟಳವೞದುವಾ ಚಕೋರಂ ।
ಗಳ ಬೞಗಂ ಪೆೞಱದುವು ಕರಂ ದಿನ ಮುಖದೊಳ್ ॥೧೯॥

ಉ॥ [4]ನೀಡದೊಳಿಂಬುಗೊಂಡು ಮುಱವಟ್ಟ ವಿಹಂಗಮ [5]ಮಾಲೆಗೆಟ್ಚಱಂ ।
ಮಾಡುತುಮೆತ್ತಿ ಸೂಸೆ ಪನಿಪುಲ್ಲುದ ಬಿಂದುಗಳಂ ಮೃಗಂಗಳಂ ॥
ಕೋಡಿಸುತುಂ ಕಡಂಗಿ ಕಮಳಂಗಳ ಕೇೞ[3]ಸೞಂ ನಿಮಿರ್ಚುತುಂ ।
ತೀಡಿತು ಸುಪ್ರಭಾತ ಸಮಯ ಪ್ರಭವಾತುಳ ಶೀತ ಮಾರುತಂ ॥೨೦॥

ಚಂ॥ ಹಳಹಳನಿರ್ದ ತಾರೆಗಳನಾಯ್ದು ಕುಱುಂಕುತುಮಂತೆ ಪೊಣ್ದು ಬೆಂ ।
ಬಳಿವಿಡಿದೊತ್ತಿಕೊಂಡು ಹಱಗಟ್ಟಲೆಯಂ ತವೆ ಪೀರುತಂ ಕುಳಾ ॥
ಚಳ ಶಿಖರಾಗ್ರ ಮಂಡಳಮನೆಯ್ದೆ ಪೞಂಚಲೆಯುತ್ತುಮಾ ದಿಶಾ ।
ವಳಿಗೆ ಕರಾಳಿ ಮುಂಬಱಯೆ ಬಂದುದಯಾದ್ರಿಯನರ್ಕನೇಱದಂ ॥೨೧॥

---

1. ದೆಸೆ ಭೂ ವ್ಯೋಮ. 2. ರಂಗಿಸಿದಂ. 3. ಮಿಱದೊದನಿಂದು.
4. ನೀಡದರಿಂಬು. 5. ಮಾಗಳೆಟ್ಚರಂ.

ಕಂ॥ ಇಳೆಯೊಳ್ ಹರ್ಷ ವಿಷಾದಂ ।
ಗಳನೊರ್ಮೊದಲಾಗಳಂತೆ ಕೋಕ ಚಕೋರಾ ॥
ವಳಿಯೊಳ್ ಕಮಳೋತ್ಪಳ ಸಂ ।
ಕುಳದೊಳ್ ಸಮನಿಸುತುಮರ್ಕನುದಯಂಗೆಯ್ದಂ ॥೨೨॥

ಚಂ॥ ಅವಿರಳಮಾಗಿ ಝುಂಕರಿಸುತುಂ ವನ ವಲ್ಲಿಯ ನಲ್ಲಪೂಗೆ ಪಾ ।
ಱುವ ಮದ ಭೃಂಗ ಸಂಚಯ ಸುಗಾಯಕ ಗೇಯ ಮೃದು ಸ್ವರಂ ಕರಂ ॥
ಶ್ರವಣಮನೆಯ್ದಿಯೆಚ್ಚಱಿಸಲಾ ನವ ಪಲ್ಲವ ತಳ್ಪದಿಂದಮು ।
ಪ್ಪವಡಿಸಿದಂ ನರೇಂದ್ರ ಕುಸುಮಾಯುಧನಾತ್ಮ ಸತೀ ಸಮನ್ವಿತಂ ॥೨೩॥

ಕಂ॥ ಇನ ತುರಗಂಗಳ್ ಕತ್ತುರಿ ।
ಮೊನೆಗಿವಿಗೊಳ್ವಿನೆಗಮೆಯ್ದೆ ದೆಸೆಯನಿತುಂ ಮಾ ॥
ರ್ದನಿ[1]ಗುಡುತಿರೆ ಘನ ಹೇಷಾ ।
ಧ್ವನಿಗೆಯ್ದುದು ಬನದೊಳಾಗಳಾ ಹಯ ರತ್ನಂ ॥೨೪॥

ಚಂ॥ ಬನದೊಳಪೂರ್ವ ಚಂದ್ರಿಕೆಯಿದೆಂಬಿನಮಾ ಧವಳೇಕ್ಷಣಾಂಶುಗಳ್ ।
ತನಿಗೆದಱುತ್ತಿರಲ್ಕೆ ಮೊಗಮಂ ನಸು ನೋಡಿ ನವಾಸ್ಯೆಯಪ್ಪ ಮಾ ॥
ನಿನಿಯನಲಂಪಿನಿಂದಮುಮರ್ದಪ್ಪುತುಮಂಬುಜ ಷಂಡದೊಳ್ ಪದಾ ।
ನನ ಸರಸೀಜ ಧೌತ ಕೃತಿಯಾಗಿಸಿದಂ ಪ್ರಿಯಳಂ ನೃಪಾಂಗಜಂ ॥೨೫॥

ಕಂ॥ ತಾನುಂ ತಡೆಯದೆ ಕರ ಚರ ।
ಣಾನನ ಪರಿಧೌತ[2]ನಾಗಿ ಪೋಗಲ್ ಬಗೆದಂ ॥
ದಾ ನಿಜ ವಾಜಿಯ ಸಾರ್ಗೆ ಮ ।
ಹೀ ನಾಥ ಮನೋಜನೆಯ್ದೆವರ್ಪಾ ಪದದೊಳ್ ॥೨೬॥

ಮ॥ಸ್ರ॥ ಪರಿವರ್ತಾಂಭೋದ ಮಾಲಾ ಜನಿತ ನಿನದಮೋರಂತಿದೆಂಬೀ ಮಹಾ ಭೀ ।
ಕರಮಾಗಲ್ಕಾಗಳಾ ಪೇರಡವಿ ನಡುಗೆ ಶಾಖಾ ಶಕುಂತಾಳಿ ಬೀಟು ॥
ತ್ತಿರೆಯುಂ ಬಿಟ್ಟೆಯ್ದೆ ಬಾಯ್ವಿಟ್ಟೊಡೆದಪುದೆನೆ ಚಂಡ ಪ್ರತಿಧ್ವಾನಮುಣ್ಮ ।
ತ್ತಿರೆಯುಂ ಪೊಣ್ಮಿತ್ತು ಪಾಪರ್ಧಿಯಪಟುತರ ಕೋಳಾಹಲೋದಗ್ರ ನಾದಂ॥೨೭॥

---

1. ವಿಡುತಿರೆ. 2. ವಾರಿ.

ಮರೆಗಿಂತೊಡ್ಡೊಡ್ಡು ಬಲ್ಗಣ್ಣಿಯು ಬಲೆಗಳನಂತೊತ್ತುಗೊಳ್ಳುತ್ತುಗೊಳ್ಳೀ ।
ಸರದಿಂ[1]ದಿಲ್ಲಿಲ್ಲಿರಾ ಶ್ರೇಣಿಯು ಮಡುಗಳ ಮಿಾಂಗಳ್ಗೆ ಕೂರ್ಸೋಕ್ಕನಿಕ್ಕಿ ॥
ಕ್ಕಿರದೇೞೆತ್ತೆತ್ತಲಾ ಹುಲ್ಲಡಿ [2]ಹೊಸತಿದೆ ಬಾ ನೋಡು ನೋಡೆಂದೆನುತ್ತಾ ।
ತುರದಿಂದೋರೊರ್ವರೊಳ್ ಸಾಱುವ ಶಬರರ ತೀವ್ರ ಸ್ವನಂಪರ್ಬಿತಾಗಳ್ ॥೨೮॥

ಚಂ॥ ತಡೆಯದೆ ಕಟ್ಟು ಕಟ್ಟು ತೆರಪಂ ನೆಱೆ ಹಾಸಮನುರ್ಚಿ ಬೇಗದಿಂ ।
ಬಿಡುಬಿಡು ನಾಯ್ಗಳಂ ತಳಿರ ತಟ್ಟಿಯ ಸಾಲನಮರ್ಚಿ [3]ಕಂಡಿಯಂ ॥
ಕಡಿ ಕಡಿ ತಿರ್ದಿಕೊಂಡು ಸರಲಂ ತಿಱುವಾಯೊಳೆ ಹೂಡು ಹೂಡು ಮುಂ ।
ದಡಸಡಸೆಂಬ ಬೇಡರ ವಿಗುರ್ವಿಸುವಬ್ಬರಮುರ್ಬಿತೆತ್ತಲುಂ ॥೨೯॥

ಮತ್ತಮಲ್ಲಿ ಹುಲ್ಲೆಡೆ ಹೆಲ್ಲವಾಗಿ ತಾರುಂತಟ್ಟುಂ ಬೀೞುತ್ತಿರೆ ಪೋದ ಮಱೆವಿಂಡಿನ ತಂಡವಜ್ಜೆಗಳುಮಂ ಹಸಲೆಗಳೊಳೊಸೆದು ಮೆಯ್ವೆಳಕಱುಗಳ್ ಕಡೆವಾಯಿನೊೞೆವ ಸೀರ್ವೆರಸುಗುತೆ ಪೋದ ಹರಿಣ ಹರಿಣೀ ವೃಂದದ ಮಂದವಜ್ಜೆಗಳುಮಂ ಪಱಿವ ಪಾವುಗಳಂ ತುಡುಂಕಿ ಸಿಡಿದೆಡೆವಿಡದಡಸಿಕೊಳ್ವೆರಡುಂ ಕಡೆವಾಯಿಂ ಪುಳಿನೆತ್ತರ ಪನಿಗಳ್ ಪನಿಯುತ್ತಿರೆ ಪೋದ ಸಾರಂಗದ ವೊತ್ತದ ತಳ್ತ ಪಜ್ಜೆಗಳುಮಂ ಮನವೆಳಸಿ ಮೆಲ್ವ ಸಲ್ಲಕೀ ಪಲ್ಲವಂಗಳಲ್ಲಲ್ಲಿಗುಡಿದುಡಿದು ಬೀೞುತ್ತಿರೆ ಪೋದ ಮದವಾರಣಂಗಳ ತೋರವಜ್ಜೆಗಳುಮಂ ಕಡೆವಾಯ ಕೆನ್ನೆತ್ತಱ ಹೊಲಸಿಂಗೆ ಪೋಗದೆ ಮುಸುಱುವ ನೊಳವಿಂಗೆ ಕೆರಳ್ದು ಝಾಡಿಸುತೊದೆಯೆ ಚೀರೆಲ್ದು ಹೆಟ್ಟೆಗಳ್ ಮೇಲೆ ಪಳಂಚೆ ಧೂಳಿವಿಡುತಿರೆ ಪೋದ ಪೆರ್ಬುಲಿಗಳ ಸುರ್ಬುವಜ್ಜೆಗಳುಮಂ ದಾಡೆಗಳಿಂದೀಡಿಱಿದಗುಳ್ದು ತೋಡಿಕೊಂಡು ಮೆಲ್ವ ಮುಸ್ತಾ ಕಂದಂಗಳ ತಿರುಳ್ ಪಱಿದೊಕ್ಕು ಕಂಪಿಡುತ್ತಿರೆ ಪೋದ ಕಾಡ ಪಂದಿಗಳ ಗೊಂಡಣವಜ್ಜೆಗಳುಮಂ ಪಾಲಧಾರೆಗಳ್ ತೋರ ಮೊಲೆಗಳಿಂ ಸಾಲ್ಗೊಂಡುಗುತ್ತಿರೆ ಪೋದ ಕಾಡೆಮ್ಮೆಗಳ ಮಾಲೆವಜ್ಜೆಗಳುಮಂ ಮತ್ತಗಜಮಂ ಪಾಯ್ದು ಪೊಯ್ಯೆ ಪದ ನಖಂಗಳೊಳ್ ಪತ್ತಿ ಜಗುಳ್ದನೆತ್ತಱಿಂ ಮಹೀತಳಂ ಮಂಜಿಟಗೆಯ[ಕೆಂಬಣ್ಣಮಂ ಪ]ತ್ತಿದಂತಾಗುತ್ತಿರೆ ಪೋದ ಕೇಸರಿಗಳ ಕೇಸಡಿವಜ್ಜೆಗಳುಮಂ ಮುಳ್ಗಿಡು ಮರಂಗಳೊಳೊಂದೊಂದು ಸೂಕ್ಷ್ಮವಾಲಂಗಳ್ ಸಿಲ್ಕುತಿರೆ ಪೋದ ಚಮರೀ ಮೃಗಂಗಳ ವೊತ್ತವಜ್ಜೆಗಳುಮಂ ಪುತ್ತುಗಳಂ ತೋಡಿ ಪತ್ತಿ ಪೀಱಲ್ [4]ಬೆಳ್ನೊರೆಗಳ್ ತುಂಡದಿಂ ತಂಡ ತಂಡಂಗೊಂಡುರುಳುತ್ತಿರೆ ಪೋದ ಕರಡಿಗಳ ಕೂರುಗುರ್ವಜ್ಜೆಗಳುಮಂ ಸಣ್ಣ ಮಳಲ್ದಾಣಂಗಳೊಳ್ ಪೆಂಟನೆಳೆದಂತಾಗುತ್ತಿರೆ ಪೋದ ಪೇರುಡುಗಳ [5]ಹಲ್ಲೆವಜ್ಜೆಗಳು

1. ದಿಲ್ಲಿಲ್ಲೆರಾ. 2. ಹೊಸತದೆ. 3. ಖಂಡಿಯಂ. 4. ಪಿಂದೊರಲೆಗಳ್.
5. ಪಿಲ್ಲವಜ್ಜೆ.

ಮಂ ಕುತ್ತುಱುಗೊಂಡ ಗುಲ್ಮಂಗಳ ನಡುವಿನೊಳ್ ಕಣ್ಬರಿಗಳ ಸಾಲ್ ಸಿಲ್ಕು ತ್ತಿರೆ ಪೋದ ಮದ ಮಯೂರಂಗಳ ವೃಂದವಜ್ಜೆಗಳುಮಂ ಕಂಡು ಬೇಡವಡೆ ತಮ ತಮಗೆ ಓರೊರ್ಬರೊಳೊಟ್ಟು ತೋಱುವಬ್ಬರದುಬ್ಬರಕ್ಕೆ ಕಾನನಮೆಲ್ಲಂ ಕಿಳ್ತ ಲೆಯುಂ ಕೀಳಂದಲೆಯುಮಾಗೆ—

ಮ॥ಸ್ರ॥ ಎಲೆ ಕಾಳಿಂದೀಪ್ರವಾಹಂ ಮಸಗಿ ಕವಿತರುತ್ತಿರ್ದುದೋ ಮೇಣ್‌ದವೋಗ್ರಾ।
ನಲನುರ್ಬಿಂದುರ್ಬಿದಾಕರ್ಬೊಗೆನಿವಿರ್ದುದೊ[ಪೇಟಿತ್ತಲುಂ]ತಾನೆನಲ್ ನಿ॥
ಸ್ತುಲನೀಲಾದ್ರೀಂದುಮಂಜಿಸೋಡಿಪತನುರುಚಿಯಿಂಕೂಡೆಕಾಂತಾರಮಂ ಕ।
ಟ್ಟಲಿಸುತ್ತೆಟ್ಟಂದುದುಗ್ರಾಂತಕ ನಿಕರಮಿದೆಂಬಂದದಿಂ ವನ್ಯ ವೃಂದಂ ॥೩೦॥

ಸ್ಫುರದುಗ್ರಾಯಶ್ಶಲಾಕಾ ಸದೃಶ ವಿಪುಳ ರೋಮಾವೃತಾಂಗೋಚ್ಚಳತ್ಕ।
ರ್ಬುರ ಕಾಂತಿ ವ್ರಾತದಿಂದಬ್ಬರಿಪ ಕಳಕಳ ಧ್ವಾನದಿಂ ತತ್ಕರಾಗ್ರ॥
ತ್ವರಿತ ಭ್ರಾಮ್ಯನ್ನಿಶಾ[ತಾ]ಸ್ತ್ರದ ತನಿವೆಳಗಿಂ ತಳ್ತು ಕಲ್ಪಾಂತ ಮೇಘೋ।
ತ್ಕರಮೆಂಬಾಶಂಕೆಯಿಂ ಸಂಗಳಿಸಿದುದೆನಿತಾನುಂ ಪುಳಿಂದ ಪ್ರತಾನಂ ॥೩೧॥

ಲಯ ಕಾಲಾಭೀಳ ಕಾಯಂ ಕರಿ ಮದ ತಿಳಕಂ ಕುಬ್ಜ ಕೇಶಂ [1]ಶುನೀ ಪಾ।
ಶಯುತೋದ್ಯತ್ಸವ್ಯ ಹಸ್ತಂ ನಕುಳ ವೃಜಿನ ದಾಮಾವೃತೋಷ್ಣೀಷನುಗ್ರಾ॥
ಶಯನುದ್ವೃತ್ತಂ ಸಗುಂಜಾಭರಣನತುಳ ರಕ್ತಾಂಬರಂ ಭ್ರೂಕುಟಿ ಭ್ರೂ।
ದ್ವಯನೊರ್ಬಂ ಬಂದನಾ ಬೇಡರ ಪಡೆ[ಯೊಡೆ]ಯಂ ವಜ್ರ ನಿರ್ಘೋಷ
ನೆಂಬಂ ॥೩೨॥

ಸರಲಂ ಮುಂಗೈಯ ಬಲ್ದಡ್ಡಿನೊಳೆ ಮಸೆಯುತುಂ ನೀಡುಮೆತ್ತಿರ್ದೆಡರ್ಗಿ।
ನ್ನರೆ ಗಲ್ಲೊಳ್ ಪಾಂಸುವಂ ಪುಟ್ಟಿಪ ತನುವಿನ[2]ರೌದ್ರಾಸ್ಯದಿಂದರ್ಬಿಸುತ್ತಂ॥
ಬರೆ ಪೀವರ್ಣಂತೆಯ್ದೆ ಕಾಂತಾರದ ಮೃಗ ತತಿಯಂ ನಾಡೆಯುಂ ನೋಡು
ತುಂ ಬೇ।
ಡರೊಳೆಟ್ಟಂದಂ ಪುಳಿಂದಾಗ್ರಣಿ ವಿವಿಧ ಮೃಗವ್ಯ ಕ್ಷಮಂ ಪಿಂಗಳಾಕ್ಷಂ ॥೩೩॥

ಮೃಗ ರಕ್ತಾಸಕ್ತಿಯಿಂ ಮುನ್ನಮೆ ನೆಱೆ ನಿಮಿರ್ದಂತಾಸ್ಯದಿಂ ನೀಟ್ದಿ ತೆಳ್ನಾ।
ಲಗೆಯಿಂ ಸಾಲಿಕ್ಕುತುಂ ಲೋಳಿಯ ಕಿಱುವನಿಯಂ ಯಾನದಿಂ [3]ಕಾರ್ಶ್ಯ
ಮಧ್ಯಂ॥

1. ತುನಿಷಾ। ಸಯುತ್ಯೋದತ್ಸವ್ಯ. 2. ತಾನ್ಯದಾ. 3. ಕಾರ್ಷ್ಣ್ಯಮಧ್ಯಂ.

ಮಿಗೆ [1]ಬೀಳಲ್ ವಕ್ರ ವಾಲಂ ಕೊನೆಯೊಳೆಸೆವ ನುಣ್ಮೆಯ್ ಬಿಸಿಲ್ ತಾಗೆ
ಬೆಳ್ಗಂ।
ಪೊಗೆದೊಪ್ಪಲ್ ಬಂದುದಾ ಕಾಡೊಡೆಯನೊಡನೆ ಕೌಳೇಯಕ ಸ್ತ್ರೀ
ನಿಕಾಯಂ ॥೩೪॥

ಆ ವಜ್ರನಿರ್ಘೋಷನುಂ ಪಿಂಗಳಾಕ್ಷನುಮೆಂಬ ಶಬರ[2] ನಾಯಕರಿರ್ಬರುಂ ತಂತಮ್ಮ ಶಬರಸೇನಾಯುಗ್ಮ ಸಂಮಿಶ್ರಮಾಗಿ ಬೇಂಟೆಯಂ ಮಸಗಿದಾಗಳ್—

ಮ॥ಸ್ರ॥ ಇಸಲಂಬಂ ಪೂಡುವಾ ಬೇಗದೊಳಿರದೆ ಕರಂ ಕಾಯ್ದು ಮೇಲ್ವಾಯ್ದ ಸಿಂಹ।
ಕ್ಕೆ ಸಮಂ ನಿಂದೋವದಾರ್ದೊತ್ತಿಡುಕಿ ಧನುವನಾ ದಂಡೆಗೊಟ್ಟೆಳ್ಕಿ ತಂದ॥
ಬಿರ್ಸೆ [3]ತಳ್ತಾವೇಗದಿಂ ಕೂರಲಗುರದೆಡೆಯಂ ನಟ್ಟು ಪಶ್ಚಾರ್ಧದೊಳ್ ಕೆಂ।
ಪೆಸೆಯುತ್ತುಂ ಪೊಣ್ಮಿರಲ್ ಮುತ್ತಿದನತುಳ ಬಲೋಪೇತನೊರ್ಬಂ ಕಿರಾತಂ
॥೩೫॥

ಕರಿಯಂ ಕಂಡಾ ರದಂಗಳ್ ಪಿಡಿಯೊನಕೆಗಳಾಗಲ್ಕೆ ಪೋ ತಕ್ಕುವೆಂದಾ।
ದರದಿಂದಂ ಕಾಂತೆ ನೋಡುತ್ತಿರೆ ನಸು ನಗುತುಂ ತಾನದಕ್ಕೆಯ್ದಿ ಪೊಯ್ದು॥
ಬ್ಬರಿಸುತ್ತುಂ ದಾಡೆಗಳ್ ಬೆಳ್ಗಱಿಯುತಿರಲೆರಟಿಕ್ಕೈಗಳಿಂದೊತ್ತಿ ಕಿೞ್ತಾ।
ಮರದಿಂ ತಂದಿತ್ತು ಚಿತ್ತಪ್ರಿಯೆಗತಿಮುದಮಂ ಮಾಡಿದಂ ಬೇಡನೊರ್ವಂ॥೩೬॥

ಚಲಕರ್ಣಂ ಭೂತಳ [4]ತ್ರೋಟನ ಕೃತ ಕರ ವಾಲಾಗ್ರನುಜ್ಜೃಂಭಮಾಣಾ।
ತುಲ ರೌದ್ರಾಕ್ಷಂ ಸಮಾಕುಂಚಿತ ವಪು ವಿಪುಳಾಟೋಪದಿಂ ಗರ್ಜಿಸುತ್ತುಂ॥
ಪುಲಿ ಪಾಯಲ್ ಬೆರ್ಚಿದಾ ವಲ್ಲಭೆಯನೆಡದ ತೋಳೊಳ್ ಸಮಂತಪ್ಪಿಕೊಂಡ।
ಸ್ಖಲಿತಂ ನಿಂದಿರ್ದದಂ ದಕ್ಷಿಣ ಕರ ತಳದಿಂದೊತ್ತಿ ಕೊಂದಂ ಪುಳಿಂದಂ ॥೩೭॥

ಮುಳಿದಾರ್ದಾ ವೇಗಸಂಧಾನದೆ ಶಬರಸಿಸುತ್ತಿರ್ದ ನಿಸ್ತ್ರಿಂಶ ಬಾಣಾ।
ವಳಿಯಂ ಬಿರ್ರೆಂಬಿನಂ ಮಾರ್ತಿರುಗೆ ತಡೆದು ಮೆಯ್ಯೆತ್ತಿ ಕೈಕೊಂಡ ಕೂರ್ನಾ
ಯ್ಗಳನಾಗಳ್ ಸೀಳೆ ಪಾಯ್ದೊರ್ಮೊದಲೊಳಿರದೆ ಕೊಂದಿಕ್ಕಿ ನಿಂದುಗ್ರಕೋಪಾ।
ಕುಳದಿಂ ಕೋಟ್ಟುಕಟ್ಟೆಕೆಂಡಂಗೆದಱೆತತುಳರೋಮಪ್ರರೋಹಂ ವರಾಹಂ ॥೩೮॥

ಚರಣಂ ಜಾನೂರುಗಳ್ ನೂರ್ಗ್ದಿಗೆದ ತೆಱದೆ ಸೀಳಲ್ಕೆ ಪೊಯ್ದೆತ್ತಿದುದ್ಭೀ।
ಕರ ಕೋಪೋದ್ರೇಕನಂ ಸೂಕರನನುಱದೆ ಬಿಲ್ಲಂ ಬಿಸುಟ್ಟಾಗಳತ್ಯಾ॥

1. ಬಳಕ್ರಪಾಳಂ. 2. ನಾಯಕಿಯರಿರ್ಬರುಂ. 3. ಕಿಳ್ತಾವೇಗ. 4. ತ್ರಾಡನ.

ತುರದಿಂ [1]ಪುಚ್ಛಾಗ್ರಮಂ ಪಾಯ್ದುಡಸಿ ಪಿಡಿದೆರಟ್ಕೈಗಳಿಂದೊತ್ತಿ ನಿಟ್ಟೆ ।
ರ್ಚರಿಯಿಂದಂ ನುರ್ಗಿ ಪಾಯಲ್ಕುಸಿರಿರದದಟಿಂ ಕೊಂದನಂದಾಪುಳಿಂದಂ ॥೩೯॥

ಮ॥ ಪೊಳೆಯುತ್ತುಂ ಚಮರೀಮೃಗಂ ಪರಿಯೆ ಕಂಡಂ ಬೇರೆ ರಚ್ಚಾಂಬು ಸಂ ।
ಗಳಿಸಲ್ ದೂಸರಮುಕ್ಕುಮೆಂಡೆಸೆವುದಂ ಮಾಣ್ದಲ್ಲಿ ಸರ ॥
ಲ್ಗಳನೀಡಾಡಿರದೆಯ್ದಿ ಗಂಟಲನಡುರ್ತಾರ್ದೊತ್ತಿ ಕೈಯಿಂದಮಾ ।
ಗಳದಂ ಕೊಂದನಣಂ ಸಮಸ್ತ ಮೃಗ ಹಿಂಸಾ ಲುಬ್ಧಕಂ ಲುಬ್ಧಕಂ ॥೪೦॥

ಮಸಕಂ ಮಿಕ್ಕು ಪುಳಿಂದನಾರ್ದು ತೆಗೆವಾಗಳ್ [2]ಬೋಳೆಯಂಬಿಂದಿಸಲ್ ।
ಪಸುಱೆೞಂ ಮರೆ ದೊಪ್ಪನುರ್ವರೆಗೆ ಬೀೞಲ್ ಕಂಡು ಗೋಣ್ಗೊಂಕಿ ವಾ ॥
ಸಿಸುತುಂ ಮೋರೆಯನಿಟ್ಟು ಮೋಹದೆ ಮುೞುಂಗಾಡುತ್ತೆ ಮತ್ತಂತೆ ಜೋಂ ।
ಪಿಸುತುಂ ಬಿೞ್ದೊಳಱುತ್ತೆ ಹುಲ್ಲೆ ಕಳೆದತ್ತಾ ಭಾವದಿಂ ಜೀವಮಂ ॥೪೧॥

ಕಂ॥ ಕರುಣಿಸೆಲೆ ಶಬರ ತುಡದಿರು ।
ಸರಲಂ ನೀನೆಂದೆನುತ್ತೆ ಪುಲ್ಗರ್ಚಿದವೋಲ್ ॥
ಮರವಟ್ಟು ಸೃಕ್ವ ದೂರ್ವಾಂ ।
ಕುರನಾಗಿರ್ದುದು ಭಯಾತ್ತ ಕರಣಂ ಹರಿಣಂ ॥೪೨॥

ಮ॥ಸ್ರ॥ ಇಳೆಯೊಳ್ ಕಾಡ್ಯೆದೆ ಬೇಡರ್ಗಿದು ಹರಿ ಹುಗಿಲಾಯ್ತೆಂದಿದಂ ಶೀತರುಗ್ಮಂ ।
ಡಳದಣ್ಣಂಗೆಯ್ದಿ [3]ಪೇೞಲ್ಕಿರದೆ ನೆಗೆದಣಂ ಪೋಪವೋಲ್ ವ್ಯಾಧನೆಚ್ಚು ॥
ಚ್ಚಳಿಸಿದಾ ಬಾಣಪುಂಖಂಬೞಯೊಳಲಿದು ತೋಱಲ್ ಕುರಂಗಂ ಭಯವ್ಯಾ।
ಕುಳದಿಂದೋರಂತದುಚ್ಚಪ್ಲುತ[ತರ]ಗತಿಯಿಂ ಪೋಗಿ ತಾಂ ಬಿೞ್ದುದಾಗಳ್ ॥೪೩॥

ನಡುವಂ ಕೋಲ್ ನಡುಕೋಲ್ವರಂ ನಡೆ ಕುರಂಗಂ ಬೀೞದಾ ಶಕ್ತಿ ನೂ ।
ರ್ಮಡಿಸಲ್ ಕೂಡುವಲಂಪು ಮಿಕ್ಕು ಹರಿಣೀಯಾಸ್ಯಾಗ್ರಮಂ ಘ್ರಾಣದಿಂ ॥
ತುಡುಕುತ್ತುಂ ಕುಸುಮಾಸ್ತ್ರ ಯಂತ್ರ ಮೃಗಮೋ ತಾನಿಂತಿದೆಂಬಂದದೇಂ ।
ನಡೆಯುತ್ತಿರ್ದುದೊ ಚಿತ್ರಮಂ ತೊಡರ್ದ ಹೃದ್ಭೂರಾಗ ಸಂವೇಗದಿಂ ॥೪೪॥

ಕಂ॥ ಮರನುಡಿವಂತಿರೆ ಪಾಯ್ವರೆ ।
ಮರೆಯುನದಂ ತ್ವರಿತದಿಂದಮಿಸಲಾ ಮರನೊಳ್ ॥

---

1. ಪೊತ್ತಾಗ್ರ. 2. ಪೋಳೆಯಂಬಿಂ. 3. ಪೇೞಲ್ಕೆರತೆ.

ಮೊರೆ ಕೀಲಿಸಿ [1]ನಟ್ಟುರ್ಚಿರೆ ।
ಸರಲಂ ಕಂಡಾರ್ದು ಶಬರನುರ್ಬಿದನೊರ್ವಂ ॥೪೫॥

ಉ॥ ತನ್ನಯ ಕಾಯ ಕಾಂತಿ ಮರಗಟ್ಟಿಲೆಯಂ ತನಿಗೊರ್ವಿಸುತ್ತುಮಿ ।
ರ್ಪನ್ನೆಗಮಾ ಪುಳಿಂದಿಯ ವಿಲೋಚನ ರೋಚಿಗಳಟ್ಟಿ ತಣ್ಪಿಸಲ್ ॥
ತಾನ್ನಿಮಿರ್ದಂದವಾಗೆ ಮೃಗಮಂ ನೆಱೆ ಕಂಡುಲಿದೆಚ್ಚು ಕೊಂದು ಬೇ ।
ಡನ್ನೆಲವೆರ್ಚೆ ವಲ್ಲಭೆಯ ವಕ್ತ್ರಮನಲ್ಲಿ ಮಗುಳ್ದು ನೋಡಿದಂ ॥೪೬॥

ಚಂ॥ ಉಡುವ ತೊವಲ್ಗೆ ಕೇಸರಿಗಳಂ ಪೊಸ ಪಾಸುದೊವಲ್ಗೆ ಬಣ್ಣದಿಂ ।
ದಿಡಿದೆಸೆದಿರ್ಪ ಪೆರ್ಬುಲಿಗಳಂ ಪ್ರಿಯ ಕಾಂತೆಯರಿಕ್ಕಿ ಕಟ್ಟುವಾ ॥
ಮುಡಿಗಳ ಚೌರಿಗಳ್ಗೆ ಚಮರೀಮೃಗ ಸಂಚಯಮಂ ಕರುತ್ತು ಪೇ ।
ರಡವಿಯೊಳೊಂದುಮಿಲ್ಲೆನಿಸಿ ಕೊಂದರಡುರ್ತು ಕರಂ ವನೇಚರರ್ ॥೪೭॥

ಕಂ॥ ಬೇಡಿತಿಯರ್ ಮನದಿಚ್ಚೆಗೆ ।
ಮಾಡುವ ತೊಡವಿಂಗೆ ತಕ್ಕ ಮುತ್ತು[2]ಗೆಯೆತ್ತಂ ॥
ನೋಡಿ ಮದೇಭಾವಳಿಯಂ ।
ಕಾಡೊಳ್ ಕೊಂದರ್ ಕಡಂಗಿ ಬೇಡರ್ ಕೆಲಬರ್ ॥೪೮॥

ಮ॥ ಕೆಲಬರ್ ಕೇಸರಿ ವೃಂದಮಂ ಕೆಲಬರುನ್ಮತ್ತ ದ್ವಿಪಾನೀಕಮಂ ।
ಕೆಲಬರ್ ಸೂಕರ ಸಂಘಮಂ ಕೆಲಬರುಗ್ರ ವ್ಯಾಘ್ರ ಸಂದೋಹಮಂ ॥
ಕೆಲಬರ್ ಭಲ್ಲ ಸಮಾಜಮಂ ಕೆಲಬರಾ ಸಾರಂಗ ಸಂಘಾತಮಂ ।
ಸಲೆ ಕೊಂದರ್ ನೆಲನೆಯ್ದೆ ರಕ್ತ ಜಲದಿಂ ಜೌಗೇಱ್ವಿನಂ ಲುಬ್ಧಕರ್ ॥೪೯॥

ಕಂ॥ ಕಾಡೊಳ್ ಕೃತಾಂತ ಸಂತತಿ ।
ಕೂಡೆ ತೊಳಲ್ದಂದಮಾಗೆ ಮೃಗ ಸಮುದಯದೊಳ್ ॥
ನೋಡುವೊಡದೊಂದುಮಿಲ್ಲೆನೆ ।
ಬೇಡರ್ ಬಗೆಬಂದ ಭಂಗಿಯಿಂದಂ ಕೊಂದರ್ ॥೫೦॥

ಮತ್ತಮಾ ಬೇಂಟೆಯ ಮಹಾದ್ಭುತದಿಂ ಕಾಡೆಲ್ಲಂ ಕೂಡೆ ನಕ್ಷತ್ರ ಮಂಡಲದಂತೆ ಮೃಗಶಿರ ಶ್ರವಣ ಕೃತ್ತಿಕೋಪೇತಮುಂ ಕ್ಷೀರ ವಾರಾಶಿಯಂತೆ ಹರಿ ಪ್ರವಾಳ

1. ನಟ್ಟುಜ್ಜಿರೆ. 2. ನಿಮಿತ್ತಂ.

ಪ್ರಯುಕ್ತಮುಂ ಕೌರವ ಬಲದಂತೆ ಭೀಷ್ಮ ಶಲ್ಯ ಶಕುನಿ ಪಕ್ಷ ವ್ಯಾಪ್ತಮುಂ ರಾಘವ ಜಿತಾಜಿರದಂತೆ ಸಮುಗ್ರೇಭ ಕುಂಭಕರ್ಣ ಪಾತೋಜ್ಜೃಂಭಿತಮುಂ ಛಂದೋವಿಶೇಷ ದಂತೆ ಮತ್ತೇಭ ಶಾರ್ದೂಲ ಹರಿಣ್ಯುತ್ಪಲ ಮಾಲಾಕೀರ್ಣಮುಂ ಧಾರಾಧರದಂತೆ ದಂತಿ ಮಂಡಿತ ದಂತಾವೃತಮುಂ ಪವಮಾನ ಸಹತ ಪ್ರಾವೃಡಭ್ರದಂತೆ ವಿಸ್ತೀರ್ಣ ಸಾರಂಗ ಸಮುದಯಮುಂ ಜರ್ಝರಿತ ಕಟಾಕದಂತೆ ವಾರಣ ಪ್ರಸವ ಕೀಲಾಲ ಪರೀತಮುಂ ವಿದಳಿತಾಹವ ಮಹೀತಳದಂತೆ ಪತಿತ ಖಡ್ಗಿ ಪ್ರತಾನಮುಂ ಸರೋಜಾ ಕೀರ್ಣ ಸರಃಪ್ರಸರದಂತೆ ಕೇಸರಾಕಲಿತ ಶೋಣಾಂಬು ಪೂರಿತಮಾಗಿರ್ಪುದಂತು ಮಲ್ಲದೆಯುಂ—

ಕಂ॥ ಕೊಳನಂತೆ ಶಿಳೀಮುಖ [1]ರುತ ।
ಕಳಿತ ಮಹಾ ಪುಂಡರೀಕ ಗಣದಿಂ ಬಹುಳೋ ॥
ತ್ಪಳ ತತಿಯಿಂದದ್ಭುತಮುಂ ।
ತಳೆದಿರ್ದುದು ಬೇಡರಾಡಿದಾ ಕಾಡೆಲ್ಲಂ ॥೫೧॥

ಮ॥ಸ್ರ॥ ಕರಿ ದಂತಕ್ಕಂತ್ರಮುಂ ಮೇಳಿಸಿ ನೆಲಹುಗಳಂ ಕಟ್ಟಿ ತಂದೊಡ್ಡಿ ಮಾಂಸೋ ।
ತ್ಕರಮುಂ ಪೊತ್ತೆಯ್ದೆ ತಮ್ಮುಳ್ಳುಡೆಯ ತೊವಲ ಮುಂಜೋಗಿನೊಳ್ ತೀವಿ [ಕೊಂಡು ॥
ಬ್ಬರದಿಂ ಹುಲ್ಮೀಂಗಳಿಂ ಸಂಗಳಿಸಿ ಮೊಲನನೇಟಿಂಟನೋರಂತೆ ಸೈತೊಂ ।
ದಿರೆ ಗೊಂಚಲ್ಗೊಂಡು ಕೆಯ್ಯಿಂ ಪಿಡಿದು ನಡೆದರಾ ಕಾಡೊಳಂ ಬೇಡರಾ [ಗಳ್] ॥೫೨॥

ಮ॥ ಕರಿ ಕಂಠೀರವ ಖಡ್ಗಿ ಕಾಸರ ತುರಂಗ ದ್ವೀಪಿ ಸಾರಂಗ ಸೂ ।
ಕರ ಭಲ್ಲೂಕ ನಿಕಾಯಮಂ ಸುಗಿದು ಸೀಳ್ದಾ ಮಸ್ತಕ ಸ್ಕಂಧ ಬಂ ॥
ಧುರ ವಕ್ಷೋ ಜನಿತೋರು ಮಂಡಲದ ಮುಷ್ಟಿಷ್ವಾದಿ ಮಾಂಸಂಗಳಂ ।
ತರದಿಂ ತೋಡಿ ತೆರಳ್ಚಿ ಕೊಂಡುದು ಕಿರಾತ ಶ್ರೇಣಿ ಸಾಲ್ವಂದದಿಂ ॥೫೩॥

ಚಂ॥ ಮರೆಯ ಪೊದಟ್ದಿ ಪೆರ್ದೊಡೆಗಳಂ ಹರಿಣಂಗಳ ಖಂಡ ಖಂಡಮಂ ।
ಕರಡಿಯ ಕಾಳಿಜಂಗಳನಿಭಾಂಗದ ಕುಂಭದ ಮೆಲ್ಮಿದುಟ್ಗಳಂ ॥
[2]ಮುರಿದಿಣಿಗೊಂಡು ಕೊರ್ಬಿದ ಲುಲಾಯದ ಖಂಡದ ಮಾಂಸ ವೃಂದಮಂ ।
ಧರಿಯಿಸಿ ಕೂಡೆ ಬೇಡವಡೆ ತಾಂ ನಡೆಗೊಂಡುದರಣ್ಯ ಮಾರ್ಗದೊಳ್ ॥೫೪॥

---

1. ದ್ರುತ. 2. ಮುರಿದಿಣುಗೊಂಡು.

ಮ॥ ಕೊನೆವಿಲ್ಲೊಳ್ ಪಱಗೊಂಡು ಪೇರುಡುಗಳಂ ಕಕ್ಷಂಗಳೊಳ್ ತಾಳ್ದಿ ಬೇ।
ಟ್ಟಿನಿತಂ ಪೀಲಿಗಳಂ ತೊಡರ್ಚಿ ಪೆಗಲೊಳ್ ಪೆರ್ಮಿಗಂಗಳಂ ಮೆಯ್ಯನೊ॥
ಯ್ಯನೆ ಕೆತ್ತುತ್ತಸು ಪೋಪ ಪುಲ್ಲೆವಱಯಂ ಕೈಯಿಂದದಂ ಕೊಂಡು ಬೇ।
ಡನಗುರ್ವಿಂ ನಡೆಗೊಂಡನಾತ್ಮ ವನಿತಾ ವಕ್ತ್ರಾಬ್ಜ ದತ್ತಾಂಬಕಂ ॥೫೫॥

ತಲೆ ನೇಣ್ಗೆಂದು ಮೃಗೇಂದ್ರ ವಾಲ ಕುಲಮಂ ಪಾಸಿಂಗಮಾ ಸಿಂಗದು।
ಜ್ಜ್ವಲ ಚರ್ಮಾವಳಿಯಂ ವಿಭೂಷಣ ಗಣಕ್ಕುಗ್ರೇಭ ಕುಂಭ ಸ್ಥಲಾ॥
ತುಲ ಮುಕ್ತಾ ತತಿಯಂ ಸಶೋಣಿತ ಚಮೂರೂದ್ಯನ್ನಖ ಶ್ರೇಣಿಯಂ।
ಸಲೆ ಬಾಲಾಭರಣಕ್ಕೆ ಕೊಂಡು ತಳರ್ದತ್ತಾಗಳ್ [1]ಕಿರಾತೋತ್ಕರಂ ॥೫೬॥

ಚಂ॥ ಲಯ ಸಮಯಾಂತಕರ್ಕಳೆನೆ ಕಾಯ್ದು ಕೊಲುತ್ತಿರೆ ತನ್ಮೃಗ ಕ್ಷತೋ।
ದಯ ನವ ರಕ್ತಬಿಂದು ತತಿ ಮೆಯ್ಯೊಳೆ ಸುತ್ತಿ ಜಗಿಲ್ತಿರಲ್ಕೆ ಸಂ॥
ಜೆಯ ಹರಿಗೆಂಪು ಸಂಗಳಿಸಿದುನ್ನತ ನೀಲ ನಗಂಗಳೆಂಬ ಭಂ।
ಗಿಯನೊಳಕೆಯ್ದು ಬೇಡರನಿತುಂ ನಡೆಗೊಂಡುದರಣ್ಯ ಮಾರ್ಗದೊಳ್ ॥೫೭॥

ಮುಳಿದು ಪುಳಿಂದ ವೃಂದಮಿರದೆಚ್ಚು ಮೃಗೀ ಗಣ ಜೀವ ಜಾಲಮಂ।
ಕೊಳುತಿರೆ ತನ್ಮೃಗೀ ಗಣದ ನೋಟದ ಚೆಲ್ವನಡುರ್ತು ತಾಮುಮಾ॥
ಗಳೆ ತವೆ ಕೊಂಡರೆಂದೆನೆ ವಿಲೋಕನ ಮೋಹನ ಭಾವಮೆಯ್ದೆ ಸಂ।
ಗಳಿಸೆ ನಿಜಾಧಿನಾಥರೊಡಸಂದು ಪುಳಿಂದೆಯರಾಗಳೊಪ್ಪಿದರ್ ॥೫೮॥

ಮ॥ ಪರ ಲಬ್ಧೇಷ್ಯ ಮೃಗವ್ಯರಾಗಿ ಮುದದಿಂ ತಂತಮ್ಮೊಳೋರೋರ್ವರಂ।
ಕರೆವೊಂದಬ್ಬರಮುರ್ಬೆಲುಬ್ಧಕ ಗಣಂ ಸಂರಂಭದಿಂ ಸುತ್ತಲುಂ॥
ಬರೆ ತಾಂ ಮುಂ ಬರುತಿರ್ದರಂಜನ ಗಿರೀಂದ್ರ ದ್ವಂದ್ವಮೆಂಬಂತೆ ಕ।
ರ್ಬುರ ಕಾಯಪ್ರಭೆ ಪರ್ಬಲಾ ಶಬರ ಸೇನಾಧೀಶರಂದಿರ್ಬರುಂ ॥೫೯॥

ಕಂ॥ ಘನಮಾಲೆ ಬಳಸಿದಾ ನೀ।
ಲ ನಗಂಗಳೆ ಬರ್ಪ ಭಂಗಿಯಂ ಶಬರಾನೀ॥
ಕಿನಿವೆರಸು ವಜ್ರನಿಘೋ೯।
ಷನುಮಗ್ಗದ ಪಿಂಗಳಾಕ್ಷನುಂ ಬರುತಿರೆಯುಂ ॥೬೦॥

1. ಕಿರಾಗೋತ್ಕರಂ.

ಇಂತಪ್ಪ ಸಬರವಡೆಯ ಕಳಕಳಕ್ಕೆ ನಡುನಡುಗಿ ಕೆಲವು ಮೃಗಂಗಳ್ ತಾರುಂತಟ್ಟುವೀಱುತ್ತೋಡುತ್ತುಮಿರ್ಪಾಗಳ್—

ಮ॥ ಮದ ಮಾತಂಗದ ನಾದಮೆಯ್ದೆ ಕಿವಿಯಂ ತಳ್ಪೊಯ್ಯೆ ಕೋಪಾನಳಂ।
ಪುದಿದಾ ರೂಢಿಯ ಜಾತಿವೈರಮದು ಮಾಣ್ದಾ ಹಸ್ತಿಯುಂ ತಾನುಮು॥
ಣ್ಮಿದ ವನ್ಯವ್ರಜ ನಿಸ್ವನಕ್ಕೆ ಭಯದಿಂದಾಗಳ್ ಬರುತ್ತಿರ್ದು ಕ।
ಟ್ಟಿದಿರೊಳ್ ಕಂಡುದು ತನ್ಮೃಗೇಂದ್ರಮೆನಸುಂ ಕಂದರ್ಪ ರಾಜೇಂದ್ರನಂ ॥೬೧॥

ಮ॥ಸ್ರ॥ ಸ್ಮರಣಾಂತರ್ಭಾವದಿಂಭೂವರಮನಸಿಜನಂ ನಾಡೆಯುಂ ನೋಡಿ ರೋಮೋ।
ತ್ಕರಮುರ್ಬೇಱಲ್ಕೆ [1]ಮುಯ್ಗೆತ್ತೊಗೆದು ತೊನೆಯೆ ವಾಲಾಗ್ರಮಂ ಕಣ್ಗಳಿಂ ಕೇ॥
ಸುರಿ ಸೂಸಲ್ ಪದ್ಮಜಾಂಡಂ ಬಿರಿಯೆ ಘುಳುಘುಳುಧ್ವಾನ ಸಂರಂಭಮುಣ್ಮ।
ತ್ತಿರಲಾಗಳ್ ಗರ್ಜಿಸುತ್ತುಂ ಮುಱಿದು ಮಸಕಮಂ ತಾಳ್ದಿದತ್ತಾ
ಮೃಗೇಂದ್ರಂ ॥೬೨॥

ಮ॥ ಭಯದಿಂದೋಡಿ ಬರುತ್ತುಮಿರ್ದುದು ಪುಳಿಂದರ್ಗಂಜಿಯಾ ಸಿಂಹಮ।
ಲ್ಲಿಯದಂ ತೊಟ್ಟನೆ ಕಂಡು ಭಾವಿಸಿ ನೃಪಾನಂಗಂಗೆ ಕೋಪೋತ್ಕಟಾ॥
ಶಯಮೇಕಾದುದು ದೇವ ಪೇೞಿಮೆನುತುಂ ತಾಂ ಬಿನ್ನಪಂಗೆಯ್ದು ವಿ।
ಸ್ಮಯದಿಂದಂ ಮಣಿಕುಂಡಲಂ ಮುನಿಪನಾಸ್ಯಾಂಭೋಜಮಂನೋಡಿದಂ ॥೬೩॥

ಕಂ॥ ಆ ಕೇಸರಿಯದು ತಾನವ।
ನೀ ಕಾಂತ ಮನೋಭವಂಗೆ ಭವ ಶತ್ರುವೆ ತಾ॥
ನಾ ಕಾರಣದಿಂ [2]ಭಾವಿ ಮ।
ಹಾ ಕೋಪಮನಾಗಳಪ್ಪುಕೆಯ್ದುದು ನೃಪತೀ ॥೬೪॥

ಇನಿತೊಂದು ಜನ್ಮ ವೈರಂ।
ಜನಿಯಿಸಿತೇಕಾ ಮೃಗಾರಿಗಾ ನೃಪ ಮದನಂ॥
ಗನಿತನೆನಗಱಿಯೆ ನೇಮಿಪು।
ದೆನುತುಂ ಬಿನ್ನವಿಸಿದಂ ಮುನೀಂದ್ರಂಗೆ ನೃಪಂ ॥೬೫॥

ವಿನಯದೆ ಮಣಿಕುಂಡಲ ಭೂ।
ಪನದಂ ಬೆಸಗೊಳುತಿರಲ್ಕೆ ಸಿಂಹದ ಕಂದ॥

1. ಮಾಯ್ಗೆ. 2. ಕಂತು ಭಾವಿಸಿ.

ರ್ಪನ ಪಿಂದಣ ಜನ್ಮದ ಪಗೆ।
ತನಮಂ ಪೇೞಲ್ಕೊಡರ್ಚಿದಂ ಮುನಿನಾಥಂ ॥೬೬॥

ಅದೆಂತೆಂದೊಡೆ—

ಕಂ॥ ಸೊಗಯಿಪ ವಿಜಯಾರ್ಧ ಮಹಾ।
ನಗದುತ್ತರ ತಟದೊಳುತ್ತರ ಶ್ರೇಣಿಯೆನಿ ॥
ಪ್ಪಗಣಿತ ವಿಷಯಮದದರೊಳ್ ।
ಮಿಗೆ ಪೆಸರ್ವೆತ್ತಿಂದ್ರ ಮಾಲೆಯೆಂಬೆಸೆವ ಪುರಂ ॥೬೭॥

ಚಂ॥ ಪರಿಕಿಸೆ ಪಂಕಜೋದರನ ವಿಕ್ರಮ[1]ಮೊಂದೆರಡಾ ಪುಲೋಮಜಾ ।
ವರನ ಬಲಂ ಬಲಾಹಿತನೆನುತ್ತುಮತರ್ಕ್ಯ ಪರಾಕ್ರಮಂ ಚಮೂ ॥
ತ್ಕರ ಪರಿರಕ್ಷಣ ಕ್ಷಮತೆ ತನ್ನೊಳಗುರ್ವಿಸೆ ಬಾಹುವೀರ್ಯ ಖೇ ।
ಚರನೆಸೆದಿರ್ಪನಿಂತು ಸತತಂ ನಿಜ ರಾಜ್ಯ ವಿಶಾಲ ಲೀಲೆಯೊಳ್ ॥೬೮॥

ಒಲಿಸೆ ಮಹೇಶನರ್ಧತನುವಾದಗನಂದನೆ ತಾಂ [2]ಸಪತ್ನಿಯಂ ।
ತಲೆಯೊಳನಾರತಂ [3]ತಳೆದಳಾ ಸೊಬಗೆಂತುಮೆನುತ್ತುಮಂತದಂ ॥
ಸಲೆ ನಗುತಿರ್ಪಳಾ ಖಚರ ಕಾಂತೆ ಮನೋಹರಿಯೆಂಬಳಾಜ್ಞೆಯ ।
ಗ್ಗಳಿಕೆಯಿನದ್ವಿತೀಯಮೆನಿಪಾ ಮಹಿಷೀ ಪದದೊಂದು ಪೆಂಪಿನಿಂ ॥೬೯॥

ಕಂ॥ ಎರಡಿಲ್ಲದೆ ತಾನೆ ಮನೋ ।
ಹರಿಯಂತಾ ನೆಗೞ್ದ ಬಾಹುವೀರ್ಯಂಗೆ ಮನೋ ॥
ಹರಿ ದೇವಿ ಸಮಂತು ಮನೋ ।
ಹರಿ ದೇವಿಗಮಾ ಮನೋಹರಂ ತತ್ಖಚರಂ ॥೭೦॥

ಚಂ॥ [4]ಮನದೊಳಲಂಪು ಮಿಕ್ಕು ಸಮ ಬದ್ಧ ಮನೋಭವ ಕೇಳಿಯಿಂದೆ ಸಂ ।
ಜನಿಯಿಸಿದುಲ್ಲಸತ್ಸುಖ ಸುಧಾ ರಸದಲ್ಲಿ ಮುೞುಂಗಿ ಮೂಡುವೀ ॥
ಬಿನದಮನಾರತಂ ತಮಗೆ ಜೀವನಮಾಗೆ ಸಮಂತು ಬಾಹುವೀ ।
ರ್ಯನುಮೆಸೆವಾ ಮನೋಹರಿಯುಮಿಂತಿರುತಿರ್ಪರತರ್ಕ್ಯ ಸೌಖ್ಯದಿಂ ॥೭೧॥

1. ನೊಂದೆರಡಾ. 2. ಸಮುಗ್ನಿ. 3. ತಳೆದನಾ. 4. ಮನದವಲಂಪು ಮಿಕ್ಕು ಸಂಬಂಧ.

ಅನುದಿನವಾತ್ಮ ವಲ್ಲಭೆ ಮನೋಹರಿ ದೇವಿಯ ಸಂಗ ಸೌಖ್ಯಮಂ ।
ತನುಗೆ ತದೀಯ ವಕ್ತ್ರ ಹಿಮಬಿಂಬ ವಿಲೋಕನ ಸೌಖ್ಯಮಂ ವಿಲೋ ॥
ಚನ ಯುಗಳಕ್ಕೆ ಸಂಗಳಿಸುವೀ ಬಿನದಂ ನಿಜಮಾಗೆ ರಾಗದಿಂ ।
ದನುಪಮ ಬಾಹುವೀರ್ಯನಿರುತಿರ್ಪನುದಂಚಿತ ಪುಣ್ಯ ಸಂಚಿತಂ ॥೭೨॥

ಅಂತಿರುತಿರ್ಪುದುಮೊಂದು ದಿವಸದೊಳ್—

ಉ॥ ತಮ್ಮಯ ನೃತ್ಯ [1]ಮತ್ಸರದೆ ಭಾರತಿ ಕೈಶಿಕೆಯೆಂಬರಿರ್ಬರುಂ ।
ನಿಮ್ಮನೆ ದೇವ ಕೇಳಿಸಲಣಂ [2]ಸಲೆ ಪಾರ್ದಿರುತಿರ್ದರೆಂದು ಕೈ ॥
ಯಮ್ಮುಗಿದೊಯ್ಯನೋಸರಿಸೆ ಕಂಚುಕಿ ಬಿನ್ನವಿಸಲ್ಕೆ ಬಾಹುವೀ ।
ರ್ಯನೊಮ್ಮಗವಿತ್ತು ಕೇಳುತುಮಭೀಕ್ಷಿಸಿದಂ ನಿಜ ಕಾಂತೆಯಾಸ್ಯಮಂ ॥೭೩॥

ಕಂ॥ ಆ ಭಾರತಿ ಕೈಶಿಕೆಯರ ।
ಶೋಭಾ ನರ್ತನ ವಿಚಿತ್ರಮಂ [3]ವೀಕ್ಷಿಪ ವಾಂ ॥
ಛಾ ಭೃತೆಯಾದಳ್ [4]ಖಚರ ।
ಶ್ರೀ ಭಾಮಿನಿಯೆನಿಪ ತನ್ಮನೋಹರಿಯಾಗಳ್ ॥೭೪॥

ಅದನಱಿದು—

ಮ॥ ನೆಗಳ್ದಾ ಭಾರತಿ ಕೈಶಿಕಾಖ್ಯೆಯರ ನೃತ್ಯ ಪ್ರೌಢಿಯಂ ನೋಡಿಯಾ ।
ಕೆಗಳಂ ಸಂತಸದಂತಮೆಯ್ದಿಸುವುದೀಗಳ್ ದೇವಿ ನೀನೆಂದು ನೆ ॥
ಟ್ಟಗೆ ತಾನೆಟ್ಟಿ ಮನೋಹರೀ ಸತಿ ಸಮೇತಂ ಬಂದು ಕುಳ್ಳಿರ್ದನೋ ।
ಲಗದೊಳ್ ಲೀಲೆಯನಾಂತು ತತ್ಖಚರ ವೀರಂ ಬಾಹುವೀರ್ಯಂ ನೃಪಾ ॥೭೫॥

ಕಂ॥ ಆ ಸಮಯಮನಱಿದೊಡಗೊಂ ।
ಡಾ [ಸಭೆಯೊಳ್] ಸೌವಿದಲ್ಲನಾ ಭಾ[ರತಿಯಂ] ॥
ಕೈಶಿಕೆಯಂ ತತ್ಖಚರಾ ।
ಗ್ರೇಶನ ಚರಣಕ್ಕೆ ತಂದು ತಾಂ ಕಾಣಿಸಿದಂ ॥೭೬॥

ಇರದಾಗಳೆ ಕೇಳಿಸುವವ ।
ಸರಮನದಂ ಪಡೆದ ಪದೆಪಿನಿಂ ನರ್ತಕಿಯರ್ ॥
ಪಿರಿದುಂ ಮೇಳಿಸಿದರ್ ಬಿ ।
ತ್ತರಿಸುವ ತಂತಮ್ಮ ಸಂಪ್ರದಾಯ ದ್ವಯಮಂ ॥೭೭॥

---

1. ಮಚ್ಚರದೆ. 2. ಪದೆ. 3. ವೀಕ್ಷಿತವಾಂ॥ತಾ. 4. ಖೇಚರ.

ಮತ್ತಮಾ ಸಮಯದೊಳ್ ಬಾಹುವೀರ್ಯ ವಿದ್ಯಾಧರ [ಮುಖಾ]ನೇಕ ತತ್ಸಭಾ ಜನಮುಂ ಸಮ್ಮೋಹನ ಶಲಾಕೆ ಪುಗುವಂತೆ ರಂಗಂಬೊಕ್ಕು ಶರದಭ್ರ ಪಟಲಂ ಪಿಂಗಿದ ಶಶಿ ಲೇಖೆಯಂತೆ ಸಮುತ್ಸಾರಿತ ಯವನಿಕೆಯಾಗಿ ಪುಷ್ಪಾಂಜಲಿಯಂ ಕೊಟ್ಟು ಆ ಭಾರತಿಯೆಂಬಾ ರೂಢಿಯ ನರ್ತಕಿ ತಾಳಾನುಗತಂ ಗೇಯಾನುಗತಂ ವಾದ್ಯಾನುಗತವಾಗಿ ನರ್ತಿಸುತ್ತಿರ್ಪಾಗಳ್—

ಮ॥ ಸ್ರ॥ ಕರಣಂ ನೂರೆಂಟು ನೂರೆಂಟೆಸೆವ ನಿಲವು ಮೂವತ್ತೆರಟ್ಬ್ದಾಲಿ ಮೂವ।
ತ್ತೆರಡೊಪ್ಪಿರ್ಪಂಗಹಾರಂ ಪೆಸರ್ವಡೆದ ಚತುಷ್ಷಷ್ಟಿ ಹಸ್ತಂ ಪ್ರಸಿದ್ಧಾ॥
ಷ್ಟ ರಸಂ ಬತ್ತೀಸ ಭೇದಾಂಬಕ ತತಿ ಪದಿಮೂಱುಂ ಶಿರೋಭೇದಮಾ ಭಾ।
ವ ರಸಾ[1]ಸ್ವಾದಂ ಮಿಗಲ್ ಭಾರತಿ ನೆಱೆ ಮೆರೆದಳ್ ನೃತ್ಯದೊಳ್
ಚಿತ್ರಮಾಗಲ್ ॥೭೮॥

ಮತ್ತಮಾಗಳ್—

ಕಂ॥ ನಿರುಪಮ ಶಾಸ್ತ್ರಾಂಗಂ ಬಿ।
ತ್ತರಿಸುವ ದೇಶೀಯಮೆಂಬಿವೆರಡುಂ ತಾನ॥
ಚ್ಚರಿಯಾಗಲ್ ಕೈಶಿಕೆಯುಂ।
ಭರತಾಗಮ ಬಾಹುವೀರ್ಯನಂ ಕೇಳಿಸಿದಳ್ ॥೭೯॥

ಎಸೆವಾತ್ಮ ಮನೋಹರಿ ದೇ।
ವಿ ಸಮೇತಂ ಬಾಹುವೀರ್ಯನಾ ನಟೆಯರ ವಾ॥
ದ್ಯ ಸಮಗ್ರ ನೃತ್ಯಮಂ ವೀ।
ಕ್ಷಿಸಿ ನೆಱೆ ಪೆಸರಿಟ್ಟು ನಾಡೆ ಮೆಚ್ಚುತ್ತಿರ್ದಂ ॥೮೦॥

ಮ॥ ಸಮವೀ ನೃತ್ಯ ವಿಚಿತ್ರ ವಿದ್ಯೆಗಳೊಳಿಂತೀಯಿರ್ಬರೆಂದಲ್ಲಿ ತ।
ನ್ನ ಮನಂ ಮೆಚ್ಚಿ ಸಮಾನಮಾಗೆ ಮಣಿ ಮಾಲಾನರ್ಘ್ಯ ಭೂಷಾಳಿ ವ॥
ಸ್ತ್ರಮನಾ ನರ್ತಕಿ [2]ಯುಗ್ಮಕಂದು ಮುದದಿಂ ಕೊಂಡೊಲ್ಮೆಯಿಂ ಕೊಟ್ಟು ಸಂ।
ಭ್ರಮದಿಂ ಮನ್ನಿಸಿ ಬಾಹುವೀರ್ಯ ಖಚರಂ ತಾನಿರ್ದನುರ್ವೀಶ್ವರಂ ॥೮೧॥

ಆ ಸಮಯದೊಳ್—

ಉ॥ ಆ ನೃಪಕಂತು ಪಿಂತಣ ಭವಾಂತರದಲ್ಲಿಯ ರತ್ನಶೇಖರಂ।
ತಾನೆನಿಸಿರ್ದ ತತ್ಖಚರನಟ್ಟಿದೊಡಾದಮ ಪೋದ ಶಿಷ್ಟರಾ॥

---

1. ಷ್ವಾಂಕಂಬೆಸಲ್. 2. ಯುಗದಿಂಕೊಡೊವಲ್ಮೆಯುಂ.

ಸ್ಥಾನದೊಳಾಗಳೆಟ್ಟಿ ಮಗೆ ಮುಂ ಕುಡುವಗ್ಗದ ಕಪ್ಪವೆಲ್ಲಮಂ ।
ನೀನಿರದೀವುದೆಂದು ನುಡಿದರ್ ಬಗೆಗೊಳ್ಳದೆ ಬಾಹುವೀರ್ಯನಂ ॥೮೨॥

ಚಂ॥ ಬಗೆಯದೆ ರತ್ನಶೇಖರನ ಶಿಷ್ಟರಹಂಕೃತಿಯಿಂದವಾಗಳೋ ।
ಲಗದೊಳಗೆಟ್ಟಿ ಕಪ್ಪಮನೆ ಬೇಡುವುದುಂ ಕೊನೆ ಮಿಸೆ ಕೆತ್ತೆ ಕೆಂ ॥
ಪೊಗೆಯೆ ವಿಲೋಚನ ದ್ವಿತಯದೊಳ್ ತ್ರಿಪತಾಕ ಲಲಾಟವಾಗೆಯುಂ ।
ಭುಗಿಲೆನೆ ಬಾಹುವೀರ್ಯ ಖಚರಂ ತಳೆದಂ ಪಟು ಕೋಪ ವಹ್ನಿಯಂ ॥೮೩॥

ತೆಱುವೆನೆ ಕಪ್ಪಮಂ ತನಗೆ ಪೇೞ್ ಮರುಳಾದನೆ ರತ್ನಶೇಖರಂ ।
ನೆಱೆ ಕಲಿ ಬಾಹುವೀರ್ಯನೆನಿಪೆನ್ನಯ ನಾಮಮನೇಕೆ ತಾನದೇ ॥
ಕಱಯನೆ ತೋಱುವೆಂ ರಣದೊಳಾ[1]ಯತಮಾನೆನುತುಗ್ರ ಕೋಪದಿಂ ।
ಜಱೆದು ತದೀಯ ಶಿಷ್ಟರನೆ ನೂಂಕಿಸಿದಂ ಪ್ರತಿಹಾರರಿಂ ನೃಪಾ ॥೮೪॥

ಮ॥ ಅವಮಾನಂ ತನಗಾಗೆ ಬಂದ ತೆಱನಂ ಶಿಷ್ಟರ್ ಸಮಂತೆಯ್ದೆ ಬಿ ।
ನ್ನವಿಸಲ್ ತೊಟ್ಟನೆ ರಾಜಶೇಖರನದಂ ಕೇಳ್ದಂತೆ ಕಂಜೋದ್ಭವಾಂ ॥
ಡವನಾವೇಗದೆ ನುರ್ಗುಗುಟ್ಟುವ [2]ಕುಳೋರ್ವೀಧ್ರಂಗಳಂ ಕೇಳ್ವಿ ಭೈ ।
ರವನಂ ಸಂಗರದಲ್ಲಿ ಭಂಗಿಸುವ ಕೋಪಾಟೋಪಮಂ ತಾಳ್ದಿದಂ ॥೮೫॥

ಮ॥ ವನ ವೃಕ್ಷ ಗ್ರಸನಕ್ಕೆ ಮುಂಬಱಿವ ದಾವ ಜ್ವಾಲೆಯೆಂಬಂತೆ ಬ ।
ಲ್ಮೆನಿಸಿಂ ಖೇಚರ [3]ವೀರ ಸೈನ್ಯಸಹಿತಂ ಮೇಲೆತ್ತಿಬಂದಾಜಿಯೊಳ್ ॥
ತನುಗೊಂಡಾಗಳೆ ರತ್ನಶೇಖರ ಮಹಾ ವಿದ್ಯಾಧರಂ ಬಾಹುವೀ ।
ರ್ಯನನೆಟ್ಟೋಡಿಸಿ ಸೂರೆಗೊಂಡನನಿತಂ ಸಪ್ತಾಂಗಮಂ ಭೂಪತೀ ॥೮೬॥

ಕಂ॥ ಶತಪತ್ರೋದರ [4]ಜಾತಾ ।
ಪತಿಯಂದದೆ ವಿರಥನಾಗಿ ಸಂವತ್ಸರ ಸಂ ॥
ಗತಿಯಂದದೆ ಪರಾಭವ ।
ಯುತನಾದಂ ಬಾಹುವೀರ್ಯನಾಹವ ಮುಖದೊಳ್ ॥೮೭॥

ಚಂ॥ ಉರು ಬಳ ರತ್ನಶೇಖರ ವಿಯಚ್ಚರನಿಂ ನೆಱೆ ಭಂಗನಾಗಿ ಸಂ ।
ಗರ ಧರೆಯಲ್ಲಿ ಸೋಲ್ತು ಜೆಸೆಗೆಟ್ಟು ಮನೋಹರೆಯಪ್ಪ ತನ್ಮನೋ ॥

---

1. ತತಮಂ. 2. ಕಳೋರ್ವಿಧ್ರಂಗಳಂ ಕೇಳ್ಡ. 3. ವೀರ್ಯ ಸೈನ್ಯ. 4. ಜಾತುಪ.

ಹರಿಯ ವಿಯೋಗಮಂ ತಳೆದಣಂ ನಿಲಲಾರದೆ ಬಾಹುವೀರ್ಯ ಖೇ।
ಚರಪತಿ ಬಿಟ್ಟನಾಗಳಸುವಂ ಮಣಿಕುಂಡಳ ಭೂಮಿಪಾಲಕಾ ॥೮೮॥

ಇಂತು ಕೇಸರಿಯಾಗಿ ಪುಟ್ಟಿರ್ದು—

ಚಂ॥ ನೆರೆದ ಕಿರಾತರಬ್ಬರದ ಕೋಟ್ಟುರಲಾರದೆ ಕಾನನಾಂತದೊಳ್।
ಬರುತುಮೆ ತನ್ಮೃಗಾಧಿಪತಿ ತೊಟ್ಟನೆ ಕಂಡು ವಿರೋಧಿ ರತ್ನಶೇ॥
ಖರ ಖಚರೇಂದ್ರನಾ ನೃಪ ಮನೋಭವನೆಂದಱುದುಗ್ರ ಕೋಪಮಂ।
ಧರಿಯಿಸಿ ಗರ್ಜಿಸಿತ್ತೊಡೆವಿನಂ ಜಡಜಾತ ಭವಾಂಡ ಮಂಡಲಂ ॥೮೯॥

ಮ॥ ಧರೆ ಕಂಪಂಗೊಳೆ ಪೊಯ್ದು ಪಾದ ಹತಿಯಿಂ ಬೇರೆಟ್ಟಿ [1]ಲೋಷ್ಟಂಗಳಂ।
ಬರಮಂ ತಾಗಲುದಗ್ರ ವಾಲ ಮುಖಮಾ ಶೃಂಗಾಗ್ರದೊಳ್ ಲಂಬಿಸು।
ತಿರ[2]ಲಾಗ್ರೀವದ ಕೇಸರಾಳಿ ಕೆದಱಲ್ ನೇತ್ರಂಗಳಿಂ ನೀಳ್ದು ಕೇ।
ಸುರಿ ಸೂಸುತ್ತಿರೆ ಗರ್ಜಿಸಿತ್ತು ಘನ ಕೋಪೋತ್ಕಂಠ ಕಂಠೀರವಂ ॥೯೦॥

ಇರದಾಟೋಪದೆ ಮೇಲೆ ಪಾಯಲಳುರ್ದಾಗಳ್ ಗರ್ಜಿಸುತ್ತಿರ್ದ ಕೇ।
ಸರಿಯಂ ತಾಂ ಕುಸುಮಾವಳೀ ಯುವತಿ ಕಂಡಂಜಲ್ಕೆ ನೀನಂಜದಂ॥
ತಿರೆನುತ್ತಂ ಪೆಱಗಿಕ್ಕಿ ಸರ್ಪನಲಗಂ ಕಿೞ್ತೋವದಾ ಬೇಗದಿಂ।
ದುರು ರೌದ್ರಾವಹ ರೂಪನಾಗಿ ನಡೆದಂ ಭೂಪಾಲ ಪುಷ್ಪಾಯುಧಂ ॥೯೧॥

ಕಂ॥ ತಳರ್ದಾ ಕೇಸರಿ ಗರ್ಜಿಪ।
ಘುಳುಘುಳು ನಿನದಕ್ಕೆ ಬೆರ್ಚಿ ಕಟ್ಟಿದ ಮಣಿ ಶೃಂ॥
ಖಳೆಯಂ ಪವನಂಜಯನು।
ಚ್ಚಳಿಸಿ ಸಮಂತಿರದೆ ಪರಿದುಕೊಂಡತ್ತಾಗಳ್ ॥೯೨॥

ಚಂ॥ ಪೆಳಱದ ವಾಜಿ [ರಾಜ] ಪವನಂಜಯನಾ ತರುಮೂಲ ದೇಶದಿಂ।
ತಳರ್ದೆಡೆವೊಕ್ಕುಮಾ ತುರಗಮಂದು ಗಳ ಪ್ರಪಿನದ್ಧಮಾಗಿ ಪಿಂ॥
ತೆಳಲುತುಮಲ್ಲಿ ಪೋಪ ಮಣಿಶೃಂಖಲೆಯಂ ಪಿಡಿಯಲ್ ತುಡುಂಕುತಾ।
ಗಳೆ ಬಳಿಸಂದಳಲ್ಲಿ ಕುಸುಮಾವಳಿ ದೇವಿ ಸಮಾಂದ್ಯ ಯಾನದಿಂ ॥೯೩॥

ಇಳೆಯೊಳೆಳಲ್ದು ಪೋಪ ಮಣಿಶೃಂಖಲೆ ನೀಳ್ದು ತುಡುಂಕೆ ತನ್ನ ಕೈ।
ಯಳವಿಯೊಳೊಯ್ಯನೊಯ್ಯನದು ಸೋಂಕುತಿರಲ್ ಪಿಡಿವಾ ದುರಾಗ್ರಹಂ॥

1. ಲೋಷ್ಠಂ. 2. ಲದ್ರೀಪದ.

ಬಳೆದು ಮರಾಳಯಾನೆ ಕುಸುಮಾವಳಿ ತತ್ಪವನಂಜಯಾಶ್ವನಂ।
ಬಳಿವಿಡಿದಾಗಳಂತು ಕಿಱಿದಂತರಮಂ ತಱಿಸಂದು ಪೋಗೆಯುಂ ॥೯೪॥

ತತ್ಸಮಯದೊಳ್—

ಕಂ॥ ನೆರೆದರಸು ಸೇನೆ ಬರ್ಪಂ।
ತಿರದಾ ಪಿಂಗಾಕ್ಷ ವಜ್ರ ನಿರ್ಘೋಷದ ಭೀ॥
ಕರ ಶಬರ ಸೇನೆ ಕವಿದುದು।
ಸರಭಸದಿಂ ದೆಸೆಮಸುಳ್ದು ತತ್ತರಿಸುವಿನಂ ॥೯೫॥

ಉ॥ ತಾಂ ದೆಸೆಯಂತಮೆಯ್ದಿ ಕವಿತರ್ಪ ಮಹಾಪ್ಲವವೊಂದೆ ಬಂದ ಕಾ।
ಳಿಂದಿಯ ಪೂರದೊಳ್ ಜಗುಳ್ದು ತೊಟ್ಟನೆ ಬೀಳ್ವ ನವೇಂದು ಲೇಖೆಯೆಂ॥
ಬಂದದೆ ಕಾನನಂ ನೆಱೆ ಕಱಂಗುವಿನಂ ಬರುತಿರ್ದ ಬೇಡರಾ।
ಸಂದಣಿಯಲ್ಲಿ [1]ಸಿಲ್ಕಿದಳವಳ್ ಕುಸುಮಾವಳಿ ದೇವಿ ಭೂವರಾ ॥೯೬॥

ಕಂ॥ ದುರಿತದ ಗಾವಳಿ ಸುಕೃತ।
ಸ್ಫುರಿತ ಶಲಾಕೆಯನೆ ಕಾಣ್ಬವೋಲ್ ಕಂಡುದು ಬೇ॥
ಡರ ಪಡೆ ಕುಸುಮಾವಳಿ ಸೌಂ।
ದರಿಯಂ ವರ ವಾಜಿರಾಜ ಪವನಂಜಯನಂ ॥೯೭॥

ಉ॥ ಆ ವಧುವಾ ತುರಂಗಮೆಮಗಂ ತಮಗಾಗವೇಳ್ಕುಮೆಂದು ಲೋ।
ಭಾವಿಳದಿಂದವೋವದೆ ಕರಂ ಕಲಹಂ ನೆಲೆವೆರ್ಚೆ ಕೋಪದಿಂ॥
ತಾವೆರಡುಂ ಕಿರಾತ ಬಳಮಾಗಳೆ ಕಾದಿದುದಸ್ರ ವಾರಿ ಧಾ।
ರಾವಳಿ ಕಂಠದೊಳ್ ಪರಿಯೆ ಮುಂಡದ ಕುಪ್ಪಳಿ ಶೈಲಮಪ್ಪಿನಂ ॥೯೮॥

ಇಂತು ತಂತಮ್ಮ ಬೇಡವಡೆವೆರಸು ವಜ್ರನಿರ್ಘೋಷನುಂ ಪಿಂಗಾಕ್ಷನುಂ ಮುಟ್ಟೆ ಮೂದಲಿಸಿ ಕಟ್ಬಾಯದಿಂ ಕಾದುವಾಗಳ್—

ಚಂ॥ ಸರಭಸದಿಂದಮಾ ಶಬರ ನಾಯಕರಿರ್ಬರುಮಾತ್ಮ ಸೈನಿಕ।
ರ್ವೆರಸು ಪಳಂಚುವಾ ಕಳಕಳಕ್ಕೆನಸುಂ ಪವನಂಜಯಾಶ್ವನಂ॥
ತಿರದೆ ಬಿಗುರ್ತುಱ ತನ್ನಯ [2]ರಯೋತ್ಕಟದಿಂದಮೆ ಬಂದು ಪೊಕ್ಕುದ।
ಚ್ಚರಿವುದಯಲ್ಕ[3]ದೆಮ್ಮಯ ವಿರಾಜಿಸುವೀ ಬನಮಂ ನರೇಶ್ವರಾ ॥೯೯॥

1. ಸಿಕ್ಕದಳೀ. 2. ದಯೋತ್ಕಟ. 3. ನೆಮ್ಮಯ.

ಆ ತುರಂಗಮಂ ಕಾಣುತ್ತಮೆ ತದೀಯ ವೃತ್ತಕಮನಾತ್ಮ ಸ್ವಾಂತದೊಳ್ ನೆಱೆಯಱಿದು—

ಉ॥ ಈ ವನದಿಂ ತುರಂಗಮಿದು ತಾಂ ಪೊಱಮಟ್ಟೊಡೆ ಕಂಡುಕೊಳ್ಗುಮಿಂ।
ತೋವದೆ ಬೇಡರೆಂದಱಿದು ನಿನ್ನಧಿನಾಥನ ಕಾಣ್ಕೆಯಪ್ಪಿನಂ॥
ಭಾವಿಸುವರ್ಗೆ ನೀನುಪಲವಾಗಿಯೆ ತೋಱೆನುತುಂ ನಿರೂಪಿಸ।
ಲ್ಕಾ ವರ ಚೂತದಲ್ಲಿ ಪವನಂಜಯನಿರ್ದಪುದುರ್ವರೇಶ್ವರಾ ॥೧೦೦॥

ಮತ್ತಮಾಗಳ್—

ಮ॥ ಗದಗಂಪಂಗೊಳುತುಂ ಪುಳಿಂದ ಸಮರೋದ್ಯದ್ಭೀತಿಯಿಂ ಸೋರ್ವ ಬಾ।
ಷ್ಪದಗುರ್ವಿಂದಮೆ ಮುಂದುಗಾಣದೆ ನಿಜ ಪ್ರಾಣೇಶನಂ ಪಿಂಗಿ ಪೊ॥
ಣ್ಮಿದ ನಿರ್ವೇಗದೆ ವಿಭ್ರಮಂ ಪುದಿದು ದೀನ ಧ್ವಾನೆಯಾಗುತ್ತೆ ಪೊ।
ರ್ದಿದಳಂತಾ ಕುಸುಮಾವಳೀ[1]ಯುವತಿ ಬಂದೆವಿಶ್ರಾವನೋಪಾಂತಮಂ ॥೧೦೧॥

ಇಂತು ಬಂದು ವಿಹ್ವಲೀಭೂತ ಸ್ವಾಂತೆಯಾದ ಕಾಂತೆಯಂ ನೋಡಿ—

ಮ॥ ಸಲೆ ನೋಟ್ಪರ್ಗೆ ಶಿಲಾ ವಧೂ ಪ್ರತಿಮೆಯೆಂಬಂತಾಗೆ ತೋಱುತ್ತುಮು।
ಸ್ಖಲಿತಂ ನಿನ್ನಯ ಕಾಂತ ದರ್ಶನಮದಿನ್ನಪ್ಪನ್ನೆಗಂ ಸೌಖ್ಯ ಸ॥
ನ್ಮಿಲಿತಾಂತರ್ಮುಖಿಯಾಗಿ ನೀನಿರೆನಲಾಯೆಮ್ಮಾಜ್ಞೆಯಿಂದಂ ಸಮು।
ಜ್ಜ್ವಲಿಸುತ್ತುಂ ಕುಸುಮಾವಳೀ ಯುವತಿ ತಾನಿಂತಿರ್ದಳುರ್ವೀಪತೀ ॥೧೦೨॥

ಆ ಸಮಯದೊಳ್—

ಮ॥ ಧರೆಯೊಳ್ ಪಿಂಗಿದ ಪಿಂಗಳಾಂಬಕ ಪುಳಿಂದಾಧೀಶನಂ ಸೈನಿಕಂ।
ಬೆರಸಾಗಳ್ ತವೆ ಕೊಂದು ಕೊಕ್ಕರಿಸಿದಂತಾ ವಜ್ರನಿರ್ಘೋಷನಾ॥
ತುರದಿಂ [2]ರುಂದ್ರಮೆನಿಪ್ಪ ಚಂದ್ರಕಳೆಯಂ ಸ್ವರ್ಭಾನು ಬೆಂಬತ್ತುವಂ।
ತಿರದಾದಂ ಕುಸುಮಾವಳೀ ಯುವತಿಯಂ ಬಂದೆಯ್ದಿದಂ ಭ್ರಾಂತಿಯಿಂ॥೧೦೩॥

ಮ॥ ಪೊರೆಗೆಟ್ಟಿಂದು ನಿರೀಕ್ಷಿಸಲ್ಕೆ ಶಿಲೆಯಾಗಿರ್ದಂದಮಂ ಕಂಡಿದ।
ಚ್ಚರಿ ಸಂಭಾವಿಪೊಡೀ ತನೂದರಿಯೆ ದಿವ್ಯಸ್ತ್ರೀಯೆನುತ್ತುಂ ಭಯೋ॥
ತ್ಕರದಿಂದಾ ಕುಸುಮಾವಳೀ ಸತಿಯೊಳಾದೊಂದಾಗ್ರಹಂ ಪೋಗೆ ಚ॥
ಚ್ಚರದಿಂ ತನ್ನ ಕಿರಾತ ಸೈನ್ಯಸಹಿತಂ ಪೋದಂ ಪುಳಿಂದಾಧಿಪಂ ॥೧೦೪॥

1. ದೇವಿ. 2. ರಂಧ್ರ.

ಕಂ॥ ಪೆಸರ್ವೆತ್ತಾ ರೂಪಾನ್ವಿತೆ ।
ಕುಸುಮಾವಳಿ ದೇವಿ ತಾನೆ ದಲ್ ನಿನಗೀಗಳ್ ॥
ಬೆಸಗೊಂಡೆಮ್ಮ ವನಾಂತಿಕ ।
ದೆಸೆವಬಲಾಕಾರದೀ ಶಿಲಾಪ್ರತಿಮೆ ನೃಪಾ ॥೧೦೫॥

ಆ ಕಪಿಲ ಮುನೀಂದ್ರನಿಂತೆಂದು ಪೇೞೆ ಕೇಳ್ದು—

ಮ॥ ಕನಸಿಂ ಕಂಡುದು ದೃಷ್ಟಮಾದೊಡೆನಿತಾನುಂ ವಿಸ್ಮಯಂಬಟ್ಟು ಭೋಂ ।
ಕನೆ ತಾಂ ಬಂದು ಶಿಲಾಂಗನಾ ಪ್ರತಿಮೆಯೇಕಿಲ್ಲಿರ್ದುದೆಂತಾದುದೆಂ ॥
ಬಿನಿತೊಂದಂ ಬೆಸಗೊಂಡು ತನ್ಮುನಿಪನಿಂದಂ ಕೇಳ್ದು ತದ್ವೃತ್ತಕ ।
ಕ್ಕೆನರೇಂದ್ರಂ ಮಣಿಕುಂಡಲಂ[ಮಣಿ]ಮಯೋದ್ಯನ್ಮೌಳಿಯಂ ತೂಗಿದಂ॥೧೦೬॥

ಕಂ॥ ಮತಿವರ್ಧನ ಸಚಿವನ ಮುಖ ।
ಶತ[1]ದಳಮಂ ನೋಡಿ ವಿಸ್ಮಯಂಬಡುತುಮಿಳಾ ॥
ಪತಿ ಮಣಿಕುಂಡಲನಾ ಮುನಿ ।
ತತಿ ವೃತ ಕಪಿಲ ವ್ರತೀಶ್ವರಂಗಿಂತೆಂದಂ ॥೧೦೭॥

ಆ ಕೇಸರಿಯೊಳ್[2]ದಿರ್ಚಿರೆ ।
ಭೂಕಾಂತ ಮನೋಜನಲ್ಲಿ ತಾನಾಯ್ತೇನ ॥
ವ್ಯಾಕುಳದಿನದಂ ತ್ರಿಜ್ಞಾ ।
ನಾಕರ ಮುನಿನಾಥ ಪೇೞುಮೆನೆ ನೃಪ ಮದನಂ ॥೧೦೮॥

ಆ ಮಣಿಕುಂಡಲಂ ಬೆಸಗೊಂಡುದಕ್ಕೆ ಕಪಿಲ ವ್ರತೀಂದ್ರನಿಂತೆಂದಂ—

ಕಂ॥ ಅದಿರದಿದಿರ್ಚೆ ಮಹೀವರ ।
ಮದನಂ ತನಗೆಯ್ದೆವರೆ ಬಿಗುರ್ತಂದದಿನಂ ॥
ದದು ಕಿೞ್ದೆಡೆಯಂ ಕೊಂಡು ।
ಯ್ದುದು ಗತಿಯಂ ಕಾಣದಂತಿರಾ ಮೃಗರಾಜಂ ॥೧೦೯॥

ಮ॥ ವಸುಧಾ ವ್ಯೋಮದ ಸಂಧಿ ಬಂಧಮದು ಪೋ ಬಿರ್ಚಿತ್ತೆನಲ್ ಬೆರ್ಚಿ ಗ ।
ರ್ಜಿಸುತುಂ ಕೇಸರ ಮಾಲೆ ಸೂಸೆ ಭವಬದ್ಧ ಕ್ರೋಧದಿಂ ಕಾಯ್ದು ಲಂ ॥
ಘಿಸಿ ಮೇಲ್ವಾಯ್ದು ಮೃಗೇಂದ್ರನಂ [3]ಬಗೆಯದಾರ್ದುಂ ದಂಡೆಗೊಟ್ಟೆತ್ತಿ ಕಿ ।
ಬ್ಬಿಸಿಱಿಂ ಕುತ್ತುತುರುಳ್ಚಿ ಕೊಂದನದನುರ್ವೀನಾಥ ಮೀನಧ್ವಜಂ ॥೧೧೦॥

1. ಗಳಮಂ. 2. ದಿರ್ಚಿದ. 3. ಬಗೆಯುದಾರ್ದಂಡೆ.

ಕಂ॥ ಪುದಿದಿರ್ದ ಪೂರ್ವ ಭವ ವೈ ।
ರದ [1]ಮಸಕದೆ ಕಾಯ್ದು ಪಾಯ್ದ ಕೇಸರಿಯಂ ಕೊಂ ॥
ದದಱುವಿನೊಡನೆ ಕಱಿದಂ ।
ಪೊದೞ್ದ ನಿಜ ಕೋಪ ತಮಮುನಾ ನೃಪಮದನಂ ॥೧೧೧॥

ಆಗಳಿಂತು ಕೋಪೋತ್ಸಾರಿತ ಸ್ವಾಂತನಾಗಿ—

ಚಂ॥ ಜನಪ ಮನೋಜನಾಗಳಿನಿಯಳ್ ಕುಸುಮಾವಳಿಯಂ ಮಗುೞ್ದು ತೊ ।
ಟ್ಟನೆ ನಡೆ ನೋಡಿ ಕಾಣದಿರ್ದ ಪಾವ್ವನೆ ಪಾಱಿ ತದೀಯ ಸಿಂಹ ಗ ॥
ರ್ಜನೆಗೆ ಬಿಗುರ್ತು ಮೆಯ್ಯಡಗಿದಳೆಂಬಭಿಶಂಕೆಯೊಳಂ ಸಮೀಪ ಕಾ ।
ನನ ತರು ಗುಲ್ಮ ವಲ್ಲಿಗಳಱುಂಬಿನೊಳೆಯ್ದೆ ತೊಳಲ್ದು ನೋಡಿದಂ ॥೧೧೨॥

ಮೃದು ಪದ ಪಲ್ಲವ ನ್ಯಸನ ಚಿಹ್ನಮನುರ್ವಿಯೊಳಲ್ಲಿಗಲ್ಲಿಗಂ ।
ತದನೆ ನಿರೀಕ್ಷಿಸುತ್ತುಮೆಸೆವಂಗದ ಸೌರಭ ಲೋಭದಿಂದೆ ಪಿಂ ॥
ಗದೆ ಬಱಸಲ್ವ ತುಂಬಿಗಳ ಝುಂಕೃತಿಯಂ ಪದೆದಾಲಿಸುತುಮಾ ।
ಪದದೊಳಳೇಶ ಕಂತು ನಿಜ ಕಾಂತೆಯನಿಂತು ತೊಳಲ್ದು ನೋಡಿದಂ ॥೧೧೩॥

ಚರಣದ ಚಿಹ್ನಮೀ ನೆಲದೊಳೆಲ್ಲಿಯುಮಿಲ್ಲ ಬಿಗುರ್ತು ಪಿಂತೆ ತಾ ।
ನಿರೆ ಪೆಱತೊಂದು ಸಿಂಹಮದು ಪಾಯ್ದೆಳೆದುಯ್ದುದೊ ಮೇಣರಣ್ಯದೊಳ್ ॥
ಚರಿಯಿಪ ರೌದ್ರ ರಾಕ್ಷಸರ ಬಾರಿಗೆ ಬಿಳ್ದಳೊ ಕಾಂತೆಯೆಂದು ಭೂ ।
ವರ ಕುಸುಮೇಷು ದೂರಿಸಿ ಪಲುಂಬಿದನಿಂತು ಬಹು ಪ್ರಕಾರದಿಂ ॥೧೧೪॥

ಉ॥ ದೂರದೆ [2]ಕಂಡು ಕಾಯ್ದೆನಗೆ ಗರ್ಜಿಸಿ ತೊಟ್ಟನೆ [3]ಮೇಲೆ ಪಾಯ್ದ ಕಂ ।
ಠೀರವನೆನ್ನ ಕಾಂತೆ ಕುಸುಮಾವಳಿಯಿಂದಮಗಲ್ದುದೊಂದು ದು ।
ರ್ವಾರಮೆನಿಪ್ಪ ಕಾರಣಮಿದಾಯ್ತೆನುತುಂ ನೃಪ ಮನ್ಮಥಂ ಸಮು ॥
ತ್ಸಾರಿತ ಧೈರ್ಯನಾಗೆ ತನು ಜೋಲ್ದಿರದೆಯ್ದಿದನಂದು ಮೂರ್ಛೆಯಂ ॥೧೧೫॥

ಚಂ॥ ಇರದೆ ತೊಳಲ್ದು ಕಾನನದೊಳೆಯ್ದೆ ನಿರೀಕ್ಷಿಸಿ ಕಾಣದಾ ಮನೋ ।
ಹರಿ ಕುಸುಮಾವಳೀ ಸತಿಯುನಾ ಕ್ಷಣದಿಂದಮಭೀಕ್ಷ್ಣಪೊಂದು ಕಾ ॥
ತರವೆಡೆಗೊಂಡು ಹೃತ್ಪುಟಿಯುಸಿಂತೊಳಪೊಕ್ಕನೆನಿಪ್ಪ ಭಂಗಿ ಬಿ ।
ತ್ತರಿಸಿರೆ ಕಣ್ಮಲರ್ ಮುಗಿದು ಮೂರ್ಛೆಯೊಳಿರ್ದನಿಳೇಶ ಮನ್ಮಥಂ ॥೧೧೬॥

---

1. ಮಸ್ತಕದೆ. 2. ಕಂತು. 3. ಮೇಲುವಾಯ್ದು.

ಕಂ॥ ಇನಿಯಳ್ ತಾನಲ್ಲದ ಪೋಱ ।
ಗನದೆಂತುಂ ನೋಡನೆಂಬ ತೆಱದಿಂದಂ ಲೋ ॥
ಚನಮುಂ ಬೆಚ್ಚಂತಿರೆ ಮು ।
ಚ್ಚಿ ನರೇಂದ್ರ ತನುಜೆಗಿಂತು ಮೂರ್ಛೆಯೊಳಿರ್ದಂ ॥೧೧೭॥

ಚಂ॥ ಪರಿಜನಮಾಮೆ ದಲ್ ನಿನಗೆ ನೀಂ ಧೃತಿಗುಂದದಿರುಯ್ಯು ತೋರ್ಪೆವಾ ।
ತುರದೆ ಭವನ್ಮನಃಪ್ರಿಯಳನೆಂದೆನುತಿರ್ದಪುವೆಂಬಿನಂ ಝುಣ ॥
ತ್ಕರಿಸುತುಮಂಗ ಸೌರಭಕೆ ಕವ್ವರೆಗೊಳ್ವಳಿ ಮಾಲಿಕಾ ಗರು ।
ತ್ಪರಿಕರ ವಾಯುವಿಂ ನೃಪ ಮನೋಭವನೆಚ್ಚಱನಾಗಳೆಯ್ದಿದಂ ॥೧೧೮॥

ಚಂ॥ ಮೃದು ಮಧುರಂ ಪೊದಱ್ದೆಸೆಯಲಲ್ಲುಲಿವನ್ಯಭೃತ ಪ್ರಣಾದಮಂ ।
ತದು ಕುಸುಮಾವಳೀ ಸತಿಯ ನಿಸ್ವನಮೆಂದು ದಿಗಿಲ್ಲನೆಱ್ದು ಬಾ ।
ಷ್ಪದ ಪನಿಯಂ ಬೆರಲ್ಗೊನೆಗಳಿಂ ಸಿಡಿಯುತ್ತಿರಲಾ[1]ಗಳುಳ್ಕುತಾ ।
ವಧುವ ಗವೇಷಣಕ್ಕೆ ನಡೆದಂ ನರನಾಥ ಮನೋಭವಂ ನೃಪಾ ॥೧೧೯॥

ಇಂತು ಕಿಱಿದಂತರಮಂ ಪೋಗಿ ಕಾಣದೆ—

ರಗಳೆ॥ ಮೃಗರಾಜ ಗರ್ಜನೆಗೆ ಬೆದರಿಯಡಗಿರ್ಕುಮೋ ।
ಬಗೆಗೆಟ್ಟು ಮುಗ್ಧೆ ಮಿಗೆ ಚಕಿತಾತ್ಮೆಯಕ್ಕುಮೋ ॥
ತರಳಾಕ್ಷಿ ಪಲ್ಮೃಗದ ಬಾರಿಯೊಳ್ ಬಿಳ್ದುಮೋ
ತರುಣಿಯೆನ್ನಂ ಕಾಣದತಿ ಭಯಂಗೊಳ್ಗುಮೋ ॥
ಎನ್ನ ಪೆಱಗಿರ್ದೆಂತು ಪೇೞ್ ಮಾಯವಾದಳೋ ।
ತಾನ್ನಡುಗಿ ಭೀತಿಯಿಂದಾವತ್ತ ಪೋದಳೋ ॥
ದೆಸೆಗೆಟ್ಟು ಮತಿ ವಿಕಳದಿಂದುಸಿರದಿರ್ಪಳೋ ।
ಪೆಸರ್ಗೊಂಡು ಕರೆದೆನ್ನ ನುಡಿಗೇಳದಿರ್ಪಳೋ ॥
ಲತೆಗಳಿಡುಕುಱುವೊಕ್ಕು ಮರು ನುಡಿಯಲಱಿಯಳೋ ।
ಮತಿಗಿಡಿಸಿದಂಜಿಕೆಯೊಳಬಲೆ ಮೆಯ್ಯುರಿಯಳೋ ॥
ಇನಿಯನಡವಿಯೊಳುಳಿದನೆಂದು ವಿಹ್ವಲಿಪಳೋ ।
ಜನಿತಾತಿ ಭಯದಿನೋವೆಂದು ಕಳವಳಿಪಳೋ ॥
ತಾನೆನ್ನಗಲ್ಕೆಯನದೆಂತು ಸೈರಿಸುವಳೋ ।
ಮಾನಿನಿ ಮನೋಭಯಮನೆಂತು ಭಾವಿಸುವಳೋ ॥

1. ಗಳುಳ್ಮಿದಂ। ವಧುದ್ವೇಷಕ್ಕೆ ನಡೆದಂ.

ಎಂತೆಂತು ಮತ್ಸವಿಯೋಗದಿನಬಳೆ ತಳರ್ದಳೋ ।
ಎಂತಪ್ಪ ಚಿಂತೆಯಂ ತರಳಾಕ್ಷಿ ತಳೆದಳೋ ॥

[1]ಮುನ್ನಿನಂತಗಿದತನು ತಾಪದೊಳ್ ತೊಡರ್ಗುವೋ ।
ತನ್ನ ಮೃದು ಮನಮನಱಿಯುಮೆ ಸಮಂತಡರ್ಗುವೋ ॥

ಬಲವನ್ಮೃಗೇಂದ್ರ ರಣಮೇಕೆ ಕೈಗೂಡಿತೋ ।
ಲಲನೆಯ ವಿಯೋಗಮಂ ತಾನದುವೆ ಮಾಡಿತೋ ॥

ಏಕಾಕಿಯಾದ ನೀನೆತ್ತಣ್ಗೆ ಪೋದೆಯೋ ।
ವ್ಯಾಕುಲತೆ ನೆಲೆವೆರ್ಚೆ ಮತ್ತಮೇನಾದೆಯೋ ॥

ಮುಳಿದಂದು ಮುಳಿದಿರದೆ ಪಿರಿದುಮಗಲ್ದಿರ್ಪುದೇ ।
ಜಳಜ ಮುಖಿ ಪೇರಡವಿಯೊಳ್ ಕಾಡಲಾರ್ಪುದೇ ॥

ತಳಿರಡಿಗಳಂ ತೋಱದೇಕಿರ್ಪೆ ಶಶಿಮುಖೀ ।
ನಳಿ ತೋಳ್ಗಳಂ ತೋರ್ಪು[2]ದೇಕಿಲ್ಲ ಶುಕ ನಖೀ ॥

ನಳಿನಾಸ್ಯಮಂ [ತೋಱು] ನಲವನ[3]ಚ್ಚೇರಿಸೈ ।
ಲಲಿತಾಂಗಮಂ ತೋಱು ಮುದಮನುಬ್ಬೇರಿಸೈ ॥

ದನಿದೋಱಿಸೆನಗೆ ಮದ ಪಿಕ ನಿನದ ಕಂಧರೇ ।
ಮನಮಿತ್ತು [4]ನುಡಿವುದೈ ಮಧುರೋಕ್ತಿ ಬಂಧುರೇ ॥

ಮೃಗ ಶಾಬ ನೇತ್ರಿಯಂ ಮೃಗಿಗಳಿರ ಕಂಡಿರೇ ।
ಸೊಗಯಿಪ ಲತಾಂಗಿಯಂ ಲತೆಗಳಿರ ಕಂಡಿರೇ ॥

ಲುಳಿತಾಕ್ಷಿಯಂ ಕುವಲಯಂಗಳಿರ ಕಂಡಿರೇ ।
ಜಳಜಾಸ್ಯಮಂ ಜಳರುಹಂಗಳಿರ ಕಂಡಿರೇ ॥

ಕಳ ನಿನದೆಯಂ ಕಳ ಪಿಕಂಗಳಿರ ಕಂಡಿರೇ ।
ಅಳಿ ಕುಂತಳೆಯನಳಿಗಣಂಗಳಿರ ಕಂಡಿರೇ ॥

[ಕರಿ]ಕುಂಭ ಕುಚೆಯನೆಲೆ ಕರಿಗಳಿರ ಕಂಡಿರೇ ।
ಸರಸೋಕ್ತಿಯಂ ಶುಕಾವಳಿಗಳಿರ ಕಂಡಿರೇ ॥

ಪರಿಮಳಾಂಗಿಯನೆಸೆವ ಪೂಗಳಿರ ಕಂಡಿರೇ ।
ಗುರು ಜಘನೆಯಂ ಕೃತಕ ಗಿರಿಗಳಿರ ಕಂಡಿರೇ ॥

---

1. ಮುನ್ನನಂದಗಿನತನು. 2. ದೇಂಕುಲಿಶ ಕುಲ ನಖೀ. 3. ನಚ್ಚೈರಿಸೈ.
4. ನುಡಿವುದೆಂ.

ಬಿಸರುಹ ಮೃಣಾಳ ಸದೃಶಸ್ವಚ್ಛ ಭಾವೆಯಂ ।
ಕುಸುಮ ಸುಕುಮಾರಿ ಕುಸುಮಾವಳೀ ದೇವಿಯಂ ॥

ಇಂತು ಪಲುಂಬುತುಂ ಪೋಗೆವೋಗೆ—

ಚಂ॥ ಮದಕರಿ [1]ತೀಂಟೆಗೊಲ್ದೊರಸೆ ಭೂರುಹ ಕಂಧರದೊಳ್ ಜಿಗಿಲ್ತು ಪ ।
ತ್ತಿದ ಮದ ಸೌರಭಕ್ಕೆ ಸುಳಿಗೊಳ್ವಳಿಮಾಲೆಯನೆಯ್ದೆ ಕಂಡು ವ ॥
ಕ್ರದ [2]ನಱು ಸುಯ್ಗೆ ಸುತ್ತಿದವುವೀ [3]ಮಧುಪೋತ್ಕರಮಿಲ್ಲಿಯಿರ್ದಪಳ್ ।
ಸುದತಿಯೆನುತ್ತುಮಾಯೆಡೆಗೆ ತಾಂ ನಡೆದಂ ನರನಾಥ ಮನ್ಮಥಂ ॥೧೨೦॥

ಆ ತಾಣದೊಳ್ [4]ಕಾಣದೆ ವಿಹ್ವಲೀಭೂತ ಚೇತನಾಗಿ—

ಚಂ॥ ಅಗಲದೆ ಲೀಲೆಯಿಂ ಲಲಿತ ಯಾನ ವಿಳಾಸದಿನೊಂದೆ ಪೋಪ ಹಂ ।
ಸೆಗಳನದೊಂದು ತಾಣದೊಳಭೀಕ್ಷಿಸಿ ಮೆಲ್ನಡೆಯಂ ಕಲಲ್ಕೆ ನೆ ।
ಟ್ಟಗೆ ಬೞವೋಗುತಿರ್ದಪುವು ತತ್ಸತಿ ಪೋದಪಳಲ್ಲಿಯೆಂಬುದಂ ।
ಬಗೆದಿರದೆಯ್ದಿದಂ ನೃಪ ಮನೋಭವನಾಕುಳ ಚಿತ್ತ ವೃತ್ತಿಯಿಂ ॥೧೨೧॥

ಕಂ॥ ಫಳ ಭರದಿಂ ಬಳ್ಕುವ ಕೋ ।
ಮಳ ಲತೆಯಂ ಸ್ವಕುಚ ಭರದೆ ಬಳ್ಕುವ ಕುಸುಮಾ ॥
ವಳಿ ಸೆಳೆ ನಡುವಿದೆನುತ್ತುಂ ।
ಫೞಿಲನೆ ತಾನಲ್ಲಿಗೈದಿದಂ ನೃಪ ಮದನಂ ॥೧೨೨॥

ಆಯೆಡೆಯೊಳಂ ಕಾಣದೆ—

ಚಂ॥ ಅಳಿಗಳಿರಾ ಕಳಾಪಿಗಳಿರಾ ಕಮಲಂಗಳಿರಾ ಮರಾಳಮಂ ।
ಡಳಿಗಳಿರಾ ರಥಾಂಗ ಮಿಥುನಂಗಳಿರಾ ಕಳ ರಾವ ಕೋಕಿಲಾ ॥
ವಳಿಗಳಿರಾ ಲತಾಳಿಗಳಿರಾ ಕುಸುಮಂಗಳಿರಾ ವನದ್ರುಮಂ ।
ಗಳಿರ [5]ಮದೀಯ ಕಾಂತೆ ಕುಸುಮಾವಳಿಯಿರ್ದಪಳೆಲ್ಲಿ ಪೇೞರೇ ॥೧೨೩॥

ಚಂ॥ ಅತಿ ವಿಕಳಾತ್ಮನಾಗಿ ನೃಪ ಮನ್ಮಥನಾ ವಿಪುಳಾಟವೀ ಲಸ ।
ಲ್ಲತೆಗಳ ಜೊಂಪದೊಳ್ ತುಱುಗಿದಾಮ್ರ ಕುಜಂಗಳಿಱುಂಬಿನೊಳ್ ವಿರಾ ॥
ಜಿತ ಪುಳಿನ ಸ್ಥಳ ಪ್ರಕರದೊಳ್ ಚಿತ ತತ್ಸರಸೀರುಹಾಕರ ।
ಪ್ರತತಿಯೊಳಾತ್ಮ ಕಾಂತೆ ಕುಸುಮಾವಳಿ ದೇವಿಯನೆಯ್ದೆ ನೋಡಿದಂ ॥೧೨೪॥

1. ತೀಂಸಿಯೊಲ್ದೊರಸೆ. 2. ನಸುಸುಯ್ಗೆ. 3. ಮದಪೋತ್ಕರ. 4. ಮಾಣದೆ.
5. ತದೀಯ.

ಕಂ॥ ನಾಡೆಯುಮಾ ನೃಪ ಮದನಂ।
ಪಾಡಲುದಲ್ಲಲ್ಲಿ ಪೊಕ್ಕು ನಿಜ ವಲ್ಲಭೆಯುಂ॥
ಕೂಡೆ ತೊಳಲ್ದೋರೆಂದದೆ।
. . . . . . . . . . . . ॥೧೨೫॥

ಚಂ॥ . . . . . ಶೋಭೆಯಿಂ ಗ್ರಹ ಕದಂಬಕದಂತೆ ಸಮುಲ್ಲಸತ್ಕುಶೋ।
ತ್ಕರ ಪರಿಕೀರ್ಣದಿಂ ಜಲಧಿಯಂತೆ ಸರಃಪ್ರಸರಾವಲಂಬದಿಂ॥
ದುರುತರ ವರ್ಷಕಾಲದ ವಿಯತ್ತಳದಂತೆ ವಿರಾಜಿಸಿರ್ಪು.....॥
. . . . . . . . . . . . . . ., ಮಂ ॥೧೨೬॥

ತ್ರಿಭುವನ ಸನ್ನುತೋನ್ನತ ಮಹಾ ಮಹಿಮಾಸ್ಪದನಪ್ಪ ತತ್ಸ್ವಯಂ।
ಪ್ರಭ ಮುನಿನಾಥನಾಶ್ರಮವನೆಯ್ದಿ ಕರಂ ವಿಕಳಾತ್ಮನಾತ್ಮ ವ॥
ಲ್ಲಭೆ ಕುಸುಮಾವಳೀ ಸತಿಯನಾ ವನ ಗುಲ್ಮ ಲತಾ . . . .।
. . . . . . . , . . . . . . ನೃಪಾಂಗಜಂ ॥೧೨೭॥

ಇಂತು ನೃಪಕಂತು ವಿಭ್ರಾಂತ ಸ್ವಾಂತನಾಗಿಯೆ ಪೋಗುತ್ತಮಾ ಮುನೀಂದ್ರನಂ ಕಂಡು—

ಕಂ॥ ಇನಿತೊಂದು ವಿರಹ ವಿಕಳತೆ।
ಯನೆ ತಳೆದಂ ತತ್ಸ್ವಯಂಪ್ರಭಾ . . . . ॥
. . . . . . .।
. . . . . ಸ್ಮರನುಮಿಂತಿದೇಂ ಧೃತಿಯುತನೋ ॥೧೨೮॥

ಮತ್ತಮಾಗಳ್—

ಉ॥ ಆವುದವಸ್ಥೆಯಾಯ್ತು ಕುಸುಮಾವಳಿ ಪೇಟ್ ನಿನಗತ್ತಲಿತ್ತಲಿಂ।
ತೀ ವಿಧಿಸೂತ್ರದಿಂ ತೊಳಲ್ದುದಾಯ್ತೆನಗಕ್ಕಟ . . . . . ॥
. . . . . . . . . . . . . . ದೆತ್ತಮಾಗಳು।
ರ್ವೀವರ ಕಂತು ವಿಹ್ವಲಿಸಿದಂ ಮುನಿನಾಥ ಪದಾಬ್ಜ ಮೂಲದೊಳ್ ॥೧೨೯॥

ಮ॥ ನಿನಗಾವಂದದ ಖೇದಮಾವರಿಸಿತೋ ಕಾಂತಾರದೊಳ್ ಕಾಂತೆ ಪೇ।
ಳೆನಗಾ ಸಿಂಗದ . . . . . . . . . . . ॥

. . . . . . . ನಿನ್ನನೀಕ್ಷಿಸುವ ಸೌಖ್ಯಂ ಮತ್ತಮೆಂತಪ್ಪುದೆಂ ।
ದೆನುತುಂ ತಾನೆನಸುಂ ಪ್ರಳಾಪಿಸಿದನಾ ಭೂಪಾಲ ಪುಷ್ಪಾಯುಧಂ ॥೧೩೦॥

ಕಂ॥ ಕಾನನದೊಳ್ ಕುಸುಮಾವಳಿ ।
ತಾ[ನೇ]ನ್ನೆನೆದಳೊ ತದಂಗನಾ ದರ್ಶನ . . . ॥
. . . . . . . . . ।
. . . . . . . . . . . . . ಗೊಂಡಂ ॥೧೩೧॥

ಮ॥ ತನು ಭಾವಂ ಪೆಱಪಿಂಗಿ ಧೈರ್ಯಮೆನಸುಂ ಬಿಟ್ಟಾಕ್ಷಣಂ ಲಜ್ಜೆಯೆ ।
ಳ್ಳನಿತುಂ ಪುಟ್ಟದೆ ಕಾಂತೆ ಕಾನನದೊಳಿನ್ನೇನಾದೆಯೆ . . . ॥
. . . . . . . . . . . . . ತಕಾರುಣ್ಯಮಂ ।
ಮನದೊಳ್ ಮಾಡಿದನಾ ಸ್ವಯಂಪ್ರಭ ಮಹಾಯೋಗೀಂದ್ರ ವೃಂದಾರಕಂ ॥೧೩೨॥

ಇಂತು ನಿಜಸ್ವಾಂತದೊಳ್ ಕಾರುಣ್ಯಮಂ ತಳೆದು ತನ್ಮುನೀಂದ್ರನೀ ನರೇಂದ್ರ ಮದನನ..................ದೆಂದೆಯ್ದುಲಱಿಯನೆಂದು ಮತ್ತಮಿಂತೆಂದಂ—

ಉ॥ ಕಾರಣಮಿನ್ನಿದರ್ಕಿದುವೆ ನೀಂ ಶುಕನಾಗಿಯೆ ಬೇಗದಿಂದೆ ಚೇ ।
ತೋರಮೆಯಲ್ಲಿಗೆಯ್ದುವುದು ನಿನ್ನನಯ ಪೂರ್ವಮ . . . . ॥
. . . . . . . . . . . . . . . . . . . . ತಪ್ಪಮೆಂದಿದಂ ।
ಭೂರಮಣ ಸ್ಮರಂಗಱಿಪಿದಂ ದಯೆಯಿಂದವೆ ತತ್ಸ್ವಯಂಪ್ರಭಂ ॥೧೩೩॥

ಆ ವಸುಧೀಶ ಕಂತುವದುಕಾರಣದಿಂ ಶುಕನಾಗಿಯೊ . . . ।
. . . . . . . . . . . . . . ಮುನೀಗಳೆಯ್ದೆಸಂ ॥
ಭಾವಿಸಿ ಕೇಳ್ದು ಸನ್ಮುದಮನೆಯ್ದಿದನಾ ಕ್ಷಣದಿಂ ಸ್ವಕೀಯ ಶೋ ।
ಭಾವಹ ಮೂರ್ತಿಯಿಂದಿಱುವನೀಕ್ಷಿಸು ನೀಂ ಮಣಿಕುಂಡಲೋರ್ವಿಪಾ ॥೧೩೪॥

ಕಂ॥ ಕ್ರಮದಿನೆ . . . . . . . ।
. . . . . . . . . . . . . . ॥
ದಾ ಮಹಿಜದಲ್ಲಿ ತತ್ಕಿ ।
ರಮನಾ ಮಣಿಕುಂಡಲಂ ನಿರೀಕ್ಷಿಸುತಿರ್ದಂ ॥೧೩೫॥

ಮ॥ಸ್ರ॥ ನರನಾಥಂ ತಾಂ ಪರೀತ ವ್ರತಿ [ತತಿ]ವೆಱಿಸುದ್ವಕ್ತ್ರನಾಗಿಂತು ನೋಡು।
ತ್ತಿರೆಯುಂ ತದ್ರಾಜ ಕೀರಾಕೃತಿ ತೊಲಗೆ ಸಿಜಾಶ್ಚರ್ಯ ಸಲ್ಲಕ್ಷಣೋದ್ಭಾ॥
ಸುರ ಭದ್ರಾಕಾರದಿಂ ಮಾಮರದಿನಿೞಿದು ಬಂದಾ ಮುನೀಂದ್ರಂಗೆ ತಾನಾ।
ದರದಿಂದಂ ನಮ್ರನಾದಂ ಕೃತಿ ರತಿ ರಮಣಂ ಸಾಹಸೋದ್ದಾಮ ಭೀಮಂ
॥೧೩೬॥

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾ ಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ಚಿತ್ರಕೋದ್ಯಾನ ನಿರ್ಗಮನ
ವರ್ಣನ ಮೃಗ ವ್ಯಾವರ್ಣನ ಕುಸುಮಾವಳೀ
ನೃಪ ಕುಸುಮಾಸ್ತ್ರ ನಿಯೋಗ ವರ್ಣನಂ
ಚತುರ್ದಶಾಶ್ವಾಸಂ

---

## ಪಂಚದಶಾಶ್ವಾಸಂ

ಕಂ॥ ಶ್ರೀ ಕಂದರ್ಪ ನರೇಶ್ವರ।
ನಾ ಕಪಿಲ ಮುನೀಶ್ವರಂಗೆ ನತನಾಗಿ ಪರೀ॥
ತಾಕೀರ್ಣ ವ್ರತಿ ಸಭೆಗೆ ನಿ।
ಜಾಕೃತಿಯಂ ಪಡೆದನೀಕ್ಷಣೋತ್ಸವ ಪದನಂ ॥೧॥

ಮ॥ ಹೃದಯೋದ್ಭೂತ ದಯಾ ಸುಧಾಂಬುನಿಧಿ ಪೂರಂಗೊಂಡು ಮೇಲ್ವಾಯುತಿ।
ರ್ದುದೊ ಪೇೞೆಂಬಿನಮುಜ್ಜ್ವಲ ದ್ವಿಜ ಮಯೂಖ ಶ್ರೇಣಿ ಪೊಣ್ಮಲ್ಕೆ ಪೆ॥
ರ್ಚಿದ [1]ತದ್ಭಂಗದ ಘೋಷಮೆಂದೆನೆ ಗಭೀರ ಧ್ವಾನಮುಣ್ಮಲ್ ಕುಭೃ।
ನ್ಮದನಂಗಾ ಕಪಿಲ ವ್ರತೀಶನೊಸೆದಾಶೀರ್ವಾದಮಂ ಮಾಡಿದಂ ॥೨॥

ಕಂ॥ ಫಿಮಳಾಂತಜ್ಯೋ‍ೕತಿ[2]ಸ್ತತಿ।
ನಿಮಿರ್ದೊಗೆದವೊಲೆಸೆವ [3]ದಶನ ರುಚಿ ಪಸರಿಸೆಯುಂ॥
ತಮತಮಗಾ ಪರಿವೃತ ಯತಿ।
ಸಮಿತಿ ಕರಂ ಪರಸಿದುದು ನರೇಂದ್ರ ಸ್ಮರನಂ ॥೩॥

ಮ॥ಸ್ರ॥ ಶ್ರವಣಾಲಂಕೃತಿಗಳ್ ಕದಂಪನೆನಸುಂ ತಳ್ಪೊಯ್ವಿನಂ ಕೌತುಕೋ।
[4]ತ್ಸವ ಚೇತಂ ಮಣಿಕುಂಡಲಂ ನಿಜ ಶಿರೋನೀರೇಜಮುಂ ತೂಗುತು॥
ತ್ಸವದಿಂದೆೞ್ದು ನರೇಂದ್ರ ಕಂತುಗೆ ತುೞಿಲ್ಗೆಯ್ದಂ ಪದೋದ್ಯನ್ನಖಾಂ।
ಶು ವಿಭಾಚಂದ್ರಿಕೆಯೊಳ್ ಚಕೋರನವೊಲಾಗಳ್ ಮೂಡಿ ತೇಂಕಾಡುತುಂ ॥೪॥

ಕಂ॥ ತಾನುಂ ತನ್ಮಣಿಕುಂಡಲ।
ಭೂನಾಥನ ಬೞಿಯೊಳೆೞ್ದು ಮತಿವರ್ಧನನ॥
ತ್ಯಾನಂದಂ ನೆಲೆವೆರ್ಚೆ ತ।
ದಾನತನಾದಂ ನರೇಂದ್ರ ಮದನಂಗಾಗಳ್ ॥೫॥

---

1. ತತ್ಸಂಪದ. 2. ಸ್ತುತಿ. 3. ಸದನರುಚಿ. 4. ಪ್ರವಚೇತಂ.

ಅಮೃತಾಬ್ಧಿಗಮಳ ಚಂದ್ರಿಕೆ।
ಸಮೃದ್ಧಿಯಂ ಪಡೆದವೋಲ್ ನಿಜಾಂಗ ಪ್ರಭೆ ನೀ॥
ಳ್ದು ಮುನೀಂದ್ರನ [1]ಸಭೆಯಂ ಬೆಳ।
ಗಮರ್ದಿರೆ ತನ್ನೃಪ ಮನೋಜನಿಂತೆಸೆದಿರ್ದಂ ॥೬॥

ಚಂ॥ ತನುವಿದು ವಿಸ್ಮಿರಾಕೃತಿಯನಿನ್ನೆಗಮೆಯ್ದಿರುತಿರ್ದುದೆಂದು ತಾ।
ನನುನಯದಿಂ ಸುಧಾ ರಸಮನೊಲ್ದಭಿಷೇಚಿಸುತಿರ್ಪವೋಲ್ ವಿಲೋ॥
ಚನ ಧವಳ ಪ್ರಭಾ ಪ್ರಸರಮಂಗಮನಾವರಿಸುತ್ತಿರಲ್ಕೆ ಭೋಂ।
ಕನೆ ಮುನಿಪಂ ಮನೋಮುದದೆ ನೋಡಿದನಿಂತು ನರೇಂದ್ರ ಕಂತುವಂ ॥೭॥

ಆ ಮುನೀಂದ್ರನಭೀಕ್ಷಿಸುತುಂ ನರೇಂದ್ರಮದನಂಗೆ ಮತ್ತಮಿಂತೆಂದಂ—

ಚಂ॥ ಎಲೆ ನರನಾಥ ಪುಷ್ಪಶರ ನಿನ್ನ ವಿಯೋಗದೊಳಾದ ಖೇದಮು।
ಗ್ಗಲಿಸಿರುತಿರ್ದಳಲ್ತೆ ಕುಸುಮಾವಳಿ ದೇವಿ ಭವನ್ಮುಖೇಂದುಮಂ॥
ಡಲಮನೆ ತೋಱಿ ಚೇತನಮನಾಗಿಸು ಪೋಗೆನುತುಂ ಸ್ವಕೀಯ ಕೋ।
ಮಲತರ ತರ್ಜನೀ ಮುಖದೆ ತೋಱಿಸಿದಂ ಕಪಿಲ ವ್ರತೀಶ್ವರಂ ॥೮॥

ಪ್ರಿಯಳ ವಿಯೋಗ ತಾಪದೊದವಿಂ ನೆಱೆ ಮುನ್ನಮೆ ಪೋಗುತಿರ್ದ ತ।
ನ್ನಯ ಹೃದಯಕ್ಕೆ ಪೆರ್ಚಿದ ಸುಧಾರಸ ಪೂರಮೆನಲ್ ಮುನೀಂದ್ರ ವಾ॥
ಕ್ಯಯಮೊಗೆಯಲ್ಕೆ ಕೇಳ್ದು ಕುಸುಮಾವಳಿ ದೇವಿಯ ವೃತ್ತಕಕ್ಕೆ ವಿ।
ಸ್ಮಯ ಮನನಾಗುತುಂ ತಳರ್ದನಲ್ಲಿಗೆ ಭೋಂಕನೆ [2]ಭೂಪ ಮನ್ಮಥಂ ॥೯॥

ವನದುಪಕಂಠದಲ್ಲಿಯೆ ಮೃಷೋಪಲ ರೂಪದಿನಿರ್ದು ತನ್ನ ಮೋ।
ಹಿನಿ ಕುಸುಮಾವಳೀ ಯುವತಿಯಂ ಜನಿತೋತ್ಸುಕ ಭಾವದಿಂ ವಿಲೋ॥
ಚನಮಿರದೆಯ್ದಲೆಯ್ದಿ ನೃಪ ಮನ್ಮಥನಾಗಳೆ ಮೇಲೆ ಪಾಯ್ದು ಭೋಂ।
ಕನೆ ಬಿಗಿಯಪ್ಪಿದಂ [3]ಪ್ರಿಯರೊಳುಂಟೆ ವಿಚಾರತೆ ಚಿತ್ತ ವೃತ್ತಿಯೊಳ್ ॥೧೦॥

ಉ॥ ಭೂವರ ಕಂತು ಬಂದಿರದೆ ಪಾಯ್ದಮರ್ದಪ್ಪಿದ ತೋಳ ಸೋಂಕು ಸಂ।
ಜೀವನ ಕಾರಿಯಾಗೆ ಮನಮಂ ಪುದಿದಿರ್ದ ಸುಷುಪ್ತಿ ಪಿಂಗೆ ಜಾ॥
ಗ್ರಾವಿಳೆಯಾದಳಂತೆ ಕುಸುಮಾವಳಿ ದೇವಿ ಲೋಲ ಲೋಚನೇಂ।
ದೀವರ ಯುಗ್ಮಮಂ ತೆಱೆದು ತೊಟ್ಟನೆ ಕಂಡಮರ್ದಾದಮಪ್ಪಿದಳ್ ॥೧೧॥

1. ಸಭೆಯಂಬೆಳಸವಿರ್ಚುತ್ತಿರೆನೃಪ. 2. ಯಾಪ. 3. ಪ್ರಿಯದೊಳುಂಟೆ.

ಚಂ॥ ಪುಳಕದ ಪೂರದಿಂದಮಳ[1]ವುಪ್ಪೆಟಿ ಮುತ್ತಿನ ಪುತ್ರಿಕಾ ಯುಗಂ।
ಗಳ ಪೊಸ ದೇಸೆಯಂ ನೆನೆಯಿಸುತ್ತೆಸಸುಂ ಪ್ರಮುದಾ ಲಸತ್ಸುಧಾ॥
ತುಳ ತಟನೀ ತರಂಗದೊಳೆ ಮೂಡಿ ಮುಟುಂಕುತುಮಾಗಳಿರ್ದರ।
ಗ್ಗಳಿಸಿದಲಂಪಿನಿಂದೆ ಕುಸುಮಾವಳಿ ದೇವಿಯುಮಾ ನರೇಂದ್ರನುಂ ॥೧೨॥

ಆಡಿಗಡಿಗಾ ಮುದಶ್ರು ಮಿಳಿತಾಕ್ಷಿಗಳಿಂ ನಡೆ ನೋಡಿಯುಂ ಸಮಂ।
ತಡಿಗಡಿಗಾಶು ಕಂಟಕಿತ ಬಾಹುಗಳಿಂದಮರ್ದಪ್ಪಿಯುಂ ಸಮಂ॥
ತಡಿಗಡಿಗಾ ಮೃದೂಕ್ತಿಮಯ ಜಿಹ್ವೆಗಳಿಂ ಪ್ರಣಯ ಪ್ರಸಂಗಮಂ
ನುಡಿದು ಸಮಂತವರ್ ತಣಿದರಿಲ್ಲ ನೃಪಾಂಗಜನುಂ ಲತಾಂಗಿಯುಂ ॥೧೩॥

ಅಂತಿರ್ದು ಮತ್ತಮಾಗಳ್—

ಕಂ॥ ತಮಗಾದ ವಿಯೋಗದ ಖೇ।
ದಮನಡಿಗಡಿಗೆಯ್ದೆ ಪೇಟ್ದಿರ್ದರಾ॥
ದಮೆ ಕೌತುಕತ್ವಮಂ ಭೂ।
ಪ ಮನೋಭವನುಂ ಲತಾಂಗಿ ಕುಸುಮಾವಳಿಯುಂ ॥೧೪॥

ನಿನಗಮೆನಗಂ ಪುನರ್ದ।
ರ್ಶನಮಾದುದು ಭಾವಿಸಲ್ಕೆಯಿಾ ಕಪಿಲ ಮುನೀಂ।
ದ್ರನ [2]ದಯೆಯಿಂದೀಗಳೆನ॥
ಲ್ಕೆ ನಿಜೇಶ್ವರಿಗುಸಿರ್ದನೊಸೆದು ಕುಸುಮಾಯುಧನುಂ ॥೧೫॥

ಮ॥ ಎನಗಂತಾದೊಡೆ ದೇವ ತನ್ಮುನಿಪತಿ ಶ್ರೀಪಾದ ಪಂಕೇಜ ದ।
ರ್ಶನಮಂ ಮಾಡಿಪುದೆಂದು ಬಿನ್ನವಿಸೆ ಬಾಸಿಂ ದೇವಿಯಾನಿಲ್ಲಿ ತೋ॥
ರ್ಪೆನೆನುತ್ತುಂ ಕುಸುಮಾವಳೀ ಸತಿ ಸಮೇತಂ ಭೂಪ ಪುಷ್ಪೇಷು ಭೋಂ।
ಕನೆ ಬಂದಂ ಕಪಿಲ ವ್ರತೀಂದ್ರನ ಸಭಾಸ್ಥಾನಕ್ಕೆ ಸಾನಂದದಿಂ ॥೧೬॥

ಉ॥ ನಾಕದ ನಂದನ ದ್ರುಮ ನಿಕಾಯ ನಿವೇಷ್ಟಿತ ಪಾರಿಜಾತದಂ।
ತಾ ಕುಲ ಶೈಲ ಸಂಕುಲ ಸಮಾವೃತಮಾಗೆ ವಿರಾಜಿಸಿರ್ದ॥
. . . . . . . . . . . . . . . . . . ।
. ಕಪಿಲ ವ್ರತೀಶ್ವರನನೆಟ್ಟಿರುತುಂ ಸಖಿ ಕಂಡಳಗ್ರದೊಳ್ ॥೧೭॥

1. ಳಪ್ಪಿಳೆಮುತ್ತಿನ. 2. ದಯೆಯಿನೀಗಳೆಂದೆನೆ ನಿಜೇಶ್ವರಿ.

ಕಂ॥ ಮುನ್ನುದಿಸಿದಮರ್ದುಗಡಲಂ ।
ಸನ್ನುತದೊಳ್ ಮಗುಳೆ ನೋಡಲೆಯ್ದುವ ಸಿರಿ[1]ವೋಲ್ ॥
ಸೂನ್ನತೆ ಕುಸುಮಾವಳಿ ಪೊಸ ।
ಜೊನ್ನದವೋಲ್ ಜೆಳಪ ಮುನಿಪ ಸಭೆಯಂ ಪೊಕ್ಕಳ್ ॥೧೮॥

ಚಂ॥ ವಿನಯ ಭರಕ್ಕೆ ಪೀವರ ಘನ ಸ್ತನಯುಗ್ಮ ಭರಂ ಸಹಾಯವಾ ।
ಯ್ತೆನೆ ನತೆಯಾದಳಲ್ತೆ ಕುಸುಮಾವಳಿ ತಾಂ ಕಪಿಲ ವ್ರತೀಶ ಪಾ ॥
ವನ ಪದ ಪಂಕಜಕ್ಕೆ ಪೆಟಿಜುತ್ತಘ ಸಂತತಿ ಪೋಪ ಭಂಗಿಯಂ ।
ನೆನೆಯಿಸೆ ವೇಣಿಯಿಂ ನೆಗೆದು ಪಾರುವ ಲೋಲ ಮದಾಳಿ ಮಂಡಳಂ ॥೧೯॥

ಉ॥ ಸಂತತಮಾ ಸುರಾಪಗೆಯ ಬೆಳ್ಪೊನಲಂ ಪದೆಪಿಂದುಗುಳ್ದ ಹೇ ।
ಮಂತ ನಗೇಂದ್ರಮಂ ನೆನೆಯಿಸುತ್ತುಮುದಂಚಿತ ದಂತ ಧಾಮವೋ ॥
ರಂತೊಗೆಯುತ್ತಿರಲ್ ಪರಸಿದಂ ಕಪಿಲ ವ್ರತಿ ಸಂಪ್ರಮೋದದಿಂ ।
ದಂ ತಲೆವಾಗಿ ನಿಂದ ಕುಸುಮಾವಳಿ ದೇವಿಯನುದ್ಧ ಲೀಲೆಯಿಂ ॥೨೦॥

ಆಗಳಾ ಕುಸುಮಾವಳೀ ದೇವಿಗೆ ಪರಮಾಶೀರ್ವಾದ ಪ್ರದತ್ತನಾದ ಕಪಿಲ ಮುನೀಂದ್ರಂ ನರೇಂದ್ರ ಮನ್ಮಥನ ಮೊಗಮಂ ನೋಡಿ ಮತ್ತಮಿಂತೆಂದಂ—

ಉ॥ ನಿನ್ನಯ ವಾಜಿರಾಜ ಪವನಂಜಯನಿಲ್ಲಿಗೆ ಬಂದು ತಾಂ ತದೀ ।
ಯೋನ್ನತ ಚೂತದಲ್ಲಿಯೆ ಮೃಷೋಪಲ ರೂಪದಿನಿರ್ದುದಲ್ತೆ ಜೈ ॥
ತನ್ಯಮನಾಗಿಸೀಗಳೆ ಭವತ್ಕರ ಪಲ್ಲವ ಸಂಗದಿಂದೆನು ।
ತ್ತುನ್ನೃಪ ಕಂತುಗಿಂತೊಸೆದು ನೇಮಿಸಿದಂ ಕಪಿಲ ವ್ರತೀಶ್ವರಂ ॥೨೧॥

ಶ್ರೀ ಮುನಿನಾಥನಿಂ ಹಯದ ವೃತ್ತಕಮಂ ನೆಱೆ ಕೇಳ್ದು ನಾಡೆ ಚೇ ।
ತೋಮುದನಾಗಿ ಚಾರು ಪವನಂಜಯ ವಾಜಿ ನಿರೀಕ್ಷಣಾತಿ ಕಾಂ ॥
ಕ್ಷಾಮಯ ನೇತ್ರನಾಗಳೆ [2]ಮಹಾ ಸಹಕಾರದ ಭೂರಿ ಶಾಖೆಗಾ ।
ಭೂಮಿಪ ಕಂತುವಿಂತು ತಳರ್ದಂ ಕುಸುಮಾವಳಿ ದೇವಿ ಯುಕ್ತದಿಂ ॥೨೨॥

ಕಂ॥ ಕುಸುಮಾವಳಿ ದೇವಿಯ ನೃಪ ।
ಕುಸುಮಾಸ್ತ್ರನ ವೃತ್ತಕಕ್ಕೆ ಚೋದ್ಯಂಬಡುತುಂ ॥

1. ಯೊ| ಸೊನ್ನತಿ. 2. ಮಹತ್ಸಹ.

ಬೆಸಗೊಂಡಂ ಮಣಿಕುಂಡಳ।
ವಸುಧೇಶಂ ಮತ್ತಮಾ ಮುನೀಂದ್ರೋತ್ತಮನಂ ॥೨೩॥

ಉ॥ ಆ ವರ ಚಕ್ರವಾಳ ಪುರದೊಳ್ ಕಳಭಾಷಿಣಿ ಮುಖ್ಯಮಪ್ಪ ಕಾಂ।
ತಾವಳಿಯಂತರಂ [1]ಬೆಱಸಿ ತಾನಿರುತಿರ್ದ ಬೞಿಕ್ಕಮಲ್ಲಿ ಮೇ ॥
ಧಾವಿಳ[2]ನಾದನೇನದನೆ ದಲ್ ಕಪಿಲ ವ್ರತಿನಾಥ ಪೇೞಿಮಿ।
ನ್ನೀವೆಮಗೆಂದು ಬಿನ್ನವಿಸಿದಂ ಮುದದಿಂ ಮಣಿಕುಂಡಲೋರ್ವಿಪಂ ॥೨೪॥

ಎನೆ ಮುನೀಂದ್ರನಿಂತೆಂದಂ—

ಮ॥ ಇರದಾಗಳ್ ಕುಸುಮಾವಳೀ ಯುವತಿಯುಂ ಪ್ರಚ್ಛನ್ನದಿಂ ಭೂವರ।
ಸ್ಮರನಿತ್ತಲ್ ತರೆ ಚಕ್ರವಾಳ ಪುರದಿಂ ತದ್ವಾರ್ತೆಯಂ ಕೇಳ್ದಿದ ॥
ಚ್ಚರಿ ಸಂಭಾವಿಸೆ ಕಾಪುಗೊಂಡನದನೇನೆಂದಿರ್ದನೋ ಭೀಷ್ಮಕಂ।
ಕರೆಯೆಂದುದ್ಗತ ಕೋಪದಿಂ ಬರಿಸಿದಂ ಚಂದ್ರಧ್ವಜೋರ್ವೀಶ್ವರಂ ॥೨೫॥

ಕಂ॥ ಚಕಿತಾತ್ಮಕನುಪಚಿತ ಕಂ।
ಪ ಕಳೇವರನಾಗಿ ಬಂದು ನಿಂದಿರ್ದಾ ಭೀ ॥
ಷ್ಮಕನಂ ಚಂದ್ರಧ್ವಜ ನೃಪ।
ತಿ ಕರಂ ಕೋಪಾರುಣಾಕ್ಷಿಯಿಂದೀಕ್ಷಿಸಿದಂ ॥೨೬॥

ಅಂತು ನೋಡಿ—

ಮ॥ ಇವನಾಂ ನೇಮಿಸಿದಂತೆ ಕಾವನದನೇನಂ ಮಾಡನಿಂತೀತನಿಂದವೆ।
ಮತ್ತೊರ್ವನದಾವನಕ್ಕೆ ಬಗೆಗೊಂಡುಯ್ಯಲ್ಕೆ ಪೋದಳ್ ಕುಮಾ ॥
ರಿ ವಿಚಾರಂ ಪೆಱತೇನೊ ಭೀಷ್ಮಕನನೀಗಳ್ [3]ಶಾಸ್ತಿಯಂ ಮಾಡೆನು।
ತ್ತಮೆ ಚಂದ್ರಧ್ವಜ ಭೂಭುಜಂ ನುಡಿದನತ್ಯಾಕ್ಷೇಪದಿಂ ಕೋಪದಿಂ ॥೨೭॥

ಅದಂ ಕಂಡು ವಿಶ್ರುತಾಮಾತ್ಯನಿಂತೆಂದಂ—

ಕಂ॥ ಪ್ರಚುರಾಪರಾಧದಿಂದೆ ಸ।
ಮುಚಿತಾತ್ಮನೆ ಭೀಷ್ಮಕಂ ಸಮಂತಾದೊಡವಂ ॥
ಉಚಿತಂ ವಿಚಾರಿಪುದು ನಾ।
ವಿಚಾರಿತಂ ಕಿಮಪಿ ಕಾರ್ಯಮೆಂಬುದು ನೃಪತೀ ॥೨೮॥

1. ಬೆರಗೆ. 2. ನಾಮುದೆನದನೆನಲ್. 3. ಸಾಸ್ತೆಯಂ.

ಇಂತೆಂದಾ ವಿಶ್ರುತ ಸಚಿ।
ವಂ ತನಗೆನೆ ಮನದೆ ಕೊಂಡು ಚಂದ್ರಧ್ವಜ ಭೂ॥
ಕಾಂತಂ ವಿಗಳಿತ ಕೋಪ।
ಸ್ವಾಂತಂ ತಾನಾಗಿ ನೋಡಿದಂ ಭೀಷ್ಮಕನಂ ॥೨೯॥

ಮನದೊಳ್ ವಿಚಾರ ಭಾವಂ।
ಜನಿಯಿಸೆ ಚಂದ್ರಧ್ವಜಂ ನಿರೀಕ್ಷಿಸೆಯುಂ ಚೇ॥
ತನನಾಗಿ ಭೀಷ್ಮಕಂ ಮೆ।
ಲ್ಲನೆ ಬಿನ್ನವಿಸಲ್ಕೆ ನಿಂದು ಕೈಮುಗಿದೆಂದಂ ॥೩೦॥

ಉ॥ ನೀವೆನಗೆಂತು ನೇಮಿಸಿದಿರಂತೆ ನಿರಂತರಮೆಯ್ದೆ ಕಾಪುಗೊಂ।
ಡಾವಗಮಿರ್ದೆನಾಂ ಮನುಜಮಾತ್ರನನಲ್ಲಿಗೆ ಪೊರ್ದ[1]ಲಿತ್ತೆನೇಂ॥
ದೇವರ ಪಾದದಾಣೆ ಕುಸುಮಾವಳಿ ದೇವಿ ಮನುಷ್ಯರಂ ಸಮಂ।
ತೇವಳದೇಕೆನಲ್ಕೆ ಪಟಚಿತ್ರದ ಕಂತುಗೆ ಸೋಲ್ತಳಲ್ಲವೇ ॥೩೧॥

ಬಿನ್ನಪವೊಂದೆ ದೇವ ಖಚರೋತ್ತಮನೆತ್ತಣಿನಕ್ಕೆ ಪೋಗುತೊ।
ರ್ಬನ್ನಡೆ ನೋಡಿ ಸೋಲ್ತು ಕುಸುಮಾವಳಿ ದೇವಿಯನುಯ್ದುಮಲ್ಲಿದಂ॥
ತೆನ್ನಯ ಕಾಪನೋವದೊಳಪೊಕ್ಕು ಕುಮಾರಿಯನುಯ್ಯಲಾರ್ಪ ದ।
ರ್ಪೋನ್ನತನಪ್ಪ ಮರ್ತ್ಯನವನಾವನಭೀಕ್ಷಿಸೆ ವಿಶ್ವ ಧಾತ್ರಿಯೊಳ್ ॥೩೨॥

ಚಂ॥ ಪರಿಕರ ಕನ್ಯಕಾ ನಿಕರದೊಳ್ ಕಳಭಾಷಿಣಿ ಬುದ್ಧಿವಂತೆಯಾ।
ತರುಣಿ ಕುಮಾರಿಗಾತ್ಮಸಖಿಯಾಕೆಯನಲ್ಲಿಗೆ ದೇವ ಬೇಗದಿಂ॥
ಬರಿಸಿ ವಿಚಾರಿಸುತ್ತುಮಿರಲೆನ್ನಯ ತಪ್ಪೆನೆ ನಿಮ್ಮ ನೇಮವೇ।
ಕಿರದೆನಗಾನೆ [2]ಶಾಸ್ತಿಕರನಪ್ಪೆನೆನುತ್ತಿರೆಯುಂದು ಭೀಷ್ಮಕಂ ॥೩೩॥

ಆ ಭೀಷ್ಮಕನ ಬಿನ್ನಪಮಂ ಕೇಳ್ದು—

ಕಂ॥ ಕಳಭಾಷಿಣಿ ತಾಂ ಕುಸುಮಾ।
ವಳಿ ದೇವಿಗೆ ಜೀವದನ್ನಳದು ಪುಸಿ[3]ಯಲ್ತೀ॥
ಗಳೆ ನೆಜ[3]ಯಱಿದಪೆವಾಕೆಯಿ।
ನಿಳೇಶ [4]ಭರದೇಟಿ[4]ಮೆಂದು ವಿಶ್ರುತನೆಂದಂ ॥೩೪॥

1. ಇತ್ತದಂ. 2. ಸ್ವಿಸ್ತಿಕರ. 3. ಯಿತ್ತಿ. 4. ಭವೇಳಿಮೆಂದು.

ಕರೆ ಕಳಭಾಷಿಣಿಯಂ ಪರಿ।
ಕರ ಕನ್ಯಾಜನ ಸಮೇತವಿರದೀಗಳೆನು ॥
ತ್ತರಸಂ ನೇಮಿಸೆ ಲಬ್ಧ।
ಜ್ಞ ರಾಶಿ ಪರಿದತ್ತು ವೇತ್ರಧರರಾದರದಿಂ ॥೩೫॥

ಚಂ॥ ಸದಮುಳಮಪ್ಪ ಚಂದ್ರ ಕಳೆ ಪಿಂಗಿದ ತಚ್ಛರದಭ್ರ ಲಕ್ಷ್ಮಿಯಂ।
ದದಿನದು ಶೂನ್ಯಮಾಗೆ ಪಿರಿದುಂ ಕುಸುಮಾವಳಿ ದೇವಿಯಿಲ್ಲದೊ॥
ಪ್ಪದ ಶಶಿಕಾಂತ [ಕಾಂತ] ಕೃತಮಂ ಕರುಮಾಡಮನಾಗಳೆಯ್ದಿ ಪೊ।
ಕ್ಕುದು ಬಹು ವರ್ಣ ಚಿತ್ರಕ ಸುವಕ್ತ್ರಮಯ ಪ್ರತಿಹಾರ ಸಂಚಯಂ ॥೩೬॥

ಕಂ॥ ತ್ವರಿತದೆ ಬಂದಾ ಪ್ರತಿಹಾ।
ರರ ಕಂಡಂ ಕರೆಯಲೊಡನೆ ಶಂಕಿಸಿ ನಡುಗು॥
ತ್ತಿರದಾಗಳೆ ಕಳಬಾಷಿಣಿ।
[ಪರಿ][1]ಚರ ಕನ್ಯಾ ಸಮನ್ವಿತಂ ಪೊಱಮಟ್ಟಳ್ ॥೩೭॥

ಉ॥ ಇಂತು ಕುಮಾರಿ ಪೋದಳಿದು ವೃತ್ತಕಮೆನ್ನದೆ ವಂಚಿಸಿರ್ದರೇ।
ಕಾಂತೆಯರಾ ನೃಪಂಗಿವರನೊಪ್ಪಿಪುದೆಂದೆನೆ ಕೊಂಡು ಬರ್ಪ ತ॥
ತ್ಕಂತುವಿನಗ್ಗದಾಳ್ಗಳೆನೆ ಸೌರಭ ಲೋಭದೆ ಷಟ್ಪದಂಗಳೋ।
ರಂತೊಡನೆಯ್ತರಲ್ಕೆ ಬರುತಿರ್ದುದು ಸೇವಕ ಸೌಂದರೀ ಜನಂ ॥೩೮॥

ಲಾಲಿತ ಯಾನಮಂ ಕಲಿಸುತುಂ ಕುಸುಮಾವಳಿ ದೇವಿ ಲೀಲೆಯಿಂ।
ಪಾಲೆರೆದೋವುತಿರ್ದಿಟಿುಪಿ ಪೋದಳೆನುತ್ತಮೆ ದೂರಲಾ ಮಹೀ॥
ಪಾಲಕನಲ್ಲಿಗೆಟ್ಟಿರುತುಮಿರ್ದಪುವೆಂದೆನೆ ತತ್ತನೂದರೀ।
ಜಾಲದ ನೂಪುರ ಧ್ವನಿಗೆ ಬರ್ಪುವು ಬಾಲ ಮರಾಳ ಮಾಲೆಗಳ್ ॥೩೯॥

ಇಂತು ಕಳಭಾಷಿಣಿ ತದೀಯ ಪರಿವಾರ ವನಿತಾ ಸಮೇತಂ ಬಂದು ರಾಜ ಮಂದಿರಮಂ ಪೊಕ್ಕು—

ಕಂ॥ ಚಳ ಪವನಾಹತಿಯಂ ಪಡೆ।
ದೆಳಲತೆಯಂತತುಳ ಸಾಧ್ವಸದೆ ತನು ಕಂಪಂ॥
ಗೊಳುತಿರೆ ಕಳಭಾಷಿಣಿ ಬಂ।
ದಿಳೇಶ ಪದ ಪಂಕಜಕ್ಕೆ ವಿನಮಿತೆಯಾದಳ್ ॥೪೦॥

1. ಕರ.

ಬೆಮರುತ್ತುಂ ಬೆಳ್ಮೊಗಮಾ ।
ಗೆ ಮನೋ ಭಯದಿಂದೆ ನಡುಗುತುಂ ನುಡಿಯದೆ [1]ಮೌ ॥
ನಮನಾಂತಿಳೆಯುಂ ನೋಡು ।
ತ್ರಮೆ ಕಳಭಾಷಿಣಿ ಸುರುಳ್ದು ತಾಂ ನಿಂದಿರ್ದಳ್ ॥೪೧॥

ಇಂತು ಭಯಾಕುಲಿತ ಚಿತ್ತೆಯಾದ ಕಳಭಾಷಿಣಿಯುಂ ನೋಡಿ—

ಉ॥ ಆವನ ಸಂಗಮಾಯ್ತು ಕುಸುಮಾವಳಿ ದೇವಿಗದೆಂತು ಬಂದನೆಂ ।
ದೋವದೆ ಕಾಪನೊತ್ತರಿಸಿ ಪೊಕ್ಕನದೆಂತೊಡಗೊಂಡು ಪೋದನೆಂ ॥
ತಾವೆಡೆಗುಯ್ದನೆತ್ತಣವನಂಜದೆ ನೀನೆಮಗಂತದೆಲ್ಲಮಂ ।
ಭಾವಿಸಿ ಪೇಳ್ವುದೆಂದು ಕಳಭಾಷಿಣಿಯುಂ ಬೆಸಗೊಂಡನಾ ನೃಪಂ ॥೪೨॥

ಕಂ॥ ಗತ ಕಲುಷನಾಗಿಯಾ ಭೂ ।
ಪತಿ ಬೆಸಗೊಳೆ ಭೀತಿವಿಟ್ಟು ಕಳಭಾಷಿಣಿ ನಿಂ ॥
ದು ತದೀಯ ವೃತ್ತಕದ ಸಂ ।
ಗತಿಯುಂ ಬಿನ್ನವಿಪ ಬಗೆಯೊಳೊಯ್ಯನೆ ನುಡಿದಳ್ ॥೪೩॥

ಮ॥ ಮನುಜರ್ ಸೋಲಿಸುವನ್ನರುಂಟೆ ಮನುಜರ್ಗೇಂ ಸೋಲ್ವಳೇ ದೇವ ನೀ ।
ಮಿನಿತಂ ಕಲ್ಪಿಪುದಲ್ತು ಚಿತ್ರಕ ವನಾಂತರ್ಭಾಗದೊಳ್ ಪೊಕ್ಕು ತೊ ॥
ಟ್ಟನೆ ಕಂಡಾ ಪಟಚಿತ್ರ ಕಂತುಗೆನಸುಂ ತಾಂ ಸೋಲ್ತು ತದ್ಧ್ಯಾನ ಜೀ ।
ವನಮಾಗಿಂತು ಕುಮಾರಿ ವಿಸ್ಮೃತಿಯನಾಂತಿರ್ಪಳ್ ಸಮಂತಾವಗಂ ॥೪೪॥

ಮ॥ ಇದನೇನೆಂದಪೆನೊಂದುವಿಸ್ಮಯಮನಂತಾ ಚಿತ್ರ ಕಂದರ್ಪ ರೂ ।
ಪದೆ ಸಾಸಿರ್ಮಡಿಯಾಗೆ ಕಂಗೊಳಿಪ ದಿವ್ಯಾಕಾರನೊರ್ಬಂ ವಿಗು ॥
ರ್ವದಿನೆಟ್ಟಿಂದು ಕುಮಾರಿಯಿರ್ದಲರ ಶಯ್ಯಾ ಸದ್ಮಮಂ ಪೊಕ್ಕನು ।
ಣ್ಮಿದ ದೇಹ ಪ್ರಭೆ ಚಂದ್ರಿಕಾ ವಿಭವಮಂ ಕೀಟ್ಮಾಡೆಯುಂ ನಾಡೆಯುಂ ॥೪೫॥

ಕಂ॥ ಆ ದಿವ್ಯಾಕಾರನ ದೇ ।
ಹೋದಿತ ಸತ್ಕಾಂತಿ ತತಿಗೆ [ಸೋಲ್ತೆಮ್ಮ]ಮನ ॥
ಕ್ಕಾದಚ್ಚರಿ ಮರವೆಯನು ।
ತ್ಪಾದಿಸಲಂತಿರ್ದೆ[2]ವಾನುಮಾ ತರುಣಿಯರುಂ ॥೪೬॥

1. ಮನಮನಾಂ. 2. ನಾನು.

ಚಂ॥ ಇನಿತು ವಿಚಿತ್ರ ಭಾವಮನೆ ಬೀಱುತುಮಾ ದಿವಿಜಂ ಸಮಂತು ಬಂ।
ದಿನಿತನೆ ಬಲ್ಲೆನಲ್ಲದೆ ಬೞಿಕ್ಕಮದೆಂತಿರುತಿರ್ದನೆಂತು ಮೋ॥
ಹನ ಕೃತನಾದನೆಂತು ಕುಸುಮಾವಳಿ ದೇವಿಗಲಂಪು ಗೆಯ್ದನೆಂ।
ತನುನಯದಿಂದಮುಯ್ದನದನಾನಱಿಯೆಂ ಪೆಱತೇಂ ಮಹೀಪತೀ ॥೪೭॥

ಮ॥ ಬಿಡದಾ ವೃತ್ತಕಮೆಲ್ಲಮಂ ವಿದಿತಮಾದ್ಯಂತಂಬರಂ ಕೇಳ್ವಿರ।
ಪ್ಪೊಡಮಿನ್ನೊಂದನೆ ದೇವ ಬಿನ್ನವಿಸುವೆಂ ಮೇಧಾವಿಳಾಖ್ಯಂ ಸಮಂ॥
ತೊಡನೆಟ್ಟಿಂದವನಾತನಿರ್ದನವನಂ ನೀವೆಟ್ಟಿರಲ್ವೇೞ್ಪುದುಂ।
ತಡೆಯಂ ತತ್ಪ್ರತಿಹಾರರೆಂದ ವಚನಕ್ಕೆಟ್ಟಿಂದಪಂ ಪೇೞ್ದಪಂ ॥೪೮॥

ಎನೆ ಕೇಳ್ದು ಕಳಭಾಷಿಣಿಗೆ ಚಂದ್ರಧ್ವಜ ನರೇಂದ್ರನಿಂತೆಂದಂ—

ಉ॥ ಆತನನಿಲ್ಲಿಯಾರಱಿವರಂತದಱಿಂದಮೆ ನೀನೆ ಪೋಗಿ ಸಂ।
ಪ್ರೀತಿಯ ಮಾತನಾಡಿ ನಯದಿಂ ಕಳಬಾಷಿಣಿ ಮತ್ಸಮೀಪಕ॥
ತ್ಯಾತುರದಿಂದಮಾಗಳೊಡಗೊಂಡು ಬರಲ್ಕೆ ತದೀಯ ವೃತ್ತಕ।
ವ್ರಾತಮನೆಯ್ದೆ ಕೇಳ್ವೆನೆನುತಾಗಳೆ ನೇಮಿಸಿದಂ ನೃಪಾಲಕಂ ॥೪೯॥

ಅಂತು ನೇಮಿಸುವುದುಂ ಕಳಭಾಷಿಣಿ ಕನಕಲತೆವೆರಸು ಪೋಗಿ—

ಕಂ॥ ಮನದೊಳ್ ಮುಂ ತಾಂ ಬಗೆದಿ।
ರ್ಪನಿತನೆ ತತ್ಸಮಯದಲ್ಲಿ ಕಳಬಾಷಿಣಿ ಭೋಂ।
ಕನೆ ಬಂದುಸಿರ್ದೊಡದಂ ಕೇ।
ಳ್ದಿನಸುಂ ಮೇಧಾವಿಳಂ [ಮುದಾವಿಳ]ನಾದಂ ॥೫೦॥

ನಡೆ ಕಳಭಾಷಿಣಿಯಂತಾ।
ದೊಡೆ ಬರ್ಪೆಂ ಬೇೞ್ಪುದಾಯ್ತು ನಿನ್ನುಮನಾ ನಿ॥
ನ್ನೊಡೆಯನುಮಂ ಮಿಗೆ ಹರ್ಷಂ।
ಬಡಿಸುವೆನೆಂದೆೞ್ದನಾ ನೃಪಾಂಗಜ ಮಿತ್ರಂ ॥೫೧॥

ಇಳೆಗಿೞಿದು ಮನುಜ ರೂಪಂ।
ದಳೆದಮರನೊ ತಾನೆನಲ್ ತನುಪ್ರಭೆ ನಿಮಿರ್ದು॥
ಜ್ಜ್ವಳಿಸೆ ಕಳಭಾಷಿಣಿ ಬೆಂ।
ಬಳಿಯನೆ ಮೇಧಾವಿಳಾಹ್ವಯಂ ಬರುತಿರ್ದಂ ॥೫೨॥

ತತ್ಸಮಯದೊಳ್—

ಚಂ॥ ಕರವಿದು ಚೋದ್ಯಮಲ್ತೆ ಕುಸುಮಾವಳಿ ದೇವಿಯನುಯ್ದ ತನ್ಮಹಾ ।
ಪುರುಷನ ಸೇವಕಂ ಗಡಿವನೀತನಭೀಕ್ಷಿಸೆ ಮರ್ತ್ಯನಲ್ತು ಮ ॥
ರ್ತ್ಯರೊಳಿನಿತೊಂದು ಗಾಡಿ ಘನ ತೇಜಮಿವೆತ್ತಣವೆಂದು ಪೌರರಾ ।
ದರದೊಳಡುರ್ತು ನೋಡುತಿರೆ ತಾಂ ನಡೆದಂ ನೃಪ ಮನ್ಮಥ ಪ್ರಿಯಂ ॥೫೩॥

ಚಂ॥ ಅನುಚರನಿಂತಿವಂ ಗಡ ವಿಚಿತ್ರಮಿದೀತನ ರೂಪು ರೂಪ ಮೋ ।
ಹಿನಿ ಕುಸುಮಾವಳೀ ಸತಿಯನುಯ್ವ ಮಹಾತ್ಮನ ರೂಪಮೆಂತುಟೋ ॥
ಮನುಜರೊಳಿನ್ನರಿಲ್ಲ ಪೊಸತೆಂದೆನುತುಂ ಬೆರಗಾಗೆ ತತ್ಪುರೀ ।
ಜನಮದು ನಾಡೆ ನೋಡುತಿರೆ ತಾಂ ನಡೆದಂ ನೃಪಮನ್ಮಥ ಪ್ರಿಯಂ ॥೫೪॥

ಕಂ॥ ಪುರ ಜನಮೆಯ್ದನಿಮಿಷ [1]ದೃ ।
ಕ್ಸರಸೀರುಹರಾಗಿ ನಾಡೆ ನೀಡುಂ ನೋಡು ॥
ತ್ತಿರೆ ಕಳಭಾಷಿಣಿವೇಱ[ಸು ।
ತ್ತ]ರಮನೆಯಂ ಪೊಕ್ಕನಾ ನೃಪಾಂಗಜ ಮಿತ್ರಂ ॥೫೫॥

ಮ॥ ಬರೆ ಮೇಧಾವಿಳ ದೇವನಾಕೃತಿಯ[2]ನಂತಾ ರಾಜ ಗೇಹಾಜಿರೋ ।
ರ್ವರೆಯೊಳ್ ತೊಟ್ಟನೆ ಕಂಡು ಕೌತುಕಮಯ ಸ್ವಾಂತಾಬ್ಜನಾಗೀತನಾರ್ ॥
ಬರುತಿರ್ದೀತನಮರ್ತ್ಯನೋ ಖಚರನೋ ತಾನೆಂದಣಂ ಕಲ್ಪಿಸು ।
ತ್ತಿರದಾಲೋಕಿಸುತಿರ್ದನಸ್ಖಲಿತದಿಂ ಚಂದ್ರಧ್ವಜೋರ್ವೀಶ್ವರಂ ॥೫೬॥

ಕಂ॥ ಪೆಸರಿಟ್ಟನ್ನಂ ಪರಿಕ ।
ಲ್ಪಿಸಲಱಿಯದೆ ಕೌತುಕಂ ಮನಕ್ಕೊದವೆ ತದೀ ॥
ಯ ಸಭಾ ಜನಮನಿತುಂ ವೀ ।
ಕ್ಷಿಸುತಿರ್ದುದು ಬರುತುಮಿರ್ದ ಮೇಧಾವಿಳನಂ ॥೫೭॥

ಇವನೀ ಮೇಧಾವಿಳನೆಂ ।
ಬವನಪ್ಪಂ ದೇವ ತಪ್ಪದಿಂ ಭಾವಿಸೆ ಮಾ ॥
ನವರ್ಗೀ ರೂಪಚ್ಚರಿ ನೋ ।
ಡಿಮೆನುತ್ತುಂ ನೃಪತಿಗಿಂತು ವಿಶ್ರುತನೆಂದಂ ॥೫೮॥

1. ಕೃತ್ಸರಸೀ. 2. ತಾರಾನಿಗೇಹಾ.

ವ॥ ಪರಿವಿಷ್ಟಾಖಿಲ ರಾಜ ಲೋಕಮನಿತುಂ ದತ್ತಾತ್ಮನನಾತ್ರೇಯ ಬಿಂ।
ಬರುಮಾಗೀತನಭೂತ ಪೂರ್ವತರ ರೂಪಂ ನಾಡೆಯುಂ ನೋಡೆ ಮ॥
ರ್ತ್ಯರೊಳಿಲ್ಲೆಂದು ಸಮಂತು ಕಲ್ಪಿಸುತುಮಾಶ್ಚರ್ಯಂ ಪೊದೞ್ದೀಕ್ಷಿಸು।
ತ್ತಿರೆ ಪೊಕ್ಕಂ ನಡೆತಂದು ತತ್ಸಭೆಯನಾ ಬೋಧಾಳು ಮೇಧಾವಿಳಂ ॥೫೯॥

ಸ್ಫುರಿತಾತ್ಮಾಂಗ ಮರೀಚಿ ನೀಟ್ಟು ಸಭೆಯಂ ತಳ್ಪೊಯ್ಯಲೆಲ್ತಿಂದು ನಿಂ।
ದಿರೆ ಮೇಧಾವಿಳನಂ ಸಮಾಸನಮತಿತ್ತಂದಳ್ಕಱಿಂ ತನ್ಮಹೀ॥
ವರೆ ಚಂದ್ರಧ್ವಜನಿಂತು ಮನ್ನಿಸಿದನೇನಿಂತಿರ್ದೊಡಂ ವಂದ್ಯರ।
ಪ್ಪರನಾರಾದರಿಸರ್ ನಿರೀಕ್ಷಿಸಲೊಡಂ ಚೇತೋನವ ಪ್ರೀತಿಯಿಂ ॥೬೦॥

ಕಂ॥ ವರ ರೂಪದಿನೀ ಧರೆಗವ।
ತರಿಸಿದ ರವಿಯಂತೆ ಸಮುಚಿತಾಸನದೊಳ್ ಕು॥
ಳ್ಳಿರೆ ಮೇಧಾವಿಳನಾ ವಿ।
ಷ್ಟರದೊಳ[ನ]ನುದಯದೆ [1]ಶಶಿವೊಲಾ ನೃಪನಿರ್ದಂ ॥೬೧॥

ತೊಳಗುವ ತನಿವೆಳಗಿಂ ಕ।
ಣ್ಗೊಳಿಸುವ ಕಮನೀಯ ಕೌತುಕಾಕೃತಿ ಮೇಧಾ॥
ವಿಳನಂ ನೋಡುತ್ತಿರ್ದಾ।
ಗಳೆ ನೃಪನಾ ವಿಶ್ರುತಾಖ್ಯನಂ ವೀಕ್ಷಿಸಿದಂ ॥೬೨॥

ಅರಸಂ ತಿರ್ಯಙ್ಮುಖನಾ।
ಗಿರದೆ ನಿರೀಕ್ಷಿಸಿದ ತೆಱನನದನಱಿದಗ್ರೇ॥
ಸರ ಸಚಿವಂ ವಿಶ್ರುತನಾ।
ದರದಿಂ ಮೇಧಾವಿಳಂಗೆ ತಾನಿಂತೆಂದಂ ॥೬೩॥

ಉ॥ ಆವುದು ತಾಂ ತದೀಯ ವಿಷಯಂ ನೆಗಳ್ದಾ ವಿಷಯಾಭಿಧಾನಮೇ।
[ನೀ] ವಿಷಯಕ್ಕೆ ಬಂದ ತೆಱನಾವುದು ನಿನ್ನೊಡವಂದನಾವ ಧಾ॥
ತ್ರೀವರ ಪುತ್ರನೆಮ್ಮ ಕುಸುಮಾವಳಿ ದೇವಿಯನುಯ್ದನೆಂತು ಮೇ।
ಧಾವಿಳ ದೇವ ನೀನಿದನೆ ದಲ್ ನೆಱೆ ಪೇೞೆನೆ ಮಂತ್ರಿ ವಿಶ್ರುತಂ ॥೬೪॥

1. ಶಶಿವೊಲ್.

ಮ॥ ವಿನಯೋಪೇತದೆ ವಿಶ್ರುತಂ ಬೆಸಗೊಳಲ್ [ತಾಂ] ಸುಪ್ರಸನ್ನಾತ್ಮನಾ।
ಗಿ ಸಿಜಾಸ್ಯೇಂದು ಮರೀಚಿ ಮಾಲೆ ಕುಡಿಯಿಟ್ಟುಣ್ಮಿತ್ತೆಸಲ್ ದಂತ ಕಾಂ॥
ತಿ ನಿಕಾಯಂ ನಿಮಿರ್ದಾ ಸಭಾ ಜನಮನೆತ್ತಂ ಪರ್ಬೆ ಪೇಟಲ್ ತಗು।
ಳ್ದನಿಳೇಶಾಂಗಜ ಮಿತ್ರನಿಂತು ನೆಱೆ ತದ್ವೃತ್ತಾಂತದಾದ್ಯಂತಮಂ ॥೬೫॥

ಪ್ರಕಟಾನೇಕ ವಿಚಿತ್ರ ವಸ್ತುಗಳ ಜನ್ಮಸ್ಥಾನಕಂ ತಾಂ ವಸಂ।
ತಕಮೆಂಬಾ ವಿಷಯಂ ಮದೀಯ ವಿಷಯಂ ಮತ್ಸ್ವಾಮಿ ನವ್ಯಾವನೀ॥
ಧ್ರ ಕುಲೋತ್ತಂಸ ಮಣಿವ್ರಜಾಂಶು ಪರಿವಿಷ್ಟಾಭಾ ಸುಹೃತ್ಪೀಠ ಮ।
ಸ್ತಕ ವಿನ್ಯಸ್ತ ಪದಾರವಿಂದ ಯುಗಳಂ ವಿಶ್ವಂಭರೋರ್ವೀಶ್ವರಂ ॥೬೬॥

ಮ॥ಸ್ರ॥ ನೆಗಟ್ದಾ ವಿಶ್ವಂಭರೋರ್ವೀಪತಿಗುದಯಿಸಿದಂ ಮೋಹನಾಶ್ಚರ್ಯ ರೂಪಂ।
ಭೃಗುಜ ಪ್ರೋದ್ಯತ್ಪ್ರತಾಪಂ ಪರಿಣತ ವಿವಿಧೋತ್ಕೃಷ್ಟ ವಿದ್ಯಾ ಕಳಾಪಂ॥
ಜಗತೀ ವಿಭ್ರಾಜಿತ ಕ್ಷತ್ರಿಯ ಕುಲ ಮಣಿ ದೀಪಂ ಸಮೀಚೀನ ಶೋಭಾ।
ಧಿಗತಾಳಾಪಂ ಸುಸತ್ತ್ವಪಚಿತನತುಳ ತೇಜಸ್ವಿ ಕಂದರ್ಪ ಭೂಪಂ ॥೬೭॥

ಆ ಕಂದರ್ಪ ದೇವಂಗಂ ಕುಸುಮಾವಳಿ ದೇವಿಗಮಾದ ವಿರಹ ವಿಚಿತ್ರ ವೊಂದೆಯಂದಮುದಂ ಪೇಟ್ವ[ದಱಿಂದ]ದಱಿಂ ಪ್ರತ್ಯ[ಕ್ಷ]ಮಾಗೆ ತೋರ್ಪೆನೆಂದು ಮೇಧಾವಿಳ ದೇವಂ ತದೀಯ ಚಿತ್ರಪಟಯುಗಮನೆ ಬೇಗದಿಂ ಕೊಂಡು ಬಾ ಯೆಂದು ಮುಂದಿರ್ದ ಕಳಭಾಷಿಣಿಯಂ ಕಳುಪಿದಾಗಳ್—

ಕಂ॥ ಕ್ಷಣದಿಂದೆ ಪೋಗಿ ಕಳಭಾ।
ಷಿಣಿ ಕುಸುಮಾವಳಿಯ ಭೂಪ ಕುಸುಮಾಸ್ತ್ರನ ತ॥
ತ್ಪ್ರಣುತ ಪಟ ಚಿತ್ರಯುಗಮಂ।
ಪ್ರಣಯದೆ ಮೇಧಾವಿಳಂಗೆ ತಂದಿರದಿತ್ತಳ್ ॥೬೮॥

ಮ॥ ನಿಮಿರ್ದಾ ಚಿತ್ರ ಮರೀಚಿಗಳ್ ಸಭೆಯನೆತ್ತಂ ಚಿತ್ರಿಸಲ್ ಚಿತ್ರ ಯು।
ಗ್ಮಮನೋರಂತೆ ನಿಮಿರ್ಚಿ ಹಸ್ತಯುಗದಿಂ ತಾನೆತ್ತೆ ತದ್ರಾಜ ಲೋ॥
ಕಮದೆಲ್ಲಂ ಬೆರಗಾಗಿ ನೋಡುತಿರೆಯುಂ ನೀನಿಂತಿವಂ ನೋಡೆನು।
ತ್ತಮೆ ಚಂದ್ರಧ್ವಜ ಭೂಭುಜಂಗೆ ದಯೆಯಿಂ ಮೇಧಾವಿಳಂ ತೋಱಿದಂ ॥೬೯॥

ಪರೆಯಂ ವರ್ಣವಳಂಕೆಗೊಂಡ ನಯುವತ್ಯಾಶ್ಚರ್ಯ ಸೌಂದರ್ಯವೊಂ।
ದಿರೆ ಭೇದಂ ಲವಮಿಲ್ಲದಾತ್ಮಜೆಯೆ ದಲ್ ತಾನಿಂತಿದೆಂಬಂತೆ ಬಿ॥

ತ್ತರಿಸುತ್ತಿರ್ಪ ತದೀಯ ಚಿತ್ರ ಪಟಮಂ ನೋಡುತ್ತುಮಿರ್ದಂ ಮನಂ।
ಪಿರಿದುಂ ವಿಸ್ಮಯಮುತ್ತು ಮಂತ್ರಿವೆರಸಾ ಚಂದ್ರಧ್ವಜೋರ್ವೀಶ್ವರಂ ॥೭೦॥

ಉ॥ ಈ ಸೊಗಯಿಪ್ಪ ನಮ್ಮ ಕುಸುಮಾವಳಿ ದೇವಿಯುಳಿರ್ದ ಚಿತ್ರದೊಳ್।
ಪಾಸಟಿಯೆನ್ನದಿರ್ ಮಿಗಿಲಿದಂ ನೆಱೆ ವಿಶ್ರುತ ನೋಡೆನುತ್ತೆ ಮ॥
ತ್ತಾ ಶುಭ ಲಕ್ಷಣೋಪಚಿತಮಪ್ಪ ಮಹೀಶ ಮನೋಜನಿರ್ದ ಸ।
ದ್ಭಾಸುರ ಚಿತ್ರಮಂ ಪದೆದು ನೋಡುತುಮಿರ್ದನದಂ ನರೇಶ್ವರಂ ॥೭೧॥

ಮ॥ ಇದು ದಲ್ ದೈವದ ಯೋಗಮಲ್ಲದೊಡೆ ಪೇೞೀಯಂದದಿಂ ಕೂಟಮಾ।
ದುದು ಮುನ್ನಾರೊಳಮುಂಟೆ ಮತ್ತೆ ಪೆಸರ್ಗೊಂಡಿಂ ತೋಱಿಸಲ್
ಮೂಱು ಲೋ॥
ಕದೊಳೆಂದಾ ಕುಸುಮಾವಳೀ ಸತಿಯ ಪುಣ್ಯಕ್ಕಿಂತು ಮೆಚ್ಚುತ್ತೆ ತೂ।
ಗಿದನಾಗಳ್ ನಿಜ ಮಸ್ತಕಾಂಬುರುಹಮಂ ಚಂದ್ರಧ್ವಜೋರ್ವೀಶ್ವರಂ ॥೭೨॥

ಮನದೊಳ್ ಮುನ್ನೊಗೆದಿರ್ದ ಸಂಶಯಮದೆಲ್ಲಂ ಪಿಂಗೆ ಚಂದ್ರಧ್ವಜಾ।
ವನಿಪಂ [ಸಂ]ತಸದಂತಮೆಯ್ದಿ ಕೆಲದೊಳ್ ಕುಳ್ಳಿರ್ದ ಮೇಧಾವಿಳಾಂ॥
ಕನ ವಕ್ತ್ರೇಂದುವನೊಯ್ಯನೀಕ್ಷಿಸುತುಮತ್ಯೌತ್ಸುಕ್ಯದಿಂದೊಂದನೆಂ।
ದೆನಲುದ್ಯೋಗಿಸಿದಂ ದ್ವಿಜ ದ್ಯುತಿ ನಿಕಾಯಂ ನೀಳ್ದು ಮುಂಬಾಯ್ವಿನಂ ॥೭೩॥

ಮ॥ ಎನಗೀ [1]ವೃತ್ತಕಮಂ ಸಮಂತು ಮೊದಲೊಳ್ ನೀಂ ಬಂದು ಪೇೞಲ್ಕೆ ಕೇ।
ಳ್ವೆನದೆಂತುಂ ಕುಸುಮಾವಳೀ ಸುದತಿಯಂ ಕಂದರ್ಪ ದೇವಂಗೆ ಬೇ॥
ಳ್ಪನಿತುಂ ವೈಭವದಿಂ ವಿವಾಹಮನೆ ಮಾಱ್ಪೆಂ ಮಾಡಿ ವಿಶ್ವಂಭರಾ।
ವನಿಪಂ ಬಿಯ್ಯಗನೆಂಬಿದಂ ಪಡೆ[ವೆನೇಂ] ಪೇೞಿಂತು ಮೇಧಾವಿಳಾ ॥೭೪॥

ಅದಱಿಂ ಮೆಲ್ಲನೆ ಪೋಗುತಿರ್ದಪನೆ ಪೇೞಿಂತೀಗಳತ್ಯಂತ ವೇ।
ಗದ ಜಂಘಾಲರನಟ್ಟುವೆಂ ನೃಪ ಮನೋಜಂ ತಾಂ ಬರಲ್ [2]ಮೆಚ್ಚುವಂ॥
ದದೆ ಮೇಧಾವಿಳ ದೇವ ಮತ್ಸುತೆಯನಿತ್ತುದ್ವಾಹಮಂ ಮಾಡುವೆಂ।
ಮುದದಿಂ ತಾಂ ಬಱಿವರ್ಪನೆಂದು ನುಡಿದಂ ಚಂದ್ರಧ್ವಜೋರ್ವೀಶ್ವರಂ ॥೭೫॥

ಅದರ್ಕೆ ಮೇಧಾವಿಳನಿಂತೆಂದಂ—

1. ವ್ಯಕ್ತಕಮಂ. 2. ಕೆಚ್ಚುವಂ.

ಮ॥ ಪೆಸರಿಂ ತಾಂ ಪವನಂಜಯಂ ಹಯಮದಾದಂ ಪೋಪ ವೇಗಕ್ಕೆ ವಾ ।
ಯು ಸಮಂಗೂಡೆ ಬರಲ್ಕಣಂ ನೆರೆಯನೆಯ್ದಲ್ ವಾಜಿ ಮುನ್ನಿಲ್ಲ ಮಾ ॥
ನಿಸರಾರೆಯ್ದುವರಂತದಿರ್ಕೆ ಪೆಜತೇಂ ಚಂದ್ರಧ್ವಜೋರ್ವೀಶ ನೀ ।
ನು[ಸಿ]ರ್ದೀ ಮಾತಿದು ಸತ್ಯಮಾದೊಡೆ ಸಮಂ [ತಾನೆಯ್ದುವೆಂ ಬೇಗದಿಂ]॥೭೬॥

ಬಳಿವಂದಾತ್ಮಜೆಯಂ ಮಹೀಶ ಕುಸುಮಾಸ್ತ್ರಂಗಿತ್ತು ವೈವಾಹಮಂ ।
ಗಳಮಂ ನೀನೊಸೆದಲ್ಲಿ ಮಾಡೆ ಪೆಸಗಕ್ಕುಂ ನಾಡೆ ಮತ್ಸ್ವಾಮಿ ನಿ ॥
ನ್ನೊಳತಿ ಪ್ರೇಮಮನಪ್ಪುಕೆಯ್ವನದಱಿಂದಾನುಯ್ವೆನಾ [ತಾಣಕೀ]।
ಗಳೆನುತ್ತುಂ ನುಡಿದಂ ಮನಂಬುಗುವಿನಂ ಬೋಧಾಳು ಮೇಧಾವಿಳಂ ॥೭೭॥

ಕಂ॥ ಮನದಂದದೆ ಮೇಧಾವಿಳ ।
ನೆನಲಾ ವಚನಮನೆ ಕೇಳ್ದು ಚಂದ್ರಧ್ವಜ ಭೂ ॥
ಪನದಂ ಬಗೆಗೊಂಡಿರದೊ ।
ಯ್ಯನೆ ವಿಶ್ರುತ ಸಚಿವನ್ಯಾಸಮಂ ವೀಕ್ಷಿಸಿದಂ ॥೭೮॥

ಇಂತು ನೋಡಿದಾಗಳ್—

ಶಾ॥ ಈ ಮೇಧಾವಿಳ ದೇವನೆಂದ ತೆಱದಿಂ ಪೋಗಲ್ಕೆವೇಟ್ಕುಂ ಮನಃ ।
ಪ್ರೇಮಂ ಕೈಮಿಗೆ ಮಾಳ್ಪುದಲ್ಲಿ[ಯೆ] ವಿವಾಹೋದ್ಯೋಗಮಂ ದೇವ ಮ ॥
ತ್ತೀ ಮಾತಿಂತಿದು ಕಾರ್ಯಮಪ್ಪುದೆನಸುಂ ವಿಶ್ವಂಭರೋರ್ವೀಶನೋಳ್ ।
ನೀಮೆಂತುಂ ಪ್ರಿಯನುಪ್ಪುದೆಂದು ನಯದಿಂ ತಾನೆಂದನಾವಿಶ್ರುತಂ ॥೭೯॥

ಆ ವಿಶ್ರುತ ವಚನಮಂ ಮನದೆ ಕೊಂಡಿಂತೆಂದಂ—

ಮ॥ಸ್ರ॥ ಬರಲೀಗಳ್ ಪೇಟ್ದಿ ಪೇಟ್ದಂದದಿಸಿರದೊಡನೆಟ್ಟಿರ್ಪನೆಟ್ಟಂದವೋಲ್ ಸಾ ।
ದರದಿಂ ವಿಶ್ವಂಭರೋರ್ವೀಪತಿಯೊಳಿಮಗೆ ಸಂಪ್ರೀತಿಯಂ ಮಾಡು ತದ್ಭೂ ॥
ಪ ರತೀಶಂಗೀ ನೃಪಂ ಮಾತುಳನೆನಿಸಿ ದಿಟಂ ನೀನೆನುತ್ತೆಟ್ದಿನಾ ವಿ ।
ಷ್ಟರದಿಂ ಚಂದ್ರಧ್ವಜೋರ್ವೀಪತಿತಡೆಯದೆ ಮೇಧಾವಿಳೋಪೇತದಿಂದಂ ॥೮೦॥

ಕಂ॥ ರಾಗದೆ ಪೊಱವೀಡಂ ಬಿಡ ।
ಲಾಗಳೆ ಚಂದ್ರಧ್ವಜಾವನೀಶಂ ಗಮನೋ ॥
ದ್ಯೋಗಮನಱಿಪಲ್ ಪೊಯ್ಸಿದ ।
ನಾಗ ಸಮುಂತೆಯ್ದೆ ಮಂಗಳಾನಕ [1]ಕುಲಮಂ ॥೮೧॥

1. ನಿನದಂ.

ಚಂ॥ ನಿಮನಿಮಗೀಗಳಂತೆ ವಿಮಳಾಪುರಿಗೆಟ್ತಿರವೇೞ್ಕುಮಲ್ಲಿ ಭೂ ।
ರಮಣ ಮನೋಭವಂಗೆ ಕುಸುಮಾವಳಿ ದೇವಿಯೊಳಂ ವಿವಾಹಮೆಂ ॥
ದಮರವರಾದಿ ದಿಕ್ಪ್ರತತಿ[1]ಗೆಯ್ದುತೆ ಪೇೞ್ದಿರವೆಂಬಿನಂ ದಿಶಾ ।
ಸಮಿತಿಯನೆಯ್ದಿದತ್ತು ನೆಱೆ[3] ಪೊಯ್ಸಿದ ಭೇರಿಯ ಭೂರಿ ನಿಸ್ವನಂ ॥೮೨॥

ಪರಿವಿಡಿಯಿಂದಮಿಂತಿವರಿವರ್ ಪೆಱಗಿರ್ಪುದೆನುತ್ತುಮಾ ಮಹೀ ।
ವರನಿರವೇೞ್ದು ನೇಮಿಸುತಿರಲ್ ಪಿರಿದುಂ ಕುಸುಮಾವಳೀ ತನೂ ॥
ದರಿಯ ವಿವಾಹ ವೈಭವಮನೀಕ್ಷಿಪ ಕಾಂಕ್ಷೆ ನಿಮಿರ್ಕೆವೆತ್ತು ತ
ತ್ಪರಿಜನ [2]ವರ್ಗಮಾಗಳೆನಿತುಂಟನಿತುಂ ಪೊಱಮಟ್ಟುದೞ್ತಿಯಿಂ ॥೮೩॥

ಮ॥ಸ್ರ॥ ತಳರ್ದಂ ತಾನಿಂತು ಚಂದ್ರಧ್ವಜ ನೃಪತಿ ಪುರೋಪಾಂತದಿಂದಾಗಳಶ್ವಾ ।
ತುಳ ಹೇಷಾಘೋಷದಿಂ ವಾರಣ ಘಟ ಪಟು[ಸ] ದ್ಬೃಂಹಿತ ಧ್ವಾನದಿಂ ಸಂ ॥
ಚಳ[3]ದುದ್ಯತ್ಕೇತು ದಂಡಾಗ್ರಿಮ ವಿಲುಳಿತ ಘಂಟಾ ಝಣತ್ಕಾರದಿಂ ಮಂ ।
ಗಳ ತೂರ್ಯಾಶ್ಚರ್ಯ ನಾದೋತ್ಕಟದೆ ಕಿವುಡುವೀಟಲ್ ದಿಶಾ ಚಕ್ರವಾಳಂ ॥೮೪॥

ಕಂ॥ ಹರಿ ಮುಖ ಹೇಷಾ ಘೋಷಂ ।
ಹರಿನ್ಮುಖಾಂತರಮನೆಯ್ದಿ ತೀವುತ್ತಿರೆಯುಂ ॥
ಹರಿ ಪದದಿಂದೊಗೆದ ರಜಂ ।
[ಹರಿ] ಪದಮಂ ತೊಡರೆ ನಡೆದುದಾ ನೃಪ ಸೈನ್ಯಂ ॥೮೫॥

ಚಂ॥ ಗತಿಗೆಡಿಸಿತ್ತು ಪಾತಕನ [ವೈತ್ರಿಯ] ವೋಲ್ ಪವಮಾನನಂ ಸಮುಂ ।
ತತಿ ನಿಬಿಡೋನ್ಮುಖ ಧ್ವಜ ನಿಕಾಯದಿನಾ ನರನಾಥ ಸೈನ್ಯಮು ॥
ನ್ನತಿಗೆಡಿಸಿತ್ತು ದುರ್ಜನನ ವೈತ್ರಿಯವೋಲ್ ನಿಗಮಾವನೀಧರ ।
ಪ್ರತತಿಯನಾಗಳಂ[ತೆ]ಚತುರಂಗ ಬಲೋತ್ಕರ ಪಾದ ಪಾತದಿಂ ॥೮೬॥

ಮ॥ ಪಡೆಗೆಲ್ಲಂ ಜಲತೃಷ್ಣೆ ಪುಟ್ಟದವೊಲಾಯ್ತಲ್ಲಲ್ಲಿ ನೀರ್ದಾಣದೊಳ್ ॥
ಬಿಡಿಸುತ್ತುಂ ಬಿಸಿಲಾದಮುರ್ಚದ ಮಹಾ ಕಾಂತಾರ ಮಾರ್ಗಂಗಳಂ ॥
ಬಿಡದುಯ್ಯುತ್ತುಮತಿಶ್ರಮಂ ಪುಗದವೋಲ್ ಸ್ವಚ್ಛಂದ ಯಾನಂಗಳಿಂ ।
ನಡುಪುತ್ತುಂ ಪಲವುಂ ಪ್ರಯಾಣಮುಮನೋರಂತುಯ್ಯೆ ಮೇಧಾವಿಳಂ ॥೮೭॥

1. ಗೆಯ್ದಿತು ಪೇಳರಿವೆಂಬಿನಂ. 2. ಮಂಮಂತನಿತುಂ. 3. ಮಧ್ಯಕ್ಕೇತು.

ಕಂ॥ ಕೆಲವಾನುಂ ಪಯಣಂಗಳ್ ।
ಸಲೆ ಸಮನಿಸೆ ನಡೆಯುತಿರ್ದೊಡಂ ಶ್ರಮಮಾತ್ರಂ ॥
ತಲೆದೋಱದವೋಲ್ ಮೇಧಾ ।
ವಿಳಸಿಂತುಯ್ಯುತ್ತುಮಿರ್ದನಾ ನೃಪ ಬಲಮಂ ॥೮೮॥

ಎಂದಿಂತು ಪೇೞುತಿರ್ದಾ ಸಮಯದೊಳ್—

ಕಂ॥ ಕವಿ ಕಮಲಜ ಸೂಕ್ತಿ ಸುಧಾ ।
ಪ್ರವಾಹದೊಳ್ ಕೊರ್ಬುವಡೆದು ಕೃತಿ ನಾದ ಯಶೋ ॥
ನವ ಲತೆ ಪರ್ಬಿದ [ತೆಱದಿಂ ।
ಭುವನದೊಳುಱೆ] ಪರ್ಬಿದತ್ತು ಭೇರೀ ನಾದಂ ॥೮೯॥

ಅದಂ ಕೇಳ್ದು ಚಂದ್ರಧ್ವಜನ ಭೇರೀ ಭಾಂಕಾರಮೆಂದು ಮುನೀಂದ್ರಂ ಪೇೞೆ ಮಣಿಕುಂಡಲ ಮಹೀಪಾಲಕಂ ವಿಸ್ಮಯ ಸ್ವಾಂತನಾಗಿರ್ಪುದುಮಾಗಳ್—

ಕಂ॥ ಕೆಳೆಯಂ ಬಂದನೆನಲ್ಕಾ ।
ಗಳೆ ಮುದಮಂ ತಳೆದು ತನ್ನ ನಿರವಱಿಪಲ್ಕಾ ॥
ಬಳಮಂ ಬಿಡಿಸುವ ಬಗೆಯಿಂ ।
ಘಳಿಲನೆ ನೃಪ ಕಂತು ಮುನಿಪನಂ ಬೀೞ್ಕೊಂಡಂ ॥೯೦॥

ಆ ಸಾರ್ವರ್ತುಕ ವನಮುಮಂ ಪೊಱಮಟ್ಟು ಪವನಂಜಯಾಶ್ವಾರೂಢನಾಗಿ ನರೇಂದ್ರ ಮದನಂ ಮೇಧಾವಿಳ ದರ್ಶನೋತ್ಕಂಠೆಯಿಂದಿರ್ಪುದುಮನ್ನೆಗಮಿತ್ತಲ್—

ಕಂ॥ ಕವಿ ಕಮಲಜ ಸೂಕ್ತಿ ಸುಧಾ ।
ರ್ಣವ ಸೋಮಂ ದೇವಕವಿ ದಲೆಂಬಿನಿತಂ ಸಾ ॥
ರುವವೋಲ್ ಭೇರೀ ಭಾಂಕೃತಿ ।
ರವಮೊಗೆದತ್ತುತ್ತರಾಶೆಯೊಳ್ ಮತ್ತಾಗಳ್ ॥೯೧॥

ಅದಂ ಕೇಳ್ದು ಮಣಿಕುಂಡಲ ದೇವಂ ಮತ್ತಮಿತ್ತಲೊಗೆದ ಮಹಾ ನಿನದಮೇನೆಂದು ಬೆಸಗೊಳ್ವುದುಂ ಕಪಿಲ ಮುನೀಂದ್ರಂ ಮಂದಸ್ಮಿತನಾಗುತ್ತೆ ಮತ್ತಮಿಂತೆಂದಂ—

ಚಂ॥ ಜನಪ ಜನಾರ್ದನಂ ತಡೆಯದೀ ಪವನಂಜಯ ವಾಜಿರಾಜ ಸಂ।
ಜನಿತ ಖುರ ಪ್ರಘಾತದದಿರ್ವಬ್ಧಿಗಳಿಂದಮೆ ತೆಂಕವೋದನೆಂ॥
ಬಿನಿತನೆ ಪೂಣ್ದು ಭೂವಳಯಮಂ ನೆಱೆ ತೀವಿಸೆ [ಪಾಂಸು ಸಂಚ]ಯಂ।
ತನಯನ ಪೋದ [1]ಬೆಂಬಱಿಯೊಳೀ ಬರುತಿರ್ದಪನುರ್ವರೇಶ್ವರಾ ॥೯೨॥

ಎನೆ ಕೇಳ್ದು ಮಣಿಕುಂಡಲನಿದು ವಿಸ್ಮಯ ಮೆನುತ್ತುಮಿರೆ ಮತಿವರ್ಧನಂ ಕೆಲದೊಳಿರ್ದ ವೇಗಿಳನೆಂಬನಂ ಕರೆದು—

ಕಂ॥ ಕಂದರ್ಪ ನೃಪನ ವೃತ್ತಕ।
ಮಂ ದೇವರ್ಗಱಿಯೆ ಬಿನ್ನವಿಸೆ ಬಲಮೆರಡುಂ॥
ಸಂದಣಿಸಿದವೋಲ್ ಬಿಡಿಸುವು।
ದೆಂದೆನಸುಂ ವೇಗಿಳಂಗೆ ಪೇೞ್ದಂ ಸಚಿವಂ ॥೯೩॥

ಆ ಮತಿವರ್ಧನನಾಜ್ಞೆಯಿಂ ವೇಗಿಳಂ ಬೇಗದಿಂ ವನಮಂ ಪೊಱಮಟ್ಟುತ್ತರೀಯ ವಸನದಿಂ ಗುಡಿಗಟ್ಟಿಕೊಂಡತಿ ತ್ವರಿತ ಗತಿಯಿಂ ಪೋಗೆವೋಗೆ—

ಚಂ॥ ಬೆಮರ್ವನಿಯಿಂದೆ ತಳ್ತು ತನು ಮುತ್ತಿನ ಕಂಚುಕಮಂ ಸಮಂತು ತೊ।
ಟ್ಟವೊಲಿರೆ ಭೋರನೊಂದೆ ಗುಡಿಗೊಂಡು ಬರುತ್ತುಮಿರ್ದನು॥
ತ್ಸವದೊದವಿಂದೆ ವೇಗಿಳನವಂ ವಸುಧಾಧಿಪ ಚಕ್ರಪಾಣಿಗಿಂ।
ತವನಿಪ ಕಂತು ಬಂದುದನೆ ಬಿನ್ನವಿಪೊಂದು ಕುತೂಹಲತ್ವದಿಂ ॥೯೪॥

ಮ॥ ಇವನೇನುತ್ಸವದಿಂದಮೊಂದೆ ಗುಡಿಯಂ ತಾನೆತ್ತಿಕೊಂಡೆಟ್ಟಿರು।
ತ್ತುಮಿದೇಕಿರ್ದಪನೆಂದು ದತ್ತ ನಯನಾಂಭೋಜಾತನಾಗೀಕ್ಷಿಸು॥
ತ್ತುಮಿಳಾಧೀಶ ಮುಕುಂದನಿಂತಿರೆ ಕರಂ ಸಂರಂಭದಿಂದೆಯ್ದಿ ವಂ।
ದವನಾಗಳ್ ನತನಾದನುಣ್ಮಿದುರು ಚೇತೋರಾಗದಿಂ ವೇಗಿಳಂ ॥೯೫॥

ಮುದದಿಂ ವೇಗಿಳನೆಯ್ದಿ ಕೈಮುಗಿದು ನಿಂದಾವೇಗದಿಂ ದೇವ ದೇ।
ವ ದಿಟಂ[ತಾಂ] ಶ್ರೀ ಕುಸುಮಾವಳೀ ಸತಿಯುತಂ ಮಿತ್ರೋಪಯುಕ್ತಂ ಕುಭೃ॥
ನ್ಮದನಂ ಶ್ರೀ ಕಪಿಲ ವ್ರತೀಂದ್ರ ಭವನಕ್ಕೆಯ್ತಂದು ಸೇನಾ ಸಮೇ।
ತದೆ ಬಿಟ್ಟಿರ್ದಪನೆಂದು ಬಿನ್ನವಿಸಿದಂ ಭೂಪಂಗೆ ಸಂರಂಭದಿಂ ॥೯೬॥

1. ಪೊಂಬಳಿ.

ಪರಿತಂದಾಗಳೆ ವೇಗಿಳಂ ನೃಪ ಮನೋಜಂ ಬಂದನೆಂದಿಂತು ಸಾ।
ದರದಿಂ ಬಿನ್ನವಿಸಲ್ಕೆ ಕೇಳ್ದರಸನುಂ ಮಾದೇವಿಯುಂ ಮಂತ್ರಿಯುಂ॥
ಪರಿವಾರಾವಳಿಯುಂ ಪರೀತ ನೃಪರುಂ ರೋಮಾಂಚ ಸಂಛನ್ನ ಭಾ।
ಸುರ ಗಾತ್ರೋತ್ಕರರಾಗಿ ನಾಡೆ ಪಡೆದತ್ತಾನಂದ ಸಂದೋಹಮಂ ॥೯೭॥

ಕಂ॥ ತನಯಂ ಬಂದಾ ವಾರ್ತೆಗೆ।
ತನು ಪುಳಕದ ತೆಕ್ಕೆವೆತ್ತು ಶಿಶಿರದ ಸೋಂಕಿಂ॥
ನನೆವೆತೊಪ್ಪುವ ಮಾಲತಿ।
ಯನೆ ವಿಜಯಾವತಿ ಸಮಂತುಂ ಪೋಲ್ತೆಸೆದಿರ್ದಳ್ ॥೯೮॥

ಕಂ॥ ಇಂದುರುಚಿ ಸೋಂಕಿದಿಂಗಡ।
ಲಂದದೆ ನೆಲೆವೆರ್ಚಿದತ್ತು ಪರಿಜನವತುಳಾ॥
ನಂದದಿ ನಿಳೇಶ ಮದನಂ।
ಬಂದಂ ತಾನೆಂಬ ವಾರ್ತೆಯಿಂದಾ ಪದದೊಳ್ ॥೯೯॥

ಪರಮ ಹರುಷಾಮೃತಾರ್ಣವ।
ತರಂಗ ನಿಷ್ಟಾಂತರಾಗಿ ಕಿಱಿದಾನುಂ ಪೊ॥
ಱ್ತಿರುತಿರ್ದರರಸಿಯುಂ ಭೂ॥
ವರನುರು ಹರ್ಷಾಶ್ರು ಮಿಶ್ರ ಲೋಚನರಾಗಳ್ ॥೧೦೦॥

ಘಳಿಲನೆ ಸುತ ವಾರ್ತಾಮೃತ।
ಜಳದಿಂ ಚಿತ್ತೋರ್ವಿಯೊಳ್ ಮಹೋತ್ಸವ ಲತೆಯಂ॥
ಬೆಳೆಯಿಸಿದನಂದಣಂ ವೇ।
ಗಿಳಂಗೆ ನೃಪಚಕ್ರಿಯಂಗಚಿತ್ತಮನಿತ್ತಂ ॥೧೦೧॥

ಮತ್ತಮಾ ನೃಪಚಕ್ರಿ ತದ್ವಾರ್ತಾ ವಿಶೇಷಾಕರ್ಣನಾಕಾಂಕ್ಷೆಯಿಂದಿತ್ತ ಬಾಯೆಂದು ಸಿಂಧುರ ಸ್ಕಂಧಕ್ಕೆ ತೆಗೆದುದನಱಿದು ವೇಗಿಳಂ ರಾಗದಿಂ ಕಂದರ್ಪ ದೇವನ ವೃತ್ತಕಮನಾದ್ಯಂತಂಬರಂ ಅಱಿಪಿದೊಡದರ್ಕೆ ವಿಸ್ಮಯಮನಾಂತು ಮಾಕ್ಷಣಾಕುಳತೆಯಿಂ ತಳರ್ದು—

ಮ॥ ಬಳ ನಾನಾನಕ ನಾದಮುಂ ತುರಗ ಹೇಷಾ ಘೋಷಮುಂ ಸ್ಯಂದನಾ।
ವಳಿ ಚೀತ್ಕಾರದ ರಾವಮುಂ ಮದ ಕರೀಂದ್ರೋದ್ಭೃಂಹಿತ ಧ್ವಾನ ಸಂ॥

ಕುಳವಮುಂ ತಳ್ತು ವಿಜೃಂಭಿಸುತ್ತಿರೆ ಕರಂ ವಿಶ್ವಂಭರೋರ್ವೀಶ್ವರಂ ।
ತಳರ್ದಂ ವೇಗಿಳ ಸೂಚಿತಾಧ್ವ ಮುಖದೊಳ್ ತದ್ವೇಗದಿಂ ರಾಗದಿಂ ॥೧೦೨॥

ಮ॥ಸ್ರ॥ ವಿಳಸದ್ವಾ[1]ರಾಶಿ ಪಂಕಂಮಸಗೆ ಬಲ ಪದೋದ್ಧೂತ ಧೂಳಿವ್ರಜ ವ್ಯಾ ।
ವಿಳದಿಂ ದಿಗ್ಭಾಳಿ ಬಾಲಾತಪ ವಿಸರದಗುರ್ವಾಗೆ ಸರ್ವಾಯುಧ ಪ್ರೋ ॥
ಚ್ಚಳಿತ ಪ್ರದ್ಯೋತದಿಂ ಭೂತಳಮದು ನೆಱೆ[3] ಜೌಗಾಗೆ ಮತ್ತೇಭ ದಾನಾ ।
ತುಳ ಧಾರಾಪೂರದಿಂದಿಂತೆಡೆವಿಡದೆ ಬರುತ್ತಿರ್ದುದಾ ಭೂಪ ಸೈನ್ಯಂ ॥೧೦೩॥

ನೆಳಲಂ ಮಾರಾನೆಗೆತ್ತೋವದೆ ಮಸಗುವಿಭಂಗಳ್ [2]ಬರುತ್ತಿರ್ಪುವಿಂತೀ ।
ಗಳೆ ಕೋಣೊಳ್‌ಬಯ್ತು ನಿಮ್ಮಾನೆಗಳನಿರಿಶಿಕೊಂಡಿರ್ಪುದೆಂದಾಗಳಿಂದ್ರಾ ॥
ನಳ ಕೀನಾಶಾ[3]ಸುರಾಬ್ಧೀಶ್ವರ ಪವನ ಕುಬೇರಾಭವರ್ಗೆಯ್ದೆ ಪೇೞ್ವಾ ।
ಕುಳದಿಂದೆಯ್ದಿತ್ತೆನಲ್ ತೀವಿದುದು ದೆಸೆಗಳಂ ದಿಂಡಿಮೋಚ್ಚಂಡ ನಾದಂ ॥೧೦೪॥

ಚಂ॥ ಜಳದ ಪಥಂ ವಿಚಿತ್ರ ಬಿರುದ ಧ್ವಜ ಸಂಚಯ ಚಿತ್ರಕಾಂಶುಕಾಂ ।
ಚಳ ಮಯಮಂತರಾಳಮೆನಸುಂ ಪುದಿದೆತ್ತಿಸಿದಾತಪತ್ರ ಸಂ ॥
ಕುಳ ಮಯಮುರ್ವರಾತಳಮಗುರ್ವಿಸುವಾ ಚತುರಂಗ ಸೈನಿಕಾ ।
ವಳಿ ಮಯಮಾಗಳಿಂತು ಮುದದಿಂ ಬರುತಿರ್ದನಿಳೇಶ ಕೇಶವಂ ॥೧೦೫॥

ಪುದಿದ ಪಿಪಾಸೆಯಿಂ ನದ ನದೀ ನಿಕರಾಂಬುವನೀಂಟಲೆಂದು ಮಾ ।
ಣದೆ ಕಡು ಸೇದೆ ಸಂಗಳಿಸುವನ್ನೆವರಂ [ನೆಱೆ[3]] ಪಾಱೆಪಾಱೆ ಕಾ ॥
ಣದೆ ನೆಲನಂ ವಿಹಂಗ ತತಿ ಕೇತು ತಳಾಗ್ರದೊಳೆಯ್ದೆ ಕೇಗುತಿ ।
ರ್ಪುದು ನೆಱೆ[3] ಬಾಯ್ಬಿಡುತ್ತೆನೆ ತದೀಯ ಕುಭೃದ್ಬಳಮೇನಳುಂಬಮೋ ॥೧೦೬॥

ಚಲ ಹರಿನೀಲ ಶೈಲ [4]ನಿಭ ದಂತಿ ಘಟಾ ಮದವಾರಿಯಿಂ ಹಯಂ ।
ಗಳ ಕಡೆವಾಯ್ಗಳಿಂದುಗುವ ಲೋಳೆಗಳಿಂ ದೆಸೆ ಫೇನ ಸಂಕುಳಾ ॥
ನಿಳಯಮಹಾ ಪ್ರವಾಹಮಯಮಾಯ್ತೆನಿಸುತ್ತುಮಗುರ್ವನೆಯ್ದಿಸಂ ।
ಗಳಿಸಿ ಬರುತ್ತುಮಿರ್ದುದು ನರೇಂದ್ರ ಮುಕುಂದನ ಸೈನ್ಯ ಸಂಚಯಂ ॥೧೦೭॥

ಆ ಸಮಯದೊಳ್—

ಮ॥ ಇದೆ ನೋಡೈ ಮಣಿಕುಂಡಲ ಕ್ಷಿತಿಪ ತತ್ಸೇನಾ ಪದಾಘಾತದು ।
ಣ್ಮಿದ ಕೆಂದೂಳಿ ಪೊದಟ್ಟುವಾಗಸಮನಾ ಕೋಳಾಹಳಕ್ಕೇಳಲಾ ॥

---

1. ವಾರಿಸೆಕಂಪಲ್. 2. ಬರುತ್ತಿರ್ದನಿಂತೀ. 3. ಸುರಾಬ್ಧಿಶ್ವಸ. 4. ನಭ.

ದುದು ವಿಶ್ವಂಭರ ಭೂಪನೀ ಬರುತುಮಿರ್ಪಂ ತಾನೆನುತ್ತಿಂತು ತೋ।
ಱಂದನಾಗಳ್ ಕಪಿಲ ವ್ರತೀಶ್ವರನುಮಾ ತ್ರಿಜ್ಞಾನ[ತಾ] ಭಾಸುರಂ ॥೧೦೮॥

ಎಲೆ ತಾಂ ತೊಟ್ಟನೆ ಮಾಯಮಾಯ್ತು ನಭಮೆಂದಾಶ್ಚರ್ಯಮಾಗುತ್ತಿರಲ್।
ಸಲೆ ನೀಟ್ಟಬ್ಜ ಭವಾಂಡಮಂ ಪುದಿದ ಧೂಳೀ ಜಾಲಮಂ ತದ್ದಿಶಾ॥
ವಳಿಯಂ ಘಿಮ್ಮಿಡಿಸುತ್ತುಮುಣ್ಮುವ ಚಮೂ ಕೋಳಾಹಳ ಧ್ವಾನ ಸಂ।
ಕುಳಮಂ ತನ್ಮಣಿಕುಂಡಲಂ ಬಿಡದೆ ನೋಡುತ್ತಿರ್ದನಸ್ಪಂದದಿಂ ॥೧೦೯॥

ಇಂತು ನರೇಂದ್ರ ಮುಕುಂದಂ ವೇಗಿಳೋಪದಿಷ್ಟದಿಂ ಬೀಡಂ ಬಿಡಿಸುತ್ತಿರ್ದನ್ನೆಗಮಿತ್ತಲ್—

ಕಂ॥ ಆ ವನದ ದಕ್ಷಿಣೋಪಾಂ।
ತಾವನಿಯೊಳ್ ತಂದು ಬೀಡು ವಿಡಿಸಿದನಾ ಮೇ॥
ಧಾವಿಳನಾ ಚಂದ್ರಧ್ವಜ।
ಭೂವರನ ಸಮಸ್ತ ಸೈನ್ಯಮುಂ ಸಂಭ್ರಮದಿಂ ॥೧೧೦॥

ಮ॥ಸ್ರ॥ ಬಲಮೆಲ್ಲಿಂದಾಗಳೆಲ್ಲಂ ತಮತಮಗಿರದಲ್ಲಲ್ಲಿ ಸವ್ಯಾಪಸವ್ಯಂ।
ಗಳವೀಥೀ ಯೂಥದೊಳ್ ತಾಂ ಕ್ರಮಮಱಿದು ಬಿಡುತ್ತಿರ್ಪುದಂ ನೋಡುತುಂ ಕ॥
ಣ್ಗೊಳೆ ತತ್ಪಿಂಛಾತಪತ್ರಂಗಳ ತನಿವೆಳಗೊಳ್ ವಾಹಮುಂ ಮಾರಿ ಮೇಧಾ।
ವಿಳ ದೇವಂ ತೊಟ್ಟನುರ್ವೀರಮಣ ಮದನನಂ ದೂರದೊಳ್ ನೋಡಿ ಕಂಡಂ ॥೧೧೧॥

ಇಂತು ಕಂಡು ಮೇಧಾವಿಳಂ ವಿಸ್ಮಯಾವಿಳನಾಗಿ ಕಂದರ್ಪ ದೇವನೆಂದು ತಪ್ಪಿಲ್ಲದಱಿದು ತಾನತಿತ್ವರಿತ ಗತಿಯಿಂದೆಯ್ದೆ ವಂದು—

ಉ॥ ಭೂ ವಧುವಂ ಸುರಾಗಮಯಮಾಗಿಸುತಿರ್ಪರುಣಾಂಘ್ರಿಗಳ್ಗೆ ಚೇ।
ತೋ ವಿಪುಳ ಪ್ರಮೋದ ಭರದಿಂದೆಱಗಲ್ ತಲೆವಾಗುತಿರ್ದ ಮೇ॥
ಧಾವಿಳನಂ ಸ್ವಕೀಯ ಭುಜ ಶಾಖೆಗಳಿಂ ತೆಗೆದಪ್ಪಿ ರೋಮ ಹ।
ರ್ಷಾವಳಿಯಂ ನರೇಂದ್ರ ಮದನಂ ತಳೆದಿತ್ತನಣಂ ಪಸಾಯಮುಂ ॥೧೧೨॥

ಕಂ॥ ತನುಗಳನೆ ತಳೆರ್ದ ರೋಮಾಂ।
ಚ ಸಿಕಾಯದಿನಪ್ಪೆ ಸಡಿಲದಿರ್ಪುದು ತಾನೇ॥

ನೆನೆ ಕಿಱಿದು ಪೊೞ್ತುಮಿರ್ದರ್ ।
ಜನನಾಥ ಮನೋಜನುಂ ಪ್ರಧಾನಾತ್ಮಜನುಂ ॥೧೧೩॥

ಇಂತುಮಿರ್ದು ವಿಲೋಚನೋತ್ಕೀರ್ಣ ಮುದಶ್ರು ಮಾಲೆಯಂ ಪಕ್ಷ್ಮ ಪಾಳಿನೀ[1]ಜಾಲದಿಂ ತೊಲತೊಲಗಿಸಿ ಪುನಃಪುನರಾಲೋಕನಕೆಳಸುತೆ ಸ್ವೀಕೃತರಾಗಿರ್ಪುದುಂ ಆಗಳೊರ್ವ ತಾಪಸಂ ಬಂದು ಕಂದರ್ಪ ದೇವಂಗೆ ಮುನೀಶ್ವರಂ ತ್ವರಿತದಿಂ ಬರವೇೞ್ದನೆಂದು ಪೇೞೆ ಕೇಳ್ದು—

ಕಂ॥ ದ್ರುತ ಗತಿಯಿಂ ಮೇಧಾವಿಳ ।
ಯುತದಿಂದೆೞ್ತಂದು ಭೂಪ ಮನ್ಮಥನಂತಾ ॥
ಪ್ರತಿ ಪತಿಯ ಪದ ಪಯೋಜ ।
ದ್ವಿತಯಕ್ಕಾನಮ್ರನಾದನತ್ಯುತ್ಸವದಿಂ ॥೧೧೪॥

ಆ ನರೇಂದ್ರ ಮದನನೊಡವಂದ ಮೇಧಾವಿಳನಂ ಕಂಡು ಮಣಿಕುಂಡಲ ನೀಯಿರ್ವರುಂ ರೂಪಶ್ರೀಯ ಸಾದೃಶ್ಯರೆಂದು ವಿಸ್ಮಯಂಬಡುತ್ತುಮಿಂತೆಂದಂ—

ಕಂ॥ ದೇವ ಭವತ್ತಾತಂ ಬಂ ।
ದೀ ವನದುಪಕಂಠದಲ್ಲಿ ಬಿಟ್ಟಿರ್ದಪನಿ ॥
ನ್ನಾವೀಗಳ್ ದರ್ಶನ ಸೌ ।
ಖ್ಯಾವಿಳರಾಗಲ್ಕೆವೇೞ್ಕುಮೆಂದಿರದೆೞ್ದಂ ॥೧೧೫॥

ಎನೆ ಕೇಳ್ದು ಕಂದರ್ಪನಾನಂದ ಕಂದಳಿತ ಹೃದಯನಾಗಿ ಮುನೀಂದ್ರ ದತ್ತಾನುಜ್ಞೆಯಿಂ ಮಣಿಕುಂಡಲಂಬೆಱಸು ಮೇಧಾವಿಳ ಪ್ರಕೋಷ್ಠ ಪುಟ ವಿನ್ಯಸ್ತ ಹಸ್ತಾರವಿಂದನಾಗಿ ಬನಮಂ ಪೊಱಮಟ್ಟು ಬಂದು ಜನನಾಥ ಚಕ್ರಿಯ ಶಿಬಿರಮಂ ಪೊಕ್ಕು—

ಮ॥ಸ್ರ॥ ಕಮನೀಯಾತ್ಮಾಂಗ ರುಕ್ಚಂದ್ರಿಕೆಯ ಪಸರದಿಂ ಕಾದ ಗಾತ್ರಕ್ಕೆ ರೋಮೋ ।
ದ್ಗಮ ಸಸ್ಯ ವ್ರಾತಮಂ ಸಂಗಳಿಸಿ ಬೆಳೆಯಿಸುತ್ತುಂ ಮುದಶ್ರೂದಧಿಶ್ರೀ ॥
ಗೆ ಮಹಾ ಸಂಕ್ಷೋಭಮಂ ಪುಟ್ಟಿಸುತುಮೆಸೆಯೆ ಬಂದಾಗಳಾನಮ್ರನಾದಂ ।
ಪ್ರಮುದಂ ಮೆಯ್ವೆರ್ಚೆ ವಿಶ್ವಂಭರ ನೃಪತಿಗೆ ತಾನಂದು ಕಂದರ್ಪದೇವಂ॥೧೧೬॥

---

1. ಲೋಲದಿಂ.

ಚಂ॥ ಅವಿರಳವಾಗೆ ತತ್ಸಮಯದೊಳ್ ನೆಲೆವೆರ್ಚಿದ ಸಂಪದಾಮೃತಾ ।
ರ್ಣವ ನವ ವಿದ್ರುಮ ದ್ಯುತಿ ಸಮಾಜಮೆನಲ್ ಮಣಿಕುಂಡಲ ಪ್ರಭಾ ॥
ನಿವಹಮುದಾ ಸಭಾಂತರಮನಾವರಿಸುತ್ತಿರೆ ಭೂಪ ಚಕ್ರಿಗು ।
ತ್ಸವದೊದವಿಂದೆ ಬಂದೆಜಗಿದಂ ಮಣಿಕುಂಡಲ ಭೂಮಿಪಾಲಕಂ ॥೧೧೭॥

ಮ॥ಸ್ರ॥ ಪರಿವಿಷ್ಟಾನೇಕ ರಾಜನ್ಯಕ ವಿವಿಧ ವಿಭೂಷಾ ವಿಭಾನೀಕಮಂ ಚಾ ।
ಮರ ನಾರೀಜಾಲ ಲೋಲೇಕ್ಷಣ ಕಿರಣ ತಟಿನ್ಮಾಳಿಯಾಚ್ಛಾದಿಸಲ್ ಬಿ ॥
ತ್ತರಿಸುತ್ತಿರ್ದಾ ಸಭಾಸದ್ಮದ ಪೊಳೆವೊಳಗಂ ಪೊಕ್ಕು ಮೇಧಾವಿಳಂ ಸಾ ।
ದರದಿಂ ವಿಶ್ವಂಭರೋರ್ವೀಪತಿಯ ಪದ ಯುಗಕ್ಕಾದಮಾನಮ್ರನಾದಂ ॥೧೧೮॥

ಚಂ॥ ಪ್ರಮುದದಿನಾಗಳಂತೆ ವಿಜಯಾವತಿ ದೇವಿಯ ಪಾವನೋಜ್ಜ್ವಲ ।
ಕ್ರಮ ನಖ ಮಾಲೆಯಂ ಮಿಸುಪ ಸಾಂಧ್ಯದ ತಾರಕ ಮಾಲೆಯಂದಮಂ ॥
ಕಮನ ಕಿರೀಟ ರತ್ನ ರುಚಿ ಮಾಲೆಯನಾಗಿಸೆ ಭೂಪ ಮನ್ಮಥಂ ।
ಸಮನಿಸಿದಂ ಮನಕ್ಕೆ ಮುದಮುಂ ನಯನಕ್ಕೆ ಮುದಶ್ರು ಶೋಭೆಯಂ ॥೧೧೯॥

ಕಂ॥ ಚರಣ ನಖ [1]ಮುಕುರದೊಳ್ ಮುಖ ।
ಸರಸಿರುಹಂ ದಶಮುಖ ಪ್ರಭಾವಮನೆಯ್ದ ॥
ತ್ತಿರೆಯುಂ ಮೇಧಾವಿಳನಾ ।
ದರದಿಂ ಮಾದೇವಿಗಾಗಳಾನತನಾದಂ ॥೧೨೦॥

ಪೊಳೆವ ಮುದಶ್ರು ಪಯೋ ವ್ಯಾ ।
[2]ವಿಳಸನ್ನೇತ್ರಾಂಬುಜಾತ ಯುಗಳಂ ಮೇಧಾ ॥
ವಿಳನಾತ್ಮ ಪಿತೃ ಪ್ರಜ್ಞಾ ।
ಬಳನ ಪದೋನ್ನಖ ಮಯೂಖ ಶೇಖರನಾದಂ ॥೧೨೧॥

ಕಂ॥ ಅವನತನಾಗಳ್ ಸಾರ್ತ ।
ರ್ಪವನಿಪ ಮನ್ಮಥನನಾಗಳೆನಸುಂ ಪರಸು ॥
ತ್ತವೆ ಪಾಯ್ದಪ್ಪಿದನಾ ಮಂ ।
ತ್ರಿವರ ಪ್ರಜ್ಞಾಬಳಂ ಪ್ರಮೋದೋತ್ಕಟದಿಂ ॥೧೨೨॥

1. ಮುಖದೊಳ್. 2. ವಿಳಸನ್ನೇತ್ರಾಂನಾಗಿ ಯುಗಳಂ.

ವಿನಯದಿನವನತನಾದಂ ।
ಜನನಿ[ಗೆ ತಾಂ ] ಸುಪ್ರಭಾವತೀ ದೇವಿಗೆ ಲೋ ॥
ಚನ ಕುಮುದಮನಲರಿಸುತುಂ ।
ತನು ಕಾಂತಿಯ ಜೊನ್ನದೆಸಕದಿಂ ಸಚಿವ ಸುತಂ ॥೧೨೩॥

ಮ॥ ಶಶಿಯಂ ಕಂಡಮೃತಾಬ್ಧಿಯಂತೆ ಮುದದಿಂ ಮೆಯ್ವೆರ್ಚಿ ರಾಜನ್ಯಕ ।
ಪ್ರಸರಂ ಸಂಭ್ರಮದಿಂದೆ ಬಂದೆಱಗುತಿರ್ದತ್ತಾ ನರೇಂದ್ರಾತ್ಮಜಂ ॥
ಗೆ ಸಮುದ್ಘೃಷ್ಟ ಕಿರೀಟ ಕೋಟಿ ತಟ ರತ್ನವ್ರಾತ ಸಂಭೂತ ರೇ ।
ಣುಸಮಾಜಂ ಚರಣಾಂಬುಜಾಗ್ರಧರೆಯೊಳ್ ಪುಂಜಂಗೊಳುತ್ತಿರ್ಪಿನಂ॥೧೨೪॥

ಕಂ॥ ತಮ ತಮಗೆ ಕೆಲರ್ ಪೊಡಮಡು ।
ವ ಮನೋಮುದದೊದವಿನಿಂ ಕೆಲರ್ ಪರಸುವ ಸಂ ॥
ಭ್ರಮದಿಂದಾ ನೃಪಸಭೆ ಹ ।
ರ್ಷ ಮಹಾರ್ಣವದೊಳ್ ಮುೞುಂಗಿ ಮೂಡಿದುದಾಗಳ್ ॥೧೨೫॥

ಮ॥ ಸ್ತನ ತಾರಾತುಳ ಹಾರ ವಲ್ಲಿಗೆಣೆಯಂ ತಾಮುಂ ಪೆರುತ್ತಿರ್ಪುವೆಂ ।
ದೆನಲಾ ಚೂತಕದಿಂ ಪಯಃಕಣ ಗಣಂ [1]ಸಾರ್ಬೀಟಲಾಲೋಲ ಲೋ ॥
ಚನ ಹರ್ಷಾಮಳ ಭಾಷ್ಪಮೆಯ್ದೆ ವೆಗಳಂ ತಳ್ತೀಱೆ ಕಂದರ್ಪ ದೇ ।
ವನನಾಗಳ್ ವಿಜಯಾವತೀ [ಯುವತಿ] ನೋಡುತ್ತಿರ್ದಳುತ್ಸಾಹದಿಂ ॥೧೨೬॥

ಸ್ತನದಿಂ ಜುಮ್ಮನೆ ಪಾಯ್ವ ಪಾಲ್ಪನಿಗಳಂ ಹಸ್ತಾಬ್ಜದಿಂದೊತ್ತುತುಂ ।
ಜನಿತಾಕೀರ್ಣ ಮುದಶ್ರುವಂ ಸಿಡಿದು ಲೀಲಾ[ಲೋಲ] ನೇತ್ರಂಗಳಿಂ ।
ದಿನಿತಾನುಂ ಸುತನಾದನೆಂದವನನೂನಂಬೆತ್ತು ನೋಡುತ್ತುಮಿಂ ।
ತು ನಿತಾಂತಂ ಸಲೆ ಸುಪ್ರಭಾವತಿ ಮಹಾ ಹರ್ಷಾಬ್ಧಿಯಂ ತಾಳ್ದಿದಳ್ ॥೧೨೭॥

ಮನದೊಳ್ ಪುಟ್ಟಿದ ಸಮ್ಮದಂ ಪುದಿದು ಪೆರ್ಗೊತ್ತಲ್ಕೆ ತಾನುರ್ದಿದ ।
ತ್ತೆನೆ ಮೆಯ್ವೆರ್ಚೆ ತದಂಗಮೊತ್ತೆ ಪೊಱಪೊಣ್ಮುತ್ತೆಂಬಿನಂ ರೋಮ ಹ ॥
ರ್ಷ ನಿಕಾಯಂ ನೆಱೆ ತಳ್ತು ತತ್ಪುಳಕದೊಳ್ ಮಾತ್ಸರ್ಯದಿಂ ಪುಟ್ಟಿದಂ ।
ತೆನಸುಂ ಹರ್ಷ ದೃಗಂಬು ಸೂಸೆ ಸುತನಂ ನೋಡುತ್ತುಮಿರ್ದಂ ನೃಪಂ ।೧೨೮॥

---

1. ಸಾರ್ಬಿಳಯಾಲೋಲ.

ಕಂ॥ ಅಡಿಗಡಿಗೆ ಸುತನ ಮೊಗಮಂ ।
[1]ಬಿಡದಂದದೆ ವೀಕ್ಷಿಸುತ್ತುಮುತ್ಸವ ರಸದಿಂ ॥
ಗಡಲೊಳಿರುತಿರ್ದರೆನಸುಂ ।
ಪೊಡವೀಶನುಮಗ್ರ ಮಹಿಷಿ ವಿಜಯಾವತಿಯುಂ ॥೧೨೯॥

ಅಂತಿರ್ದು ಮತ್ತಮಾ ಮಣಿಕುಂಡಲನುಂ ಸಮುಚಿತಾಸನಮನಿತ್ತು ಮನ್ನಿಸೆ ತನ್ನಯ ಮಣಿಪೀಠ ಪಾರ್ಶ್ವದೊಳ್ ಕುಳ್ಳಿರ್ದ ಕಂದರ್ಪದೇವಂ ನರೇಂದ್ರ ಮುಕುಂದನಂ ನೋಡಿ—

ಮ॥ ಅತಿ ತೀವ್ರಂ ದನುಜೇಂದ್ರನಂದು ಪಿಡಿದುಯ್ದಂ ಭೀತಿ ಮೆಯ್ವೆರ್ಚೆ ಸಂ ।
ತತಮಾಕಂಪಿಸುತಿರ್ಪ ಭೂ ಸತಿಗಿರಲ್ ಪದ್ಮೋದ್ಭವಂ ಮಾಡಿದಾ ॥
ಯತ ಶೋಭಾಚಲ ಪೀಠವಿಂತಿದೆನುತುಂ ಕಂದರ್ಪ ರಾಜೇಂದ್ರನು ।
ನ್ನತ ಬಾಹಾಗ್ರಮನಂತು ನೇವರಿಸುತುಂ [2]ಹರ್ಷಾತ್ಮನಾದಂ ನೃಪಂ ॥೧೩೦॥

ಪದೆದಾರ್ಗಂ ವಶಮಾಗದಿರ್ಪತುಳ ವೀರ ಶ್ರೀಯನಾತ್ಮೀಯ [3]ದೋ ।
ಸ್ಸದನಕ್ಕಗ್ಗದ ಸಾಲಭಂಜಿಕೆಯನಾದಂ ಮಾಳ್ಪ ಸಾಮರ್ಥ್ಯಮಾ ॥
ದುದು ಕಂದರ್ಪ ನರೇಂದ್ರನೊಳ್ ದಿಟಮೆನುತ್ತುಂ ನೋಡಿ ಮೆಯ್ವೆರ್ಚಿದಂ ।
ಮುದದಿಂದಿಂತು ವಸಂತಕಾಖ್ಯ ವಿಷಯ ಶ್ರೀಭಾಮಿನೀ ವಲ್ಲಭಂ ॥೧೩೧॥

ಮತ್ತಮಾಗಳ್—

ಕಂ॥ ಪದ ಪೀಠದ ಸನ್ನಿಧಿಯೊಳ್ ।
ಪದೆಪಿಂ ಕುಳ್ಳಿರಿಸಿಕೊಂಡು ಮೇಧಾವಿಳನಂ ॥
ಕದಪಂ ನೇವರಿಸುತ್ತುಂ ।
ಮುದದಿಂ ಬೆಸಗೊಂಡನಾ ನರೇಂದ್ರ ಮುಕುಂದಂ ॥೧೩೨॥

ಮ॥ ಅಸಮಾಸ್ತ್ರ ಭ್ರಮದಿಂದೆ ಪೋದನೆನುತುಂ ಕಂದರ್ಪ ದೇವಂಗೆ ಚಿಂ ।
ತಿಸಲೇಕೆಂದೊಡೆ ಬುದ್ಧಿವಂತನವಱಿಂ ನೀನುಯ್ಯೆ ಸುಕ್ಷೇಮಸೀ ॥
ಕ್ಷಿಸೆ ಮೇಧಾವಿಳ ಮತ್ತಿದೆಂತು ಚತುರಂಗಾನೀಕಿನೀ ಯುಕ್ತಮಾ ।
ಗೆ ಸಮಂತಾವೆಡೆಯಿಂದೆ ಬಂದಿರದಸಿಂ ಪೇೞೆಂದನುರ್ವೀಶ್ವರಂ ॥೧೩೩॥

1. ಬಿಡದಂದರಿ. 2. ಹೂಷಾತ್ಮ. 3. ದೋ।ಳ್ಸದನ.

ಇದನಾಂ ಬಿನ್ನವಿಪೆಂ ಭವತ್ಪದ ಯುಗಕ್ಕೇಂ ದೇವ ನಿರ್ವ್ಯಾಳ್ ಕರಂ ।
ಪದೆಪಿಂ ತಾನನುಬಂಧವಂ ನೆಱೆಯೆ ಮಾಡಲ್ವೇಡಿ ಚಂದ್ರಧ್ವಜಾ ॥
ಹ್ವದ ಭೂಪಂ ಕುಸುಮಾವಳೀ ಸತಿಯ ತಾತಂ ಬಂದನಿಂತಾತನ ।
ಗ್ಗದ ಚಾತುರ್ಬಲವಂತೆ ಬಿಟ್ಟುದೆಸೆವೀ ಋಷ್ಯಾಶ್ರಮೋಪಾಂತದೊಳ್ ॥೧೩೪॥

ಕಂ॥ ಅದಱಿಂ ತಡೆಯದೆ ಬರವೇ ।
ಟ್ಟುದು ಚಂದ್ರಧ್ವಜ ನೃಪಾಲನಂ ಕಾಣಿಸಿಕೊ ॥
ಳ್ವುದು ಪೇಱುತೇಂ ನಿಮಗಿನ್ನ ॥
ಗ್ಗದ ಬಿಯ್ಯಗನಾದನೆಂದನಾ ಸಚಿವ ಸುತಂ ॥೧೩೫॥

ಮ॥ ಪುರದಿಂದೀ ಮುನಿಪಾಶ್ರಮಕ್ಕೆ ಪದೆದಾವೆಟ್ತುಂದ ವೃತ್ತಾಂತಮಂ ।
ನಿರುತಂ ನೀನಿದನೆಯ್ದೆ ಪೇೞ್ವುದಿರದಾ ಚಂದ್ರಧ್ವಜೋರ್ವೀಶನಂ ॥
ಬರವೇೞ್ದಿಮ್ಮಯ ಸಾರ್ಗೆ ಸಾದರದಿನೀಗಳ್ ಕೊಂಡು ಬಾಯೆಂದು ಚ ।
ಚ್ಚರದಿಂ ಭೂವರ ಚಕ್ರಿಯಟ್ಟಿದನಮಾತ್ಯಾ[1]ಪತ್ಯನಂ ಪ್ರೀತಿಯಿಂ ॥೧೩೬॥

ಆಗಳಿಂತು ಪೋಗಿ ಮೇಧಾವಿಳಂ ವೃತ್ತಕಮೆಲ್ಲಮಂ ಪೇೞೆ ಕೇಳ್ದು—

ಕಂ॥ ಪರಮ ಪ್ರಿಯದಿಂ ವಿಶ್ವಂ ॥
ಭರ ಭೂಪಂ ತನ್ನನಿರದೆ ಬರವೇಟ್ಟಿನೆನಲ್ ॥
ನಿರವಧಿ ಮುದನಾಗಿಯೆ ಚ ।
ಚ್ಚರದಿಂ ಚಂದ್ರಧ್ವಜಾವನೀಶಂ ಬಂದಂ ॥೧೩೭॥

ಮ॥ ಬರೆ ಚಂದ್ರಧ್ವಜ ಭೂಪನಂ ನೆಱೆ ಸದೃಕ್ಸಾಮರ್ಥ್ಯನೆಂಬಂತೆ ಸಾ ।
ದರದಿಂ ಕಾಣಿಸಿಕೊಂಡು ಪಾರ್ಶ್ವ ಮಣಿ ಪೀಠಾಸೀನನಂ ಮಾಡಿ[ದಂ] ॥
ನರನಾಥಾಂಬುಜ ಪತ್ರ ನೇತ್ರನೆನೆ ಲೋಕ ಸ್ತುತ್ಯರಪ್ಪಾ ಮಹಾ ।
ತ್ಮರ ಬಂಧುತ್ವಮದೇಂ ಸಮುನ್ನತಿಯನೆಂತುಂ ಮಾಡದೇ ನಾಡೆಯುಂ ॥೧೩೮॥

ಕಂ॥ ತಾರೆಗಳ ಬೆಳಗಿನಿಂ ವಿ ।
ಸ್ತಾರಿಪ ಕಮ್ಮುಗಿಲ ಸಿರಿಯನನುಕರಿಸಿಪರ್ಾ ॥
ಭೂ ರಮಣನ ನಖ ರುಚಿ ನಿಚಿ ।
ತಾರುಣ ಚರಣಕ್ಕೆ ವಿಶ್ರುತಂ ನತನಾದಂ ॥೧೩೯॥

1. ಪುತ್ರನಂ.

ನಯ ಚಿತ್ರೆ ಚಿತ್ರಮತಿ ದೇ ।
ವಿಯನಾ ವಿಜಯಾವತೀ ಮಹಾದೇವಿ ಮನಃ ॥
ಪ್ರಿಯದಿಂದೆ ಬರಿಸಿಕೊರಲ ।
ಪ್ಪಿಯೆ ಪಿರಿದುಂ ಮೆರೆದಳಾತ್ಮ ಮಹಿಮೋನ್ನತಿಯಂ ॥೧೪೦॥

ಜನಿತಾಂತಃಪ್ರಿಯ ಪಾ ।
ವನ ವಚನ ಪ್ರಚಯದಿಂದೆ ವಿಶ್ವಂಭರ ಭೂ ॥
ಪನದಂ ಚಂದ್ರಧ್ವಜ ರಾ ।
ಜನ ಮನದೊಳ್ಪುದಿದು ನೆಱೆಯೆ ಪೆಂಪಂ ಮೆಱೆದಂ ॥೧೪೧॥

ಇಂತಿರ್ಪುದುಮಾಗಳ್ ಕಂದರ್ಪ ಭೂವರ ಭ್ರೂಸಂಜ್ಞೆಯಿಂ ಮೇಧಾವಿಳಂ ಕುಸುಮಾವಳಿ ದೇವಿಯ ಸಮೀಪಕ್ಕೆ ಪೋಗಿ—

ಕಂ॥ ಮಿಗೆ ಮುದದಿಂ ಕೊರಲಪ್ಪುವ ।
ಬಗೆಯಿಂದಿದಿರೇಱುತಿರ್ದ ಕುಸುಮಾವಳಿ ದೇ ॥
ವಿಗೆ ತಡೆಯದೆ ಮೇಧಾವಿಳ ।
ನಗಣಿತ ಮುದದಿಂದಮಾಗಳಾನತನಾದಂ ॥೧೪೨॥

ಮತ್ತಮಾಗಳ್ ಕುಸುಮಾವಳಿದೇವಿ ಮೇಧಾವಿಳೋಪಿದಿಷ್ಟದಿಂ ಬಂದು—

ಮ॥ ಜಡಜೋದ್ಭೂತನ ಸೃಷ್ಟಿಯಿಾ ತರುಣಿ[ತಾನಲ್ತೀಕೆ ಶೃಂಗಾರದಿಂ] ।
ಗಡಲೊಳ್ ಪುಟ್ಟಿದ ಲಕ್ಷ್ಮಿಯೆಂದರಸಿಯುಂ ವಿಶ್ವಂಭರೋರ್ವೀಶ್ವರಂ ॥
ನಡೆ ನೋಡುತ್ತಿರೆ ಕಣ್ಗೆ ಕೌತುಕಮನಾದಂ ಬೀರುತುಂ ಬಂದು ತಾಂ ।
ಪೊಡೆಮಟ್ಟಳ್ ಕುಸುಮಾವಳೀ ಸತಿ ಲತಾಂಗಂ ಸೂಸೆ ಶೋಭಾಂಶುವಂ॥೧೪೩॥

ಕಂ॥ ಮನಮತುಳ ಹರ್ಷ ವಿಸ್ಮಯ ।
ಜನನಾಸ್ಪದಮಾಗೆ [1]ಪಡೆದರೀಕ್ಷಿಸುತುಂ ತಾ ॥
ಮನುನಯದೆ ಪರಸಿದರ್ ಭೂ ।
ಪನುಮರಸಿಯುಮಾಗಳಂತು ಕುಸುಮಾವಳಿಯಂ ॥೧೪೪॥

ಮತ್ತಮಾಗಳ್—

1. ಪದೆದರೀಕ್ಷಿಸುವಂತಾ.

ಮ॥ ಜನಿತಾನಂದ ದೃಗಂಬುವಿಂದಭಿಷವಂಗೆಯ್ವಂತಿರೌತ್ಸುಕ್ಯದಿಂ ।
ದಿನಸುಂ ನೋಡುವ ತಾತ ಮಾತೆಯರ ತತ್ಪಾದಾರವಿಂದ ವ್ರಜ ॥
ಕ್ಕೆ ನವೀನೋರು ಪರಾಗಮಾಗಿಸಿದಳಾಗಳ್ ರಾಗದಿಂ ಬಂದು ಮಾ ।
ನಿನಿಯಂತಾ ಕುಸುಮಾವಳೀ ಸತಿ ಲಸತ್ಸೀಮಂತ ಸಿಂಧೂರದಿಂ ॥೧೪೫॥

ಆಗಳ್—

ಚಂ॥ ನಿರುಪಮ ಕಲ್ಪವಲ್ಲಿಗೆ ಲತಾವಳಿ ಬಂದೆಱಗುತ್ತುಮಿರ್ಪವೋಲ್ ।
ಪರಿಕರ ಕಾಂತೆಯರ್ವೆಱಸು ತಾಂ ಕಳಬಾಷಿಣಿ ಬಂದು ಸಾಂದ್ರ ಪೀ ।
ವರ ಕುಚ ಮಂಡಲಂ ಮಿಸುಗುವಾ ತನುಮಧ್ಯಮನಂತುಬಳ್ಕಿಸು ।
ತ್ತಿರೆ ಪೊಡೆಮಟ್ಟಳಿಂತು ಕುಸುಮಾವಳಿ ದೇವಿಗೆ ಹರ್ಷ ಭಾವದಿಂ ॥೧೪೬॥

ಮತ್ತಮಾಗಳ್ ಕಂದರ್ಪ ದೇವನ ಕುಸುಮಾವಳಿ ದೇವಿಯ ದೈವ ಸೂತ್ರಿತ ವಿಚಿತ್ರ ಯೋಗ ವೃತ್ತಕಮುಂ ಸಂಕ್ಷೇಪದಿಂ ತವ್ಮೊಳೋರೊರ್ವರ್ಗೆ ಪೇೞ್ದು ಕೇಳ್ದುತ್ಕರ್ಷ ಹರ್ಷರಾಗಿರ್ದು ಮುನೀಂದ್ರ ದರ್ಶನೋತ್ಸುಕತೆಯಿಂ ನರೇಂದ್ರ ಮುಕುಂದಂ ಬೇಗಮೆೞ್ದು—

ಮ॥ಸ್ರ॥ ನೆರೆದಭ್ರಾನೀಕಮಂ ಗೊಂದಣಿಸಿ ಪುಗುವ ಗೀರ್ವಾಣ ಚಾಪೌಘಮೆಂಬಂ ।
ತಿರೆ ತದ್ವಾಹ್ಯವಿಷ್ಟ ರಾಜನ್ಯಕ ಮಕುಟ ತಟಾನೇಕ ರತ್ನಾಂಶು ಮಾಲಾ ॥
ಕರಮೆತ್ತಂ ನೀಟ್ದಿಣಂ ಮುಂಬರಿದು ಪುಗುತಿರಲ್ ಪೊಕ್ಕನೆತ್ತಿಂದು ವಿಶ್ವಂ ।
ಭರ ಭೂಪಂ ತಳ್ತ ಸಾರ್ವರ್ತುಕವನಮನದಂಪೆರ್ಚಿದಾನಂದದಿಂದಂ ॥೧೪೭॥

ಪೆಸರಿಂದಂ ಮೇರು ತತ್ಕಾಂಚನ ನಗಮಿದು ಮತ್ತಂ ಮಹಾಮೇರು ನಾಮಂ ।
ಮಿಸುಪೀ ಪ್ರಾಸಾದಮುಂ[1]ತಾನಿದುಮತಿಶಯಶೋಭಾ ಸಮಾಕೀರ್ಣಮೆಂದಿ ॥
ಲ್ಲಿ ಸಮಂತಿರ್ದಪ್ಪನೆಂದುಂ ಬಿಡದೆ ಮೃಡನೆನುತ್ತಾ ಶಿವಾವಾಸಮಂ ವೀ ।
ಕ್ಷಿಸುತುಂ ಸಾರ್ದಂದನಾನಂದದಿನನುಪಮ ವಿಶ್ವಂಭರ ಕ್ಷ್ಮೋಣಿಪಾಲಂ ॥೧೪೮॥

ಮ॥ ಪ್ರಣಯಂ ಕೈಮಿಗೆ ತತ್ಸುವರ್ಣ ರಚಿತೇಶಾವಾಸಮಂ ತ್ರಿಃಪ್ರದ ।
ಕ್ಷಿಣಮಂ ಬಂದು ವಿಚಿತ್ರ ರತ್ನ ಖಚಿತಾಂಚದ್ದ್ವಾರಮಂ ಪೊಕ್ಕು ತತ್ ॥
ಕ್ಷಣದಿಂ ಭೂ ನಿಹಿತಾಂಗನಾಗಿ ಪೊಡೆವಟ್ಟಂ ರಾಜ ರಾಜಚ್ಛಿರೋ ।
ಮಣಿ ವಿಶ್ವಂಭರನಾ ತ್ರಿಲೋಕ ವಿಭು ವಿಶ್ವೇಶಂಗೆ ಸದ್ಭಕ್ತಿಯಿಂ ॥೧೪೯॥

1. ತಾನಿಯಮತಿಶಯ ಶೋಭಾ ಸಭಾ ಕೀರ್ಣಮೆಂದೆ.

ಇಂತು ಕೃತ ನಮಸ್ಕಾರನಾಗಿ ವಿಶ್ವನಾಥಾಯತನಮಂ ಪೊಱಮಟ್ಟು—

ಚಂ॥ ಸುರ ಕುಜದಂತೆ ವಲ್ಕಲ ವಿಭಾಸಿ ಜಟಾ ಪರಿರಂಜಿತಂ ಮರು ।
ದ್ಗಿರಿ ವರದಂತೆ ಯುಕ್ತ ಸುಮನೋಽನಿವಹಂ ನವ ಮೇಖಲಾ ಮನೋ ॥
ಹರಮಯವಾಗೆ ಪಜ್ಜಳಿಸುತಿರ್ದನನಾ ಕಪಿಲ ವ್ರತೀಶನಂ ।
[ಸುರ]ಮುನಿ ವೃಂದ ಭೂಷನನಭೀಕ್ಷಿಸೆ ಬಂದನಿಳೇಶ ಕೇಶವಂ ॥೧೫೦॥

ಮ॥ ಪರಮಾನಂದಮನೆಯ್ದಿ ದೂರದೊಳೆ ಕಾಣುತ್ತುಂ ನಿಜೋತ್ಕೃಷ್ಟ ಭ।
ಕ್ತಿ ರಸಾವೇಷ್ಟಿತ ಚಿತ್ತನಾದರದಿನೆಲ್ಡುಂದಾತ್ಮ ಕೋಟೀರ ರ ।
ತ್ನ ರುಚಿ ಶ್ರೇಣಿ ಪದಾಗ್ರಿಮೋರ್ವರೆಯನೆತ್ತಂ ತಳ್ತು ಕೆಂಪೇಱಿಸು ।
ತ್ತಿರದಾಗಳ್ ಕಪಿಲ ವ್ರತೀಶ ಚರಣಕ್ಕಾನಮ್ರನಾದಂ ನೃಪಂ ॥೧೫೧॥

ಕಂ॥ ಬಱಿವಂದಾ ರಾಜನ್ಯಕ ।
ಕುಳಮದು ಕಪಿಲ ವ್ರತೀಶ ಚರಣಾಗ್ರ ಧರಾ ॥
ತಳಮಂ ಚಿತ್ರಿಸಿದುದು ನಿಜ ।
ವಿಳಸತ್ಕೋಟೀರ ವಿವಿಧ ಮಣಿಗಣ ರುಚಿಯಿಂ ॥೧೫೨॥

ಮ॥ ಮನದೊಳ್ ತೆಕ್ಕನೆ ತೀವಿದುಜ್ಜ್ವಲ ಪರಂಜ್ಯೋತಿಸ್ಸ್ವರೂಪಂ ನಿಜಾ
ನನದಿಂದಂ ಪೊಱಪೊಣ್ಮುತಿರ್ದುದೆನೆ ತಳ್ತೋರಂದದಿಂ ದಂ[ತ] ಕಾಂ ॥
ತಿ ನಿಕಾಯಂ ನಿಮಿರುತ್ತಿರಲ್ ಪರಸಿದಂ ತ್ರಿಜ್ಞಾನ ಲಕ್ಷ್ಮೀ ಲಸ ।
ದ್ವನಿತೇಶಂ ಕಪಿಲ ವ್ರತೀಶನೊಸೆದಾ ವಿಶ್ವಂಭರೋರ್ವೀಶನಂ ॥೧೫೩॥

ಮತ್ತಮಾಗಳ್ ಯಥೋಚಿತಾಸನಮನೋಸರಿಸಿ ವಿನಯದಿಂ ಜನನಾಥ ಜನಾರ್ದನಂ ಕುಳ್ಳಿರ್ದು—

ಉ॥ ಈ ಪರಮ ವ್ರತೀಶನ ದಯೋದಯದಿಂದೆನಗಾದುದೀಗಳೀ ।
ಭೂಪ ಮನೋಜನಾನನ ಸುಧಾಂಶು ನಿರೀಕ್ಷಣ ಸೌಖ್ಯಮೆಂದು ಲೀ
ಲೋಪಚಿತಾತ್ಮನಾಗಿ ಸಚಿವಂಗೆನುತುಂ ನರನಾಥ ಚಕ್ರಿಯಾ ।
ತಾಪಸ ಚಕ್ರಿಯಪ್ಪ ಕಪಿಲ ವ್ರತಿನಾಥನನಂದು ನೋಡಿದಂ ॥೧೫೪॥

ಕಂ॥ ಆವಂ ನಿಮ್ಮಯ ಪರಮ ದ ।
ಯಾ ವಿಭವಮಾನಾಂತನಾತನೆಂದುಂ ಧನ್ಯಂ ॥

ದೇವ ಕೃತಕೃತ್ಯನಾನು ।
ರ್ವಿೀ ವರರೊಳೆನುತ್ತುಮರಸನತಿ ಮುದನಾದಂ ॥೧೫೫॥

ಚಂ॥ ಎಲೆ ಮುನಿನಾಥ ಪಾವನತೆವೆತ್ತು ಭವತ್ತನು ಕಾಂತಿ ಚಂದ್ರಿಕಾ ।
ವಲಿಯ ಪೊದಟ್ದಿ ಸೋಂಕುವಡೆದೀ ಸುಕೃತಾತ್ಮತೆ ಮತ್ತದಾವನೊಳ್ ॥
ಸಲೆ ಸನುನಿಪ್ಪುದಂತದಱಿನಾಂ ಕೃತಕೃತ್ಯನೆನುತ್ತೆ ಹಸ್ತ ಕು ।
ಟ್ಮಲ ಧೃತ ಭಾಳನಾಗಿ ನೃಪಚಕ್ರಿ ಮಹೋತ್ಸವದಂತಮೆಯ್ದಿದಂ ॥೧೫೬॥

ಕಂ॥ ಅನಿತುಂ ದಿಕ್ತ್ತತಿಯಂ ತೊ ।
ಟ್ಟನೆ ತಳ್ಪೊಯ್ಯುತ್ತುಮಂಬರಾಂತರಮಂ ಭೋಂ ॥
ಕನೆ ಪರ್ಬುತ್ತುಂ ಮಧ್ಯಂ ।
ದಿನ ಸಮಯದ ಶಂಖ ನಾದಮುಣ್ಮಿತ್ತಾಗಳ್ ॥೧೫೭॥

ಆ ಸಮಯದೊಳ್—

ಕಂ॥ ದೇವರವಧರಿಪುದೀಗಳ್ ।
ದೇವಾರ್ಚನೆಗೇಟವೇಟ್ಕುಮಿದು ಸಮಯಮೆನು ॥
ತ್ತಾ ವಿಭು ಕಪಿಲ ವ್ರತಿಪತಿ ।
ಗಾವೃತ ಮುನಿ ಸಮಿತಿ ಬಿನ್ನವಿಸಿದುದು ಪದೆಪಿಂ ॥೧೫೮॥

ಆದಂ ಕೇಳ್ದು—

ಮ॥ ಎಮಗಭ್ಯಾಗತನೈ ವಿಚಾರಿಪೊಡೆ ನೀಂ ವಿಶ್ವಂಭರೋರ್ವೀಶ ನಿ ।
ನ್ನ ವನಃಪ್ರೇಮದಿನಿಲ್ಲಿ ಕಂದ ಫಲ ಮೂಲ ಸ್ವೀಕೃತಾಹಾರನಾ ॥
ಗೆ ಮದೀಯ ಪ್ರಿಯಮಂ ನಿಮಿರ್ಚುವುದು ಸೈನ್ಯಸ್ತೋಮ ಸಂಯುಕ್ತದಿಂ ।
ದಮೆನುತ್ತುಂ ದಯೆಯಿಂದೆ ನೇಮಿಸಿದನಾ ಯೋಗೀಂದ್ರ ವೃಂದಾರಕಂ ॥೧೫೯॥

ಚಂ॥ ನೆಲನೆಡೆಯಿಲ್ಲ ನೋಟ್ಪೊಡೆ ಮದೀಯ ಬಲಕ್ಕೆ ಬಲೋಪಯುಕ್ತದಿಂ ।
ದೆಲೆ ನೃಪ ಕಂದ ಮೂಲ ಫಲ ಭುಕ್ತಮುನಿಲ್ಲಿಯೆ ಮಾಟ್ಪುದೆಂದು ತ ॥
ನ್ಮೊಲವಿನೊಳಿಂತು ನೇಮಿಸಿದಿರಚ್ಚರಿ ತಾನಿದೆನುತ್ತುಮಂಜಿ ಕೋ ।
ಮಲ ಕರ ಕಂಜಮಂ ಮುಗಿದು ದೇವ ಹಸಾದವೆನಲ್ ಮಹೀವರಂ ॥೧೬೦॥

ಇಂತು ಹಸಾದಮೆಂದು ಮುನಿಪತಿಗೆ ಪೊಡೆಮಟ್ಟೆಟ್ದು ನೃಪಚಕ್ರಿ ನಿಜ ಶಿಬಿರ ನಿವೇಶಿತನಾಗಿ—

ಮ॥ಸ್ರ॥ ತರುಣಾರ್ಕಂ ಚಕ್ರವಾಕಾವಳಿಗೆ ತುಹಿನ ಧಾಮಂ ಚಕೋರಾಳಿಗೋರಂ ।
ತಿರೆ ಚಿತ್ತಾನಂದಮಂ ತಮ್ಮುದಯದ ಮುಖದಿಂ ನಾಡೆಯುಂ ಮಾಡುವಂತಾ ।
ಗುರು ವರ್ಗಾಕಾರ ವರ್ಗಕ್ಕೆಸೆವಭಿಜನ ವರ್ಗಕ್ಕತರ್ಕ್ಯಾನುರಾಗೋ ।
ತ್ಕರಮಂ ತಾನೀಯುತಿರ್ದಂ ಕೃತಿರತಿ ರಮಣಂ ಸಾಹಸೋದ್ದಾಮ ಭೀಮಂ
॥೧೬೧॥

ಇದು ಕಮನ ಕುಧರೇಂದ್ರ ನಂದನಾ ಲೋಲ ಲೋಚನ ಚಕೋರೀ ಸುಖಪ್ರದ
ಪರಮಾಂಗ ಕಾಂತಿ ಸಂತಾನ ಸಾಂದ್ರ ಚಂದ್ರಿಕಾ ವಿಭವ ಶೋಭಾಯಮಾನ
ಶ್ರೀ ವಿಶ್ವನಾಥ ಚರಣ ನಖ ಮಯೂಖೋತ್ಫುಲ್ಲ ಮಲ್ಲಿಕಾ ಶೇಖರ
ಕಂದರ್ಪದೇವ ಪ್ರಭಾವ ಪ್ರಶಂಸೋಲ್ಲಸಿತ ಕುಸುಮಾವಳೀ
ಮಹಾ ಪ್ರಬಂಧದೊಳ್ ಚಂದ್ರಧ್ವಜ ಸಮಾಗಮ ವರ್ಣನಂ
ವಿಶ್ವಂಭರ ನರೇಂದ್ರ ಕಂದರ್ಪದೇವ ದರ್ಶನ
ವರ್ಣನಂ ಕಪಿಲ ಮಹಾಚಾರ್ಯ ದರ್ಶನ
ವರ್ಣನಂ
ಪಂಚದಶಾಶ್ವಾಸಂ

---